KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಆಗಸ್ಟ್ ೨೮, ೨೦೦೮ (ಭಾದ್ರಪದ ೬, ಶಕ ವರ್ಷ ೧೯೩೦) | ಸಂಚಿಕೆ ೩೫ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 51 ರಾಶಾಪ್ರ 2008, ಬೆಂಗಳೂರು, ದಿನಾಂಕ: 30ನೇ ಜುಲೈ 2008**

The Karnataka Agricultural Produce Marketing (Regulation) Act, 1966, the Karnataka Agricultural; Produce Marketing (Regulation) Rules, 1968 and the Karnataka Agricultural Produce Marketing (Regulation of Allotment of Property in Market Yards) Rules, 2004 ಇದರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ರ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966**

**[1966 ರ ಕರ್ನಾಟಕ ಅಧಿನಿಯಮ ಸಂಖ್ಯೆ 27]**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**

**ಅಧ್ಯಾಯ–III**

**ಮಾರುಕಟ್ಟೆ ಸಮಿತಿಗಳ ರಚನೆ**

41. ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಚುನಾವಣೆ.
42. ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಪದಾವಧಿ.
43. ಅಧ್ಯಕ್ಷನ ಮತ್ತು ಉಪಾಧ್ಯಕ್ಷನ ಸ್ಥಾನವು ಖಾಲಿಯಾಗುವುದು.
44. ಅವಿಶ್ವಾಸ ಸೂಚನೆ.
45. ಅಧ್ಯಕ್ಷನಿಗೆ ಮತ್ತು ಉಪಾಧ್ಯಕ್ಷನಿಗೆ ಗೈರು ಹಾಜರಿ ರಜೆ ಮತ್ತು ರಜೆ ಇಲ್ಲದ ಗೈರು ಹಾಜರಿಯ ಪರಿಣಾಮಗಳು.

**ಅಧ್ಯಾಯ-IV**

**ವ್ಯವಹಾರ ನಿರ್ವಹಣೆ**

46. ಅಧ್ಯಕ್ಷನ ಅಧಿಕಾರಗಳು ಮತ್ತು ಕರ್ತವ್ಯಗಳು.
47. ಉಪಾಧ್ಯಕ್ಷನ ಅಧಿಕಾರಗಳು ಮತ್ತು ಕರ್ತವ್ಯಗಳು.
48. ಮಾರುಕಟ್ಟೆ ಸಮಿತಿಯ ಸಭೆ.
49. ಸಭೆಗಳಲ್ಲಿ ಕೋರಂ ಮತ್ತು ಅನುಸರಿಸಬೇಕಾದ ಪ್ರಕ್ರಿಯೆ.
50. ನಿರ್ಣಯಗಳ ಮಾರ್ಪಾಟು ಅಥವಾ ರದ್ದಿಯಾತಿ.
51. ನಡವಳಿಗಳ ಸಂಕ್ಷಿಪ್ತ ವರದಿ.
52. ನಡವಳಿಗಳ ಸ್ಥಿರೀಕರಣ.
53. ಅಡ್ಡಪ್ರಶ್ನೆ ಮತ್ತು ನಿರ್ಣಯಗಳು.
54. ಸಭೆಗಳ ಸವಿಸ್ತಾರ ಪ್ರಕ್ರಿಯೆಯನ್ನು ನಿಯಂತ್ರಿಸುವ ಉಪವಿಧಿಗಳು.
55. ಕರಾರು ಮಾಡಿಕೊಳ್ಳುವ ವಿಧಾನ.
56. ಕಾರ್ಯದರ್ಶಿಯ ಅಧಿಕಾರಗಳು, ಪ್ರಕಾರ್ಯಗಳು ಮತ್ತು ಕರ್ತವ್ಯಗಳು.
57. ಮಾರುಕಟ್ಟೆ ಸಮಿತಿ, ಮುಂತಾದವುಗಳ ಕಾರ್ಯಗಳನ್ನು ಅಸಿಂಧುಗೊಳಿಸದಿರುವುದು.

**ಅಧ್ಯಾಯ-V**

**ಮಾರುಕಟ್ಟೆ ಸಮಿತಿಗಳ ಸಿಬ್ಬಂದಿ**

58. ಮಾರುಕಟ್ಟೆ ಸಮಿತಿಗೆ ಕಾರ್ಯದರ್ಶಿ ಮತ್ತು ತಾಂತ್ರಿಕ ಸಿಬ್ಬಂದಿಯ ನೇಮಕ.
59. [XXX] ಮಾರುಕಟ್ಟೆ ಸಮಿತಿಯ ಸಿಬ್ಬಂದಿಯನ್ನು ಸರ್ಕಾರದ ಸೇವೆಯಲ್ಲಿ ವಿಲೀನಗೊಳಿಸುವುದು.
60. [XXX ಬಿಟ್ಟು ಬಿಡಲಾಗಿದೆ.]
61. ಮಾರುಕಟ್ಟೆ ಸಮಿತಿಗೆ ಇತರೆ ಸಿಬ್ಬಂದಿಯ ನೇಮಕ.
61ಎ. ನೇಮಕಾತಿಗಳಲ್ಲಿ ಹುದ್ದೆಗಳ ಮೀಸಲಾತಿ.
62. ಕರ್ನಾಟಕ ರಾಜ್ಯ ಮಾರುಕಟ್ಟೆ ಸೇವೆ, ಇತ್ಯಾದಿ.

**ಅಧ್ಯಾಯ-VI**

**ಮಾರುಕಟ್ಟೆ ಸಮಿತಿಗಳ ಅಧಿಕಾರಗಳು ಮತ್ತು ಕರ್ತವ್ಯಗಳು**

63. ಮಾರುಕಟ್ಟೆ ಸಮಿತಿಯ ಅಧಿಕಾರಗಳು ಮತ್ತು ಕರ್ತವ್ಯಗಳು.
63ಎ. [XXX ಬಿಟ್ಟು ಬಿಡಲಾಗಿದೆ.]
64. ಉಪ ಸಮಿತಿಗಳ ನೇಮಕ
64ಎ. ಖಾಸಗಿ ಮಾರುಕಟ್ಟೆ ಪ್ರಾಂಗಣದ ಲೈಸೆನ್ಸುದಾರನ ಕರ್ತವ್ಯಗಳು ಮತ್ತು ಜವಾಬ್ದಾರಿಗಳು
64ಬಿ. ಆವರ್ತಕ ನಿಧಿಯ ರಚನೆ
64ಸಿ. ಆವರ್ತಕ ನಿಧಿಯ ವಿನಿಯೋಗ
65. ಮಾರುಕಟ್ಟೆ ಫೀಜುಗಳನ್ನು ವಿಧಿಸುವುದು.
65ಎ. ದಂಡ ವಿಧಿಸಲು ಮಾರುಕಟ್ಟೆ ಸಮಿತಿಯ ಅಧಿಕಾರ.
66. ಲೆಕ್ಕಗಳನ್ನು ಹಾಜರುಪಡಿಸುವಂತೆ ಆದೇಶಿಸಲು ಅಧಿಕಾರ ಮತ್ತು ಪ್ರವೇಶಿಸಲು, ಪರಿವೀಕ್ಷಿಸಲು ಮತ್ತು ವಶಪಡಿಸಿಕೊಳ್ಳಲು ಅಧಿಕಾರ.
67. ವಾಹನ, ಮುಂತಾದವುಗಳನ್ನು ನಿಲ್ಲಿಸುವುದಕ್ಕೆ ಅಧಿಕಾರ.
68. ಸಾಲ ತೆಗೆದುಕೊಳ್ಳುವ ಅಧಿಕಾರ.
69. ಭೂಸ್ವಾಧೀನ.

70. ಅಪರಾಧಗಳ ಬಗ್ಗೆ ರಾಜಿ ಮಾಡಿಕೊಳ್ಳುವುದು.
71. ವಸೂಲು ಮಾಡಲಾಗದ ಮೊಬಲಗನ್ನು ಮನ್ನಾ ಮಾಡುವ ಅಧಿಕಾರ.

**ಅಧ್ಯಾಯ-VII**

**ವ್ಯಾಪಾರದ ವಿನಿಯಮ**

72. ಲೈಸೆನ್ಸ್‌ಗಳ ನೀಡಿಕೆ
72ಎ. ಖಾಸಗಿ ಮಾರುಕಟ್ಟೆ ಪ್ರಾಂಗಣಗಳ ಸ್ಥಾಪನೆ ಹಾಗೂ ಕೃಷಿಕರಿಂದ ಅಥವಾ ಉತ್ಪಾದಕರಿಂದ ನೇರ ಖರೀದಿ
72ಬಿ. ಉತ್ಪಾದಕರಿಂದ ನೇರ ಮಾರಾಟಕ್ಕಾಗಿ ರೈತ–ಗ್ರಾಹಕ ಮಾರುಕಟ್ಟೆಗಳ ಸ್ಥಾಪನೆ
72ಸಿ. ಖಾಸಗಿ ಮಾರುಕಟ್ಟೆ ಪ್ರಾಂಗಣದ ಮತ್ತು ರೈತ–ಗ್ರಾಹಕ ಮಾರುಕಟ್ಟೆಯ ಲೈಸೆನ್ಸನ್ನು ಮಂಜೂರು ಮಾಡುವುದು/ ನವೀಕರಿಸುವುದು
72ಡಿ. ಲೈಸೆನ್ಸನ್ನು ರದ್ದುಮಾಡಲು ಅಥವಾ ಅಮಾನತ್ತಿನಲ್ಲಿಡಲು ಅಧಿಕಾರ
72ಇ. ಅಪೀಲು
73. ಲೈಸೆನ್ಸ್‌ನ್ನು ರದ್ದು ಮಾಡುವ ಅಥವಾ ಅಮಾನತುಗೊಳಿಸುವ ಅಧಿಕಾರ.
74. ಅಪೀಲು.
75. ಬೆಲೆ ಸಂದಾಯ
76. ಕೃಷಿ ಉತ್ಪನ್ನದ ಮಾರಾಟ.
77. ಮಾರಾಟ ಒಪ್ಪಂದ
77ಎ. [XXX ಬಿಟ್ಟು ಬಿಡಲಾಗಿದೆ.]
78. ಕಮೀಷನ್ ಏಜೆಂಟರ ಕಮಿಷನ್ ಮತ್ತು ಹೊಣೆಗಾರಿಕೆ
78ಎ. ಕಮೀಷನ್ ಏಜೆಂಟನು ಸಂದಾಯ ಮಾಡಲು ತಪ್ಪಿದಲ್ಲಿ ಆತನು ಹೆಚ್ಚುವರಿ ಸಂದಾಯ ಮಾಡುವುದು, ಇತ್ಯಾದಿ
79. ಕೆಲವು ಸಂಗ್ರಹಣೆಗಳ ನಿಷೇಧ.
79ಎ. ಮಾರುಕಟ್ಟೆ ಚಾರ್ಜುಗಳನ್ನು ಯಾರು ಸಂದಾಯ ಮಾಡಬೇಕು.
80. ನಿರ್ದಿಷ್ಟಪಡಿಸಲಾದ ಕಡಿತಗಳ ಹೊರತಾಗಿ, ತೂಕ ಅಥವಾ ಸಂದಾಯದಲ್ಲಿ ಕಡಿತವನ್ನು ಮಾಡದಿರುವುದು.
81. ಮಾರುಟ್ಟೆ ಕಾರ್ಯ ನಿರ್ವಾಹಕರು ವರದಿಗಳನ್ನು ಸಲ್ಲಿಸುವುದು.
81ಎ. ಖಾಸಗಿ ಮಾರುಕಟ್ಟೆ ಲೈಸೆನ್ಸುದಾರನಿಂದ, ರೈತ–ಗ್ರಾಹಕ ಮಾರುಕಟ್ಟೆ ಲೈಸೆನ್ಸುದಾರನಿಂದ ವರದಿಗಳು
82. ಮಾರುಕಟ್ಟೆ ಕಾರ್ಯ ನಿರ್ವಾಹಕರು ನೆರವು ನೀಡುವುದು.
82ಎ. ಮುಷ್ಕರ, ಮುಂತಾದವುಗಳಲ್ಲಿ ಮಾರುಕಟ್ಟೆ ಕಾರ್ಯ ನಿರ್ವಾಹಕನು ಭಾಗವಹಿಸದಿರುವುದು.
83. ಮಾರುಕಟ್ಟೆ ಕಾರ್ಯ ನಿರ್ವಾಹಕರು ಲೆಕ್ಕ ಪುಸ್ತಕಗಳು ಮುಂತಾದವುಗಳನ್ನು ಹಾಜರುಪಡಿಸುವುದು.
83ಎ. ಮಾರುಕಟ್ಟೆ ಫೀಜನ್ನು ವಿವೇಚನಾನುಸಾರ ನಿರ್ಧರಿಸುವುದು.
84. ವಿವಾದಗಳ ಇತ್ಯರ್ಥಕ್ಕಾಗಿ ಏರ್ಪಾಡು
84ಎ. ಉತ್ಪಾದಕ, ಕೊಂಡುಕೊಳ್ಳುವವ, ಮಾರಾಟಗಾರ, ಖಾಸಗಿ ಮಾರುಕಟ್ಟೆ ಲೈಸೆನ್ಸುದಾರ, ನೇರ ಖರೀದಿ ಲೈಸೆನ್ಸುದಾರ ಅಥವಾ ರೈತ–ಗ್ರಾಹಕ ಮಾರುಕಟ್ಟೆ ಲೈಸೆನ್ಸುದಾರ ಇವರುಗಳ ನಡುವಿನ ವಿವಾದಗಳ ಇತ್ಯರ್ಥಕ್ಕಾಗಿ ಉಪಬಂಧ
85. ವ್ಯಾಪಾರಿಗಳು ಒದಗಿಸಬೇಕಾದ ಭದ್ರತೆ
86. ಕಮಿಷನ್ ಏಜೆಂಟರು ನೀಡಬೇಕಾದ ಭದ್ರತೆ.
87. ಬ್ಯಾಂಕಿನಲ್ಲಿ ನಗದು ಭದ್ರತೆಯ ಠೇವಣಿ.
88. ಭದ್ರತೆಯ ಮೇಲೆ ಋಣಭಾರ ಮತ್ತು ಭದ್ರತಾ ಠೇವಣಿಯ ಮರು ಪಾವತಿ.
89. ದಂಡಗಳನ್ನು ವಿಧಿಸಲು ಸಮಿತಿಯ ಮತ್ತು ಅಧ್ಯಕ್ಷನ ಅಧಿಕಾರಗಳು.

## ಅಧ್ಯಾಯ-VIII
## ಮಾರುಕಟ್ಟೆ ನಿಧಿ

90. ಮಾರುಕಟ್ಟೆ ನಿಧಿ, ಅದರ ಅಭಿರಕ್ಷೆ ಮತ್ತು ಹೂಡಿಕೆ.
91. ರಾಜ್ಯದ ಸಂಚಿತ ನಿಧಿಗೆ ವಂತಿಗೆ.
92. ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಗೆ ವಂತಿಗೆ.
93. ಯಾವ ಉದ್ದೇಶಕ್ಕಾಗಿ ಮಾರುಕಟ್ಟೆ ನಿಧಿಯನ್ನು ವೆಚ್ಚ ಮಾಡಬಹುದು.
94. ಅಧ್ಯಕ್ಷನಿಗೆ ಗೌರವಧನ ಮತ್ತು ಪ್ರವಾಸ ಭತ್ಯಗಳು.
95. ಬಜೆಟ್, ಮುಂತಾದವುಗಳನ್ನು ತಯಾರಿಸುವ ವಿಧಾನ.

## ಅಧ್ಯಾಯ-IX
## ವಿಶೇಷ ವ್ಯಾಪಾರ ಸರಕು ಮಾರುಕಟ್ಟೆಗಳು

96. ವಿಶೇಷ ವ್ಯಾಪಾರ ಸರಕುಗಳಿಗಾಗಿ ಸ್ವತಂತ್ರ ಮಾರುಕಟ್ಟೆಗಳ ಮತ್ತು ಮಾರುಕಟ್ಟೆ ಸಮಿತಿಗಳ ಸ್ಥಾಪನೆ.

## ಅಧ್ಯಾಯ-X
## ಮಂಡಲ ಪಂಚಾಯಿತಿಗಳು ಮಾರುಕಟ್ಟೆ ಸಮಿತಿಗಳ ಏಜೆಂಟ್‌ಗಳಾಗಿ ಕಾರ್ಯ ನಿರ್ವಹಿಸುವುದು

97. ಮಂಡಲ ಪಂಚಾಯಿತಿಗಳು ಮಾರುಕಟ್ಟೆ ಸಮಿತಿಗಳ ಏಜೆಂಟ್‌ಗಳಾಗಿ ಕಾರ್ಯನಿರ್ವಹಿಸುವುದು.
98. ಮಂಡಲ ಪಂಚಾಯಿತಿಗಳಿಗೆ ಅನುದಾನಗಳು ಮತ್ತು ಸಾಲಗಳು.
99. ಮಂಡಲ ಪಂಚಾಯಿತಿಗಳಿಗೆ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ವಹಿಸಿಕೊಡುವುದರ ಪರಿಣಾಮಗಳು

## ಅಧ್ಯಾಯ-XI
## ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿ

100. ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿ.
101. ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯ ರಚನೆ.
102. ಮಂಡಲಿಯ ಚುನಾಯಿತ ಸದಸ್ಯರ ಹೆಸರುಗಳ ಪ್ರಕಟಣೆ.
103. ಚುನಾವಣೆಯ ಸಿಂಧುತ್ವದ ನಿರ್ಧರಣೆ.
104. ಮಂಡಲಿಯ ಚುನಾಯಿತ ಸದಸ್ಯರ ಸದಸ್ಯತ್ವ ನಿಂತುಹೋಗುವುದು.
105. ಉಪ ಚುನಾವಣೆ.
106. ಮಂಡಲಿಯ ಸದಸ್ಯರ ಹುದ್ದೆಯ ಅವಧಿ.
106ಎ. [XXX]
107. ಮಂಡಲಿಯ ಅಧ್ಯಕ್ಷನ ಮತ್ತು ಉಪಾಧ್ಯಕ್ಷನ ಅಧಿಕಾರಗಳು ಮತ್ತು ಕರ್ತವ್ಯಗಳು.
108. ಮಂಡಲಿಯ ವ್ಯವಹಾರದ ನಿರ್ವಹಣೆ.
109. ರಾಜ್ಯ ಸರ್ಕಾರದಿಂದ ಅನುದಾನಗಳು.
109ಎ. [XXX]
110. ಮಾರುಕಟ್ಟೆ ಅಭಿವೃದ್ಧಿ ನಿಧಿ.
110ಎ. ಸಾಲ ಪಡೆಯುವ ಅಧಿಕಾರ.
111. ಮಾರುಕಟ್ಟೆ ಅಭಿವೃದ್ಧಿ ನಿಧಿಯನ್ನು ವೆಚ್ಚ ಮಾಡತಕ್ಕ ಉದ್ದೇಶಗಳು.
112. ಮಂಡಲಿಯ ಪ್ರಕಾರ್ಯಗಳು.
113. ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳು ಮಂಡಲಿಗೆ ಅನ್ವಯವಾಗುವುದು.

## ಅಧ್ಯಾಯ-XII
## ದಂಡಗಳು

114. ಫೀಜು, ಮುಂತಾದವುಗಳ ಸಂದಾಯದ ತಪ್ಪಿತಕ್ಕಾಗಿ ದಂಡಗಳು.
115. ಫೀಜು, ಉಪಕರ ಅಥವಾ ಇತರೆ ಮೊಬಲಗನ್ನು ಸಂದಾಯ ಮಾಡಲು ಆಪಾದಿತನು ಹೊಣೆಯಾಗಿರುವುದು.

116. ಫೀಜು ಅಥವಾ ಇತರ ಮೊಬಲಗನ್ನು ಕ್ಷಿಪ್ರವಾಗಿ ವಸೂಲ್ಮಾಡಲು ಮ್ಯಾಜಿಸ್ಟ್ರೇಟನ ಅಧಿಕಾರ.
117. 8ನೇ ಪ್ರಕರಣದ ಉಲ್ಲಂಘನೆಗಾಗಿ ದಂಡ
117ಎ. 66ನೇ ಪ್ರಕರಣದ ಉಲ್ಲಂಘನೆಗಾಗಿ ದಂಡ
117ಬಿ. 75ನೇ ಪ್ರಕರಣದ ಉಲ್ಲಂಘನೆಗಾಗಿ ದಂಡನೆ
118. 78, 79 ಮತ್ತು 80ನೇ ಪ್ರಕರಣಗಳ ಉಲ್ಲಂಘನೆಗಾಗಿ ದಂಡ
118ಎ. 78ನೇ ಪ್ರಕರಣದ ಉಲ್ಲಂಘನೆಗಾಗಿ ದಂಡನೆ
119. 123ನೇ ಪ್ರಕರಣದ ಮೇರೆಗಿನ ಆದೇಶವನ್ನು ಪಾಲಿಸಲು ತಪ್ಪಿದಲ್ಲಿ ದಂಡ
120. 123ನೇ ಅಥವಾ 124ನೇ ಪ್ರಕರಣದ ಉಪಬಂಧಗಳ ಉಲ್ಲಂಘನೆಗಾಗಿ ದಂಡ
121. 125ನೇ ಪ್ರಕರಣದ ಉಲ್ಲಂಘನೆಗಾಗಿ ದಂಡ
122. ಅಪರಾಧಗಳ ಬಗ್ಗೆ ದಂಡನೆಗಾಗಿ ಸಾಮಾನ್ಯ ಉಪಬಂಧಗಳು

**ಅಧ್ಯಾಯ-XIII**

**ನಿಯಂತ್ರಣ**

123. ಪರಿಶೀಲನೆ, ವಿಚಾರಣೆ ಮತ್ತು ವಿವರಣಾ ಪಟ್ಟಿ, ಮುಂತಾದವುಗಳನ್ನು ಸಲ್ಲಿಸುವುದು.
124. ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ, ಪ್ರಾಧಿಕೃತ ಅಧಿಕಾರಿಗಳಿಗೆ ಮತ್ತು ರಾಜ್ಯ ಸರ್ಕಾರಕ್ಕೆ ಮಾಹಿತಿಯನ್ನು ಒದಗಿಸಲು ಅಧಿಕಾರಿಗಳ ಮತ್ತು ಸದಸ್ಯರ ಕರ್ತವ್ಯ.
125. ಲೆಕ್ಕಪುಸ್ತಕಗಳ ಮತ್ತು ಇತರ ದಾಸ್ತಾವೇಜುಗಳ ಅಭಿಗ್ರಹಣ.
126. ಮಾರುಕಟ್ಟೆ ಸಮಿತಿಯ ವ್ಯವಹರಣೆಗಳ ವರದಿಯನ್ನು ತರಿಸಿಕೊಳ್ಳಲು ಮತ್ತು ಅದರ ಮೇಲೆ ಆದೇಶವನ್ನು ಹೊರಡಿಸಲು ರಾಜ್ಯ ಸರ್ಕಾರದ ಅಧಿಕಾರ
126ಎ. ಮಾರುಕಟ್ಟೆ ಸಮಿತಿಗೆ, ಖಾಸಗಿ ಮಾರುಕಟ್ಟೆ ಲೈಸೆನ್ಸುದಾರನಿಗೆ ಮತ್ತು ರೈತ–ಗ್ರಾಹಕ ಲೈಸೆನ್ಸುದಾರನಿಗೆ ನಿರ್ದೇಶನ ನೀಡಲು ಸರ್ಕಾರದ ಅಧಿಕಾರ
127. ಮಾರುಕಟ್ಟೆ ಸಮಿತಿಯ ರದ್ದಿಯಾತಿ.
128. ನಷ್ಟ, ದುರ್ವ್ಯಯ, ದುರ್ವಿನಿಯೋಗ, ಮುಂತಾದವುಗಳಿಗಾಗಿ ಮಾರುಕಟ್ಟೆ ಸಮಿತಿಯ ಸದಸ್ಯರ, ಅಧಿಕಾರಿಗಳ ಮತ್ತು ನೌಕರರ ಹೊಣೆಗಾರಿಕೆ.
129. ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಸದಸ್ಯರು ಪದಚ್ಯುತಿಗೆ ಗುರಿಯಾಗುವುದು.
130. ಕಾನೂನು ಬದ್ಧವಾಗಿ ರಚಿತವಾಗಿಲ್ಲದ ಅಥವಾ ಕಾರ್ಯ ನಿರ್ವಹಣೆಯಲ್ಲಿ ಬಿಕ್ಕಟ್ಟು ಉಂಟಾಗಿರುವಂತಹ ಮಾರುಕಟ್ಟೆ ಸಮಿತಿಗಳ ಸಂಬಂಧದಲ್ಲಿ ಆಡಳಿತಾಧಿಕಾರಿಯು ಅಧಿಕಾರಗಳನ್ನು ಚಲಾಯಿಸುವುದು ಮತ್ತು ಕರ್ತವ್ಯಗಳನ್ನು ನಿರ್ವಹಿಸುವುದು.
131. ಮಾರುಕಟ್ಟೆ ಸಮಿತಿಯಿಂದ ಅಥವಾ ಮಂಡಲಿಯಿಂದ ಸರ್ಕಾರಕ್ಕೆ ಬರತಕ್ಕ ಮೊಬಲಗುಗಳ ವಸೂಲಿ.

**ಅಧ್ಯಾಯ-XIIIಎ**

**ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆ**

131ಎ. ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆ ಸ್ಥಾಪನೆ, ಇತ್ಯಾದಿ.
131ಬಿ. ತೊಂದರೆಗಳ ನಿವಾರಣೆ.

**ಅಧ್ಯಾಯ-XIII-ಬಿ**

**ಕರಾರು ವ್ಯವಸಾಯ**

131ಸಿ. ಕರಾರು ವ್ಯವಸಾಯ ಒಪ್ಪಂದದ ಪ್ರಕ್ರಿಯೆ ಮತ್ತು ನಮೂನೆ

**ಅಧ್ಯಾಯ-XIIIಸಿ**

**ವಿದ್ಯುನ್ಮಾನ ವ್ಯಾಪಾರ**

131ಡಿ. ಸ್ಥಳೀಯ ವಿನಿಮಯ ಕೇಂದ್ರದ ಸ್ಥಾಪನೆ
131ಇ. ಸ್ಥಳೀಯ ವಿನಿಮಯ ಕೇಂದ್ರದ ಲೈಸೆನ್ಸುದಾರನು ಸಲ್ಲಿಸಬೇಕಾಗಿರುವ ವರದಿಗಳು
131ಎಫ್. ಸ್ಥಳೀಯ ವಿನಿಮಯ ಕೇಂದ್ರದ ಲೈಸೆನ್ಸುಗಳನ್ನು ರದ್ದುಪಡಿಸುವ ಅಥವಾ ಅಮಾನತ್ತಿನಲ್ಲಿಡುವ ಅಧಿಕಾರ
131ಜಿ. ವಿವಾದಗಳ ಪರಿಹಾರ

**ಅಧ್ಯಾಯ-XIV**

**ಸಂಕೀರ್ಣ ವಿಷಯಗಳು**

## ಉದ್ದೇಶ ಮತ್ತು ಕಾರಣಗಳ ಹೇಳಿಕೆ

**I**

**1966ರ ಅಧಿನಿಯಮ 27.**– ಈ ವಿಧೇಯಕವು, ವಿವಿಧ ಪ್ರದೇಶಗಳಲ್ಲಿ ಜಾರಿಯಲ್ಲಿರುವ ಈ ಮುಂದಿನ ಅಧಿನಿಯಮಗಳನ್ನು ರದ್ದುಗೊಳಿಸಿ ಅವುಗಳ ಬದಲಿಗೆ ಹೊಸ ಅಧಿನಿಯಮಗಳನ್ನು ತರುವ ಮೂಲಕ, ಹೊಸ ಮೈಸೂರು ರಾಜ್ಯದಾದ್ಯಂತ ಕೃಷಿ ಉತ್ಪನ್ನದ ಖರೀದಿ ಮತ್ತು ಮಾರಾಟದ ಉತ್ತಮ ನಿಯಂತ್ರಣಕ್ಕೆ ಮತ್ತು ಕೃಷಿ ಉತ್ಪನ್ನಕ್ಕೆ ಮಾರುಕಟ್ಟೆಗಳ ಸ್ಥಾಪನೆಗೆ ಸಂಬಂಧಿಸಿ ಒಂದು ಏಕರೂಪ ಕಾನೂನನ್ನು ಒದಗಿಸುವ ಉದ್ದೇಶವನ್ನು ಹೊಂದಿದೆ:–

(1) ಮುಂಬೈ ಪ್ರದೇಶದಲ್ಲಿ ಜಾರಿಯಲ್ಲಿರುವ, ಮುಂಬೈ ಕೃಷಿ ಉತ್ಪನ್ನ ಮಾರುಕಟ್ಟೆಗಳ ಅಧಿನಿಯಮ, 1939 (1939ರ ಮುಂಬೈ ಅಧಿನಿಯಮ 22);

(2) ಮದ್ರಾಸು ಪ್ರದೇಶದಲ್ಲಿ ಜಾರಿಯಲ್ಲಿರುವ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಜಾರಿಯಲ್ಲಿರುವ ಮದ್ರಾಸು ವಾಣಿಜ್ಯ ಬೆಳೆಗಳ ಮಾರುಕಟ್ಟೆಗಳ ಅಧಿನಿಯಮ, 1933 (1933ರ ಮದ್ರಾಸು ಅಧಿನಿಯಮ 20);

(3) ಕೊಡಗು ಜಿಲ್ಲೆಯಲ್ಲಿ ಜಾರಿಯಲ್ಲಿರುವ, ಕೊಡಗು ಕೃಷಿ ಉತ್ಪನ್ನ ಮಾರುಕಟ್ಟೆಗಳ ಅಧಿನಿಯಮ, 1956 (1956ರ ಕೊಡಗು ಅಧಿನಿಯಮ 7);

(4) ಹೈದ್ರಾಬಾದ್ ಪ್ರದೇಶದಲ್ಲಿ ಜಾರಿಯಲ್ಲಿರುವ ಹೈದ್ರಾಬಾದ್ ಕೃಷಿ ಉತ್ಪನ್ನ ಮಾರುಕಟ್ಟೆ ಅಧಿನಿಯಮ, 1339 ಫಸ್ಲಿ (1339ರ ಫಸ್ಲಿ ಹೈದ್ರಾಬಾದ್ ಅಧಿನಿಯಮ 2);

(5) ಮೈಸೂರು ಪ್ರದೇಶದಲ್ಲಿ ಜಾರಿಯಲ್ಲಿರುವ ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆಗಳ ಅಧಿನಿಯಮ, 1939 (1939ರ ಮೈಸೂರು ಅಧಿನಿಯಮ 16). ಈ ವಿಧೇಯಕವನ್ನು, ಕೃಷಿ ಉತ್ಪನ್ನದ ಮಾರಾಟ ಮತ್ತು ಖರೀದಿಯನ್ನು ಪರಿಣಾಮಕಾರಿಯಾಗಿ ವಿನಿಯಮಿಸುವ ಸಲುವಾಗಿ ಮಾರುಕಟ್ಟೆಗಳ ವಿನಿಯಮದ ಮಾದರಿಯನ್ನು, ಪುನರ್ ನವೀಕರಣ ಅಗತ್ಯವಾಗಿದೆ ಎಂದು ಭಾರತ ಸರ್ಕಾರದ ಸಲಹೆಯನ್ನು ಪರಿಗಣಿಸಿ ಸಿದ್ಧಪಡಿಸಲಾಗಿದೆ.

ಇತರ ವಿಷಯಗಳೊಂದಿಗೆ ಈ ಕೆಳಕಂಡವುಗಳ ಬಗ್ಗೆ ಉಪಬಂಧ ಕಲ್ಪಿಸಲಾಗಿದೆ,–

(i) ಕೃಷಿ, ಪಶುಸಂಗೋಪನೆ, ಜೇನುಸಾಕಣೆ, ತೋಟಗಾರಿಕೆ ಅಥವಾ ಮೀನುಗಾರಿಕೆ, ಅರಣ್ಯ ಉತ್ಪನ್ನ ಮತ್ತು ಇತರ ಯಾವುದೇ ಉತ್ಪನ್ನ, ಪಶುಸಂಗೋಪನೆ ಮತ್ತು ಕೋಳಿ ಸಾಕಣೆ–ಈ ಎಲ್ಲಾ ಉತ್ಪನ್ನಗಳನ್ನು ಒಳಗೊಳ್ಳುವ ಹಾಗೆ, ಕೃಷಿ ಉತ್ಪನ್ನ ಇದನ್ನು ಪರಿಭಾಷಿಸುವುದು;

(ii) ನಿರ್ದಿಷ್ಟಪಡಿಸಿದ ಪ್ರದೇಶದಲ್ಲಿ ಕೃಷಿ ಉತ್ಪನ್ನದ ಖರೀದಿ ಮತ್ತು ಮಾರಾಟವನ್ನು ವಿನಿಯಮನಗೊಳಿಸುವ ಮತ್ತು ಮಾರುಕಟ್ಟೆ ಪ್ರದೇಶ ಮತ್ತು ಮಾರುಕಟ್ಟೆ ಪ್ರಾಂಗಣ ಘೋಷಣೆಯನ್ನು ಮಾಡುವ ಸರ್ಕಾರದ ಉದ್ದೇಶವನ್ನು ಅಧಿಸೂಚಿಸುವುದಕ್ಕೆ;

(iii) ಕೃಷಿ ಉತ್ಪನ್ನದ ನಿರ್ದಿಷ್ಟ ಬಗೆಗಿನ ವ್ಯಾಪಾರಕ್ಕೆ ಮಾರುಕಟ್ಟೆ ಸಮಿತಿಗಳನ್ನು ಮತ್ತು ಅಲ್ಲದೆ, ಕೃಷಿ ಉತ್ಪನ್ನದ ಯಾವುದೇ ನಿರ್ದಿಷ್ಟ ಬಗೆಯ ಉತ್ಪನ್ನದ ವ್ಯಾಪಾರಕ್ಕೆ ಅದೇ ಮಾರುಕಟ್ಟೆ ಪ್ರದೇಶದೊಳಗೆ ಪ್ರತ್ಯೇಕ ಮಾರುಕಟ್ಟೆ ಪ್ರದೇಶಗಳನ್ನು ಸ್ಥಾಪಿಸುವುದು;

(iv) ಮಾರುಕಟ್ಟೆ ಸಮಿತಿಗಳಲ್ಲಿ ಕೃಷಿ ಉತ್ಪನ್ನದ ಖರೀದಿದಾರರು, ಖರೀದಿದಾರರ ಸಹಕಾರ ಸಂಘಗಳ ಪ್ರತಿನಿಧಿಗಳು, ಕೃಷಿ ಸಹಕಾರ ಮಾರುಕಟ್ಟೆ ಮತ್ತು ಸಂಸ್ಕರಣ ಸಂಘಗಳ ಪ್ರತಿನಿಧಿಗಳು, ಪುರಸಭೆಗಳು, ತಾಲೂಕು ಮಂಡಲಿಗಳು ಮತ್ತು ಕೇಂದ್ರ ಉಗ್ರಾಣ ನಿಗಮ ಮತ್ತು ರಾಜ್ಯ ಉಗ್ರಾಣ ನಿಗಮ–ಇವುಗಳಿಗೆ ಪ್ರಾತಿನಿಧ್ಯ ಒದಗಿಸುವುದು;

(v) ಮಾರುಕಟ್ಟೆ ಸಮಿತಿಯು ಮಾರುಕಟ್ಟೆ ಫೀಜನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು;

(vi) ಮಾರುಕಟ್ಟೆ ಸಮಿತಿ ನಿಧಿಗಳು ಮತ್ತು ಕೇಂದ್ರೀಯ ಮಾರುಕಟ್ಟೆ–ಇವುಗಳನ್ನು ರಚಿಸುವುದು;

(vii) ಮಾರುಕಟ್ಟೆ ಸಮಿತಿಗೆ ಸಾಲ ಪಡೆಯುವ ಅಧಿಕಾರ ವಹಿಸುವುದು;

(viii) ಮಾರುಕಟ್ಟೆಯ ದಕ್ಷ ಆಡಳಿತ ಮತ್ತು ನಿಯಂತ್ರಣವನ್ನು ಖಾತರಿಪಡಿಸಿಕೊಳ್ಳಲು ಸರ್ಕಾರಿ ನೌಕರರನ್ನು ಮಾರುಕಟ್ಟೆ ಸಮಿತಿಗಳ ಕಾರ್ಯದರ್ಶಿಗಳು, ಸಹಾಯಕ ಕಾರ್ಯದರ್ಶಿಗಳು, ತಾಂತ್ರಿಕ ಲೆಕ್ಕಪತ್ರಗಳ ಮತ್ತು ಲೆಕ್ಕಪರಿಶೋಧನೆಯ ಸಿಬ್ಬಂದಿಗಳಾಗಿ ನೇಮಕ ಮಾಡುವುದು;

(ix) ಮುಖ್ಯ ಮಾರುಕಟ್ಟೆ ಅಧಿಕಾರಿಯು ವಿಚಾರಣೆ ಮತ್ತು ಪರಿಶೀಲನೆ ಮಾಡುವುದು;ಮತ್ತು

(x) ಕರ್ತವ್ಯಗಳನ್ನು ನೆರವೇರಿಸಲು ತಪ್ಪಿದ್ದಕ್ಕಾಗಿ ಮಾರುಕಟ್ಟೆ ಸಮಿತಿಯನ್ನು ಅಮಾನತ್ತಿನಲ್ಲಿಡುವುದು.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ-IV –2ಎ, ದಿನಾಂಕ 30-3-1963ರಲ್ಲಿ ಸಂಖ್ಯೆ: 47 ಆಗಿ ಪ್ರಕಟಿಸಲಾಗಿದೆ).

**II**

**1969ರ ತಿದ್ದುಪಡಿ ಮಾಡುವ ಅಧಿನಿಯಮ 19.**- ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966, ಇದು 1ನೇ ಮೇ 1968ರಂದು ಜಾರಿಗೆ ಬಂದಿದೆ. ಅಧಿನಿಯಮದ 154(1)ನೇ ಪ್ರಕರಣವು ಈ ವಿಷಯದಲ್ಲಿ ಜಾರಿಯಲ್ಲಿದ್ದ ಹಿಂದಿನ ಅಧಿನಿಯಮಗಳನ್ನು ನಿರಸನಗೊಳಿಸುತ್ತದೆ ಮತ್ತು ಆ ಅಧಿನಿಯಮಗಳ ಮೇರೆಗೆ ರಚಿಸಲಾದ ಮಾರುಕಟ್ಟೆ ಸಮಿತಿಗಳನ್ನು ಹೊಸ ಅಧಿನಿಯಮದ ಮೇರೆಗೆ ಮಾರುಕಟ್ಟೆ ಸಮಿತಿಗಳನ್ನು ರಚಿಸುವವರೆಗೆ, ಮುಂದುವರಿಕೆಗೆ ಅವಕಾಶ ಮಾಡಿಕೊಡುತ್ತದೆ. ಈ ಉಪಬಂಧದ ಮೂಲಕ ಹಳೆಯ ಮಾರುಕಟ್ಟೆ ಸಮಿತಿಯ ಸ್ಥಾನದಲ್ಲಿ ಹೊಸ ಅಧಿನಿಯಮದ ಮೇರೆಗಿನ ಚುನಾಯಿತ ಮಾರುಕಟ್ಟೆ ಸಮಿತಿಗಳನ್ನು ಅಸ್ತಿತ್ವಕ್ಕೆ ತರುವ ಉದ್ದೇಶವನ್ನು ಹೊಂದಿತ್ತು. ಆದರೆ, ಮರುಳಾರಾಧ್ಯ-ವಿರುದ್ಧ-ನಿಯಂತ್ರಿಕ ಮಾರುಕಟ್ಟೆ ಸಮಿತಿ, ಶಿವಮೊಗ್ಗ ಮತ್ತು ಇತರರು, 1969(1) ಕರ್ನಾಟಕ ಎಲ್.ಜೆ 533, ಇದರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು, ಅಧಿನಿಯಮದ 11ನೇ ಪ್ರಕರಣದ ಮೇರೆಗೆ ಒಂದು ಮಾರುಕಟ್ಟೆ ಸಮಿತಿಯ ಚುನಾವಣೆಗೆ ಮುನ್ನ 10ನೇ ಪ್ರಕರಣದ ಮೇರೆಗಿನ ಒಂದು ನಾಮನಿರ್ದೇಶಿತ ಮಾರುಕಟ್ಟೆ ಸಮಿತಿಯ ರಚನೆಯಾಗಬೇಕು ಮತ್ತು ಆ ಪ್ರಕ್ರಿಯೆಯ ಮೂಲಕ ಮಾತ್ರವೇ 154(1) ಪ್ರಕರಣದ (ಸಿ) ಪರಂತುಕದ ಅಡಿಯಲ್ಲಿ ಕಾರ್ಯನಿರ್ವಹಣೆಯನ್ನು ಮುಂದುವರಿಸುತ್ತಿರುವ ಒಂದು ಹಳೆಯ ಮಾರುಕಟ್ಟೆ ಸಮಿತಿಯು ತನ್ನ ಪದವನ್ನು ತೆರವು ಮಾಡಬಹುದೆಂದು ನಿರ್ಣಯಿಸಿತು. 10ನೇ ಪ್ರಕರಣದ ಮೇರೆಗೆ ನಾಮನಿರ್ದೇಶನ ಮಾಡಲಾದ ಒಂದು ಮಾರುಕಟ್ಟೆ ಸಮಿತಿಯು ಎರಡು ವರ್ಷಗಳ ಅವಧಿಯವರೆಗೆ ಅಧಿಕಾರದಲ್ಲಿರುತ್ತದೆ. ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಈ ಎಲ್ಲಾ ಸಮಿತಿಗಳಿಗೆ ಸದಸ್ಯರನ್ನು ನಾಮನಿರ್ದೇಶನ ಮಾಡುವುದು ಅಪೇಕ್ಷಣೀಯವಲ್ಲವೆಂದು ಸರ್ಕಾರವು ಪರಿಗಣಿಸಿದೆ. ಈಗ ಅಸ್ತಿತ್ವದಲ್ಲಿರುವ ಕೆಲವು ಸಮಿತಿಗಳಲ್ಲಿ ಕೆಲಸವನ್ನು ಕಳೆದ 10-12 ವರ್ಷಗಳಿಂದಲೂ ಪುನರ್ ರಚನೆ ಮಾಡಿರುವಲ್ಲಿ, ಮತ್ತು ಸಮಿತಿಗಳ ಮೇಲಿನ ಪ್ರಾತಿನಿಧ್ಯದ ಮಾದರಿಯು ಹೊಸ ಅಧಿನಿಯಮದ ಅಡಿಯಲ್ಲಿ ಗೊತ್ತುಪಡಿಸಲಾದ ಮಾದರಿಗಿಂತ ಗಣನೀಯವಾಗಿ ಭಿನ್ನವಾಗಿತ್ತು ಮತ್ತು ಹೊಸ ಅಧಿನಿಯಮದ ಮೇರೆಗೆ ಗೊತ್ತುಪಡಿಸಲಾದ ಕೆಲವು ಮತಕ್ಷೇತ್ರಗಳು ಈ ಸಮಿತಿಗಳಲ್ಲಿ ಒಟ್ಟಾರೆ ಪ್ರಾತಿನಿಧ್ಯ ಹೊಂದಿರುವುದಿಲ್ಲ. ಅನೇಕ ಮಾರುಕಟ್ಟೆ ಸಮಿತಿಗಳಲ್ಲಿ ವ್ಯಾಪಾರಿಗಳ ಪ್ರತಿನಿಧಿಗಳು ಅಧ್ಯಕ್ಷರಂತೆ ಕಾರ್ಯನಿರ್ವಹಿಸುತ್ತಿದ್ದು ಅದು ಹೊಸ ಅಧಿನಿಯಮದ ಮೂಲಭೂತ ತತ್ವಗಳಿಗೆ ಅಸಂಗತವಾದುದಾಗಿತ್ತು. ಕೆಲವು ಸಮಿತಿಗಳಲ್ಲಿ ಮಂಡಲಿಗಳ ಅವಧಿಯು ಮುಕ್ತಾಯವಾಗಿದ್ದರಿಂದ ಅಸ್ತಿತ್ವದಲ್ಲಿರುವುದು ನಿಂತುಹೋಗಿತ್ತು ಮತ್ತು ಅಧ್ಯಕ್ಷರು ಮಾತ್ರವೇ ಸಮಿತಿಯ ಪರವಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಮತದಾರರ ಪಟ್ಟಿಯನ್ನು ಸಿದ್ಧಪಡಿಸುವುದಕ್ಕೆ, ಅದನ್ನು ಪ್ರಕಟಿಸುವುದಕ್ಕೆ ಹಾಗೂ ಚುನಾವಣೆಯನ್ನು ನಡೆಸುವುದಕ್ಕೆ ಸುಮಾರು ಒಂದು ವರ್ಷ ಹಿಡಿಯುತ್ತದೆ. ಆದುದರಿಂದ, ಈಗಿರುವ ಎಲ್ಲಾ ಮಾರುಕಟ್ಟೆ ಸಮಿತಿಗಳ ಪದಾವಧಿಯನ್ನು ಮುಕ್ತಾಯಗೊಳಿಸಲು ಮತ್ತು ಅವುಗಳ ಯುಕ್ತ ಕಾರ್ಯ ನಿರ್ವಹಣೆಯನ್ನು ಸುನಿಶ್ಚಿತಗೊಳಿಸುವ ಸಲುವಾಗಿ ಈಗಿರುವ ಮಾರುಕಟ್ಟೆ ಸಮಿತಿಗಳ ಸ್ಥಳದಲ್ಲಿ ಒಂದು ವರ್ಷವನ್ನು ಮೀರದ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ನಿರ್ಧರಿಸಲಾಗಿತ್ತು. ಈ ಆಡಳಿತಾಧಿಕಾರಿಗಳು ಸಹ ಒಂದು ವರ್ಷದ ಅವಧಿಯೊಳಗೆ ಮಾರುಕಟ್ಟೆ ಸಮಿತಿಗಳನ್ನು ರಚಿಸುವುದಕ್ಕೆ ತ್ವರಿತಕ್ರಮವನ್ನು ತೆಗೆದುಕೊಳ್ಳುವರು. ಹೊಸ ಅಧಿನಿಯಮದ ಮೇರೆಗೆ, ಪ್ರತಿಯೊಂದು ಮಾರುಕಟ್ಟೆ ಸಂಬಂಧದಲ್ಲಿ, ಅಲ್ಲಿ ಒಂದು ಮಾರುಕಟ್ಟೆ ಮತ್ತು ಒಂದು ಮಾರುಕಟ್ಟೆ ಪ್ರಾಂಗಣವಿರಬೇಕು, ಮತ್ತು ಒಬ್ಬ ವ್ಯಾಪಾರಿ ಅಥವಾ ಇತರ ವ್ಯಕ್ತಿ ಪ್ರಾಂಗಣದಲ್ಲಿ ತಂದ ಕೃಷಿ ಉತ್ಪನ್ನದ ಸಂಬಂಧದಲ್ಲಿ ಮಾರುಕಟ್ಟೆ ಶುಲ್ಕವನ್ನು ವಿಧಿಸಲು ಅವಕಾಶವಿರಬೇಕು. ಈಗಿರುವ ಅನೇಕ ಮಾರುಕಟ್ಟೆ ಪ್ರದೇಶಗಳಿಗೆ ಸಂಬಂಧಿಸಿ, ಮಾರುಕಟ್ಟೆ ಮತ್ತು ಮಾರುಕಟ್ಟೆ ಪ್ರಾಂಗಣಗಳನ್ನು ಕ್ರಮಬದ್ಧವಾಗಿ ಅಧಿಸೂಚಿಸಿಲ್ಲದಿರುವುದು ಕಂಡುಬಂದಿದೆ. ಆದ್ದರಿಂದ, ಈ ಸಂಬಂಧದಲ್ಲಿ ಅಗತ್ಯವಾದ ಅಧಿಸೂಚನೆಗಳನ್ನು ಹೊರಡಿಸಲು ಮುಖ್ಯ ಮಾರುಕಟ್ಟೆ ಅಧಿಕಾರಿಗೆ ಅಧಿಕಾರ ನೀಡಲು 152ನೇ ಪ್ರಕರಣದ ಅಡಿಯಲ್ಲಿ ತೊಂದರೆಗಳ ನಿವಾರಣೆಗೆ ಆದೇಶವನ್ನು ಹೊರಡಿಸಲಾಗಿದೆ. ವಿಷಯವನ್ನು ಸಂದೇಹಾತೀತಗೊಳಿಸಲು, ಅವನಿಂದ ಹೊರಡಿಸಲಾದ ಅಧಿಸೂಚನೆಗಳನ್ನು ಸಿಂಧುಗೊಳಿಸುವುದು ಅಪೇಕ್ಷಣೀಯವೆಂದು ಪರಿಗಣಿಸಲಾಗಿದೆ.

ಕೆಲವು ವಿವರಣಾತ್ಮಕ ತಿದ್ದುಪಡಿ ಮಾಡಲು ಈ ಅವಕಾಶವನ್ನು ಬಳಸಿಕೊಳ್ಳಲಾಗಿದೆ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ -IV2ಎ, ದಿನಾಂಕ 16-8-1969ರಲ್ಲಿ ಸಂಖ್ಯೆ 402 ಆಗಿ ಪ್ರಕಟವಾಗಿದೆ)

(ಎಲ್ಎ ವಿಧೇಯಕ ಸಂಖ್ಯೆ 1969ರ 26ರಿಂದ ಪಡೆಯಲಾಗಿದೆ).

III

**1970ರ ತಿದ್ದುಪಡಿ ಮಾಡುವ ಅಧಿನಿಯಮ 3.**- ಮಾರುಕಟ್ಟೆ ಸಮಿತಿಗೆ ಚುನಾವಣೆಯನ್ನು 19ನೇ ಜುಲೈ 1969 ರಿಂದ ಒಂದು ವರ್ಷದೊಳಗಡೆ ನಡೆಸತಕ್ಕದ್ದು. ಮತದಾರರ ಪಟ್ಟಿಯನ್ನು ವಿಳಂಬವಿಲ್ಲದೆ ಸಿದ್ಧಪಡಿಸಲು ಅನುಕೂಲವಾಗುವ ಹಾಗೆ ಕೃಷಿ ಭೂಮಿಯ ಅಧಿಭೋಗದಾರರು ಮತ್ತು ಸಾಗುವಳಿ ಮಾಡುವ ಗೇಣಿದಾರರು ಮಾತ್ರ ಕೃಷಿಕರ ಚುನಾವಣಾ ಕ್ಷೇತ್ರಗಳಲ್ಲಿ ಮತದಾರರಾಗಿ ನೋಂದಾಯಿಸಿಕೊಳ್ಳುವುದು ಅಗತ್ಯವೆಂದು ಪರಿಗಣಿಸಲಾಗಿದೆ. ಒಂದು ತಾಲೂಕಿನಲ್ಲಿ ಒಂದಕ್ಕಿಂತ ಹೆಚ್ಚು ತಾಲೂಕು ಮಾರುಕಟ್ಟೆ ಸಂಘಗಳಿರುವಲ್ಲಿ, ಯಾವುದೇ ಸಂಘದ ಸಮಿತಿಯ ಯಾರೇ ಸದಸ್ಯನನ್ನು ಮೊದಲನೇ ಮಾರುಕಟ್ಟೆ ಸಮಿತಿಗೆ ನಾಮನಿರ್ದೇಶನ ಮಾಡಬಹುದೆಂಬುದು ಅಗತ್ಯವೆಂದು ಪರಿಗಣಿಸಲಾಯಿತು. ಎಲ್ಲಾ ಚುನಾಯಿತ ನಿರ್ದೇಶಕರು, ತಾಲೂಕು ಮಾರುಕಟ್ಟೆ ಸಂಘಗಳ ಸಂಬಂಧದಲ್ಲಿ ತಮ್ಮೊಳಗಿಂದ ಒಬ್ಬರನ್ನು ಒಂದು ಮಾರುಕಟ್ಟೆ ಸಮಿತಿಯ ಸದಸ್ಯನನ್ನಾಗಿ ಆಯ್ಕೆ ಮಾಡಲು ಒಂದು ಚುನಾಯಕ ಗಣವನ್ನು ರಚಿಸಿಕೊಳ್ಳುವಂತೆ ಉಪಬಂಧ ಕಲ್ಪಿಸುವುದು ಕೂಡ ಅಗತ್ಯವೆಂದು ಪರಿಗಣಿಸಲಾಗಿತ್ತು. ಒಬ್ಬ ವ್ಯಕ್ತಿಯು, ಒಂದಕ್ಕಿಂತ ಹೆಚ್ಚು ಮಾರುಕಟ್ಟೆ ಸಮಿತಿಗಳ ಸದಸ್ಯನಾಗದಂತೆ ನಿಷೇಧಿಸುವುದು ಅಗತ್ಯವೆಂದು ಪರಿಗಣಿಸಲಾಯಿತು. ಕೆಲವು ಅಗತ್ಯ ಸ್ಪಷ್ಟೀಕರಣ ತಿದ್ದುಪಡಿಗಳನ್ನು ಸಹ ಅಗತ್ಯವೆಂದು ಪರಿಗಣಿಸಲಾಗಿತ್ತು.

ಈ ಉದ್ದೇಶಕ್ಕಾಗಿ ಒಂದು ಅಧ್ಯಾದೇಶವನ್ನು ಹೊರಡಿಸಲಾಗಿತ್ತು ಮತ್ತು ವಿಧೇಯಕವು ಸದರಿ ಅಧ್ಯಾದೇಶವನ್ನು ಬದಲಿಸುವ ಉದ್ದೇಶವನ್ನು ಹೊಂದಿದೆ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ-IV 2ಎ, ದಿನಾಂಕ: 12-1-1970, ಸಂಖ್ಯೆ:17 ಎಂದು ಪುಟ 5ರಲ್ಲಿ ಪ್ರಕಟವಾಗಿದೆ).

IV

**1973ರ ತಿದ್ದುಪಡಿ ಮಾಡುವ ಅಧಿನಿಯಮ 2.**- ಈ ಅಧಿನಿಯಮದ 65ನೇ ಪ್ರಕರಣದ ಮೇರೆಗೆ, ಮಾರುಕಟ್ಟೆ ಸಮಿತಿಯು, ಮಾರಾಟ ಮಾಡಿದ ಉತ್ಪನ್ನದ ಪ್ರತಿ 100 ರೂಪಾಯಿ ಬೆಲೆಗೆ 30 ಪೈಸೆಗಳವರೆಗೆ ಬೈಲಾದಲ್ಲಿ ಗೊತ್ತುಪಡಿಸಲಾದಂತೆ ಮಾರುಕಟ್ಟೆ ಫೀಜನ್ನು ವಿಧಿಸಬಹುದು. ರಾಜ್ಯದಲ್ಲಿ ನಿಯಂತ್ರಿತ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸಲು, ಅಂತರ್ ರಾಷ್ಟ್ರೀಯ ಅಭಿವೃದ್ಧಿ ಸಂಸ್ಥೆಯು ಇತರ ಷರತ್ತುಗಳೊಂದಿಗೆ, ಮಾರಾಟ ಮಾಡಿದ ಕೃಷಿ ಉತ್ಪನ್ನದ ಬೆಲೆಯ ಪ್ರತಿ ನೂರು ರೂಪಾಯಿಗೆ ಒಂದು ರೂಪಾಯಿವರೆಗೆ ಗರಿಷ್ಠ ಮಾರುಕಟ್ಟೆ ಫೀಜನ್ನು ವಿಧಿಸಬಹುದೆಂಬ ಷರತ್ತಿಗೊಳಪಟ್ಟು, ರಾಜ್ಯ ಸರ್ಕಾರಕ್ಕೆ ಹತ್ತು ಕೋಟಿ ರೂಪಾಯಿಗಳ ಸಾಲ ನೀಡಲು ಒಪ್ಪಿದೆ. ಸಾಲವನ್ನು ತ್ವರಿತವಾಗಿ ಪಡೆಯಬೇಕಾಗಿತ್ತು. ಈ ತುರ್ತು ದೃಷ್ಟಿಯಿಂದ ಮತ್ತು ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿ ಇದ್ದಿಲ್ಲವಾದ್ದರಿಂದ ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) (ತಿದ್ದುಪಡಿ) ಅಧ್ಯಾದೇಶ, 1973 ಇದನ್ನು ಹೊರಡಿಸಲಾಗಿತ್ತು. ಸಾಲವನ್ನು ವಾಣಿಜ್ಯ ಬ್ಯಾಂಕುಗಳ ಮೂಲಕ ಕೊಡಬಹುದಾಗಿರುವುದರಿಂದ, ಮಾರುಕಟ್ಟೆ ಸಮಿತಿಗಳಿಗೆ ಅನುಸೂಚಿತ ಬ್ಯಾಂಕುಗಳಲ್ಲಿಯೂ ಕೂಡ ಹಣ ತೊಡಗಿಸುವುದಕ್ಕೆ ಅಧಿಕಾರ ನೀಡಲು 90ನೇ ಪ್ರಕರಣಕ್ಕೆ ಮತ್ತೊಂದು ತಿದ್ದುಪಡಿಯನ್ನು ಮಾಡಲಾಗಿತ್ತು.

ಈ ವಿಧೇಯಕವನ್ನು ಸದರಿ ಅಧ್ಯಾದೇಶವನ್ನು ಬದಲಾಯಿಸಲು ಮಂಡಿಸಲಾಗಿದೆ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 30-8-1973ರಲ್ಲಿ ಸಂಖ್ಯೆ: 690 ಆಗಿ ಪುಟ 3ರಲ್ಲಿ ಪ್ರಕಟವಾಗಿದೆ).

V

**1975ರ ತಿದ್ದುಪಡಿ ಮಾಡುವ ಅಧಿನಿಯಮ 24.**- ಈ ಅಧಿನಿಯಮದ ಮೇರೆಗೆ ಒದಗಿಸಲಾದ ನಿಯಂತ್ರಿತ ಮಾರುಕಟ್ಟೆ ಸೌಲಭ್ಯಗಳನ್ನು ಕೃಷಿಕರು ಇನ್ನಷ್ಟು ಉತ್ತಮವಾಗಿ ಬಳಸಿಕೊಳ್ಳಲು ಅನುಕೂಲವಾಗುವ ಹಾಗೆ ರಾಜ್ಯದಲ್ಲಿನ ಎಲ್ಲ ಗ್ರಾಮಗಳಿಗೆ ಸಾಕಷ್ಟು ಸಂಪರ್ಕ ಸೌಲಭ್ಯಗಳನ್ನು ಒದಗಿಸುವಂತೆ ವಿಧಾನಮಂಡಲದ ಒಳಗೂ ಹೊರಗೂ ಪದೇ ಪದೇ ನಿರಂತರ ಬೇಡಿಕೆ ಇತ್ತು. ಕಾಲಕಾಲಕ್ಕೆ ತಾತ್ಪೂರ್ತಿಕ ವ್ಯವಸ್ಥೆಯನ್ನು ಮಾಡಿದ್ದಾಗ್ಯೂ, ಮುಖ್ಯವಾಗಿ, ಈ ಉದ್ದೇಶದ ಸಲುವಾಗಿ ಇರುವ ನಿಧಿಗಳ ಕ್ರಮಬದ್ಧ ಲಭ್ಯತೆಯ ಕೊರತೆಯಿಂದಾಗಿ ಗ್ರಾಮೀಣ ಪ್ರದೇಶಗಳ ರಸ್ತೆಗಳ ನಿರ್ಮಾಣದ ಬೇಡಿಕೆಯನ್ನು ಸಂಪೂರ್ಣವಾಗಿ ಪೂರೈಸಲು ಸಾಧ್ಯವಾಗಿಲ್ಲ. ಆದುದರಿಂದ ಮಾರಾಟಗಾರರ ಮೇಲೆ ಸಹ ಮಾರುಕಟ್ಟೆ ಫೀಜನ್ನು ವಿಧಿಸುವುದಕ್ಕೆ ಉಪಬಂಧ ಮತ್ತು ಅದರಿಂದ ಬಂದ ಉತ್ಪನ್ನಗಳನ್ನು ಗ್ರಾಮೀಣ ರಸ್ತೆಗಳ ಅಭಿವೃದ್ಧಿಗೆ ಬಳಸುವುದಕ್ಕೆ ಉಪಬಂಧ ಕಲ್ಪಿಸುವುದು ಅಗತ್ಯವೆಂದು ಪರಿಗಣಿಸಲಾಯಿತು.

ಆದುದರಿಂದ ಈ ವಿಧೇಯಕ.

(ಲಾ 25 ಎಲ್‌ಜಿಎನ್ 75 ಕಡತದಿಂದ ಪಡೆಯಲಾಗಿದೆ).

VI

**1976ರ ತಿದ್ದುಪಡಿ ಮಾಡುವ ಅಧಿನಿಯಮ 14.–** ಈಗಿರುವ 60ನೇ ಪ್ರಕರಣದ ಮೇರೆಗೆ, ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯ ವರ್ಗಾವಣೆಗಾಗಿ, ಸಮಿತಿಯ ಒಟ್ಟು ಸದಸ್ಯರ ಪೈಕಿ 3/4 ರಷ್ಟು ಸದಸ್ಯರು ಮತ ನೀಡಿದರೆ ಮಾತ್ರವೇ ಮುಖ್ಯ ಮಾರುಕಟ್ಟೆ ಅಧಿಕಾರಿಯು ಅಂಥ ವರ್ಗಾವಣೆ ಮಾಡಬೇಕಾಗುತ್ತದೆ. ಮಾರುಕಟ್ಟೆ ಸಮಿತಿಗಳ ಕಾರ್ಯದರ್ಶಿಗಳು ಸರ್ಕಾರಿ ನೌಕರರಾಗಿರುವ ಕಾರಣದಿಂದಾಗಿ, ಅಂಥ ಕಾನೂನುಬದ್ಧ ಹೊಣೆಗಾರಿಕೆಯನ್ನು ಮುಖ್ಯ ಮಾರುಕಟ್ಟೆ ಅಧಿಕಾರಿಗೆ ವಹಿಸಿಕೊಡುವುದು ಯುಕ್ತವಲ್ಲ. ಆದುದರಿಂದಾಗಿ, 60ನೇ ಪ್ರಕರಣವನ್ನು ಬಿಟ್ಟುಬಿಡುವುದಕ್ಕೆ ಪ್ರಸ್ತಾವಿಸಲಾಗಿದೆ.

ಈಗಿರುವ ಅಧಿನಿಯಮದಲ್ಲಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಪ್ರಕಾರ್ಯಗಳು ಕೃಷಿ ಉತ್ಪನ್ನದ ಖರೀದಿ ಮತ್ತು ಮಾರಾಟ ನಿಯಂತ್ರಣಕ್ಕೆ ಸೀಮಿತವಾಗಿವೆ. ಉತ್ಪಾದಕ ಮತ್ತು ಬಳಕೆದಾರರಿಬ್ಬರ ಪ್ರಯೋಜನಕ್ಕಾಗಿ, ಯುಕ್ತ ದರಗಳಲ್ಲಿ ಬಳಕೆದಾರರಿಗೆ ಸಂಸ್ಕರಿಸಿದ ಕೃಷಿ ಉತ್ಪನ್ನದ ಸರಿಯಾದ ವಿತರಣೆ ಸಲುವಾಗಿ ಮಾರುಕಟ್ಟೆ ಪ್ರದೇಶಗಳಲ್ಲಿ ಮತ್ತು ಅವುಗಳ ಸುತ್ತಮುತ್ತ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸುವ ಮೂಲಕ ಬಳಕೆದಾರರು ಮತ್ತು ಉತ್ಪಾದಕರ ನಡುವೆ ಸಂಪರ್ಕ ಕಲ್ಪಿಸುವುದು ಅಗತ್ಯವೆಂದು ಭಾವಿಸಲಾಗಿದೆ.

ಕೃಷಿ ಉತ್ಪನ್ನಗಳ ಸಂಬಂಧದಲ್ಲಿ ಮಾರುಕಟ್ಟೆ ಫೀಜನ್ನು ವಿಧಿಸುವ ಮತ್ತು ಸಂಗ್ರಹಿಸುವ ಬಗ್ಗೆ ಯಾವುದೇ ಮಾರುಕಟ್ಟೆ ಸಮಿತಿಗೆ ವಿನಾಯಿತಿ ನೀಡಲು ಈಗ ಅಸ್ತಿತ್ವದಲ್ಲಿರುವ ಅಧಿನಿಯಮದಲ್ಲಿ ಅಧಿಕಾರವಿಲ್ಲ. ಮಾರುಕಟ್ಟೆ ಪ್ರದೇಶದಲ್ಲಿ ಕೃಷಿ ಉತ್ಪನ್ನವನ್ನು ಮಾರಾಟ ಮಾಡುವ ಮಾರಾಟಗಾರರನ್ನು ಅಂಥ ಯಾವುದೇ ಕೃಷಿ ಉತ್ಪನ್ನಕ್ಕೆ ಸಂಬಂಧಿಸಿದ ಮಾರುಕಟ್ಟೆ ಫೀಜನ್ನು ವಿಧಿಸುವ ಮತ್ತು ಸಂಗ್ರಹಿಸುವುದರಿಂದ ವಿನಾಯಿತಿ ನೀಡಲು ರಾಜ್ಯ ಸರ್ಕಾರವನ್ನು ಶಕ್ತಗೊಳಿಸಲು ಉದ್ದೇಶಿಸಲಾಗಿದೆ. ನಿರ್ದಿಷ್ಟವಾಗಿ ರಾಜ್ಯದ ಗಡಿ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಮಾರುಕಟ್ಟೆಯಲ್ಲಿ ಭಾರೀ ಪ್ರಮಾಣದ ವ್ಯಾಪಾರದ ಮಾರ್ಗಪಲ್ಲಟವನ್ನು ತಪ್ಪಿಸುವ ಉದ್ದೇಶದಿಂದ ಈ ಉಪಬಂಧವು ಅಗತ್ಯವೆಂದು ಪರಿಗಣಿಸಲಾಗಿದೆ. ಇದರಿಂದಾಗಿ ಆಗುವ ವರಮಾನದ ಕಡತವನ್ನು, ವ್ಯಾಪಾರದ ಮಾರ್ಗಪಲ್ಲಟ ತಡೆದಿದ್ದರೆ ಫಲಿತಾಂಶವಾಗಿ ಅಧಿಕ ಪ್ರಮಾಣದಲ್ಲಿ ತುಂಬಿಕೊಳ್ಳಬಹುದಾಗಿದೆ.

ರಾಜ್ಯದಲ್ಲಿನ ಮಾರುಕಟ್ಟೆ ಸಮಿತಿಗಳಿಗೆ ಒಟ್ಟು ಆದಾಯದ ಮೇಲೆ ರಾಜ್ಯ ಸರ್ಕಾರವು ಈಗ ನೀಡುವ ಶೇಕಡಾ ಐದರ ದರದ ವಂತಿಗೆಯನ್ನು ವರ್ಷದ ಅವಧಿಯಲ್ಲಿ ಮಾರುಕಟ್ಟೆ ಫೀಜು ಮತ್ತು ಲೈಸೆನ್ಸ್ ಫೀಜು ಮೂಲಕ ಮಾರುಕಟ್ಟೆ ಸಮಿತಿಗಳ ಒಟ್ಟು ಸ್ವೀಕೃತಿಯಲ್ಲಿ ಶೇಕಡಾ ಒಂದರಷ್ಟಕ್ಕೆ ಇಳಿಸಲು ಪ್ರಸ್ತಾವಿಸಲಾಗಿದೆ. ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಗೆ ಸಂಬಂಧಪಟ್ಟಂತೆ ರಾಜ್ಯ ಸರ್ಕಾರದ ಮೇಲಿನ ಆರ್ಥಿಕ ಹೊಣೆಗಾರಿಕೆಯ ಭಾಗವನ್ನು ಈ ಉಪಬಂಧವು ತಗ್ಗಿಸುತ್ತದೆ.

ಆದುದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV–2ಎ, ದಿನಾಂಕ:5–2–1976ರ ಸಂಖ್ಯೆ:689 ಆಗಿ ಪುಟ 3–4ರಲ್ಲಿ ಪ್ರಕಟವಾಗಿದೆ).

VII

**1976ರ ತಿದ್ದುಪಡಿ ಮಾಡುವ ಅಧಿನಿಯಮ 43.–** ಈ ವಿಷಯದ ಮೇಲಿನ ಪ್ರಸ್ತುತ ಚಿಂತನೆಯನ್ನು ಅನುಸರಿಸಿ, ಈ ಅಧಿನಿಯಮದ ಕಕ್ಷೆಯಲ್ಲಿ ಶ್ರೇಣೀಕರಣ, ಸಂಸ್ಕರಣ, ಸಾಗಣೆ, ಪ್ಯಾಕೇಜಿಂಗ್ ಮುಂತಾದವುಗಳ ವಿನಿಯಮನವನ್ನು ತರುವುದಕ್ಕಾಗಿ ಅದರ ಉದ್ದೇಶಗಳನ್ನು ವಿಸ್ತರಿಸುವುದಕ್ಕೆ ಪ್ರಸ್ತಾವಿಸಲಾಗಿದೆ.

ವ್ಯಾಪಾರದ ಪರಿಣಾಮಕಾರಿ ವಿನಿಯಮನವನ್ನು ಮಾಡಲು ಮತ್ತು ಅದರಂತೆ ವ್ಯಾಪಾರಿಗಳಿಗೆ ಸ್ಥಳದಲ್ಲೇ ಸಂಸ್ಕರಣದ ಮತ್ತು ಪ್ಯಾಕೇಜಿಂಗ್ ಸೌಲಭ್ಯಗಳನ್ನು ಒದಗಿಸುವಂತೆ ಮಾರುಕಟ್ಟೆ ಪ್ರಾಂಗಣಗಳಲ್ಲಿ ಮತ್ತು ಉಪ ಮಾರುಕಟ್ಟೆ ಪ್ರಾಂಗಣಗಳಲ್ಲಿ ಮಾತ್ರವೇ ಅಧಿಸೂಚಿತ ಕೃಷಿ ಉತ್ಪನ್ನಗಳಲ್ಲಿನ ಸಗಟು ವ್ಯಾಪಾರವನ್ನು ನಡೆಸುವುದಕ್ಕೆ ಉಪಬಂಧ ಕಲ್ಪಿಸುವುದನ್ನು ಕೂಡ ಪ್ರಸ್ತಾವಿಸಲಾಗಿದೆ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV–2ಎ, ದಿನಾಂಕ:7–4–1976ರ ಸಂಖ್ಯೆ:1858 ಆಗಿ ಪುಟ 4ರಲ್ಲಿ ಪ್ರಕಟವಾಗಿದೆ).

VIII

**1976ರ ತಿದ್ದುಪಡಿ ಮಾಡುವ ಅಧಿನಿಯಮ 47.–** ಅಧ್ಯಕ್ಷ ಮತ್ತು ಉಪಾಧ್ಯಕ್ಷನ ಚುನಾವಣಾ ಕಾರ್ಯವಿಧಾನಕ್ಕೆ ಸಂಬಂಧಿಸಿದ ಅಧಿನಿಯಮದ 41ನೇ ಪ್ರಕರಣವು, ಸಭೆಯು ಗೊತ್ತುಪಡಿಸಲಾದ ಕಾಲಮಿತಿ ಒಳಗೆ ಸಭೆಯನ್ನು ಕರೆಯಲು ಸಾಧ್ಯವಾಗದಿದ್ದರೆ ಅಥವಾ ಕರೆಯಲಾದ ಸಭೆಯನ್ನು ಒಂದಲ್ಲ ಒಂದು ಕಾರಣಕ್ಕಾಗಿ ನಡೆಸಲು ಸಾಧ್ಯವಾಗದಿದ್ದರೆ ಆಗ ಏನು ಮಾಡಬೇಕು ಎಂಬ ಬಗ್ಗೆ ಉಪಬಂಧ ಕಲ್ಪಿಸಿರುವುದಿಲ್ಲ. ಇದರಿಂದಾಗಿ ಇಕ್ಕಟ್ಟಿನ ಪರಿಸ್ಥಿತಿ ಉಂಟಾಗಿ ಸಮಿತಿಯ ಕಾರ್ಯಕಲಾಪಗಳಿಗೆ ಅಡಚಣೆ ಉಂಟಾಗುತ್ತದೆ. ಆದ್ದರಿಂದ, ಸೂಕ್ತ ಉಪಬಂಧಗಳನ್ನು ಕಲ್ಪಿಸಲು ಈ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅಗತ್ಯವಾಗಿದೆ.

ವಿನಾಯಿತಿಗಳಿಗೆ ಉಪಬಂಧ ಕಲ್ಪಿಸುವ ಈ ಅಧಿನಿಯಮದ 133ನೇ ಪ್ರಕರಣವು, ಯಾವ ವರ್ಗದ ಸಂಘಗಳ ಎಲ್ಲ ಸದಸ್ಯರು ಕೃಷಿಕರಾಗಲಿ ಅಥವಾ ಯಾವುದೇ ಅಧಿಸೂಚಿತ ಕೃಷಿ ಪ್ರಾಥಮಿಕ ಉತ್ಪಾದಕರಾಗಲಿ ಆಗಿರುವ ಆ ಎಲ್ಲ ಸಂಘಗಳ ಪರವಾಗಿ ಮಾತ್ರವೇ ವಿನಾಯಿತಿಗಳನ್ನು ಅನುಮತಿಸುತ್ತದೆ. ಈ ಅಧಿನಿಯಮದಲ್ಲಿ ಬರುವ "ಮಾರುಕಟ್ಟೆ ವ್ಯವಹಾರ" ಪದದ ಪರಿಭಾಷೆಯನ್ನು ಇತ್ತೀಚೆಗೆ ವಿಸ್ತೃತಗೊಳಿಸಲಾಗಿದೆ. ಈ ಹಿನ್ನೆಲೆಯಲ್ಲಿ, ಇತರ ಸಹಕಾರ ಸಂಘಗಳನ್ನು ಸಹ ವಿನಾಯಿತಿ ಖಂಡದಲ್ಲಿ ತರಬೇಕಾಗುತ್ತದೆ. ಹಾಗೆ ಮಾಡಲು ಪ್ರಸ್ತಾವಿಸಲಾಗಿದೆ.

ಆದುದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ:24-5-1976ರಲ್ಲಿ ಸಂಖ್ಯೆ:2815 ಆಗಿ ಪುಟ 5ರಲ್ಲಿ ಪ್ರಕಟವಾಗಿದೆ).

**IX**

**1980ರ ತಿದ್ದುಪಡಿ ಮಾಡುವ ಅಧಿನಿಯಮ 17.**- ರಾಜ್ಯದಲ್ಲಿನ ಮಾರುಕಟ್ಟೆ ಪ್ರದೇಶಗಳಲ್ಲಿ ನಿಯಂತ್ರಣಗೊಳಿಸಬೇಕಾದ ಕೃಷಿ ಉತ್ಪನ್ನಗಳನ್ನು, ಒಂದು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಬೇಕೆಂದು ಪ್ರಸ್ತಾವಿಸಲಾಗಿದೆ. ಮಾರುಕಟ್ಟೆ ಸಮಿತಿಗಳನ್ನು ಎಲ್ಲಾ ಉದ್ದೇಶಗಳಿಗಾಗಿ ಸ್ಥಳೀಯ ಪ್ರಾಧಿಕಾರಗಳೆಂದು ಪರಿಗಣಿಸಬೇಕೆಂದು ಕೂಡ ಪ್ರಸ್ತಾವಿಸಲಾಗಿದೆ. ಎಲ್ಲಾ ಮಾರುಕಟ್ಟೆ ಸಮಿತಿಗಳಲ್ಲಿ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳಿಗೆ ಕೃಷಿಕರ ಚುನಾವಣಾ ಕ್ಷೇತ್ರದಲ್ಲಿ ಒಂದು ಸ್ಥಾನವನ್ನು ಮೀಸಲಿಡಲು ಉಪಬಂಧ ಕಲ್ಪಿಸುವುದಕ್ಕೆ ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಕ್ಕೆ ಸೇರಿರತಕ್ಕ ಒಬ್ಬ ವ್ಯಕ್ತಿಯನ್ನು ಎಲ್ಲಾ ಮಾರುಕಟ್ಟೆ ಸಮಿತಿಗಳಲ್ಲಿ ನಾಮನಿರ್ದೇಶನ ಮಾಡುವುದಕ್ಕೆ ಅಧಿಕಾರವನ್ನು ಕೂಡ ಪಡೆಯಲು 10 ಮತ್ತು 11ನೇ ಪ್ರಕರಣಗಳಿಗೆ ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

ರಾಜ್ಯದ ಅಧಿಕಾರಿಗಳೆಂದು ಮತ್ತು ನೌಕರರೆಂದು ಸರ್ಕಾರವು ನಿರ್ದಿಷ್ಟಪಡಿಸಿದ ಅಧಿಕಾರಿಗಳ ಮತ್ತು ನೌಕರರ ವರ್ಗಗಳನ್ನು ಅಧಿಸೂಚಿಸುವುದಕ್ಕೆ ಮತ್ತು ಅವರಿಗೆ ಪ್ರತ್ಯೇಕ ಸೇವೆಯನ್ನು ರಚಿಸುವುದಕ್ಕೆ ಅಧಿಕಾರ ಪಡೆಯಲಾಗಿದೆ. ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಮಾರುಕಟ್ಟೆ ಸಮಿತಿಗಳು ಅಗತ್ಯವಿರುವ ಇತರ ಮಾರುಕಟ್ಟೆ ಸಮಿತಿಗಳಿಗೆ ಮತ್ತು ಕೃಷಿ ಉತ್ಪನ್ನ ಮಾರುಕಟ್ಟೆ ಮಂಡಲಿಗೆ ಸಾಲವನ್ನು ನೀಡುವುದಕ್ಕೆ ಕೂಡ ಉಪಬಂಧವನ್ನು ಕಲ್ಪಿಸಲಾಗಿದೆ. ಉಚ್ಚ ನ್ಯಾಯಾಲಯದ ಇತ್ತೀಚಿನ ತೀರ್ಪಿನ ಆಧಾರದ ಮೇಲೆ ಹಲವಾರು ಕೋಟಿ ರೂಪಾಯಿಗಳನ್ನು ಮರುಪಾವತಿ ಮಾಡಬೇಕಾಗಿರುವುದರಿಂದ, ಮಾರಾಟಗಾರರಿಂದ ಮಾರುಕಟ್ಟೆ ಫೀಜನ್ನು ವಿಧಿಸುವುದನ್ನು ಮತ್ತು ಸಂಗ್ರಹಿಸುವುದನ್ನು ಸಿಂಧುಗೊಳಿಸುವುದಕ್ಕೆ ಪ್ರಸ್ತಾವಿಸಲಾಗಿದೆ. ಈ ಮರುಪಾವತಿಯಿಂದಾಗಿ ರಾಜ್ಯದ ಹಣಕಾಸು ಪರಿಸ್ಥಿತಿಯ ಮೇಲೆ ಗಣನೀಯ ಬಾಧಕವನ್ನು ಉಂಟು ಮಾಡಬಹುದಾಗಿತ್ತು. ಮಾರುಕಟ್ಟೆಗೆ ತರಲಾದ ಕೃಷಿ ಉತ್ಪನ್ನದ ಬೆಲೆಯ ಶೇಕಡಾ ಎರಡರಷ್ಟನ್ನು ಮೀರದ ದರದಲ್ಲಿ ಮಾತ್ರ ಖರೀದಿದಾರರ ಮೇಲೆ ಮಾರುಕಟ್ಟೆ ಕಮಿಷನ್ ವಿಧಿಸಲು ಮಾರುಕಟ್ಟೆ ಸಮಿತಿಗಳಿಗೆ ಅಧಿಕಾರ ನೀಡುವುದಕ್ಕೆ ಪ್ರಸ್ತಾವಿಸಲಾಗಿದೆ. ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಕೂಡ ಮಾಡಲಾಗಿದೆ. ದಲ್ಲಾಳಿ ಶುಲ್ಕವನ್ನು ಶೇಕಡಾ ಒಂದೂವರೆಯಿಂದ ಶೇಕಡಾ 2ಕ್ಕೆ ಮತ್ತು ಹಣ್ಣು ಮತ್ತು ತರಕಾರಿಗಳ ಸಂಬಂಧದಲ್ಲಿ ಶೇಕಡಾ 4ಕ್ಕೆ ಹೆಚ್ಚಿಸಲು ಕೂಡ ಪ್ರಸ್ತಾವಿಸಲಾಗಿದೆ. ಮಾರುಕಟ್ಟೆ ಪ್ರಾಂಗಣಕ್ಕೆ ಕೃಷಿ ಉತ್ಪನ್ನಗಳ ಸಾಗಣೆಗೆ ಸೌಲಭ್ಯಗಳನ್ನು ಒದಗಿಸುವುದು ಮಾರುಕಟ್ಟೆ ಸಮಿತಿಗಳ ಒಂದು ಕಡ್ಡಾಯ ಕರ್ತವ್ಯವನ್ನಾಗಿ ಮಾಡಲಾಗಿದೆ. ಎರಡು ಅಥವಾ ಹೆಚ್ಚು ಮಾರುಕಟ್ಟೆ ಪ್ರದೇಶಗಳನ್ನು ಒಂದೇ ಮಾರುಕಟ್ಟೆ ಪ್ರದೇಶವನ್ನಾಗಿ ಒಂದುಗೂಡಿಸಲು ಉಪಬಂಧ ಕಲ್ಪಿಸಲಾಗಿದೆ. ವಿಧಾನಪರಿಷತ್ತು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ, ಒಂದು ಅಧ್ಯಾದೇಶವನ್ನು ಹೊರಡಿಸಲಾಗಿತ್ತು ಮತ್ತು ಆದುದರಿಂದ ಸದರಿ ಅಧ್ಯಾದೇಶದ ಬದಲಾಗಿ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ:24-9-1979ರ ಸಂಖ್ಯೆ:955 ಆಗಿ ಪುಟ 18ರಲ್ಲಿ ಪ್ರಕಟವಾಗಿದೆ).

**X**

**1982ರ ತಿದ್ದುಪಡಿ ಮಾಡುವ ಅಧಿನಿಯಮ 4.**- ಈ ವಿಧೇಯಕವು, ಮಾರುಕಟ್ಟೆ ಫೀಜುಗಳನ್ನು ವಿಧಿಸಿ ವಸೂಲು ಮಾಡುವ ವಿಷಯದಲ್ಲಿ, ಕೇವಲ ತಾಂತ್ರಿಕ ಮತ್ತು ಕಾರ್ಯವಿಧಾನಾತ್ಮಕ ಅನಿಯತತೆಗಳಿಂದ ನಿರರ್ಥಕಗೊಂಡ ಬೈಲಾಗಳನ್ನು ರಚಿಸುವ ವಿಷಯದಲ್ಲಿ ಮುಖ್ಯ ಮಾರುಕಟ್ಟೆ ಅಧಿಕಾರಿಯ ಮತ್ತು ಮಾರುಕಟ್ಟೆ ಸಮಿತಿಗಳ ಕೆಲವು ಕ್ರಮಗಳನ್ನು ಮಾನ್ಯೀಕರಿಸುವ ಉದ್ದೇಶ ಹೊಂದಿರುತ್ತದೆ. ವಿಧೇಯಕವು ಘಟನಾ ಪಟ್ಟಿಯನ್ನು ರದ್ದುಗೊಳಿಸುವ ಅಥವಾ ಮತದಾನವನ್ನು ಮುಂದೂಡುವ ವಿಷಯದಲ್ಲಿ ಚುನಾವಣೆಯ ಮೇಲಣ ನಿಯಂತ್ರಣವನ್ನು ಸರ್ಕಾರದಲ್ಲಿ ನಿಹಿತಗೊಳಿಸುವುದಕ್ಕೆ ಕೂಡ ಕೋರುತ್ತದೆ.

ವಿಧೇಯಕದ ಇತರ ಮುಖ್ಯ ಲಕ್ಷಣಗಳು ಈ ಮುಂದಿನಂತಿವೆ:-

(ಎ) ಯಾವುದೇ ಮಾರುಕಟ್ಟೆ ಪ್ರದೇಶ ಅಥವಾ ಅದಕ್ಕೆ ಸಂಬಂಧಪಟ್ಟ ಅಧಿಸೂಚಿತ ಕೃಷಿ ಉತ್ಪನ್ನದಲ್ಲಿ ಬದಲಾವಣೆಯಾಗಿದ್ದರೆ, ಮಾರುಕಟ್ಟೆ ಅಥವಾ ಉಪ-ಮಾರುಕಟ್ಟೆಯು ಮುಂದುವರೆದಿದ್ದರೆ, ಆ ಮಾರುಕಟ್ಟೆ ಅಥವಾ ಉಪ-ಮಾರುಕಟ್ಟೆ, ಮುಂತಾದವುಗಳನ್ನು ಮತ್ತೊಮ್ಮೆ ಅಧಿಸೂಚಿಸುವುದು ಅಗತ್ಯವಿಲ್ಲವೆಂದು ಉಪಬಂಧಿಸಲಾಗಿದೆ;

(ಬಿ) ಆ ಮಾರುಕಟ್ಟೆ ಸಮಿತಿಗಳಿಗೆ ಮಾಡಿದ ನಿವೇಶನಗಳ ಹಂಚಿಕೆಯ ಕಾರಣಗಳನ್ನು ಲಿಖಿತದಲ್ಲಿ ದಾಖಲು ಮಾಡಿ ರದ್ದುಪಡಿಸುವ ಅಧಿಕಾರವನ್ನು ಮುಖ್ಯ ಮಾರುಕಟ್ಟೆ ಅಧಿಕಾರಿಗೆ ಕೊಡಲಾಗಿದೆ;

(ಸಿ) ಮಾರುಕಟ್ಟೆ ಸಮಿತಿಗಳು, ಅನುಸೂಚಿತ ಜಾತಿ, ಅನುಸೂಚಿತ ಪಂಗಡಗಳು ಮತ್ತು ಇತರ ಹಿಂದುಳಿದ ವರ್ಗಗಳ ಸಲುವಾಗಿ ಹುದ್ದೆಗಳ ಮೀಸಲಾತಿಯನ್ನು ಮಾಡಬೇಕಾಗುತ್ತದೆ;

(ಡಿ) ಜಾನುವಾರುಗಳ ಮೇಲಿನ ಮಾರುಕಟ್ಟೆ ಫೀಜನ್ನು ಅವುಗಳ ಸಂಖ್ಯೆಯನ್ನಾಧರಿಸಿ ಮಾಡಬೇಕೇ ಹೊರತು ಅವುಗಳ ಮೌಲ್ಯದ ಆಧಾರದ ಮೇಲೆ ಅಲ್ಲ;

(ಇ) ರಾಜ್ಯ ಅಥವಾ ಕೇಂದ್ರ ಸರ್ಕಾರದಿಂದ ಮಾಡಲಾದ ಮರ ಖರೀದಿಯ ಮೇಲೆ ಮಾರುಕಟ್ಟೆ ಫೀಜನ್ನು ಸಂದಾಯವಾಗುವಂತೆ ಉಪಬಂಧ ಕಲ್ಪಿಸಲಾಗಿದೆ;

(ಎಫ್) ಸರ್ಕಾರವು ಒದಗಿಸಿದ ಸೇವೆಗಳ ಸಂಬಂಧದಲ್ಲಿ ಮಾರುಕಟ್ಟೆ ಸಮಿತಿಗಳಿಂದ ಮಾಡಬೇಕಾದ ವಂತಿಗೆಗಳನ್ನು ಪರಿಷ್ಕೃತಗೊಳಿಸಲು ಮುಖ್ಯ ಮಾರುಕಟ್ಟೆ ಅಧಿಕಾರಿಗೆ ಅಧಿಕಾರ ನೀಡಲಾಗಿದೆ;

(ಜಿ) ಕೆಲವು ಇತರ ಆನುಷಂಗಿಕ ಮತ್ತು ಸಣ್ಣಪುಟ್ಟ ವಿಷಯಗಳು.

ಈ ಸಂಬಂಧದಲ್ಲಿ ಎರಡು ಅಧ್ಯಾದೇಶಗಳನ್ನು ಹೊರಡಿಸಲಾಗಿತ್ತು. ಈ ವಿಧೇಯಕವನ್ನು ಸದರಿ ಎರಡು ಅಧ್ಯಾದೇಶಗಳನ್ನು ಬದಲಾಯಿಸುವುದಕ್ಕಾಗಿ ಮಂಡಿಸಲಾಗಿದೆ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ:6-2-1982ರ ಸಂಖ್ಯೆ:89 ಆಗಿ ಪುಟ 7ರಲ್ಲಿ ಪ್ರಕಟವಾಗಿದೆ).

## XI

**1984ರ ತಿದ್ದುಪಡಿ ಮಾಡುವ ಅಧಿನಿಯಮ 2.-** ಕರ್ನಾಟಕ ವಿವಾಹಗಳ (ನೋಂದಣಿ ಮತ್ತು ಸಂಕೀರ್ಣ ಉಪಬಂಧಗಳ) ಅಧಿನಿಯಮ, 1976 (1984ರ ಕರ್ನಾಟಕ ಅಧಿನಿಯಮ 2)ರಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27) ಇದಕ್ಕೆ ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಮಾಡಲಾಗಿತ್ತು.

## XII

**1986ರ ತಿದ್ದುಪಡಿ ಮಾಡುವ ಅಧಿನಿಯಮ 35.-** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966 ಇದನ್ನು ಜಾರಿಗೊಳಿಸುವ ಕ್ರಮದಲ್ಲಿ, ಮಾರುಕಟ್ಟೆ ಸಮಿತಿ ಮತ್ತು ಮಾರುಕಟ್ಟೆ ಇಲಾಖೆಯು, ಅಧಿನಿಯಮದ ಈಗಿರುವ ಉಪಬಂಧಗಳಿಗೆ ತಿದ್ದುಪಡಿಗಳನ್ನು ಮಾಡುವುದು ಅವಶ್ಯವೆಂದು ಅಭಿಪ್ರಾಯಪಟ್ಟಿದೆ. ಮಾರುಕಟ್ಟೆ ಶುಲ್ಕಗಳಲ್ಲಿನ ಸೋರಿಕೆಯನ್ನು ತಡೆಗಟ್ಟುವುದಕ್ಕೆ ಮತ್ತು ಅಧಿಸೂಚಿತ ವ್ಯಾಪಾರ ಸರಕುಗಳಲ್ಲಿ ವ್ಯಾಪಾರದ ಪರಿಣಾಮಕಾರಿ ನಿಯಂತ್ರಣಕ್ಕೆ ತಿದ್ದುಪಡಿಯ ಮೂಲಕ ಅಧಿನಿಯಮಕ್ಕೆ ಕೆಲವೊಂದು ಉಪಬಂಧಗಳನ್ನು ಸೇರಿಸುವುದೂ ಕೂಡ ಅಗತ್ಯವೆಂದು ಕಂಡುಬಂದಿದೆ. ಮುಖ್ಯ ತಿದ್ದುಪಡಿಗಳಲ್ಲಿ ಒಂದು ಕಮಿಷನ್ ಏಜೆಂಟರ ಮೇಲೆ ಕಮಿಷನ್ ವಿಧಿಸುವುದಕ್ಕೆ ಸಂಬಂಧಪಟ್ಟಿರುತ್ತದೆ. ಈಗ ಕಮಿಷನ್ ಏಜೆಂಟರು ಮಾರಾಟಗಾರರಿಂದ ಶೇಕಡಾ 2ರಷ್ಟು ತಮ್ಮ ಕಮಿಷನ್‌ನನ್ನು ವಸೂಲು ಮಾಡುತ್ತಿದ್ದಾರೆ. ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯ ಸದಸ್ಯರೂ ಆಗಿರುವ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಬಹುತೇಕ ಅಧ್ಯಕ್ಷರುಗಳು ಪರಿನಿಯಮವು ಕಮಿಷನ್ ಚಾರ್ಜನ್ನು ಶೇಕಡಾ 2 ರಷ್ಟಕ್ಕೆ ನಿರ್ಬಂಧಿಸಿದ್ದರೂ ಉತ್ಪಾದಕರು/ಮಾರಾಟಗಾರರು ಹೆಚ್ಚಾಗಿ ಅನಕ್ಷರಸ್ಥರಾಗಿರುವುದರಿಂದ ಕಮಿಷನ್ ಏಜೆಂಟರುಗಳು ಕೃಷಿಕರಿಂದ ಕಾರ್ಯತಃ ಹೆಚ್ಚು ವಸೂಲು ಮಾಡುತ್ತಿದ್ದಾರೆಂದು ತಿಳಿಸಿದ್ದಾರೆ. ಕಮಿಷನ್ ಮಾರಾಟಗಳನ್ನು ಪರಿಭಾಷಿಸುವುದು ಮತ್ತು ದಂಡನೆಯ ಉಪಬಂಧಗಳನ್ನು ಕಲ್ಪಿಸುವುದು ಅಗತ್ಯವೆಂದು ಸಹ ಭಾವಿಸಲಾಗಿದೆ.

2. ಈಗ ಪ್ರಸ್ತಾವಿಸಲಾದ ತಿದ್ದುಪಡಿಗಳಲ್ಲಿ, ರಾಜ್ಯದಲ್ಲಿ ಮಾರುಕಟ್ಟೆ ಸಮಿತಿಗಳು ಎದುರಿಸುತ್ತಿರುವ ಕೆಲವು ಪ್ರಾಯೋಗಿಕ ತೊಂದರೆಗಳನ್ನು ತೊಡೆದುಹಾಕಲು ಈಗ ಉದ್ದೇಶಿಸಲಾಗಿದೆ. ಮಾರುಕಟ್ಟೆ ಸಮಿತಿಯ ನೌಕರರನ್ನು ಸರ್ಕಾರಿ ಸೇವೆಯಲ್ಲಿ 1-3-1982 ರಿಂದ ಜಾರಿಗೆ ಬರುವಂತೆ ವಿಲೀನಗೊಳಿಸಿರುವುದರಿಂದ ಅಧಿನಿಯಮದ ಈಗಿನ ಉಪಬಂಧಗಳಲ್ಲಿ ಕೆಲವು ಬದಲಾವಣೆಗಳು ಅಗತ್ಯವೆನಿಸಿವೆ.

3. ಆದುದರಿಂದ ಈ ವಿಧೇಯಕ.

(ಕಡತ ಸಂಖ್ಯೆ ಲಾ 48 ಎಲ್‌ಜಿಎನ್ 86 ರಿಂದ ಪಡೆಯಲಾಗಿದೆ) (ಎಲ್‌ಎ ವಿಧೇಯಕ 1986ರ ಸಂಖ್ಯೆ 36).

## XIII

**1987ರ ತಿದ್ದುಪಡಿ ಮಾಡುವ ಅಧಿನಿಯಮ 29.-** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ:-

(i) ಕೆಲವು ಸಹಕಾರ ಸಂಘಗಳು ಮತ್ತು ಚಿಲ್ಲರೆ ವ್ಯಾಪಾರಿಯ ಮಾರಾಟದ ಪ್ರಕರಣಗಳನ್ನು ಹೊರತುಪಡಿಸಿ, ಅಧಿಸೂಚಿತ ಕೃಷಿ ಉತ್ಪನ್ನವು ಒಂದು ಮಾರುಕಟ್ಟೆ ಪ್ರಾಂಗಣಕ್ಕೆ, ಮಾರುಕಟ್ಟೆ ಉಪ ಪ್ರಾಂಗಣಕ್ಕೆ ಅಥವಾ ಉಪ ಮಾರುಕಟ್ಟೆ ಪ್ರಾಂಗಣಕ್ಕೆ ಮಾರಾಟ ಮತ್ತು ಖರೀದಿಯನ್ನು ನಿರ್ಬಂಧಿಸುವುದು;

(ii) ಒಂದು ಮಾರುಕಟ್ಟೆ ಸಮಿತಿಯ ಸದಸ್ಯತ್ವಕ್ಕೆ ಒಬ್ಬ ಕಮಿಷನ್ ಏಜಂಟನ ಅಥವಾ ಒಂದು ಮಾರುಕಟ್ಟೆ ಕಾರ್ಯ ನಿರ್ವಾಹಕನನ್ನು ಅನರ್ಹಗೊಳಿಸುವುದಕ್ಕೆ ಉಪಬಂಧ ಕಲ್ಪಿಸುವುದು;

(iii) ಈಗಾಗಲೇ ಮಂಡಿಸಲಾದ ಅಂಥದೇ ಅವಿಶ್ವಾಸ ಸೂಚನೆಯು ವಿಫಲವಾದ ತರುವಾಯ ಒಂದು ವರ್ಷದ ಒಳಗೆ ಅವಿಶ್ವಾಸ ಸೂಚನೆಯ ಮಂಡನೆಯನ್ನು ನಿಷೇಧಿಸುವುದು;

(iv) ಲೈಸೆನ್ಸುದಾರನು, ಮಾರುಕಟ್ಟೆ ಶುಲ್ಕ ಅಥವಾ ದಂಡನೆಯ ಬಾಕಿಯನ್ನು ಉಳಿಸಿಕೊಂಡಿದ್ದರೆ ಲೈಸೆನ್ಸನ್ನು ರದ್ದುಗೊಳಿಸುವುದಕ್ಕೆ ಅಥವಾ ನಿಲಂಭನೆಯಲ್ಲಿರಿಸುವುದಕ್ಕೆ ಉಪಬಂಧ ಕಲ್ಪಿಸುವುದು;

(v) ಭದ್ರತೆ ಪಡೆಯುವ ಉದ್ದೇಶಕ್ಕಾಗಿ ವ್ಯಾಪಾರಿಗಳ ಈಗಿನ ವರ್ಗೀಕರಣವನ್ನು ತೆಗೆದುಹಾಕುವುದು;

(vi) 66ನೇ ಪ್ರಕರಣದ ಉಲ್ಲಂಘನೆಗೆ ದಂಡನೆ ವಿಧಿಸುವುದಕ್ಕೆ ಉಪಬಂಧ ಕಲ್ಪಿಸುವುದು.

ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಮಾಡುವುದಕ್ಕೆ ಕೂಡ ಅವಕಾಶ ಕಲ್ಪಿಸುವುದು.

ಕರ್ನಾಟಕ ವಿಧಾನ ಪರಿಷತ್ತು ಅಧಿವೇಶನದಲ್ಲಿ ಇದ್ದಿಲ್ಲವಾದ್ದರಿಂದ ಮತ್ತು ವಿಷಯವು ತುರ್ತಿನದ್ದಾಗಿರುವುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) (ತಿದ್ದುಪಡಿ) ಅಧ್ಯಾದೇಶ, 1987 (1987ರ ಕರ್ನಾಟಕ ಅಧ್ಯಾದೇಶ 5)ನ್ನು ಹೊರಡಿಸಲಾಗಿದೆ.

ಈ ವಿಧೇಯಕವನ್ನು ಸದರಿ ಅಧ್ಯಾದೇಶಕ್ಕೆ ಬದಲಾಗಿ ಮಂಡಿಸಲಾಗಿದೆ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ:2-9-1987ರ ಸಂಖ್ಯೆ:572 ಆಗಿ ಪುಟ 6ರಲ್ಲಿ ಪ್ರಕಟವಾಗಿದೆ).

**XIV**

**1988ರ ತಿದ್ದುಪಡಿ ಮಾಡುವ ಅಧಿನಿಯಮ 6**.- ರಾಜ್ಯದಲ್ಲಿ ಕೃಷಿ ಇಂಜಿನಿಯರಿಂಗ್ ಮತ್ತು ಸಂಶೋಧನೆಯನ್ನು ಸಂವರ್ಧನೆಗೊಳಿಸಲು, ಸಹಾಯಕವಾಗುವಂತೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳನ್ನು ಶಕ್ತಗೊಳಿಸಲು, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರನ್ನು ಮತ್ತುಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿದೆ ಎಂದು ಪರಿಗಣಿಸಲಾಗಿದೆ.

ವಿಷಯವು ತುರ್ತಿನದಾಗಿದ್ದರಿಂದ ಮತ್ತು ಕರ್ನಾಟಕ ವಿಧಾನಪರಿಷತ್ತು ಅಧಿವೇಶನದಲ್ಲಿಲ್ಲವಾದ್ದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) (ಎರಡನೇ ತಿದ್ದುಪಡಿ) ಅಧ್ಯಾದೇಶ, 1987 (1987ರ ಕರ್ನಾಟಕ ಅಧ್ಯಾದೇಶ 6)ನ್ನು ಹೊರಡಿಸಲಾಗಿದೆ. ಈ ವಿಧೇಯಕವನ್ನು ಸದರಿ ಅಧ್ಯಾದೇಶಕ್ಕೆ ಬದಲಾಗಿ ಮಂಡಿಸಲಾಗಿದೆ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ:23-1-1988ರ ಸಂಖ್ಯೆ:53 ಆಗಿ ಪುಟ 4ರಲ್ಲಿ ಪ್ರಕಟವಾಗಿದೆ).

**XV**

**1990ರ ತಿದ್ದುಪಡಿ ಮಾಡುವ ಅಧಿನಿಯಮ 14**.- ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1976 (1990ರ ಕರ್ನಾಟಕ ಅಧಿನಿಯಮ 14) ಇದರಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 ಇದಕ್ಕೆ ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಮಾಡಲಾಗಿದೆ.

**XVI**

**1991ರ ತಿದ್ದುಪಡಿ ಮಾಡುವ ಅಧಿನಿಯಮ 16**.- ತಿದ್ದುಪಡಿಗಳ ಬಗ್ಗೆ, ದಿನಾಂಕ:15-10-87 ರಂದು ರಚಿತವಾದ ಸಮಿತಿಯು ನೀಡಲಾದ ಸಲಹೆಯನ್ನು ದೃಷ್ಟಿಯಲ್ಲಿರಿಸಿಕೊಂಡು, ಈ ಮುಂದಿನ ಬದಲಾವಣೆಗಳನ್ನು ಮಾಡುವುದು ಅಗತ್ಯವೆಂದು ಪರಿಗಣಿಸಲಾಯಿತು, ಎಂದರೆ:-

(1) ಮಾರುಕಟ್ಟೆ ಪ್ರದೇಶವನ್ನು ಒಂದು ತಾಲೂಕಿಗಿಂತ ಕಡಿಮೆಯಿಲ್ಲದಂತೆ ಮತ್ತು ಒಂದು ಜಿಲ್ಲೆಗಿಂತ ಹೆಚ್ಚಿಲ್ಲದಂತೆ ನಿರ್ದಿಷ್ಟಪಡಿಸುವುದು.

(2) ಕೃಷಿ ಮಾರುಕಟ್ಟೆಯ ನಿರ್ದೇಕರ ಅನುಮೋದನೆ ಪಡೆದು ಡೆಪ್ಯೂಟಿ ಕಮಿಷನರಿಂದ ಮೌಲ್ಯಮಾಪನ ಪ್ರಮಾಣ ಪತ್ರವನ್ನು ಪಡೆದ ತರುವಾಯ ಯಾವುದೇ ಭೂಮಿ ಅಥವಾ ಕಟ್ಟಡ ಮಾಲೀಕನೊಂದಿಗೆ, ಅಂಥ ಭೂಮಿ ಅಥವಾ ಕಟ್ಟಡದ ಖರೀದಿಗಾಗಿ ಮಾರುಕಟ್ಟೆ ಸಮಿತಿಯು ಒಂದು ಒಪ್ಪಂದಕ್ಕೆ ಬರುವುದನ್ನು ಸಾಧ್ಯಗೊಳಿಸುವುದು.

(3) ಮಾರುಕಟ್ಟೆ ಸಮಿತಿಯಲ್ಲಿ ರೈತ ಪ್ರತಿನಿಧಿಗಳ ಸಂಖ್ಯೆಯನ್ನು 9ರಿಂದ 11ಕ್ಕೆ ಏರಿಸುವುದು ಮತ್ತು ಒಂದು ಸ್ಥಾನವನ್ನು ಮಹಿಳೆಗೆ ಮತ್ತು ಎರಡು ಸ್ಥಾನಗಳನ್ನು ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ

ವ್ಯಕ್ತಿಗಳಿಗಾಗಿ ಮೀಸಲಿರಿಸಿ ತತ್ಪರಿಣಾಮವಾಗಿ ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ ಇಬ್ಬರು ವ್ಯಕ್ತಿಗಳ ನಾಮನಿರ್ದೇಶನಕ್ಕೆ ಸಂಬಂಧಪಟ್ಟ ಉಪಬಂಧವನ್ನು ಬಿಟ್ಟುಬಿಡುವುದು.

(4) ಮಾರುಕಟ್ಟೆ ಸಮಿತಿಯಿಂದ ಕಮಿಷನ್ ಏಜೆಂಟರನ್ನು ಹೊರಚ್ಚು ಮಾಡುವುದು.

(5) ತಾಲ್ಲೂಕು ಮಾರುಕಟ್ಟೆ ಸಂಘದ ಪ್ರತಿನಿಧಿಗಳಿಗೆ ಬದಲಾಗಿ, ಮಾರುಕಟ್ಟೆ ಪ್ರದೇಶದೊಳಗೆ ಅಧಿಸೂಚಿತ ವ್ಯವಸಾಯೋತ್ಪನ್ನದಲ್ಲಿ ವ್ಯವಹಾರ ನಡೆಸುವ ಸಹಕಾರಿ ಮಾರುಕಟ್ಟೆ ಸಂಘ ಮತ್ತು ಕೃಷಿ ಸಹಕಾರಿ ಸಂಸ್ಕರಣ ಸಂಘಗಳ ಪ್ರತಿನಿಧಿಗಳ ಪೈಕಿಯಿಂದ ಒಬ್ಬೊಬ್ಬ ಪ್ರತಿನಿಧಿಗಳನ್ನು ಹೊಂದಿರುವುದು.

(6) ರೈತ ಪ್ರತಿನಿಧಿಗಳು, ಚುನಾವಣಾ ದಿನಾಂಕಕ್ಕೆ ನಿಕಟಪೂರ್ವದ ಐದು ವರ್ಷಗಳಿಗೆ ಕಡಿಮೆಯಿಲ್ಲದಂಥ ದಿನಾಂಕದವರೆಗೆ ವ್ಯಾಪಾರಿ, ಕಮಿಷನ್ ಏಜೆಂಟ್, ದಳ್ಳಾಳಿ, ಆಮದುದಾರ, ರಫ್ತುದಾರನಂತೆ ವ್ಯವಹಾರ ನಡೆಸಿದರೆ ಅಂಥ ವ್ಯಕ್ತಿಗಳ ಸದಸ್ಯತ್ವವನ್ನು ಅನರ್ಹಗೊಳಿಸಲು ಉಪಬಂಧ ಕಲ್ಪಿಸುವುದು.

(7) ಏಳು ದಿನಗಳು ಅಥವಾ ಅದಕ್ಕೂ ಮೇಲ್ಪಟ್ಟು, ಮಾರಾಟಗಾರನಿಗೆ ಮಾರಾಟದ ಉತ್ಪತ್ತಿಯನ್ನು ಅಥವಾ ಬಾಕಿಯಿರುವ ಇತರ ಮೊಬಲಗನ್ನು ಸಂದಾಯ ಮಾಡಲು ತಪ್ಪಿದಲ್ಲಿ ಅನರ್ಹಗೊಳಿಸುವ ಬಗ್ಗೆ ಉಪಬಂಧ ಕಲ್ಪಿಸುವುದು.

(8) ಸದಸ್ಯರ ಪದಾವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಮಾರುಕಟ್ಟೆ ಸಮಿತಿಯ ಚುನಾವಣೆ ನಡೆಸುವುದನ್ನು ಕಡ್ಡಾಯಿಸುವುದು.

(9) ಈಗ ಅಧ್ಯಕ್ಷರು ನಡೆಸುತ್ತಿರುವ ಚುನಾವಣೆಯನ್ನು ಉಪಾಧ್ಯಕ್ಷರೂ ಸಹ ನಡೆಸುವಂತೆ ನಿಯಮಿಸಲಾದ ಅಧಿಕಾರಿಗೆ ಸಾಧ್ಯವಾಗುವಂತೆ ಮಾಡುವುದು.

(10) ಅಧ್ಯಕ್ಷ ಮತ್ತು ಉಪಾಧ್ಯಕ್ಷರಿಬ್ಬರ ವಿರುದ್ಧವೂ ಅವಿಶ್ವಾಸ ಸೂಚನೆಯನ್ನು ಮಂಡಿಸಿದ್ದಲ್ಲಿ ಸಭೆಯಲ್ಲಿ ಅಧ್ಯಕ್ಷತೆ ವಹಿಸಲು ಒಬ್ಬ ಅಧಿಕಾರಿಯ ನೇಮಕಾತಿಗಾಗಿ ಅವಕಾಶ ಕಲ್ಪಿಸುವುದು.

(11) ಕರ್ನಾಟಕ ರಾಜ್ಯ ಮಾರುಕಟ್ಟೆ ಸಮಿತಿ ಮತ್ತು ಕರ್ನಾಟಕ ರಾಜ್ಯ ಮಾರುಕಟ್ಟೆ ಸೇವೆಗಳನ್ನು ಸಮ್ಮಿಲನಗೊಳಿಸಿ ಏಕಸೇವೆಗೆ ಅವಕಾಶ ಕಲ್ಪಿಸುವುದು.

(12) ಮಾರುಕಟ್ಟೆ ಪ್ರದೇಶದೊಳಗೆ ಅಧಿಸೂಚಿತ ವ್ಯವಸಾಯೋತ್ಪನ್ನದ ವ್ಯವಹಾರ ನಡೆಸುವ ಸಹಕಾರಿ ಮಾರುಕಟ್ಟೆ ಸಮಿತಿಗಳು ಮತ್ತು ಕೃಷಿ ಸಹಕಾರಿ ಸಂಸ್ಕರಣ ಸಂಘಗಳು ಮತ್ತು ಇತರ ಸಹಕಾರಿ ಸಂಘಗಳಿಗೆ ಸಾಲಗಳನ್ನು ಮಂಜೂರು ಮಾಡಲು ಮತ್ತು ಮಾರುಕಟ್ಟೆ ಪ್ರದೇಶದೊಳಗಿರುವ ಮತ್ತು ಅಧಿಸೂಚಿತ ವ್ಯವಸಾಯೋತ್ಪನ್ನದಲ್ಲಿ ವ್ಯವಹಾರ ನಡೆಸುವ ಸಹಕಾರಿ ಮಾರುಕಟ್ಟೆ ಸಮಿತಿಗಳು ಮತ್ತು ಕೃಷಿ ಸಹಕಾರಿ ಸಂಸ್ಕರಣ ಸಂಘಗಳಿಗೆ ಷೇರುಗಳನ್ನು ನೀಡಲು ಮಾರುಕಟ್ಟೆ ಸಮಿತಿಗೆ ಸಾಧ್ಯವಾಗುವಂತೆ ಮಾಡುವುದು.

(13) ಮುಷ್ಕರದ ಕಾರಣದಿಂದಾಗಿ ಮಾರುಕಟ್ಟೆ ಯಾರ್ಡ್ ಅಥವಾ ಉಪ ಯಾರ್ಡ್‌ಗಳಲ್ಲಿ ಕರ್ತವ್ಯ ನಿರ್ವಹಿಸಲು ತಡೆಯುಂಟಾದ ಅವಧಿಯಲ್ಲಿ ವ್ಯವಸಾಯೋತ್ಪನ್ನಗಳ ಖರೀದಿ, ಮಾರಾಟ ಮುಂತಾದವುಗಳಿಗಾಗಿ ಕ್ರಮಕೈಗೊಳ್ಳಲು ಮಾರುಕಟ್ಟೆ ಸಮಿತಿಗೆ ಅಧಿಕಾರ ನೀಡುವುದು.

(14) ಮಾರುಕಟ್ಟೆಯ ಬಳಕೆದಾರರ ಪ್ರಯೋಜನಕ್ಕಾಗಿ, ಮಾರುಕಟ್ಟೆಯೊಳಗೆ ಯಾವುದೇ ಪರಿಕರ ಸೌಲಭ್ಯಗಳ ವ್ಯವಸ್ಥೆ ಮಾಡಲು ಮಾರುಕಟ್ಟೆ ಸಮಿತಿಗೆ ಸಾಧ್ಯವಾಗುವಂತೆ ಮಾಡುವುದು.

(15) ಕರ್ನಾಟಕ ಪೌರ ನಿಗಮ ಅಧಿನಿಯಮ, ಕರ್ನಾಟಕ ಮುನಿಸಿಪಾಲಿಟಿ ಅಧಿನಿಯಮ ಮತ್ತು ಕರ್ನಾಟಕ ಜಿಲ್ಲಾ ಪರಿಷತ್ತುಗಳು, ಮುಂತಾದವುಗಳ ಅಧಿನಿಯಮ-ಇವುಗಳ ಅಡಿಯಲ್ಲಿ ಕೆಲವು ಅಧಿಕಾರವನ್ನು ಚಲಾಯಿಸಲು ಮಾರುಕಟ್ಟೆ ಸಮಿತಿ ಹಾಗೂ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಗೆ ಅಧಿಕಾರ ನೀಡುವುದು.

(16) ಜಾನುವಾರುಗಳ ಸಂಬಂಧದಲ್ಲಿ, ಮಾರುಕಟ್ಟೆ ಶುಲ್ಕವನ್ನು, ತಲಾ ಒಂದಕ್ಕೆ ಒಂದು ರೂಪಾಯಿಯಿಂದ ಎರಡು ರೂಪಾಯಿಗಳಿಗೆ ಮತ್ತು ಕುರಿ ಅಥವಾ ಮೇಕೆಯ ಸಂದರ್ಭದಲ್ಲಿ, ತಲಾ ಒಂದಕ್ಕೆ ಇಪ್ಪತ್ತೈದು ಪೈಸೆಯಿಂದ ಒಂದು ರೂಪಾಯಿಗೆ ಏರಿಸುವುದು.

(17) ಸಹಕಾರಿ ಸಂಘಗಳ ಸಂದರ್ಭದಲ್ಲಿ, ಮಾರುಕಟ್ಟೆ ಶುಲ್ಕವನ್ನು ಶೇ. ಎಂಟರ ದರದಲ್ಲಿ ವಿಧಿಸುವುದು.

(18) ತೆಂಗಿನಕಾಯಿಗಳ ಸಂದರ್ಭದಲ್ಲಿ, ಪ್ರತಿ ಸಾವಿರಕ್ಕೆ ಹದಿನೈದು ರೂಪಾಯಿಯ ಗರಿಷ್ಠ ಕಮಿಷನ್ ಹಾಗೂ ಇತರ ಪ್ರಕರಣಗಳಲ್ಲಿ ಪ್ರತಿ ಕ್ವಿಂಟಾಲಿಗೆ ಹದಿನೈದು ರೂಪಾಯಿಯ ಗರಿಷ್ಠ ಕಮಿಷನನ್ನು ನಿರ್ದಿಷ್ಟಪಡಿಸುವುದು.

(19) ವ್ಯಾಪಾರಿಗಳು ಮತ್ತು ಕಮಿಷನ್ ಏಜೆಂಟರುಗಳಿಂದ ಸಂದೇಯವಿರುವ ಭದ್ರತಾ ಮೊಬಲಗನ್ನು 10,000-00 ರೂಪಾಯಿಗಳ ನಿರಂತರ ಬ್ಯಾಂಕ್ ಭದ್ರತೆಯ ಜೊತೆಗೆ 1,000 ರೂಪಾಯಿಗಳಿಂದ 5,000 ರೂಪಾಯಿಗೆ ಅಥವಾ ವಾರ್ಷಿಕ ವ್ಯಾಪಾರ ಧನದ ಶೇ. ಎರಡಕ್ಕೆ ಸಮನಾದ ಒಂದು ಮೊಬಲಗಿಗೆ ಏರಿಸುವುದು.

(20) ಸರ್ಕಾರದ ಕಾರ್ಯದರ್ಶಿ, ಸಹಕಾರಿ ಇಲಾಖೆ ಅಥವಾ ಅವನಿಂದ ನಾಮನಿರ್ದೇಶನಗೊಂಡವನು, ಸರ್ಕಾರದ ಕಾರ್ಯದರ್ಶಿ, ಕೃಷಿ ಇಲಾಖೆ ಅಥವಾ ಅವನಿಂದ ನಾಮನಿರ್ದೇಶಿತಗೊಂಡವನು ಮತ್ತು ಕೃಷಿ ಮಾರುಕಟ್ಟೆಯ ನಿರ್ದೇಶಕರನ್ನು ರಾಜ್ಯ ಮಾರುಕಟ್ಟೆ ಮಂಡಲಿಯ ಸದಸ್ಯರನ್ನಾಗಿ ಸೇರಿಸುವುದು.

(21) ಮಂಡಲಿಯ ಮತ್ತು ಮಂಡಲಿಯ ವ್ಯವಸ್ಥಾಪಕ ನಿರ್ದೇಶಕರ ಪ್ರಕಾರ್ಯಗಳನ್ನು ನಿರ್ದಿಷ್ಟಪಡಿಸುವುದು.

(22) ಮಾರುಕಟ್ಟೆ ಸಮಿತಿಯನ್ನು ರದ್ದುಪಡಿಸುವ ನಿರ್ದೇಶಕರಿಗಿರುವ ಅಧಿಕಾರಗಳನ್ನು ರಾಜ್ಯ ಸರ್ಕಾರಕ್ಕೆ ಪುನಃ ನೀಡುವುದು.

(23) ಮಾರುಕಟ್ಟೆಯ ಅಧ್ಯಕ್ಷರು ಮತ್ತು ಉಪಾಧ್ಯಕ್ಷರನ್ನು ತೆಗೆದುಹಾಕುವ ನಿರ್ದೇಶಕರ ಅಧಿಕಾರಗಳನ್ನು ರಾಜ್ಯ ಸರ್ಕಾರಕ್ಕೆ ಪುನಃ ನೀಡುವುದು.

(24) ಈ ಅಧಿನಿಯಮದ ಪರಿಧಿಯಿಂದ ಮಾರುಕಟ್ಟೆ ಸಮಿತಿಯ ಆವರಣಗಳನ್ನು ಹೊರತುಪಡಿಸಲು ಕರ್ನಾಟಕ ಬಾಡಿಗೆ ನಿಯಂತ್ರಣ ಅಧಿನಿಯಮ, 1961ನ್ನು ತಿದ್ದುಪಡಿ ಮಾಡುವುದು.

(25) ಅಧಿನಿಯಮದ ಉಪಬಂಧಗಳನ್ನು ಮಾರುಕಟ್ಟೆ ಸಮಿತಿಯ ಆವರಣಗಳಿಗೆ ವಿಸ್ತರಿಸಲು ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಹೊರಹಾಕುವ) ಅಧಿನಿಯಮ, 1974ನ್ನು ತಿದ್ದುಪಡಿ ಮಾಡುವುದು.

(26) ಕೆಲವು ಪ್ರಾಸಂಗಿಕ ಹಾಗೂ ಆನುಷಂಗಿಕ ಬದಲಾವಣೆಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ:26-3-1991ರ ಸಂಖ್ಯೆ:137 ಆಗಿ ಪುಟ 499-501ರಲ್ಲಿ ಪ್ರಕಟವಾಗಿದೆ).

## XVII

**1998ರ ತಿದ್ದುಪಡಿ ಮಾಡುವ ಅಧಿನಿಯಮ 16.-** ಕೃಷಿ ಉತ್ಪನ್ನವನ್ನು ಮಾರಾಟ ಮಾಡುವ ರೈತರಿಗೆ ಅವರು ತಮ್ಮ ಉತ್ಪನ್ನವನ್ನು ಮಾರಾಟ ಮಾಡಿದ ದಿನದಂದೇ ಹಣ ಸಂದಾಯ ಮಾಡಬೇಕೆಂಬುದಾಗಿ 1959ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮವು ಗೊತ್ತುಪಡಿಸುತ್ತದೆ. ಆದರೂ ಮಾರುಕಟ್ಟೆ ಪ್ರವರ್ತಕರು ಮಾರಾಟಗಾರರಿಗೆ ಹಣ ಸಂದಾಯ ಮಾಡುವುದರಲ್ಲಿ ವಿಳಂಬವುಂಟು ಮಾಡುತ್ತಿರುವುದು ಹಾಗೂ ಮಾರಾಟ ಬೆಲೆಯಲ್ಲಿ ಕಮಿಷನ್ ಹಣವೆಂಬುದಾಗಿ ಅನಧಿಕೃತ ಕಳೆತಗಳನ್ನು ಮಾಡುತ್ತಿರುವುದು ಕಂಡುಬಂದಿದೆ.

ಕಮಿಷನ್ ಏಜೆಂಟರು ಹಾಗೂ ಖರೀದಿದಾರರು ಮಾರುಕಟ್ಟೆ ಸಮಿತಿಯ ಮೂಲಕವಲ್ಲದೆ ಇತರ ರೀತಿಯಲ್ಲಿ ಹಣ ಸಂದಾಯ ಮಾಡುವ ಬದಲು ಮಾರುಕಟ್ಟೆ ಸಮಿತಿಗೆ ನೇರವಾಗಿ ಹಣ ಸಂದಾಯ ಮಾಡುವ ಅಗತ್ಯವಿದೆಯೆಂಬುದಾಗಿ ವಿಷಯ ಸಮಿತಿಯು ಸಲಹೆ ನೀಡಿದೆ.

ಇದರಿಂದಾಗಿ ಮಾರುಕಟ್ಟೆ ಸಮಿತಿಯು ರೈತರಿಗೆ ಆ ಕೂಡಲೇ ಮತ್ತು ಕಳೆತಗಳಿಲ್ಲದೆ ಹಣ ಸಂದಾಯ ಮಾಡಬಹುದು. ಆದ್ದರಿಂದ ಮತ್ತು ಇತರ ಕೆಲವು ಉದ್ದೇಶಗಳಿಗಾಗಿ ಅಧಿನಿಯಮವನ್ನು ಸೂಕ್ತವಾಗಿ ತಿದ್ದುಪಡಿ ಮಾಡುವುದು ಅಗತ್ಯವೆಂದು ಭಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1997ರ ಎಲ್‌ಎ ವಿಧೇಯಕ ಸಂಖ್ಯೆ 19 ರಿಂದ ಪಡೆಯಲಾಗಿದೆ)

## XVIII

**1998ರ ತಿದ್ದುಪಡಿ ಮಾಡುವ ಅಧಿನಿಯಮ 17.-** 1966ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮದ 11ನೇ ಪ್ರಕರಣವು ಎರಡನೇ ಮತ್ತು ತರುವಾಯದ ಮಾರುಕಟ್ಟೆ ಸಮಿತಿಗಳ ರಚನೆಗೆ ಅವಕಾಶ ಕಲ್ಪಿಸುತ್ತದೆ. ಮಾರುಕಟ್ಟೆ ಸಮಿತಿಗೆ, ಕೃಷಿ ಮಾರುಕಟ್ಟೆ ನಿರ್ದೇಶಕರು ನಾಮನಿರ್ದೇಶನ ಮಾಡತಕ್ಕ ಒಬ್ಬ ಅಧಿಕಾರಿಯನ್ನು ಹೊರತುಪಡಿಸಿ, ಸದಸ್ಯರನ್ನು ನಾಮನಿರ್ದೇಶನ ಮಾಡುವುದಕ್ಕೆ ಯಾವುದೇ ಅವಕಾಶ ಇರಲಿಲ್ಲ, ಮಾರುಕಟ್ಟೆ ಶುಲ್ಕಗಳ ರೂಪದಲ್ಲಿ ವಸೂಲಾದ ಭಾರಿ ಮೊತ್ತದ ಸಾರ್ವಜನಿಕ ನಿಧಿಗಳನ್ನು ಮಾರುಕಟ್ಟೆ ಸಮಿತಿಗಳು ನಿರ್ವಹಿಸುವುದರಿಂದ, ವಿವಿಧ ಅಭಿವೃದ್ಧಿಪರ ಕಾರ್ಯಚಟುವಟಿಕೆಗಳಿಗೆ ನಿಧಿಗಳನ್ನು ಸೂಕ್ತ ರೀತಿಯಲ್ಲಿ ಬಳಸುವುದಕ್ಕೆ ರಚನಾತ್ಮಕವಾದ ಮಾರ್ಗದರ್ಶನ ಮತ್ತು ಜಾಗರೂಕತೆಯ ಅಗತ್ಯವಿದೆ. ಇದನ್ನು ನಿಶ್ಚಯಪಡಿಸಿಕೊಳ್ಳಲು 11ನೇ ಪ್ರಕರಣಕ್ಕೆ ತಿದ್ದುಪಡಿ ಮಾಡಿ ಮೂವರು ಸದಸ್ಯರನ್ನು ನಾಮನಿರ್ದೇಶನ ಮಾಡುವುದು ಅವಶ್ಯಕವೆಂದು ಭಾವಿಸಲಾಯಿತು. ಅದಕ್ಕನುಸಾರವಾಗಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತಿದ್ದುಪಡಿ) ಅಧ್ಯಾದೇಶ, 1997ನ್ನು 1997ರ ಮೇ 22 ರಂದು ಪ್ರಖ್ಯಾಪಿಸಲಾಯಿತು. ಅದರ ಅವಧಿ ಈಗ ಮುಗಿದಿದೆ.

1997ರ ಅವಧಿಯಲ್ಲಿ ನಡೆದ ಕೊನೆಯ ಅಧಿವೇಶನದಲ್ಲಿ ಸದರಿ ಅಧ್ಯಾದೇಶದ ಬದಲಾಗಿ ವಿಧೇಯಕವನ್ನು ಮಂಡಿಸಲಾಯಿತು. ಆದರೆ ಇದನ್ನು ಪರಿಶೀಲನಗೆ ತೆಗೆದುಕೊಳ್ಳಲಿಲ್ಲ. ಸದರಿ ಅಧ್ಯಾದೇಶವನ್ನು ಪ್ರಖ್ಯಾಪಿಸಿದ ತರುವಾಯ ಸರ್ಕಾರವು ಕೆಲವು ಮಾರುಕಟ್ಟೆ ಸಮಿತಿಗಳಿಗೆ ಸದಸ್ಯರನ್ನು ನಾಮನಿರ್ದೇಶನ ಮಾಡಿತು. ಈ ಮಧ್ಯೆ ಉಚ್ಚ ನ್ಯಾಯಾಲಯದಲ್ಲಿ ಈ ಅಧ್ಯಾದೇಶವನ್ನು ಪ್ರಶ್ನಿಸಲಾಯಿತು ಹಾಗೂ ಉಚ್ಚ ನ್ಯಾಯಾಲಯವು ಈ ಅಧ್ಯಾದೇಶವನ್ನು ರದ್ದುಗೊಳಿಸಿತು. ಈ ತೀರ್ಪಿನ

ವಿರುದ್ಧವಾಗಿ, ಸರ್ಕಾರವು, ರಿಟ್ ಅಪೀಲು ಸಂಖ್ಯೆ:5052–5053:1997ನ್ನು ಸಲ್ಲಿಸಿತು ಮತ್ತು ಸದರಿ ಅಪೀಲುಗಳಲ್ಲಿ ಅಧ್ಯಾದೇಶವನ್ನು ರದ್ದುಗೊಳಿಸುವ ಏಕನ್ಯಾಯಾಧೀಶರ ಆಜ್ಞೆಯನ್ನು ತಳ್ಳಿಹಾಕಲಾಯಿತು.

ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂ: 18486:1997ರಲ್ಲಿ, 1998ರ ಏಪ್ರಿಲ್ 30ಕ್ಕೆ ಮೊದಲು ಮಾರುಕಟ್ಟೆ ಸಮಿತಿಗಳ ಅಧ್ಯಕ್ಷ ಹಾಗೂ ಉಪಾಧ್ಯಕ್ಷ ಹುದ್ದೆಗಳಿಗೆ ಚುನಾವಣೆಯನ್ನು ನಡೆಸುವಂತೆ ರಾಜ್ಯ ಸರ್ಕಾರಕ್ಕೆ ನಿರ್ದೇಶನ ನೀಡಿದೆ. ವಿಧಾನ ಸಭೆಯಲ್ಲಿ ಪರಿಶೀಲನೆಗೆ ತೆಗೆದುಕೊಳ್ಳದೆ ಉಳಿದಿದ್ದ ವಿಧೇಯಕವನ್ನು ಕಳೆದ ಅಧಿವೇಶನದ ಅವಧಿಯಲ್ಲಿಯೂ ಸಹ ಪರಿಶೀಲನೆಗೆ ತೆಗೆದುಕೊಳ್ಳಲಿಲ್ಲ.

ಅಧ್ಯಕ್ಷ ಹಾಗೂ ಉಪಾಧ್ಯಕ್ಷ ಹುದ್ದೆಗಳಿಗೆ ಚುನಾವಣೆಯನ್ನು ನಡೆಸುವುದಕ್ಕೆ ಮೊದಲು ರಾಜ್ಯದಲ್ಲಿರುವ ಎಲ್ಲ ಮಾರುಕಟ್ಟೆ ಸಮಿತಿಗಳಿಗೆ ನಾಮನಿರ್ದೇಶನ ಮಾಡುವುದು ಅವಶ್ಯಕವಾಗಿದೆ.

ವಿಷಯವು ತುರ್ತುಸ್ವರೂಪದ್ದಾಗಿದ್ದುದರಿಂದ ಮತ್ತು ಕರ್ನಾಟಕ ವಿಧಾನ ಪರಿಷತ್ತು ಅಧಿವೇಶದಲ್ಲಿಲ್ಲದಿದ್ದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತಿದ್ದುಪಡಿ) ಅಧ್ಯಾದೇಶ, 1998ನ್ನು ಪ್ರಖ್ಯಾಪಿಸಲಾಯಿತು.

ಆದುದರಿಂದ ಈ ವಿಧೇಯಕ.

(1998ರ ಎಲ್.ಎ. ವಿಧೇಯಕ ಸಂಖ್ಯೆ 12ರ ಮೂಲಕ ಪಡೆಯಲಾಗಿದೆ).

**XIX**

2000ರ ತಿದ್ದುಪಡಿ ಮಾಡುವ ಅಧಿನಿಯಮ 22.– ಈ ಅಧಿನಿಯಮದ ಮೂಲಕ ಕೇಂದ್ರ ಅಪ್ರಸ್ತುತ ಕಾನೂನುಗಳನ್ನು ನಿರಸನಗೊಳಿಸಲಾಗಿದೆ ಮತ್ತು 1996ರ ಅಧಿನಿಯಮ 27 ಸೇರಿದಂತೆ ಕೆಲವು ಕಾನೂನುಗಳಿಗೆ ಕೆಲವು ಸಣ್ಣಪುಟ್ಟ ಮತ್ತು ಆನುಷಂಗಿಕ ತಿದ್ದುಪಡಿಗಳನ್ನು ಮಾಡಲಾಗಿದೆ.

(ಎಲ್.ಎ. ವಿಧೇಯಕ 2000ದ 17 ರಿಂದ ಪಡೆಯಲಾಗಿದೆ).

**XX**

**2000ರ ತಿದ್ದುಪಡಿ ಮಾಡುವ ಅಧಿನಿಯಮ 31**.– ಆರ್ಥಿಕ ಉದಾರೀಕರಣ ವ್ಯವಸ್ಥೆಯನ್ನು ಮತ್ತು ರಾಜ್ಯದ ಬಳಕೆದಾರರ ಬೇಡಿಕೆಗಳನ್ನು ಪೂರೈಸುವಲ್ಲಿ ತೋಟಗಾರಿಕೆಯ ಕ್ಷೇತ್ರದ ಮುಂದಿರುವ ಅವಕಾಶಗಳು ಮತ್ತು ಸವಾಲುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, ಆಧುನಿಕ, ಆರೋಗ್ಯಕರ, ಪಾರದರ್ಶಕ ಹಾಗೂ ಆ ಕ್ಷೇತ್ರದಲ್ಲಿ ಅನುಭವವುಳ್ಳವರು ನಿರ್ವಹಿಸುವಂಥ ಮಾರುಕಟ್ಟೆಗಳನ್ನು ಹೊಂದಿರಬೇಕಾದ ಅಗತ್ಯವಿದೆ, ಜೊತೆಗೆ ಈ ಮಾರುಕಟ್ಟೆಗಳು ಕರ್ನಾಟಕದಲ್ಲಿ ಚಿಲ್ಲರೆ ವ್ಯಾಪಾರಿಗಳ ಮತ್ತು ಬಳಕೆದಾರರ ನಡುವೆ ಹಾಗೂ ಉತ್ಪಾದಕರೊಂದಿಗೆ ಉತ್ತಮ ಸಂಬಂಧವಿರಿಸಿಕೊಳ್ಳಬೇಕಾಗಿದೆ. ಆದ್ದರಿಂದ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ಕ್ಕೆ ತಿದ್ದುಪಡಿ ಮಾಡಿ ಈ ಮುಂದಿನವುಗಳ ಬಗ್ಗೆ ಉಪಬಂಧ ಕಲ್ಪಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ,–

(i) ರಾಷ್ಟ್ರೀಯ ಡೈರಿ ಅಭಿವೃದ್ಧಿ ಮಂಡಲಿ ಅಧಿನಿಯಮ, 1987 (1987ರ ಕೇಂದ್ರ ಅಧಿನಿಯಮ 37) ಅಡಿಯಲ್ಲಿ ನಿಗಮಿತವಾದ ರಾಷ್ಟ್ರೀಯ ಡೈರಿ ಅಭಿವೃದ್ಧಿ ಮಂಡಲಿಯ ಸ್ವಾಮ್ಯದಲ್ಲಿ ಮತ್ತು ವ್ಯವಸ್ಥಾಪನೆಯಲ್ಲಿರುವ ಒಂದು ಸ್ವಾಯತ್ತ ಸಂಸ್ಥೆಯಾಗಿ ಸಮಗ್ರ ರಾಷ್ಟ್ರೀಯ ಉತ್ಪನ್ನ ಮಾರುಕಟ್ಟೆಯನ್ನು ಸ್ಥಾಪನೆ ಮಾಡುವುದು;

(ii) ರಾಜ್ಯದಲ್ಲಿ ಎನ್‌ಡಿಡಿಬಿಯ ಮೂಲಕ ಸಂಗ್ರಹಣಾ ಕೇಂದ್ರಗಳನ್ನು ಸ್ಥಾಪಿಸುವುದು ಅಥವಾ ಸಂಗ್ರಹಣಾ ಕೇಂದ್ರಗಳನ್ನು ಸ್ಥಾಪಿಸುವಲ್ಲಿ ಕೃಷಿಕರಿಗೆ ಅಥವಾ ಕೃಷಿಕರ ಸಂಘಗಳಿಗೆ ಹಣಕಾಸು ನೆರವು ನೀಡುವುದು ಅಥವಾ ಬೆಂಬಲ ನೀಡುವುದು;

(iii) ರಾಜ್ಯದ ವಿವಿಧ ಸ್ಥಳಗಳಲ್ಲಿ ವಿತರಣಾ ಚಾನಲ್‌ಗಳನ್ನು ಮತ್ತು ಸಂಸ್ಥೆಗಳನ್ನು ಸ್ಥಾಪಿಸುವುದು, ಬೆಂಬಲ ನೀಡುವುದು ಅಥವಾ ಇತರ ರೀತಿ ನೆರವು ನೀಡುವುದು;

(iv) ಸಮಗ್ರ ರಾಷ್ಟ್ರೀಯ ಉತ್ಪನ್ನ ಮಾರುಕಟ್ಟೆಯಲ್ಲಿ ಸಲ್ಲಿಸಿದ ಸೇವೆಗಳಿಗಾಗಿ, ಫೀಜುಗಳನ್ನು, ಭದ್ರತಾ ಠೇವಣಿಗಳನ್ನು, ಮುಂಗಡಗಳನ್ನು ಮತ್ತು ಇತರ ಶುಲ್ಕಗಳನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು;

(v) ಸಮಗ್ರ ರಾಷ್ಟ್ರೀಯ ಉತ್ಪನ್ನ ಮಾರುಕಟ್ಟೆಗೆ ಸಂಬಂಧಿಸಿದಂತೆ ಮಾಲೀಕತ್ವ, ವ್ಯವಸ್ಥಾಪನೆ ಮುಂತಾದವುಗಳ ಬಗ್ಗೆ ಎನ್‌ಡಿಡಿಬಿಯು ವಿನಿಯಮಗಳನ್ನು ರಚಿಸುವುದು;

(vi) ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳು, ಉಪಬಂಧಗಳು, ಸಮಗ್ರ ರಾಷ್ಟ್ರೀಯ ಮಾರುಕಟ್ಟೆಗೆ ಅನ್ವಯವಾಗದಿರುವುದು.

ಇದರಲ್ಲಿ ಇತರ ಆನುಷಂಗಿಕ ಉಪಬಂಧಗಳನ್ನು ಸಹ ಮಾಡಲಾಗಿದೆ.

ವಿಷಯವು ತುರ್ತುಸ್ವರೂಪದ್ದಾದ್ದರಿಂದ ಮತ್ತು ಕರ್ನಾಟಕ ವಿಧಾನ ಪರಿಷತ್ತು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತಿದ್ದುಪಡಿ) ಅಧ್ಯಾದೇಶ, 2000ವನ್ನು ಪ್ರಖ್ಯಾಪಿಸಲಾಯಿತು.

ಸದರಿ ಅಧ್ಯಾದೇಶದ ಬದಲು ಈ ವಿಧೇಯಕವನ್ನು ಮಂಡಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2000ದ ಎಲ್.ಎ. ವಿಧೇಯಕ ಸಂಖ್ಯೆ 26ರಿಂದ ಪಡೆಯಲಾಗಿದೆ).

**XXI**

**2001ರ ತಿದ್ದುಪಡಿ ಮಾಡುವ ಅಧಿನಿಯಮ 8.–** ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸಲು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ಕ್ಕೆ ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

(i) 10ನೇ ಪ್ರಕರಣವು, ಎರಡು ವರ್ಷಗಳ ಅವಧಿಗಾಗಿ ಪ್ರಥಮ ಮಾರುಕಟ್ಟೆ ಸಮಿತಿಯ ರಚನೆಗೆ ಉಪಬಂಧ ಕಲ್ಪಿಸುತ್ತಿದ್ದು, ಈ ಅವಧಿಯನ್ನು ರಾಜ್ಯ ಸರ್ಕಾರವು ಇನ್ನೂ ಒಂದು ವರ್ಷದ ಅವಧಿಗಾಗಿ ವಿಸ್ತರಿಸಬಹುದಾಗಿದೆ. ಹಾಗೆ ವಿಸ್ತರಿಸಲಾದ ಒಂದು ವರ್ಷದ ಅವಧಿಯ ಒಳಗೆ ಸಕಾಲದಲ್ಲಿ ಚುನಾವಣೆಯನ್ನು ನಡೆಸಿರದಿದ್ದಲ್ಲಿ ಮಾರುಕಟ್ಟೆ ಸಮಿತಿಗೆ ಹಾಗೆ ಕಾರ್ಯ ನಿರ್ವಹಿಸಲು ಸಾಧ್ಯವಾಗುವಂತೆ ಈಗ ಇರುವ ಒಂದು ವರ್ಷದ ವಿಸ್ತರಣಾ ಅವಧಿಯನ್ನು, ಎರಡು ವರ್ಷಗಳಿಗೆ ಹೆಚ್ಚಿಸುವುದು ಅವಶ್ಯಕವೆಂದು ಭಾವಿಸಲಾಗಿದೆ.

(ii) 44ನೇ ಪ್ರಕರಣವು, ಮಾರುಕಟ್ಟೆ ಸಮಿತಿಯ ಅಧ್ಯಕ್ಷ ಅಥವಾ ಉಪಾಧ್ಯಕ್ಷನ ವಿರುದ್ಧ ಅವಿಶ್ವಾಸ ಸೂಚನೆಯನ್ನು ಮಂಡಿಸುವುದಕ್ಕೆ ಅವಕಾಶ ಕಲ್ಪಿಸುತ್ತಿದ್ದು, ಮಾರುಕಟ್ಟೆ ಸಮಿತಿಯ ಸದಸ್ಯರ ಮೂರನೇ ಎರಡರಷ್ಟಕ್ಕೆ ಕಡಿಮೆಯಿಲ್ಲದಷ್ಟು ಸದಸ್ಯರ ಬಹುಮತದಿಂದ ಮಾತ್ರವೇ ಇದನ್ನು ಅಂಗೀಕರಿಸ ಬಹುದಾಗಿದೆ. ತಾಲ್ಲೂಕು ಪಂಚಾಯಿತಿಗಳ ಮತ್ತು ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನು ಸಾಮಾನ್ಯಬಹುಮತದಿಂದ ಅಂಗೀಕರಿಸಲಾದ ಅವಿಶ್ವಾಸ ಸೂಚನೆಯ ಮೂಲಕ ತೆಗೆದುಹಾಕಬಹುದಾಗಿದೆ. ಮಾರುಕಟ್ಟೆ ಸಮಿತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸಂಬಂಧದಲ್ಲಿ ಕೂಡ ಇದೇ ರೀತಿಯ ಉಪಬಂಧಗಳನ್ನು ತರುವುದು ಸೂಕ್ತವಾಗಿದೆ.

(iii) ಕೃಷಿಕರಿಗೆ ಪ್ರಯೋಜನಕಾರಿಯಾದ ಫ್ಲೋರ್ ಪ್ರೈಸ್ ಸ್ಕೀಮಿಗೆ ಮತ್ತು ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಗೆ ವಂತಿಗೆ ನೀಡಲು ಮಾರುಕಟ್ಟೆಯ ಸಮಿತಿಗಳಿಗೆ ಸಾಧ್ಯವಾಗುವಂತೆ ಉಪಬಂಧ ಕಲ್ಪಿಸುವುದು ಅವಶ್ಯಕವೆಂದು ಕಂಡುಬಂದಿದೆ.

ರಾಜ್ಯಾದ್ಯಂತ ವಿವಿಧ ಕೃಷಿ ಉತ್ಪನ್ನಗಳ ಬೆಲೆಯು ನಿರಂತರವಾಗಿ ಕುಸಿಯುತ್ತಿದೆ. ಇದರಿಂದಾಗಿ ಕೃಷಿಕರಿಗೆ ಹೆಚ್ಚಿನ ತೊಂದರೆಯುಂಟಾಗುತ್ತಿದ್ದು ವ್ಯಾಪಕವಾಗಿ ಪ್ರತಿಭಟನೆಗೆ ಅವಕಾಶವಾಗಿದೆ. ಅನೇಕ ಸ್ಥಳಗಳಲ್ಲಿ ಪ್ರತಿಭಟನೆಯಿಂದಾಗಿ ಕಾನೂನು ಮತ್ತು ಸುವ್ಯವಸ್ಥೆಯ ಸಮಸ್ಯೆಯುಂಟಾಗಿದೆ. ಫ್ಲೋರ್ ಪ್ರೈಸ್ ಸ್ಕೀಮನ್ನು, ಕೃಷಿ ಸರಕುಗಳ ಕುಸಿಯುತ್ತಿರುವ ಬೆಲೆಯನ್ನು ನಿಯಂತ್ರಿಸುವುದಕ್ಕಾಗಿ ರೂಪಿಸಲಾಗಿದೆ. ಇದು ಕೃಷಿಕರಿಗೆ ಸ್ವಲ್ಪಮಟ್ಟಿನ ಪರಿಹಾರವನ್ನು ಒದಗಿಸುವಲ್ಲಿ ಹೆಚ್ಚಿನ ಪರಿಣಾಮವನ್ನು ಬೀರುತ್ತದೆ. ಆದ್ದರಿಂದ ಫ್ಲೋರ್ ಪ್ರೈಸ್ ಸ್ಕೀಮಿಗೆ ಸಾಧ್ಯವಾದಷ್ಟು ಬೇಗನೆ ವಂತಿಗೆಗಳನ್ನು ನೀಡಲು ಮಾರುಕಟ್ಟೆ ಸಮಿತಿಗಳಿಗೆ ಅಧಿಕಾರ ನೀಡಬೇಕಾಗಿದೆ.

ವಿಷಯವು ತುರ್ತು ಸ್ವರೂಪದ್ದಾದ್ದರಿಂದ ಮತ್ತು ಕರ್ನಾಟಕ ವಿಧಾನ ಪರಿಷತ್ತು ಅಧಿವೇಶನದಲ್ಲಿಲ್ಲದಿದ್ದುರಿಂದ, ಮೇಲ್ಕಂಡ ಉದ್ದೇಶವನ್ನು ಈಡೇರಿಸುವುದಕ್ಕಾಗಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತಿದ್ದುಪಡಿ) ಅಧ್ಯಾದೇಶ, 2001ನ್ನು (2001ರ ಕರ್ನಾಟಕ ಅಧ್ಯಾದೇಶ 1) ಪ್ರಖ್ಯಾಪಿಸಲಾಯಿತು.

ಆದ್ದರಿಂದ ಈ ವಿಧೇಯಕ.

(2001ರ ವಿಧಾನಸಭೆಯ ವಿಧೇಯಕ ಸಂಖ್ಯೆ 4 ರಿಂದ ಪಡೆಯಲಾಗಿದೆ)

**XXII**

**2001ರ ತಿದ್ದುಪಡಿ ಮಾಡುವ ಅಧಿನಿಯಮ 10.–** 2001–2002ನೇ ವರ್ಷದ ಬಜೆಟ್ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಜಾರಿಗೊಳಿಸುವುದಕ್ಕಾಗಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2001ರ ವಿಧಾನಸಭೆಯ ವಿಧೇಯಕ ಸಂಖ್ಯೆ 10 ರಿಂದ ಪಡೆಯಲಾಗಿದೆ.)

**XXIII**

**2002ರ ತಿದ್ದುಪಡಿ ಮಾಡುವ ಅಧಿನಿಯಮ 13.–** ಮಾರುಕಟ್ಟೆ ಸಮಿತಿಗಳಲ್ಲಿ, ಹಿಂದುಳಿದ ವರ್ಗಗಳಿಗೆ ಸೇರಿದ ಕೃಷಿಕರಿಗೆ ಪ್ರಾತಿನಿಧ್ಯ ಒದಗಿಸುವ ಮತ್ತು ಅವರಿಗೆ ಸಾಮಾಜಿಕ ನ್ಯಾಯ ದೊರೆಯುವುದನ್ನು ಖಚಿತಪಡಿಸಿಕೊಳ್ಳುವ ಸಲುವಾಗಿ

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ಕ್ಕೆ ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

ಚುನಾವಣೆ ಮಾರುಕಟ್ಟೆ ಸಮಿತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಪದಗಳಿಗಾಗಿ 1997ರಲ್ಲಿ ಚುನಾವಣೆ ನಡೆದಿದ್ದು, ಅದಕ್ಕಾಗಿ ನಡೆಸಲಾದ ಪ್ರಥಮ ಸಭೆಯ ದಿನಾಂಕದಿಂದ ಆ ಪದಾವಧಿಯ ಪ್ರಾರಂಭದ ಬಗ್ಗೆ ಉಪಬಂಧ ಕಲ್ಪಿಸಲು, ಕೆಲವು ತೊಂದರೆಗಳನ್ನು ನಿವಾರಿಸುವ ಸಲುವಾಗಿ, ಸದರಿ ಅಧಿನಿಯಮಕ್ಕೆ ತಿದ್ದುಪಡಿ ಮಾಡುವುದು ಅವಶ್ಯಕವೆಂದು ಸಹ ಪರಿಗಣಿಸಲಾಗಿದೆ.

ಬೆಳೆ ಋತುಮಾನ ಯಾವುದೇ ಇದ್ದರೂ, ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ವರ್ಷವಿಡೀ ನಡೆಸಲಾಗುವುದರಿಂದ, "ಬೆಳೆಯ ಋತುಮಾನದ" ಎಂಬ ಪದಗಳಿಗೆ "ಅವಧಿಯ" ಎಂಬ ಪದವನ್ನು ಪ್ರತಿಯೋಜಿಸುವುದಕ್ಕಾಗಿ ಸದರಿ ಅಧಿನಿಯಮದ 65ನೇ ಪ್ರಕರಣದ (3)ನೇ ಉಪಪ್ರಕರಣವನ್ನು ಮತ್ತೆ ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ. ಬೆಳೆ ಋತುಮಾನ ಏನೇ ಇದ್ದರೂ, ಕೃಷಿ ಉತ್ಪನ್ನಗಳನ್ನು ಪ್ರಸಕ್ತ ಇರುವ ಮಾರುಕಟ್ಟೆ ದರಗಳ ಆಧಾರದ ಮೇಲೆ ರೈತರು ಮಾರಾಟ ಮಾಡುವರು.

ವಿಷಯವು ತುರ್ತು ಸ್ವರೂಪದ್ದಾದ್ದರಿಂದ ಮತ್ತು ಕರ್ನಾಟಕ ವಿಧಾನಸಭೆಯು ಅಧಿವೇಶನದಲ್ಲಿಲ್ಲದಿದ್ದುದರಿಂದ ಮೇಲಿನ ಉದ್ದೇಶಗಳನ್ನು ಸಾಧಿಸುವುದಕ್ಕಾಗಿ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತಿದ್ದುಪಡಿ) ಅಧ್ಯಾದೇಶ 2002ನ್ನು (2002ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 4) ಪ್ರಖ್ಯಾಪಿಸಲಾಯಿತು.

ಈ ಅಧ್ಯಾದೇಶಕ್ಕೆ ಬದಲಾಗಿ ವಿಧಾನ ಮಂಡಲದ ಒಂದು ಅಧಿನಿಯಮವನ್ನು ಮಂಡಿಸಬೇಕಾಗಿದೆ.

ಆದ್ದರಿಂದ ಈ ವಿಧೇಯಕ.

(2002ರ ವಿಧಾನಸಭೆಯ ವಿಧೇಯಕ ಸಂಖ್ಯೆ 26 ರಿಂದ ಪಡೆಯಲಾಗಿದೆ).

**XXIV**

**2004ರ ತಿದ್ದುಪಡಿ ಮಾಡುವ ಅಧಿನಿಯಮ 22.–** 'ಚಿಲ್ಲರೆ ಮಾರಾಟ'ಕ್ಕೆ ಮತ್ತು 'ಚಿಲ್ಲರೆ ವ್ಯಾಪಾರಿಗೆ' ಸಂಬಂಧಪಟ್ಟಂತೆ, ಚಿಲ್ಲರೆ ವ್ಯಾಪಾರಿಯು ದಾಸ್ತಾನಿಡಬಹುದಾದ ಕೃಷಿ ಉತ್ಪನ್ನದ ಗರಿಷ್ಠ ಪರಿಮಾಣವನ್ನು ಗೊತ್ತುಪಡಿಸಲು, ಕಾಲಕಾಲಕ್ಕೆ ಉದ್ಭವಿಸುವ ಪರಿಸ್ಥಿತಿಯನ್ನು ನಿಭಾಯಿಸುವುದಕ್ಕಾಗಿ ಪಾರದರ್ಶಕತೆಯನ್ನು ಮತ್ತು ಹೊಂದಾಣಿಕೆಗಳನ್ನು ತರಲು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮದಲ್ಲಿ ಈಗ ಇರುವ ಉಪಬಂಧಗಳನ್ನು ಪುನರವಲೋಕಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ. ಆದ್ದರಿಂದ, ಈ ಮುಂದಿನವುಗಳನ್ನು ಉಪಬಂಧಿಸುವುದಕ್ಕಾಗಿ ಅಧಿನಿಯಮವನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ:

(1) ರಾಜ್ಯದಲ್ಲಿನ ಚಿಲ್ಲರೆ ವ್ಯಾಪಾರಿಗಳು ದಾಸ್ತಾನಿಡಬೇಕಾದ ಕೃಷಿ ಉತ್ಪನ್ನದ ಅಥವಾ ಸರಕುಗಳ ಗರಿಷ್ಠ ಪರಿಮಾಣವನ್ನು ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಧಿಸೂಚನೆಯ ಮೂಲಕ ನಿಗದಿಪಡಿಸುವುದು.

(2) ಗೃಹಬಳಕೆಗಾಗಿ ಸರಕುಗಳನ್ನು ಖರೀದಿಸಲು ಗ್ರಾಹಕರನ್ನು ಸಶಕ್ತಗೊಳಿಸುವ ಅವುಗಳ ಉಪವಿಧಿಗಳಲ್ಲಿ ಗೊತ್ತುಪಡಿಸಿದ ಗರಿಷ್ಠ ಮಿತಿಯೊಳಗೆ ಮಾರುಕಟ್ಟೆ ಸಮಿತಿಗಳು ಚಿಲ್ಲರೆ ಮಾರಾಟ ಮಾಡುವುದಕ್ಕಾಗಿ ಪರಿಮಾಣವನ್ನು ನಿಗದಿಪಡಿಸುವುದು ಮತ್ತು ತರುವಾಯದ ಮಾರಾಟ ಅಥವಾ ಸಂಸ್ಕರಣೆಗಾಗಿ ನಿರ್ಬಂಧಿಸುವುದು.

ಅಲ್ಲದೆ, ಯಾವುದೇ ಮಾರುಕಟ್ಟೆ ಸಮಿತಿಯು, ಮೊದಲ ಮಾರಾಟದ ಮೇಲೆ ಒಂದು ಸಲಕ್ಕೆ ಒಂದು ಹಂತದ ಮಾರುಕಟ್ಟೆ ಫೀಜನ್ನು ವಿಧಿಸುವುದಕ್ಕೆ ಉಪಬಂಧಿಸಲು, ಅಧಿಸೂಚಿತ ಕೃಷಿ ಉತ್ಪನ್ನದ ಮಾರಾಟದ ಮೇಲೆ ಮಾರುಕಟ್ಟೆ ಫೀಜನ್ನು ವಿಧಿಸುವ ವ್ಯವಸ್ಥೆಯನ್ನು ಕ್ರಮಬದ್ಧಗೊಳಿಸಲಾಗಿದೆ. ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ ತರುವಾಯ ಮಾರಾಟ ಮಾಡುವ ಸರಕಿನ ಮೇಲೆ ಮಾರುಕಟ್ಟೆ ಫೀಜನ್ನು ವಿಧಿಸದಂತೆ ವಿನಾಯಿತಿಗೊಳಿಸಲಾಗುವುದು. ಅಲ್ಲದೆ, ಕೃಷಿ ಉತ್ಪನ್ನಕ್ಕೆ ಹೆಚ್ಚಿನ ಮೌಲ್ಯ ಒದಗಿಸುವುದನ್ನು ಸುನಿಶ್ಚಿತಪಡಿಸುವ, ಹಾಗಾಗಿ, ರೈತರು ತಮ್ಮ ಉತ್ಪನ್ನಕ್ಕೆ ಉತ್ತಮ ಬೆಲೆ ಪಡೆಯುವುದಕ್ಕೆ ಸಾಧ್ಯವಾಗಿ ಆಗ್ರೊ ಸಂಸ್ಕರಣಾ ವಲಯಕ್ಕೆ ಚಾಲನೆ ನೀಡಲು ಮತ್ತು ಕೃಷಿ ಮಾರುಕಟ್ಟೆ ಕಾರ್ಯಾಚರಣೆಗಳನ್ನು ಹೆಚ್ಚು ಪರಿಣಾಮಕಾರಿಯನ್ನಾಗಿ ಮಾಡುವ ಆಗ್ರೋ ಸಂಸ್ಕರಣಾ ವಲಯಕ್ಕೆ ಖಾಸಗಿ ವಲಯದಿಂದ ಹೂಡಿಕೆಗಳನ್ನು ಆಕರ್ಷಿಸಲು ಈ ಮುಂದಿನದಕ್ಕೆ ಉಪಬಂಧ ಕಲ್ಪಿಸುವುದಕ್ಕಾಗಿ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮವನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಭಾವಿಸಲಾಗಿದೆ,–

(1) ಯಾವ ಕೃಷಿ ಉತ್ಪನ್ನದ ಮೇಲೆ ರಾಜ್ಯದಲ್ಲಿನ ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ, ಈಗಾಗಲೇ ಮಾರುಕಟ್ಟೆ ಫೀಜನ್ನು ವಿಧಿಸಲಾಗಿದೆಯೋ ಮತ್ತು ಸಂಗ್ರಹಿಸಲಾಗಿದೆಯೋ ಮತ್ತು ಅಂಥ ಕೃಷಿ ಉತ್ಪನ್ನವನ್ನು ಸಂಸ್ಕರಿಸಲಾಗಿದೆಯೋ ಮತ್ತು ರಾಜ್ಯದಲ್ಲಿರುವ ಯಾವುದೇ ಇತರ ಮಾರುಕಟ್ಟೆ ಪ್ರದೇಶದಲ್ಲಿ ಮಾರಾಟ ಮಾಡಲಾಗಿದೆಯೋ ಅಥವಾ ರಾಜ್ಯದ ಹೊರಗೆ ರಫ್ತು ಮಾಡಲಾಗಿದೆಯೋ ಆ ಕೃಷಿ ಉತ್ಪನ್ನದ ಮೇಲೆ ಮಾರುಕಟ್ಟೆ ಫೀಜನ್ನು ವಿಧಿಸದಂತೆ ವಿನಾಯಿತಿ ನೀಡುವುದು.

ಆದ್ದರಿಂದ ಈ ವಿಧೇಯಕ

(2004ರ ವಿ.ಸ. ವಿಧೇಯಕ ಸಂ. 8).

(ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿಯ 14ನೇ ಮತ್ತು 28ನೇ ನಮೂದುಗಳು).

**XXV**

**2007ರ ತಿದ್ದುಪಡಿ ಮಾಡುವ ಅಧಿನಿಯಮ 24.–** ಅಭಿವೃದ್ಧಿಯಲ್ಲಿ ಏಕರೂಪತೆ ತರುವ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ ನಿಯಂತ್ರಣದಲ್ಲಿ ಸುಧಾರಣೆ ಮಾಡುವ ಗುರಿಹೊಂದಿರುವ ಮಾದರಿ ಅಧಿನಿಯಮ, 2003 ರಲ್ಲಿ ಭಾರತ ಸರ್ಕಾರವು ಮಾಡಿದ ಶಿಫಾರಸುಗಳನ್ನು ಜಾರಿಗೊಳಿಸುವುದಕ್ಕಾಗಿ ಈ ಮುಂದಿನವುಗಳಿಗೆ ಉಪಬಂಧ ಕಲ್ಪಿಸಲು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ:–

(1) ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರದಲ್ಲಿ ಉತ್ತಮ ನಿಯಂತ್ರಣವನ್ನು ತರುವುದು ಮತ್ತು ರಾಜ್ಯದಲ್ಲಿ ಕೃಷಿ ಉತ್ಪನ್ನಗಳ ಮಾರುಕಟ್ಟೆಗಳ ಸ್ಥಾಪನೆ ಹಾಗೂ ನಿರ್ವಹಣೆ, ದಕ್ಷ ಮಾರುಕಟ್ಟೆ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸುವುದು, ಕೃಷಿ ಉತ್ಪನ್ನಗಳ ಸಂಸ್ಕರಣೆಗೆ ಹಾಗೂ ಕೃಷಿ ಉತ್ಪನ್ನದ ರಫ್ತಿಗೆ ಉತ್ತೇಜನ ನೀಡುವುದು ಮತ್ತು ಕೃಷಿ ಮಾರುಕಟ್ಟೆಗಳ ಸ್ಥಾಪನೆ ಹಾಗೂ ಸೂಕ್ತ ನಿರ್ವಹಣೆ ಹಾಗೂ ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಹಾರವನ್ನು ನಿಯಂತ್ರಿಸುವುದರ ಜೊತೆಗೆ ಮಾರುಕಟ್ಟೆ ವ್ಯವಹಾರಕ್ಕಾಗಿ ಪರಿಣಾಮಕಾರಿ ಮೂಲ ಸೌಲಭ್ಯಗಳನ್ನು ಒದಗಿಸುವುದಕ್ಕಾಗಿ ಉಪಬಂಧಗಳನ್ನು ಅದರಲ್ಲಿ ಸೇರಿಸುವುದು ಅವಶ್ಯವೆಂದು ಭಾವಿಸಲಾಗಿದೆ.

(2) 'ಕೃಷಿಕ', 'ಕೊಂಡುಕೊಳ್ಳುವವನು', 'ಮಾರುಕಟ್ಟೆ ವ್ಯವಹಾರ' ಮತ್ತು 'ಸಂಸ್ಕರಿಸುವುದು' ಎಂಬ ಪರಿಭಾಷೆಗಳಿಗೆ ಮಾದರಿ ಅಧಿನಿಯಮದಲ್ಲಿ ಕೊಟ್ಟಂತೆ ವ್ಯಾಪಕವಾದ ಅರ್ಥವನ್ನು ನೀಡುವುದು;

(3) ಕಷ್ಟಕಾಲೀನ ಮಾರಾಟವನ್ನು ತಪ್ಪಿಸಿ ರೈತರ ಹಿತಾಸಕ್ತಿಯನ್ನು ಕಾಪಾಡಲು ಕನಿಷ್ಠ ಬೆಂಬಲ ಬೆಲೆ ಯೋಜನೆಯನ್ನು ಜಾರಿಗೊಳಿಸುವುದಕ್ಕಾಗಿ "ಆವರ್ತಕ ನಿಧಿ" ಯನ್ನು ಸ್ಥಾಪಿಸುವುದು;

(4) ಹೊಸ ಕೈಗಾರಿಕಾ ನೀತಿಗೆ ಅನುಸಾರವಾಗಿ ಕೃಷಿ ಉತ್ಪನ್ನ ಸಂಸ್ಕರಣದ ಹೊಸ ಕೈಗಾರಿಕೆಗಳಿಗೆ ಮಾರುಕಟ್ಟೆ ಶುಲ್ಕ ವಿನಾಯಿತಿ ನೀಡುವುದು;

(5) ರೈತರಿಗೆ ಪ್ರತಿಫಲದಾಯಕ ಬೆಲೆ ದೊರೆಯುವಂತೆ ಮಾಡುವ ಸಲುವಾಗಿ ಸ್ಪರ್ಧಾತ್ಮಕ ಮಾರುಕಟ್ಟೆ ಮೂಲ ಸೌಲಭ್ಯಗಳನ್ನು ಅಭಿವೃದ್ಧಿಪಡಿಸುವ ದೃಷ್ಟಿಯಿಂದ ಖಾಸಗಿ ಮಾರುಕಟ್ಟೆ ಪ್ರಾಂಗಣಗಳನ್ನು, ಕೃಷಿಕ–ಗ್ರಾಹಕ ಮಾರುಕಟ್ಟೆಗಳನ್ನು ಸ್ಥಾಪಿಸುವುದು ಮತ್ತು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ/ ಆಯುಕ್ತನಿಗೆ ಲೈಸೆನ್ಸ್ ನೀಡುವ ಹಾಗೂ ಅಂಥ ಮಾರುಕಟ್ಟೆಗಳಲ್ಲಿಯ ಚಟುವಟಿಕೆಗಳನ್ನು ನಿಯಂತ್ರಿಸುವ ಅಧಿಕಾರವನ್ನು ನೀಡುವುದು;

(6) ಕೃಷಿ ಸಂಸ್ಕರಣ ವಲಯಗಳಿಗೆ ಕೃಷಿ ಉತ್ಪನ್ನಗಳು ನಿರಂತರವಾಗಿ ಸರಬರಾಜಾಗುವಂತೆ ಖಚಿತಪಡಿಸಿಕೊಳ್ಳಲು ಪೂರ್ವ ನಿರ್ಧಾರಿತ ಅಂಗೀಕೃತ ಬೆಲೆಗೆ ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಹಾರಕ್ಕೆ ಉತ್ತೇಜನ ನೀಡಿ ಅದರಿಂದ ಬೆಳೆಗಾರರು, ಆ ಮೌಲ್ಯವರ್ಧನೆಯಿಂದ ಸೂಕ್ತ ಪ್ರತಿಫಲದಾಯಕ ಬೆಲೆಯನ್ನು ಪಡೆಯಲು ನೆರವಾಗುವಂತೆ ಮಾಡುವುದಕ್ಕಾಗಿ ಕರಾರು ವ್ಯವಸಾಯ ಪದ್ಧತಿಯನ್ನು ಉತ್ತೇಜಿಸುವುದು ಹಾಗೂ ಕರಾರು ವ್ಯವಸಾಯ ಚಟುವಟಿಕೆಗಳನ್ನು ಮತ್ತು ಕರಾರು ವ್ಯವಸಾಯ ಒಪ್ಪಂದಗಳನ್ನು ನಿಯಂತ್ರಿಸಲು ಮಾರುಕಟ್ಟೆ ಸಮಿತಿಗಳಿಗೆ ಅಧಿಕಾರವನ್ನು ನೀಡುವುದು;

(7) ಕೃಷಿ ಉತ್ಪನ್ನ ಮಾರಾಟ ಕ್ಷೇತ್ರದಲ್ಲಿ ರಫ್ತು ಆಧಾರಿತ ಚಟುವಟಿಕೆಗಳಿಗೆ ಉತ್ತೇಜನ ನೀಡುವುದಕ್ಕಾಗಿ, ಕೃಷಿ ಉತ್ಪನ್ನ ಮಾರುಕಟ್ಟೆ ಮಾನಕ ಸಂಸ್ಥೆಯು, ಗುಣಮಟ್ಟ–ಪ್ರಮಾಣೀಕರಣ ಹಾಗೂ ಸರಕುಗಳಿಗೆ ಬ್ರ್ಯಾಂಡ್ ನೀಡಿಕೆ ಕಾರ್ಯವನ್ನು ಕೈಗೊಳ್ಳುವುದು;

(8) ಮಾರಾಟಗಾರ ಮುಂತಾದವರಿಗೆ ಮಾರಾಟದ ಹಣವು ತ್ವರಿತವಾಗಿ ಸಂದಾಯವಾಗುವಂತೆ ಖಚಿತಪಡಿಸಿಕೊಳ್ಳಲು ವಿವಾದಗಳ ಇತ್ಯರ್ಥ ಮಾಡುವುದು;

(9) ಒಂದಾದಮೇಲೊಂದರಂತೆ ಬರುವ ಮೂರು ಸಭೆಗಳಿಗೆ ಹಾಜರಾಗದ ಸಮಿತಿ ಸದಸ್ಯರನ್ನು ಅನರ್ಹಗೊಳಿಸುವುದು;

(10) ಕೊಂಡುಕೊಳ್ಳುವವನು ಅಥವಾ ಕಮಿಷನ್ ಏಜೆಂಟನು ಮಾರಾಟಗಾರನಿಗೆ ಹಣ ಸಂದಾಯ ಮಾಡದೇ ಇದ್ದರೆ ಮತ್ತು ವಿಳಂಬವಾಗಿ ಸಂದಾಯ ಮಾಡಿದರೆ ತೆರಬೇಕಾದ ದಂಡವನ್ನು ಹೆಚ್ಚಿಸುವುದು;

(11) ಅಧಿಸೂಚಿತ ಕೃಷಿ ಉತ್ಪನ್ನಗಳ ವಿದ್ಯುನ್ಮಾನ ವ್ಯಾಪಾರಕ್ಕೆ ಅನುಕೂಲ ಕಲ್ಪಿಸಲು ಸ್ಥಳೀಯ ವಿನಿಮಯ ಕೇಂದ್ರವನ್ನು ಸ್ಥಾಪಿಸುವುದು;

(12) ಅಧಿಸೂಚಿಸಬಹುದಾದಂಥ ಸರಕುಗಳ ಸಂಬಂಧದಲ್ಲಿ ಮಾರುಕಟ್ಟೆ ಸಮಿತಿಯ ಮೂಲಕ ಮಾರಾಟಗಾರರಿಗೆ ಹಣ ಸಂದಾಯ ಮಾಡುವುದು;

(13) ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಸಹ ಮಾಡುವುದು.

ಆದ್ದರಿಂದ ಈ ವಿಧೇಯಕ.

**1966ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 27**

(1966ರ ಸೆಪ್ಟೆಂಬರ್ ಹದಿನೈದನೇ ದಿವಸದಂದು [1][ಕರ್ನಾಟಕ][1] ರಾಜ್ಯಪತ್ರದಲ್ಲಿ ಮೊದಲು ಪ್ರಕಟವಾಯಿತು)

**[1][ಕರ್ನಾಟಕ][1] ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ**

**(ನಿಯಂತ್ರಣ) ಅಧಿನಿಯಮ, 1966**

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆಬರುವಂತೆ ಅಳವಡಿಸಲಾಗಿದೆ.

(1966ರ ಆಗಸ್ಟ್ ಹತ್ತೊಂಬತ್ತನೇ ದಿವಸದಂದು ರಾಷ್ಟ್ರಪತಿಯವರ ಅನುಮತಿ ಪಡೆದಿದೆ)

**(1969ರ 19, 1970ರ 3, 1973ರ 20, 1975ರ 24, 1976ರ 14, 1976ರ 43, 1976ರ 47, 1980ರ 17, 1982ರ 4, 1984ರ 2, 1986ರ 35, 1987ರ 29, 1988ರ 6, 1990ರ 14, 1991ರ 16, 1998ರ 16, 1998ರ 17, 2000ರ 22, 2000ರ 31, 2001ರ 8, 2001ರ 10, 2002ರ 13, 2004ರ 22 ಮತ್ತು 2007ರ 24 ಇವುಗಳ ಮೂಲಕ ತಿದ್ದುಪಡಿಯಾದಂತೆ).**

[1][ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ, ಪರಿಣಾಮಕಾರಿ ಮಾರುಕಟ್ಟೆ ವ್ಯವಸ್ಥೆಯ ಅಭಿವೃದ್ಧಿ, ಕೃಷಿ ಸಂಸ್ಕರಣೆಗೆ ಪ್ರೋತ್ಸಾಹ, ಕೃಷಿ ಸಂಬಂಧಿತ ರಫ್ತಿನಲ್ಲಿ ಸುಧಾರಿತ ನಿಯಂತ್ರಣಕ್ಕಾಗಿ ಮತ್ತು ಕೃಷಿ ಉತ್ಪನ್ನಗಳಿಗಾಗಿ ಮಾರುಕಟ್ಟೆಗಳ ಸ್ಥಾಪನೆ ಮತ್ತು ಸೂಕ್ತ ಆಡಳಿತಕ್ಕಾಗಿ ಹಾಗೂ ಈ ಉದ್ದೇಶಕ್ಕಾಗಿ ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಹಾರಕ್ಕಾಗಿ ಪರಿಣಾಮಕಾರಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದಕ್ಕಾಗಿ ಮತ್ತು ಕರ್ನಾಟಕ ರಾಜ್ಯದಲ್ಲಿ ಈ ಬಗ್ಗೆ ಕಾರ್ಯವಿಧಾನಗಳನ್ನು ಮತ್ತು ವ್ಯವಸ್ಥೆಗಳನ್ನು ಗೊತ್ತುಪಡಿಸುವುದಕ್ಕಾಗಿ ಉಪಬಂಧ ಕಲ್ಪಿಸುವ ಅಧಿನಿಯಮ;

ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ, ಪರಿಣಾಮಕಾರಿ ಮಾರುಕಟ್ಟೆ ವ್ಯವಸ್ಥೆಯ ಅಭಿವೃದ್ಧಿ, ಕೃಷಿ ಸಂಸ್ಕರಣೆಗೆ ಪ್ರೋತ್ಸಾಹ, ಕೃಷಿ ಸಂಬಂಧಿತ ರಫ್ತಿನಲ್ಲಿ ಸುಧಾರಿತ ನಿಯಂತ್ರಣಕ್ಕಾಗಿ ಮತ್ತು ಕೃಷಿ ಉತ್ಪನ್ನಗಳಿಗಾಗಿ ಮಾರುಕಟ್ಟೆಗಳ ಸ್ಥಾಪನೆ ಮತ್ತು ಸೂಕ್ತ ಆಡಳಿತಕ್ಕಾಗಿ ಹಾಗೂ ಈ ಉದ್ದೇಶಕ್ಕಾಗಿ ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಹಾರಕ್ಕಾಗಿ ಪರಿಣಾಮಕಾರಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದಕ್ಕಾಗಿ ಮತ್ತು ಕರ್ನಾಟಕ ರಾಜ್ಯದಲ್ಲಿ ಈ ಬಗ್ಗೆ ಕಾರ್ಯವಿಧಾನಗಳನ್ನು ಮತ್ತು ವ್ಯವಸ್ಥೆಗಳನ್ನು ಗೊತ್ತುಪಡಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ.][1]

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಭಾರತ ಗಣರಾಜ್ಯದ ಹದಿನೇಳನೇ ವರ್ಷದಲ್ಲಿ 1[ಕರ್ನಾಟಕ]1 ರಾಜ್ಯ ವಿಧಾನಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು:-

## ಅಧ್ಯಾಯ - I

## ಪ್ರಾರಂಭಿಕ

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ [2][(ನಿಯಂತ್ರಣ ಮತ್ತು ಅಭಿವೃದ್ಧಿ)][2] ಅಧಿನಿಯಮ, 1966 ಎಂದು ಕರೆಯತಕ್ಕದ್ದು.

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆಬರುವಂತೆ ಅಳವಡಿಸಲಾಗಿದೆ.

2. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಇದು ಇಡೀ [1][ಕರ್ನಾಟಕ ರಾಜ್ಯಕ್ಕೆ][1] ವ್ಯಾಪ್ತವಾಗುತ್ತದೆ.

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆಬರುವಂತೆ ಅಳವಡಿಸಲಾಗಿದೆ.

(3) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [1][ದಿನಾಂಕ][1] ದಂದು ಜಾರಿಗೆ ಬರತಕ್ಕದ್ದು.

1. ಅಧಿನಿಯಮವು 1-5-1968ರಂದು ಅಧಿಸೂಚನೆಯ ಮೂಲಕ ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

**2. ಪರಿಭಾಷೆಗಳು.-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

[1][(1) "ಕೃಷಿ ಉತ್ಪನ್ನ" ಎಂದರೆ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಉತ್ಪನ್ನ ಅಥವಾ ಸರಕುಗಳು;][1]

1. 1980ರ ಅಧಿನಿಯಮ ಸಂಖ್ಯೆ 17 ರ ಮೂಲಕ 30-6-1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(2) "ಕೃಷಿಕ" ಎಂದರೆ ಕೃಷಿ ಭೂಮಿಯ ಅಧಿಭೋಗದಾರನಾಗಿ ಅಥವಾ ಅಧಿಭೋಗದಾರನ ಗೇಣಿದಾರನಾಗಿ ಸಾಗುವಳಿ ಮಾಡುವ ವ್ಯಕ್ತಿ;

**ವಿವರಣೆ:** ಈ ಖಂಡದ ಉದ್ದೇಶಕ್ಕಾಗಿ 'ಅಧಿಭೋಗದಾರ' ಮತ್ತು 'ಗೇಣಿದಾರ' ಎಂಬ ಪದಗಳು 1964 ರ [2][ಕರ್ನಾಟಕ][2] ಭೂ ಕಂದಾಯ ಅಧಿನಿಯಮದಲ್ಲಿ (1964ರ [2][ಕರ್ನಾಟಕ][2] ಅಧಿನಿಯಮ 12) ಅವುಗಳಿಗೆ ಕೊಡಲಾದ ಅರ್ಥವನ್ನೇ ಹೊಂದಿರತಕ್ಕದ್ದು.][1]

1. 1970ರ ಅಧಿನಿಯಮ ಸಂಖ್ಯೆ 3 ರ ಮೂಲಕ 17-10-1969 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆಬರುವಂತೆ ಅಳವಡಿಸಲಾಗಿದೆ.

[1][(2ಎ) "ಕೃಷಿ ಸಹಕಾರ ಸಂಸ್ಕರಣ ಸಂಘ" ಎಂದರೆ, ಮಾರುಕಟ್ಟೆ ಪ್ರದೇಶದಲ್ಲಿ ಕೃಷಿ ಉತ್ಪನ್ನಗಳ ಸಂಸ್ಕರಣ ಉದ್ದೇಶಕ್ಕಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959 ರ ಮೇರೆಗೆ ನೋಂದಾಯಿತವಾದ ಅಥವಾ ನೋಂದಾಯಿತವಾಗಿದೆ ಎಂದು ಭಾವಿಸಲಾದ ಕೃಷಿ ಸಹಕಾರ ಸಂಸ್ಕರಣ ಸಂಘ;][1]

1. 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಅಧಿಸೂಚನೆಯ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

[1][(2ಬಿ) "ಹಿಂದುಳಿದ ವರ್ಗಗಳು" ಎಂದರೆ ಮಾರುಕಟ್ಟೆ ಸಮಿತಿಗಳಲ್ಲಿ ಸ್ಥಾನಗಳ ಮೀಸಲಾತಿ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ಕಾಲಕಾಲಕ್ಕೆ "ಎ" ಮತ್ತು "ಬಿ" ಪ್ರವರ್ಗಗಳೆಂದು ವರ್ಗೀಕರಿಸಬಹುದಾದಂತೆ ಮತ್ತು ಅಧಿಸೂಚಿಸಬಹುದಾದಂತೆ ನಾಗರಿಕರ ಅಂಥ ವರ್ಗ ಅಥವಾ ವರ್ಗಗಳು;] [1]

1. 2002ರ ಅಧಿನಿಯಮ ಸಂಖ್ಯೆ 13ರ ಮೂಲಕ 11-4-2002ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) "ಮಂಡಲಿ" ಎಂದರೆ ಈ ಅಧಿನಿಯಮದ ಮೇರೆಗೆ ಸ್ಥಾಪಿತವಾದ [1][ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿ;][1]

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 01-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(4) "ದಲ್ಲಾಳಿ" ಎಂದರೆ ಕಮಿಷನ್, ಫೀಜು ಅಥವಾ ಪ್ರತಿಫಲಕ್ಕಾಗಿ, ತನ್ನ ಮುಖ್ಯಸ್ಥನ ಪರವಾಗಿ ಅಧಿಸೂಚಿತ ಕೃಷಿ ಉತ್ಪನ್ನದ ಖರೀದಿ ಅಥವಾ ಮಾರಾಟದ ಬಗ್ಗೆ ವ್ಯವಹಾರ ಮಾತ್ರ ಮಾಡುವ ಮತ್ತು ಕರಾರು ಏರ್ಪಡಿಸುವ ಏಜೆಂಟ್, ಆದರೆ, ಅವನು ಅಧಿಸೂಚಿತ ಕೃಷಿ ಉತ್ಪನ್ನವನ್ನು ಖರೀದಿಗಾಗಿ ಸ್ವೀಕರಿಸುವುದಿಲ್ಲ, ವಶಾವಣೆ ಮಾಡುವುದಿಲ್ಲ, ವರ್ಗಾವಣೆ ಮಾಡುವುದಿಲ್ಲ, ಸಂದಾಯ ಮಾಡುವುದಿಲ್ಲ ಅಥವಾ ಮಾರಾಟದ ಹಣವನ್ನು ವಸೂಲು ಮಾಡುವುದಿಲ್ಲ;

[1][(5) "ಕೊಂಡುಕೊಳ್ಳುವವನು" ಅಥವಾ "ಖರೀದಿದಾರನು" ಎಂದರೆ, ಮಾರುಕಟ್ಟೆ ಪ್ರದೇಶದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನವನ್ನು ಸ್ವತಃ ಅಥವಾ ಯಾರೇ ಇತರ ವ್ಯಕ್ತಿಯ ಅಥವಾ ಏಜೆಂಟನ ಪರವಾಗಿ ಕೊಂಡುಕೊಳ್ಳುವ ಅಥವಾ ಕೊಂಡುಕೊಳ್ಳಲು ಒಪ್ಪಿಕೊಂಡಿರುವ ವ್ಯಕ್ತಿ.][1]

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(6) "ಉಪ ವಿಧಿಗಳು" ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಲಾದ ಉಪವಿಧಿಗಳು;

[1][(6ಎ) "ದನಕರು" ಎಂಬುದು, ಕೋಣ ಅಥವಾ ಎಮ್ಮೆ, ಹೋರಿ, ಹಸು, [2][ಎತ್ತು, ಮೇಕೆ, ಕುರಿ ಮತ್ತು ಅವುಗಳ ಕರು][2] ಗಳನ್ನು ಒಳಗೊಳ್ಳುತ್ತದೆ;][1]

1. 1986 ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(7) XXX;][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(8) "ಕಮಿಷನ್ ಏಜೆಂಟ್" ಎಂದರೆ ಕೃಷಿ ಉತ್ಪನ್ನದ ಮಾಲೀಕನ ಅಥವಾ ಮಾರಾಟಗಾರನ ಅಥವಾ ಖರೀದಿದಾರನ ಪರವಾಗಿ ಕಮಿಷನ್ನಿಗಾಗಿ ಸಾಮಾನ್ಯ ವ್ಯವಹಾರ ಕ್ರಮದಲ್ಲಿ ಅಂಥ ಕೃಷಿ ಉತ್ಪನ್ನದ ಖರೀದಿ ಅಥವಾ ಮಾರಾಟ ಮಾಡುವ ಅಥವಾ ಆ ಬಗ್ಗೆ ಪ್ರಸ್ತಾವಿಸುವ ವ್ಯಕ್ತಿ;][1]

1. 1986 ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(9) "ವ್ಯಾಪಾರ ಸರಕು" ಎಂದರೆ, ಮಾರಾಟಕ್ಕಾಗಿ ಇರುವ ಯಾವುದೇ ಬಗೆಯ ಕೃಷಿ ಉತ್ಪನ್ನ;

[1][(9ಎ) "ಕರಾರು ವ್ಯವಸಾಯ" ಎಂದರೆ, ಒಬ್ಬ ಕೃಷಿಕನು ಅಥವಾ "ಕರಾರು ವ್ಯವಸಾಯ ಉತ್ಪಾದಕ" ಎಂದು ಯಾವುದೇ ಹೆಸರಿನಿಂದ ಕರೆಯಲಾಗುತ್ತಿರುವ ಕೃಷಿಕರ ಸಂಘವು ಲಿಖಿತ ಕರಾರು ವ್ಯವಸಾಯ ಒಪ್ಪಂದದಲ್ಲಿ "ಕರಾರು ವ್ಯವಸಾಯ ಪ್ರಾಯೋಜಕ" ಎಂದು ಕರೆಯಲಾಗುವ ಇನ್ನೊಬ್ಬ ವ್ಯಕ್ತಿಯೊಂದಿಗೆ ಆ ಒಪ್ಪಂದದಲ್ಲಿ ನಿರ್ದಿಷ್ಟಪಡಿಸಿರಬಹುದಾದಂತೆ ಅಂಥ ಕರಾರು ವ್ಯವಸಾಯ ಪ್ರಾಯೋಜಕನು ಅವನ ಕೃಷಿ ಉತ್ಪನ್ನವನ್ನು ಖರೀದಿಸತಕ್ಕದ್ದು ಎಂಬ ಬಗೆಗಿನ ವ್ಯವಸಾಯ;

(9ಬಿ) "ಕರಾರು ವ್ಯವಸಾಯ ಒಪ್ಪಂದ" ಎಂದರೆ, ಕರಾರು ವ್ಯವಸಾಯ ಉತ್ಪಾದಕನು ಮತ್ತು ಕರಾರು ವ್ಯವಸಾಯ ಪ್ರಾಯೋಜಕನು ಒಪ್ಪಂದದಲ್ಲಿ ನಿರ್ದಿಷ್ಟಪಡಿಸಿರಬಹುದಾದಂತೆ ಕರಾರು ವ್ಯವಸಾಯಕ್ಕಾಗಿ ಮಾಡಿಕೊಂಡ ಒಪ್ಪಂದ ಎಂದು ಅರ್ಥ][1];

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(10) "ಸಹಕಾರ ಮಾರುಕಟ್ಟೆ ವ್ಯವಹಾರ ಸಂಘ" ಎಂದರೆ ಮಾರುಕಟ್ಟೆ ಪ್ರದೇಶದಲ್ಲಿ ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಹಾರದ ಉದ್ದೇಶಕ್ಕಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಮೇರೆಗೆ ನೋಂದಾಯಿತವಾದ ಅಥವಾ ನೋಂದಾಯಿತವಾಗಿದೆ ಎಂದು ಭಾವಿಸಲಾದ ಸಹಕಾರ ಮಾರುಕಟ್ಟೆ ವ್ಯವಹಾರ ಸಂಘ;][1]

1. 1986 ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ. ಮತ್ತು 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 01-8-1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(11) "ವಶಾವಣೆ" ಎಂದರೆ ಸ್ವಾಧೀನತೆಯನ್ನು ಒಬ್ಬ ವ್ಯಕ್ತಿಯಿಂದ ಮತ್ತೊಬ್ಬ ವ್ಯಕ್ತಿಗೆ ಸ್ವಇಚ್ಛೆಯಿಂದ ವರ್ಗಾಯಿಸುವುದು;

(12) "ಡೆಪ್ಯುಟಿ ಕಮಿಷನರ್" ಎಂಬುದು, ತಹಶೀಲ್ದಾರನ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಮತ್ತು ಡೆಪ್ಯುಟಿ ಕಮಿಷನರನಿಗೆ ಅಧೀನನಾದ ಯಾವ ಅಧಿಕಾರಿಯನ್ನು ರಾಜ್ಯ ಸರ್ಕಾರವು ಈ ಅಧಿನಿಯಮದ ಮೇರೆಗೆ, ಅಂಥ ಅಧಿಕಾರಿಯ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯೊಳಗಿನ ಯಾವುದೇ ಮಾರುಕಟ್ಟೆ ಪ್ರದೇಶದ ಸಂಬಂಧದಲ್ಲಿ ಡೆಪ್ಯುಟಿ ಕಮಿಷನರನ ಅಧಿಕಾರಗಳನ್ನು ಚಲಾಯಿಸುವುದಕ್ಕೆ ಮತ್ತು ಪ್ರಕಾರ್ಯಗಳನ್ನು ನೆರವೇರಿಸುವುದಕ್ಕೆ ಅಧಿಸೂಚನೆಯ ಮೂಲಕ ಪ್ರಾಧಿಕೃತಗೊಳಿಸುವುದೋ

– ಆ ಅಧಿಕಾರಿಯನ್ನು ಒಳಗೊಳ್ಳುತ್ತದೆ;

[1][(12ಎ)"ಕೃಷಿ ಮಾರುಕಟ್ಟೆ ನಿರ್ದೇಶಕ" ಎಂದರೆ ಹಾಗೆಂದು ರಾಜ್ಯ ಸರ್ಕಾರ ನೇಮಕ ಮಾಡಿದ ಅಧಿಕಾರಿ ಮತ್ತು ಕೃಷಿ ಮಾರುಕಟ್ಟೆ ಆಯುಕ್ತ ಅಥವಾ ಆ ಪದವು ಈ ಅಧಿನಿಯಮ ಅಥವಾ ನಿಯಮಗಳ ಉಪಬಂಧಗಳ ಮೇರೆಗೆ ಕೃಷಿ ಮಾರುಕಟ್ಟೆ ನಿರ್ದೇಶಕನು ಹೊಂದಿರುವ ಅಧಿಕಾರಗಳು ಅಥವಾ ಪ್ರಕಾರ್ಯಗಳ ಪೈಕಿ ರಾಜ್ಯ ಸರ್ಕಾರವು ಅಧಿಸೂಚನೆ ಹೊರಡಿಸಿ ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸಲು ಅಥವಾ ಪ್ರಕಾರ್ಯಗಳನ್ನು ನಿರ್ವಹಿಸಲು ಅಧಿಕಾರ ಪಡೆದ ಯಾವನೇ ಇತರ ಅಧಿಕಾರಿ ಅಥವಾ ಅಧಿಕಾರಿಗಳನ್ನು ಒಳಗೊಳ್ಳುತ್ತದೆ][1];

1. 1986 ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(13) "ರಫ್ತುದಾರ" ಎಂದರೆ ತನ್ನ ಸ್ವಂತದ ಗೃಹಬಳಕೆಯ ಉದ್ದೇಶದ ಹೊರತು, ಮಾರಾಟ, ಸಂಸ್ಕರಣ, ತಯಾರಿಕೆ ಅಥವಾ ಇತರ ಯಾವುದೇ ಉದ್ದೇಶಕ್ಕಾಗಿ ಮಾರುಕಟ್ಟೆಯ ಪ್ರದೇಶದಿಂದ ಹೊರಗೆ ಇರುವಂಥ ಪ್ರದೇಶಕ್ಕೆ ತಾನೇ ಸ್ವತಃ ಅಥವಾ ಮತ್ತೊಬ್ಬ ವ್ಯಕ್ತಿಯ ಏಜೆಂಟನಾಗಿ ಸರಕುಗಳನ್ನು ರಫ್ತು ಮಾಡುವ ಅಥವಾ ಮಾಡಿಸುವ ಉತ್ಪಾದಕನ ಹೊರತಾದ ಒಬ್ಬ ವ್ಯಕ್ತಿ; ಆದರೆ ಇದರಲ್ಲಿ ಸಾರ್ವಜನಿಕ ವಾಹನವು ಒಳಗೊಳ್ಳುವುದಿಲ್ಲ;

[1][XXX][1];

1. 1986 ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಬಿಟ್ಟು ಬಿಡಲಾಗಿದೆ.

(14) "ಸರಕು" ಎಂದರೆ ಯಾವುದೇ ಬಗೆಯ ಅಧಿಸೂಚಿತ ಕೃಷಿ ಉತ್ಪನ್ನ;

[1][(14ಎ) "ಸರ್ಕಾರ" ಎಂದರೆ ರಾಜ್ಯ ಸರ್ಕಾರ] [1];

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][[2][(14ಬಿ)][2] "ಆಮದುದಾರ" ಎಂದರೆ, ತನ್ನ ಸ್ವಂತ ಗೃಹ ಬಳಕೆಯ ಉದ್ದೇಶದ ಹೊರತು, ಮಾರಾಟ, ಸಂಸ್ಕರಣೆ, ತಯಾರಿಕೆ ಅಥವಾ ಇತರ ಯಾವುದೇ ಉದ್ದೇಶಕ್ಕಾಗಿ, ಮಾರುಕಟ್ಟೆ ಪ್ರದೇಶದ ಹೊರಗಿನಿಂದ ಮಾರುಕಟ್ಟೆ ಪ್ರದೇಶದೊಳಗೆ ತಾನೇ ಸ್ವತಃ ಅಥವಾ ಮತ್ತೊಬ್ಬ ವ್ಯಕ್ತಿಯ ಏಜೆಂಟನಾಗಿ ಸರಕುಗಳನ್ನು ಆಮದು ಮಾಡಿಕೊಳ್ಳುವ ಅಥವಾ ಮಾಡಿಸಿಕೊಳ್ಳುವ ವ್ಯಕ್ತಿ, ಆದರೆ ಇದರಲ್ಲಿ ಸಾರ್ವಜನಿಕ ವಾಹನವು ಒಳಗೊಳ್ಳುವುದಿಲ್ಲ;][1]

1. 1986 ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಮರುಸಂಖ್ಯೆ ನೀಡಲಾಗಿದೆ.

(15) "ದಿವಾಳಿ" ಎಂದರೆ ದಿವಾಳಿತನದ ಕೃತ್ಯವನ್ನು ಮಾಡಿರಲಿ ಅಥವಾ ಇಲ್ಲದಿರಲಿ ವ್ಯವಹಾರದ ಸಾಮಾನ್ಯ ಕ್ರಮದಲ್ಲಿ ತನ್ನ ಸಾಲಗಳನ್ನು ತೀರಿಸಲಾಗದ ಅಥವಾ ಬಾಕಿಯಾಗುವ ಸಾಲಗಳನ್ನು ತೀರಿಸಲಾಗದ ವ್ಯಕ್ತಿ;

[1][(16) XXX] [1]

1. 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(17) XXX] [1]

1. 1980 ರ ಅಧಿನಿಯಮ ಸಂಖ್ಯೆ 17 ರ ಮೂಲಕ 3-11-1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(18) "ಮಾರುಕಟ್ಟೆ" ಎಂದರೆ [1][ಈ ಅಧಿನಿಯಮದ][1] ಮೇರೆಗೆ ಮಾರುಕಟ್ಟೆ ಎಂದು ಘೋಷಿಸಲಾದ [2][ಅಥವಾ ಘೋಷಿಸಲಾಗಿದೆ ಎಂದು ಭಾವಿಸಲಾದ][2] ಯಾವುದೇ ಅಧಿಸೂಚಿತ ಪ್ರದೇಶ;

1. 1969 ರ ಅಧಿನಿಯಮ ಸಂಖ್ಯೆ 19 ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1969 ರ ಅಧಿನಿಯಮ ಸಂಖ್ಯೆ 19 ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(18ಎ) "ಮಾರುಕಟ್ಟೆ ವ್ಯವಹಾರ" ಎಂದರೆ, ಕೊಂಡುಕೊಳ್ಳುವುದು, ಮಾರಾಟ ಮಾಡುವುದು, ಆಮದು ಮಾಡಿಕೊಳ್ಳುವುದು, ರಫ್ತು ಮಾಡುವುದು, ಶ್ರೇಣೀಕರಿಸುವುದು, ಸಂಸ್ಕರಿಸುವುದು, ದಾಸ್ತಾನು ಮಾಡುವುದು, ಸಾಗಣೆ ಮಾಡುವುದು, ಬ್ರ್ಯಾಂಡ್ ಮಾಡುವುದು, ಪ್ಯಾಕ್ ಮಾಡುವುದು, ಮಾರುಕಟ್ಟೆ ಮಾಹಿತಿ ಮತ್ತು ವಿತರಣಾ ಮಾರ್ಗಗಳು ಎಂದು ಅರ್ಥ ಮತ್ತು ಇದು ಸುಗ್ಗಿಯ ಹಂತದಿಂದ ಪ್ರಾರಂಭಿಸಿ ಅಂಥ ಅಧಿಸೂಚಿತ ಕೃಷಿ ಉತ್ಪನ್ನವು ಬಳಕೆದಾರರಿಗೆ ತಲುಪುವವರೆಗಿನ, ಅಧಿಸೂಚಿತ ಕೃಷಿ ಉತ್ಪನ್ನದ ಉತ್ಪಾದನೆಯಲ್ಲಿ ಒಳಗೊಂಡಿರುವ ಎಲ್ಲ ಚಟುವಟಿಕೆಗಳನ್ನು ಒಳಗೊಳ್ಳುತ್ತದೆ][1];

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(19) "ಮಾರುಕಟ್ಟೆ ಪ್ರದೇಶ" ಎಂದರೆ 4ನೇ ಪ್ರಕರಣದ ಮೇರೆಗೆ ಮಾರುಕಟ್ಟೆ ಪ್ರದೇಶವೆಂದು ಘೋಷಿಸಲಾಗುವ ಯಾವುದೇ ಪ್ರದೇಶ;

[1][(19ಎ) "ಮಾರುಕಟ್ಟೆ ವೆಚ್ಚಗಳು" ಎಂದರೆ ಕೃಷಿ ಉತ್ಪನ್ನಗಳನ್ನು ಸಾಗಿಸುವುದಕ್ಕೆ ಸಂಬಂಧಿಸಿದಂತೆ ಕಮೀಷನ್ ಏಜೆಂಟರ ಕಮೀಷನ್, ದಲ್ಲಾಳಿ, ಕೃಷಿ ಉತ್ಪನ್ನಗಳನ್ನು ತೂಕ ಮಾಡುವುದು, ಹೇರುವುದು, ಇಳಿಸುವುದು, ಸ್ವಚ್ಛಮಾಡುವುದು, ಬೇರ್ಪಡಿಸುವುದು, ಎಣಿಕೆ ಮಾಡುವುದು, ಜರಡಿ ಹಿಡಿಯುವುದು ಮತ್ತು ಕಟ್ಟುವುದು

– ಇವುಗಳ ಬಗ್ಗೆ ಪರಿಶ್ರಮಧನಗಳಂತಹ ವೆಚ್ಚಗಳು;] [1]

1. 1986 ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(20) "ಮಾರುಕಟ್ಟೆ ಸಮಿತಿ" ಅಥವಾ "ಸಮಿತಿ" ಎಂದರೆ ಈ ಅಧಿನಿಯಮದ ಮೇರೆಗೆ ಮಾರುಕಟ್ಟೆಯ ಪ್ರದೇಶಕ್ಕಾಗಿ ರಚಿಸಲಾದ ಮಾರುಕಟ್ಟೆ ಸಮಿತಿ;

(21) "ಮಾರುಕಟ್ಟೆ ಕಾರ್ಯನಿರ್ವಾಹಕ" ಅಥವಾ "ಕಾರ್ಯನಿರ್ವಾಹಕ" ಎಂಬುದರಲ್ಲಿ ದಲ್ಲಾಳಿ, ಕಮೀಷನ್ ಏಜೆಂಟ್, ರಫ್ತುದಾರ, ಜಿನ್ನರ್, ಆಮದುದಾರ, ಪ್ರೆಸ್ಸರ್, ಸಂಸ್ಕರಣಕಾರ, ದಾಸ್ತಾನುಗಾರ, ವ್ಯಾಪಾರಿ ಮತ್ತು ಮಾರುಕಟ್ಟೆಯ ಕಾರ್ಯನಿರ್ವಾಹಕನೆಂದು ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಘೋಷಿಸಬಹುದಾದಂಥ ಇತರ ವ್ಯಕ್ತಿ –ಇವರು ಒಳಗೊಳ್ಳುತ್ತಾರೆ;

(22) "ಮಾರುಕಟ್ಟೆ ಉಪಪ್ರಾಂಗಣ" ಎಂದರೆ [1][ಈ ಅಧಿನಿಯಮದ][1] ಮೇರೆಗೆ ಒಂದು ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಿದ 2[ಅಥವಾ ಘೋಷಿಸಲಾಗಿದೆ ಎಂದು ಭಾವಿಸಲಾದ]2 ನಿರ್ದಿಷ್ಟ ಸ್ಥಳ;

1. 1969 ರ ಅಧಿನಿಯಮ ಸಂಖ್ಯೆ 19 ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1969 ರ ಅಧಿನಿಯಮ ಸಂಖ್ಯೆ 19 ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(23) "ಮಾರುಕಟ್ಟೆ ಪ್ರಾಂಗಣ" ಎಂದರೆ [1][ಈ ಅಧಿನಿಯಮದ][1] ಮೇರೆಗೆ ಒಂದು ಮಾರುಕಟ್ಟೆ ಉಪಪ್ರಾಂಗಣವೆಂದು ಘೋಷಿಸಿದ [2][ಅಥವಾ ಘೋಷಿಸಲಾಗಿದೆ ಎಂದು ಭಾವಿಸಲಾದ][1] ನಿರ್ದಿಷ್ಟ ಸ್ಥಳ;

1. 1969 ರ ಅಧಿನಿಯಮ ಸಂಖ್ಯೆ 19 ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1969 ರ ಅಧಿನಿಯಮ ಸಂಖ್ಯೆ 19 ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(24) "ಮಾರುಕಟ್ಟೆ ವರ್ಷ" ಎಂದರೆ [1][ಏಪ್ರಿಲ್][1] ಮೊದಲನೆ ದಿನದಂದು ಪ್ರಾರಂಭವಾಗುವ ವರ್ಷ;

1. 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-4-1992 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(25) "ಸದಸ್ಯ" ಎಂದರೆ ಒಂದು ಮಾರುಕಟ್ಟೆ ಸಮಿತಿಯ ಸದಸ್ಯ;

(26) ಮಾರುಕಟ್ಟೆಯ ಕಾರ್ಯನಿರ್ವಾಹಕನ ಸಂಬಂಧದಲ್ಲಿ "ದುರ್ನಡತೆ" ಎಂಬುದು, ಈ ಅಧಿನಿಯಮದ, ನಿಯಮಗಳ, ಉಪವಿಧಿಗಳ ಅಥವಾ ಸ್ಥಾಯೀ ಆದೇಶಗಳ ಯವುದೇ ಉಪಬಂಧಗಳಿಗೆ ವಿರುದ್ಧವಾದ ಅಥವಾ ಈ ಅಧಿನಿಯಮದ ಧ್ಯೇಯಗಳಿಗೆ ಮತ್ತು ಉದ್ದೇಶಗಳಿಗೆ ಅಸಂಗತವಾದಂಥ ಕಾರ್ಯನಿರ್ವಾಹಕನ ಯಾವುದೇ ನಡತೆಯನ್ನು ಒಳಗೊಳ್ಳುತ್ತದೆ;

(27) "ಅಧಿಸೂಚನೆ" ಎಂದರೆ, ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಅಧಿಸೂಚನೆ;

(28) "ಅಧಿಸೂಚಿತ ಕೃಷಿ ಉತ್ಪನ್ನ" ಎಂದರೆ ಯಾವ ಕೃಷಿ ಉತ್ಪನ್ನವನ್ನು ರಾಜ್ಯ ಸರ್ಕಾರವು 4ನೇ ಮತ್ತು 5ನೇ ಪ್ರಕರಣದ ಮೇರೆಗೆ ಹೊರಡಿಸಿದ ಅಧಿಸೂಚನೆಯ ಮೂಲಕ ಕೃಷಿ ಉತ್ಪನ್ನವೆಂದು ಘೋಷಿಸಿರುವುದೋ ಮತ್ತು ಯಾವುದರ ಕ್ರಯವಿಕ್ರಯವು ಮಾರುಕಟ್ಟೆ ಪ್ರದೇಶದಲ್ಲಿ ನಿಯಂತ್ರಿತವಾಗುವುದೋ ಆ ಯಾವುದೇ ಕೃಷಿ ಉತ್ಪನ್ನ;

(29) ಒಬ್ಬ ವ್ಯಾಪಾರಿಗೆ ಸಂಬಂಧಿಸಿದಂತೆ "ಅಧಿಕಕಾಲಿಕ ವ್ಯಾಪಾರ" ಎಂದರೆ,–

(i) ಅವನು ಬ್ಯಾಂಕಿನಲ್ಲಿ ಠೇವಣಿ ಇಟ್ಟಿದ್ದ ಅಥವಾ ಅವನು ಮಾರುಕಟ್ಟೆ ಸಮಿತಿಗೆ ಒದಗಿಸಿದ ಬ್ಯಾಂಕ್ ಭದ್ರತೆಯ ಮೊಬಲಗಿನ ಸಂಬಂಧದಲ್ಲಿ ಉಪವಿಧಿಗಳಿಗನುಸಾರ ಯಾವುದೇ ಕಾಲದಲ್ಲಿ ಮಾರುಕಟ್ಟೆ ಪ್ರದೇಶದಲ್ಲಿ ಕಮೀಷನ್ ಏಜೆಂಟರಿಗೆ [1][ಅಥವಾ ಮಾರಾಟಗಾರರಿಗೆ][1] ಸಂದಾಯ ಮಾಡತಕ್ಕ ಒಟ್ಟು ಮೊಬಲಗು ಕಮೀಷನ್ ಏಜೆಂಟನಿಗೆ [1][ಅಥವಾ ಮಾರಾಟಗಾರನಿಗೆ][1] ಋಣಿಯಾಗಿರಲು ಅನುಮತಿಸಲಾದ ಮಿತಿಯನ್ನು ಮೀರುವಷ್ಟು ಮಟ್ಟಿಗೆ ಸಾಲದ ಮೇಲೆ ಸರಕುಗಳನ್ನು ಕೊಂಡುಕೊಳ್ಳುವುದು;

1. 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ii) ಬಾಕಿ ಇರುವ ಮೊಬಲಗನ್ನು ಸಂದಾಯ ಮಾಡಲು ಅಥವಾ ಕೃಷಿ ಉತ್ಪನ್ನಗಳ ಸಂಬಂಧದಲ್ಲಿ ಅವುಗಳಿಗೆ ಹಕ್ಕುಳ್ಳ ವ್ಯಕ್ತಿಗಳಿಗೆ ಅವುಗಳನ್ನು ನಿಗದಿತ ದಿನಾಂಕಗಳಂದು ಬಡವಾಡೆ ಮಾಡಲು ಸಾಧ್ಯವಾಗದ ರೀತಿಯಲ್ಲಿ ವ್ಯಾಪಾರ ಮಾಡುವುದು;

(30) "ವ್ಯಕ್ತಿ" ಎಂಬುದು, ಒಂದು ಫರ್ಮು ಮತ್ತು [1][ಹಿಂದೂ ಅವಿಭಕ್ತ ಕುಟುಂಬ, ಕಂಪನಿ ಅಥವಾ ಫರ್ಮು ಅಥವಾ ಸಂಘ ಅಥವಾ ನಿಗಮಿತವಾಗಿರುವ ಅಥವಾ ನಿಗಮಿತವಾಗಿಲ್ಲದ ವ್ಯಕ್ತಿಗಳ ನಿಕಾಯ] [1] ವನ್ನು ಒಳಗೊಳ್ಳುತ್ತದೆ;

1. 1986 ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(31) "ಗೊತ್ತುಪಡಿಸಲಾದುದು" ಎಂದರೆ ಈ ಅಧಿನಿಯಮದ ಮೇರೆಗೆ ನಿಯಮಗಳ ಮೂಲಕ ಗೊತ್ತುಪಡಿಸಲಾದುದು;

[1][(31ಎ) "ಖಾಸಗಿ ಮಾರುಕಟ್ಟೆ ಪ್ರಾಂಗಣ" ಎಂದರೆ ಮಾರುಕಟ್ಟೆ ಪ್ರದೇಶದಲ್ಲಿರುವ ಮಾರುಕಟ್ಟೆ ಪ್ರಾಂಗಣವನ್ನು, ಮಾರುಕಟ್ಟೆ ಉಪ ಪ್ರಾಂಗಣವನ್ನು ಹಾಗೂ ಉಪ ಮಾರುಕಟ್ಟೆ ಪ್ರಾಂಗಣವನ್ನು ಹೊರತುಪಡಿಸಿ ಅಧಿಸೂಚಿತ ಕೃಷಿ ಉತ್ಪನ್ನದ ಮಾರಾಟ ವ್ಯವಹಾರಕ್ಕಾಗಿ ಈ ಅಧಿನಿಯಮದ ಮೇರೆಗೆ ಲೈಸೆನ್ಸನ್ನು ಹೊಂದಿರುವ ವ್ಯಕ್ತಿಯು ಮೂಲ ಸೌಲಭ್ಯಗಳನ್ನು ಅಭಿವೃದ್ಧಿಪಡಿಸಿದಂಥ, ನಿರ್ವಹಿಸಿದಂಥ ಹಾಗೂ ನಿಯಂತ್ರಿಸಿದಂಥ ಸ್ಥಳ][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(32) "ಸಂಸ್ಕರಣೆ" ಎಂದರೆ ಕಚ್ಚಾ ಕೃಷಿ ಉತ್ಪನ್ನವನ್ನು [1][ಉಪಯೋಗಕ್ಕೆ ಅಥವಾ ಬಳಕೆಗೆ][1] ಯೋಗ್ಯವನ್ನಾಗಿ ಮಾಡಲು ಒಳಪಡಿಸಿದ ಸಂಸ್ಕರಣ ಪ್ರಕ್ರಿಯೆಗಳಲ್ಲಿನ ಯಾವುದೇ ಸಂಸ್ಕರಣೆ;

1. 1986 ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(33) "ಸಂಸ್ಕರಣಕಾರ" ಎಂದರೆ ಯಾಂತ್ರಿಕ ವಿಧಾನಗಳಿಂದ ಅಧಿಸೂಚಿತ ಕೃಷಿ ಉತ್ಪನ್ನವನ್ನು ಸಂಸ್ಕರಣ ಮಾಡುವ ಯಾವನೇ ವ್ಯಕ್ತಿ;

[1][(33ಎ) "ಸಂಸ್ಕರಣೆ ಮಾಡುವುದು" ಎಂದರೆ, ಅಧಿಸೂಚಿತ ಕಚ್ಚಾ ಕೃಷಿ ಉತ್ಪನ್ನವನ್ನು ಉಪಯೋಗಕ್ಕೆ ಅಥವಾ ಬಳಕೆಗೆ ಯೋಗ್ಯವನ್ನಾಗಿ ಮಾಡಲು ಪುಡಿಮಾಡುವ, ಅರೆಯುವ, ಪೇಸ್ಟ್ ಮಾಡುವ, ತೊಗಟೆ ತೆಗೆಯುವ, ಶುದ್ಧಮಾಡುವ, ಮಾಗಿಸುವ, ಹೊಟ್ಟು ತೆಗೆಯುವ, ಅರೆ ಬೇಯಿಸುವ, ಪಾಲೀಶ್ ಮಾಡುವ, ಬೀಜ ತೆಗೆಯುವ, ಒತ್ತುವ, ಹದಗೊಳಿಸುವುದಕ್ಕೆ ಸಂಬಂಧಿಸಿದ ಒಂದು ಅಥವಾ ಅದಕ್ಕೂ ಹೆಚ್ಚಿನ ಸರಣಿ ಉಪಚಾರಗಳು ಅಥವಾ ಯಾವುದೇ ಇತರ ಕೈ ಕೆಲಸದ, ಯಾಂತ್ರಿಕ, ರಾಸಾಯನಿಕ ಅಥವಾ ಭೌತಿಕ ಉಪಚಾರ ಎಂದು ಅರ್ಥ.][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(34) "ಉತ್ಪಾದಕ" ಎಂದರೆ ತಾನೇ–

(i) ತನ್ನ ಸ್ವಂತ ಶ್ರಮದಿಂದ, ಅಥವಾ

(ii) ತನ್ನ ಕುಟುಂಬದ ಯಾವನೇ ಸದಸ್ಯನ ಶ್ರಮದಿಂದ, ಅಥವಾ

(iii) ತನ್ನ ಅಥವಾ ತನ್ನ ಕುಟುಂಬದ ಯಾವನೇ ಸದಸ್ಯನ ಮೇಲ್ವಿಚಾರಣೆಯಲ್ಲಿ ಕೂಲಿ ಕಾರ್ಮಿಕರ ಮೂಲಕ ಅಥವಾ ಹಣ ಅಥವಾ ವಸ್ತು ರೂಪದಲ್ಲಿ ಸಂದಾಯ ಮಾಡಬಹುದಾದ ಮಜೂರಿ ಮೇಲೆ, ಆದರೆ, ಉತ್ಪಾದನೆಯ ಪಾಲನ್ನು ಕೊಡದೆ ನೌಕರರ ಮೂಲಕ

– ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಉತ್ಪಾದಿಸುವ ವ್ಯಕ್ತಿ;

**ವಿವರಣೆ:–** ಈ ಖಂಡದ ಉದ್ದೇಶಕ್ಕಾಗಿ, ಉತ್ಪಾದಕರ ಸಂಘವನ್ನು, ಒಬ್ಬ ಉತ್ಪಾದಕ ಎಂದು ಭಾವಿಸತಕ್ಕದ್ದು.

[1][(35) XXX] [1]

1. 1986 ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(36) "ಸಹಕಾರ ಸಂಘಗಳ ನಿಬಂಧಕ" ಎಂಬ ಪದವು, [1][ಕರ್ನಾಟಕ][1] ರಾಜ್ಯದ ಸಹಕಾರ ಸಂಘಗಳ ನಿಬಂಧಕನಿಂದ ಅಧಿಕೃತನಾದ ಮತ್ತು ಅವನಿಗೆ ಅಧೀನನಾದ ಯಾವನೇ ಅಧಿಕಾರಿಯನ್ನು ಒಳಗೊಳ್ಳುತ್ತದೆ;

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

[1][(36ಎ) "ನೋಂದಣಿ" ಎಂದರೆ ಈ ಅಧಿನಿಯಮದ ಮೇರೆಗೆ ಮಾಡಿದ ನೋಂದಣಿ ಎಂದು ಅರ್ಥ.

(36ಬಿ) "ಆವರ್ತಕ ನಿಧಿ" ಎಂದರೆ, ಕನಿಷ್ಠ ಬೆಲೆ ಯೋಜನೆಯನ್ನು ಜಾರಿಗೊಳಿಸುವ ಉದ್ದೇಶಕ್ಕಾಗಿ 64ಬಿ ಪ್ರಕರಣದ ಮೇರೆಗೆ ಸ್ಥಾಪಿಸಿದ ಆವರ್ತಕ ನಿಧಿ ಎಂದು ಅರ್ಥ.][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(37) 'ಚಿಲ್ಲರೆ ಮಾರಾಟ' ಎಂದರೆ, ಸಂಬಂಧಿಸಿದ ಮಾರುಕಟ್ಟೆ ಪ್ರದೇಶದಲ್ಲಿ ಯಾವ ಗೊತ್ತುಪಡಿಸಿದ ಗರಿಷ್ಠ ಮಿತಿಯ ಮೇಲೆ ಮಾರುಕಟ್ಟೆ ಶುಲ್ಕವನ್ನು ಈಗಾಗಲೇ ವಿಧಿಸಲಾಗಿದೆಯೋ ಮತ್ತು ಸಂಗ್ರಹಿಸಲಾಗಿದೆಯೋ ಆ ಯಾವುದೇ ಗೊತ್ತುಪಡಿಸಿದ ಗರಿಷ್ಠ ಮಿತಿಗೆ ಒಳಪಟ್ಟು, ಮಾರುಕಟ್ಟೆ ಸಮಿತಿಯು ಉಪವಿಧಿಗಳ ಮೂಲಕ ನಿರ್ಧರಿಸಬಹುದಾದಂತೆ ಗೃಹಬಳಕೆಯ ಗ್ರಾಹಕನಿಗೆ, ಅಧಿಸೂಚಿತ ಕೃಷಿ ಉತ್ಪನ್ನದ ಅಂಥ ಪ್ರಮಾಣದ ಮಾರಾಟ ಮತ್ತು ತರುವಾಯದ ಮಾರಾಟ ಅಥವಾ ಸಂಸ್ಕರಣೆಗಾಗಿ ಅಲ್ಲ ಎಂದು ಅರ್ಥ;

(37ಎ) ಚಿಲ್ಲರೆ ವ್ಯಾಪಾರಿ ಎಂದರೆ, ಯಾವ ಅಧಿಸೂಚಿತ ಕೃಷಿ ಉತ್ಪನ್ನದ ಮೇಲೆ ಸಂಬಂಧಪಟ್ಟ ಮಾರುಕಟ್ಟೆ ಪ್ರದೇಶದಲ್ಲಿ ಈಗಾಗಲೇ ಮಾರುಕಟ್ಟೆ ಶುಲ್ಕವನ್ನು ವಿಧಿಸಲಾಗಿದೆಯೋ ಮತ್ತು ಸಂಗ್ರಹಿಸಲಾಗಿದೆಯೋ ಆ ಯಾವುದೇ ಅಧಿಸೂಚಿತ ಕೃಷಿ ಉತ್ಪನ್ನದ ಚಿಲ್ಲರೆ ಮಾರಾಟದಲ್ಲಿ ತೊಡಗಿರುವ ಮತ್ತು ಕಾಲಕಾಲಕ್ಕೆ ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಅಧಿಸೂಚಿತ ಕೃಷಿ ಉತ್ಪನ್ನದ ಅಂಥ ಪ್ರಮಾಣವನ್ನು ಮೀರದಂತೆ ಒಂದು ಬಾರಿಗೆ ದಾಸ್ತಾನು ಇಟ್ಟುಕೊಂಡಿರುವ ಒಬ್ಬ ವ್ಯಕ್ತಿ.][1]

1. 2004ರ ಅಧಿನಿಯಮ ಸಂಖ್ಯೆ 22ರ ಮೂಲಕ 14.05.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(37ಬಿ) "ಗ್ರಾಮದ ಸಂತೆ" ಎಂದರೆ ಯಾವ ಸ್ಥಳದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನಗಳ ಚಿಲ್ಲರೆ ಮಾರಾಟ ನಡೆಯುವುದೋ ಮತ್ತು ಈ ಅಧಿನಿಯಮದ, ನಿಯಮಗಳ ಮತ್ತು ಮಾರುಕಟ್ಟೆ ಸಮಿತಿಯ ಉಪ ವಿಧಿಗಳ ಹಾಗೂ ಸ್ಥಾಯಿ ಆದೇಶಗಳ ಉಪಬಂಧಗಳಿಗನುಸಾರ ಮಾರುಕಟ್ಟೆ ಕಾರ್ಯನಿರ್ವಾಹಕನು ಕಾರ್ಯನಿರ್ವಹಿಸುವುದಿಲ್ಲವೋ ಆ ಸ್ಥಳ;] [1]

1. 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(38) "ನಿಯಮಗಳು" ಎಂದರೆ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳು;

[1][(38ಎ) "ಅನುಸೂಚಿ" ಎಂದರೆ ಈ ಅಧಿನಿಯಮದ ಅನುಸೂಚಿ;] [1]

1. 1980 ರ ಅಧಿನಿಯಮ ಸಂಖ್ಯೆ 17 ರ ಮೂಲಕ 30-6-1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(38ಬಿ) "ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು" ಎಂದರೆ ತತ್ಕಾಲದಲ್ಲಿ ಜಾರಿಯಲ್ಲಿರುವ ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950ರಲ್ಲಿ ಮತ್ತು ಸಂವಿಧಾನ (ಅನುಸೂಚಿತ ಪಂಗಡಗಳು) ಆದೇಶ, 1950ರಲ್ಲಿ ಕರ್ನಾಟಕ ರಾಜ್ಯಕ್ಕೆ ಸಂಬಂಧಪಟ್ಟಂತೆ ನಿರ್ದಿಷ್ಟಪಡಿಸಲಾದ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು;] [1]

1. 2002ರ ಅಧಿನಿಯಮ ಸಂಖ್ಯೆ 13ರ ಮೂಲಕ 11-4-2002ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(39) "ಕಾರ್ಯದರ್ಶಿ" ಎಂದರೆ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿ ಮತ್ತು ಅದರಲ್ಲಿ ಮಾರುಕಟ್ಟೆ ಸಮಿತಿಯ ಅಡಿಷನಲ್ ಕಾರ್ಯದರ್ಶಿಯ ಅಥವಾ ಸಹಾಯಕ ಕಾರ್ಯದರ್ಶಿಯ ಮತ್ತು ಕಾರ್ಯದರ್ಶಿಯ ಅಧಿಕಾರ ಚಲಾಯಿಸಲು ಮತ್ತು ಕಾರ್ಯ ನಿರ್ವಹಿಸಲು ಕೃಷಿ ಮಾರುಕಟ್ಟೆ ನಿರ್ದೇಶಕನು ಅಧಿಕೃತಗೊಳಿಸಿದ ಯಾವನೇ ಅಧಿಕಾರಿ

– ಇವರು ಸೇರುತ್ತಾರೆ;] [1]

1. 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(40) "ಮಾರಾಟಗಾರ" ಎಂದರೆ ಸರಕುಗಳನ್ನು ಮಾರುವ ಅಥವಾ ಮಾರಾಟ ಮಾಡಲು ಒಪ್ಪುವ ವ್ಯಕ್ತಿ;

(41) "ಸಾಲ ತೀರಿಸಲು ಸಮರ್ಥನಾದವ" ಎಂದರೆ ದಿವಾಳಿಯಲ್ಲದ ವ್ಯಕ್ತಿ;

(42) "ಸ್ಥಾಯೀ ಆದೇಶ" ಎಂದರೆ 151 ನೇ ಪ್ರಕರಣದ ಮೇರೆಗೆ ಮಾಡಲಾದ ಸ್ಥಾಯೀ ಆದೇಶ;

(43) "ದಾಸ್ತಾನುಗಾರ" ಎಂದರೆ ಲೈಸನ್ಸು ಪಡೆದ ಕಮೀಷನ್ ಏಜೆಂಟನ ಹೊರತಾಗಿ, ಇತರ ವ್ಯಕ್ತಿಗಳಿಗೆ ಸಂಬಂಧಿಸಿದ ಸರಕುಗಳನ್ನು ದಾಸ್ತಾನಿಟ್ಟುಕೊಳ್ಳುವ ವ್ಯಕ್ತಿ ಮತ್ತು ಇದು ಉಗ್ರಾಣ ಪಾಲಕನನ್ನು ಒಳಗೊಳ್ಳುತ್ತದೆ;

(44) "ಉಪ ಸಮಿತಿ" ಎಂದರೆ ಮಾರುಕಟ್ಟೆ ಸಮಿತಿಯ ಉಪಸಮಿತಿ;

(45) "ಉಪ ಮಾರುಕಟ್ಟೆ" ಎಂದರೆ [1][ಈ ಅಧಿನಿಯಮದ][1] ಮೇರೆಗೆ ಉಪ ಮಾರುಕಟ್ಟೆ ಎಂದು ಘೋಷಿಸಲಾದ [2][ಅಥವಾ ಘೋಷಿಸಲಾಗಿದೆಯೆಂದು ಭಾವಿಸಲಾದ][2] ನಿರ್ದಿಷ್ಟ ಪ್ರದೇಶ;

1. 1969 ರ ಅಧಿನಿಯಮ ಸಂಖ್ಯೆ 19 ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1969 ರ ಅಧಿನಿಯಮ ಸಂಖ್ಯೆ 19 ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(46) "ಉಪ ಮಾರುಕಟ್ಟೆ ಪ್ರಾಂಗಣ" ಎಂದರೆ, [1][ಈ ಅಧಿನಿಯಮದ][1] ಮೇರೆಗೆ ಒಂದು ಉಪ ಮಾರುಕಟ್ಟೆ ಪ್ರದೇಶವೆಂದು ಘೋಷಿಸಲಾದ [2][ಅಥವಾ ಘೋಷಿಸಲಾಗಿದೆಯೆಂದು ಭಾವಿಸಲಾದ][2] ನಿರ್ದಿಷ್ಟ ಸ್ಥಳ;

1. 1969 ರ ಅಧಿನಿಯಮ ಸಂಖ್ಯೆ 19 ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1969 ರ ಅಧಿನಿಯಮ ಸಂಖ್ಯೆ 19 ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(46ಎ) "ಸ್ಥಳೀಯ ವಿನಿಮಯ ಕೇಂದ್ರ (ಸ್ಪಾಟ್ ಎಕ್ಸ್ಚೇಂಜ್)" ಎಂದರೆ, 131ಡಿ ಪ್ರಕರಣದ ಮೇರೆಗೆ ಲೈಸೆನ್ಸು ನೀಡಲಾದ ವಿದ್ಯುನ್ಮಾನ ಮಾಧ್ಯಮದ ಮೂಲಕ ಅಧಿಸೂಚಿತ ಕೃಷಿ ಉತ್ಪನ್ನದ ವ್ಯಾಪಾರಕ್ಕಾಗಿ ಸ್ಥಾಪಿಸಿದ ವಿನಿಮಯ ಕೇಂದ್ರ ಎಂದು ಅರ್ಥ.][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(47) XXX][1]

1. 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(48) "ವ್ಯಾಪಾರಿ" ಎಂದರೆ ಗೃಹಬಳಕೆಯ ಉದ್ದೇಶದ ಹೊರತಾಗಿ, ಮಾರಾಟ, ಸಂಸ್ಕರಣ, ತಯಾರಿಕೆ ಅಥವಾ ಇತರ ಯಾವುದೇ ಉದ್ದೇಶಗಳಿಗಾಗಿ ತನಗಾಗಿ ಅಥವಾ ಒಬ್ಬ ಅಥವಾ ಒಬ್ಬರಿಗಿಂತ ಹೆಚ್ಚು ವ್ಯಕ್ತಿಗಳ ಏಜೆಂಟನಾಗಿ ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಖರೀದಿಸುವ ವ್ಯಕ್ತಿ;

(49) "ವಾಹನ" ಎಂಬುದು, ದೋಣಿ ಅಥವಾ ಇತರ ನೌಕೆ ಅಥವಾ ಯಾವುದೇ ಬಗೆಯ ಸಾಗಣೆ ವಾಹನವನ್ನು ಒಳಗೊಳ್ಳುತ್ತದೆ;

(50) "ಉಗ್ರಾಣ" ಎಂದರೆ, ಠೇವಣಿದಾರರ ಪರವಾಗಿ ಕೃಷಿ ಉತ್ಪನ್ನ ಸರಕುಗಳನ್ನು ಸಂಗ್ರಹಿಸುವ ಉದ್ದೇಶಕ್ಕಾಗಿ ಉಪಯೋಗಿಸುತ್ತಿರುವ ಅಥವಾ ಉಪಯೋಗಿಸಬಹುದಾದ ಯಾವುದೇ ಕಟ್ಟಡ, ರಚನೆ ಅಥವಾ ಇತರ ಸಂರಕ್ಷಿತ ಆವರಣ, ಆದರೆ ಅದು ಹೋಟೆಲು ಮತ್ತು ರೈಲ್ವೆ ಸ್ಟೇಷನ್‌ಗಳ ಸಾಮಾನಿಡುವ ಕೋಣೆಗಳನ್ನು ಮತ್ತು ಸಾರ್ವಜನಿಕ ವಾಹನಗಳ ಆವರಣಗಳನ್ನು ಮತ್ತು ಅದೇ ಬಗೆಯ ಸ್ಥಳಗಳನ್ನು ಒಳಗೊಳ್ಳುವುದಿಲ್ಲ;

(51) "ತೂಕ ಮಾಡುವುದು" ಎಂಬುದು, ಎಣಿಕೆ ಮಾಡುವುದು ಅಥವಾ ಅಳತೆ ಮಾಡುವುದನ್ನು ಒಳಗೊಳ್ಳುತ್ತದೆ;

(52) "ಪ್ರಾಂಗಣ" ಎಂಬುದು, ಮಾರುಕಟ್ಟೆ ಪ್ರಾಂಗಣ, ಮಾರುಕಟ್ಟೆ ಉಪಪ್ರಾಂಗಣ ಮತ್ತು ಉಪ ಮಾರುಕಟ್ಟೆ ಪ್ರಾಂಗಣವನ್ನು ಒಳಗೊಳ್ಳುತ್ತದೆ.

## ಅಧ್ಯಾಯ –II

## ಮಾರುಕಟ್ಟೆಗಳ ಸ್ಥಾಪನೆ

**3. ನಿರ್ದಿಷ್ಟ ಪ್ರದೇಶದಲ್ಲಿ ನಿರ್ದಿಷ್ಟ ಕೃಷಿ ಉತ್ಪನ್ನದ ಕ್ರಯವಿಕ್ರಯವನ್ನು ನಿಯಂತ್ರಿಸುವ ಉದ್ದೇಶದ ಅಧಿಸೂಚನೆ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ಸ್ಥಳದಲ್ಲಿ, ನಿರ್ದಿಷ್ಟ ಕೃಷಿ ಉತ್ಪನ್ನದ ಕ್ರಯವಿಕ್ರಯವನ್ನು ನಿಯಂತ್ರಿಸುವ ತನ್ನ ಉದ್ದೇಶವನ್ನು ಆ ಅಧಿಸೂಚನೆಯ ಮೂಲಕ ಘೋಷಿಸಬಹುದು. ಆ ಅಧಿಸೂಚನೆಯನ್ನು ಅಂಥ ಪ್ರದೇಶದಲ್ಲಿ ಪ್ರಸಾರವಾಗುವ ಕನ್ನಡ ವೃತ್ತಪತ್ರಿಕೆಯಲ್ಲಿ ಪ್ರಕಟಿಸಬಹುದು.

(2) ಅಧಿಸೂಚನೆಯಲ್ಲಿ ನಿರ್ದಿಷ್ಟ ಪಡಿಸಬಹುದಾದ, ಮೂವತ್ತು ದಿನಗಳಿಗೆ ಮೀರದ ಅವಧಿಯೊಳಗೆ ರಾಜ್ಯ ಸರ್ಕಾರಕ್ಕೆ ಬರಬಹುದಾದ ಯಾವುವೇ ಆಕ್ಷೇಪಣೆಗಳು ಅಥವಾ ಸಲಹೆಗಳನ್ನು ರಾಜ್ಯಸರ್ಕಾರವು ಪರಿಗಣಿಸುತ್ತದೆಯೆಂದು ಆ ಅಧಿಸೂಚನೆಯಲ್ಲಿ ತಿಳಿಸಿರತಕ್ಕದ್ದು.

**4. ಮಾರುಕಟ್ಟೆ ಪ್ರದೇಶದ ಘೋಷಣೆ ಮತ್ತು ಅದರಲ್ಲಿ ನಿರ್ದಿಷ್ಟಪಡಿಸಿದ ಕೃಷಿ ಉತ್ಪನ್ನದ ಕ್ರಯವಿಕ್ರಯದ ನಿಯಂತ್ರಣ.–** 3ನೇ ಪ್ರಕರಣದ ಮೇರೆಗೆ ಹೊರಡಿಸಲಾದ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ಅವಧಿಯು ಮುಕ್ತಾಯವಾದ ತರುವಾಯ ಮತ್ತು ಅಂಥ ಮುಕ್ತಾಯಕ್ಕೆ ಮೊದಲು ಬಂದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಪರಿಶೀಲಿಸಿದ ತರುವಾಯ, ರಾಜ್ಯ ಸರ್ಕಾರವು ಮತ್ತೊಂದು ಅಧಿಸೂಚನೆಯ ಮೂಲಕ, 3ನೇ ಪ್ರಕರಣದ ಮೇರೆಗೆ ಹೊರಡಿಸಲಾದ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ಯಾವುದೇ ಪ್ರದೇಶವನ್ನು ಅಥವಾ ಅದರ ಯಾವುದೇ ಭಾಗವನ್ನು ಒಂದು ಮಾರುಕಟ್ಟೆ ಪ್ರದೇಶವೆಂಬುದಾಗಿ ಘೋಷಿಸಬಹುದು ಮತ್ತು 3ನೇ ಪ್ರಕರಣದ ಮೇರೆಗೆ ಹೊರಡಿಸಲಾದ ಅಧಿಸೂಚನೆಯಲ್ಲಿ ನಿರ್ದಿಷ್ಟ ಪಡಿಸಲಾದ ಎಲ್ಲಾ ಬಗೆಯ ಕೃಷಿ ಉತ್ಪನ್ನಗಳನ್ನು ಅಥವಾ ಯಾವುದೇ ಬಗೆಯ ಕೃಷಿ ಉತ್ಪನ್ನಗಳನ್ನು ಅಂಥ ಮಾರುಕಟ್ಟೆಯ ಪ್ರದೇಶದಲ್ಲಿ ಈ ಅಧಿನಿಯಮದ ಮೇರೆಗೆ ನಿಯಂತ್ರಿಸತಕ್ಕುದೆಂದು ಘೋಷಿಸಬಹುದು. ಈ ಪ್ರಕರಣದ ಮೇರೆಗಿನ ಅಧಿಸೂಚನೆಯನ್ನು ಆ ಪ್ರದೇಶದಲ್ಲಿ ಪ್ರಸಾರವಾಗುವ ಕನ್ನಡದ ವೃತ್ತಪತ್ರಿಕೆಯಲ್ಲಿ ಪ್ರಕಟಿಸತಕ್ಕದ್ದು:

[1][ಪರಂತು, ಮಾರುಕಟ್ಟೆ ಪ್ರದೇಶವು ತಾಲ್ಲೂಕು ಪ್ರದೇಶಕ್ಕಿಂತ ಕಡಿಮೆ ಇರತಕ್ಕುದಲ್ಲ ಮತ್ತು ಜಿಲ್ಲಾ ಪ್ರದೇಶಕ್ಕಿಂತ ಹೆಚ್ಚಾಗಿರತಕ್ಕದ್ದಲ್ಲ:

ಮತ್ತೂ ಪರಂತು, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 1991 ರ ಪ್ರಾರಂಭದ ದಿನಾಂಕದಂದು ಯಾವುದೇ ಮಾರುಕಟ್ಟೆ ಪ್ರದೇಶವು ಜಿಲ್ಲಾ ಪ್ರದೇಶಕ್ಕಿಂತ ಹೆಚ್ಚಾಗಿದ್ದರೆ ಅಥವಾ ತಾಲ್ಲೂಕು ಪ್ರದೇಶಕ್ಕಿಂತ ಕಡಿಮೆ ಇದ್ದರೆ ಅಂಥ ಮಾರುಕಟ್ಟೆ ಪ್ರದೇಶವು ಜಿಲ್ಲಾ ಪ್ರದೇಶಕ್ಕಿಂತ ಹೆಚ್ಚಾಗಿರದಂತೆ ಅಥವಾ ತಾಲ್ಲೂಕು ಪ್ರದೇಶಕ್ಕಿಂತ ಕಡಿಮೆ ಇರದಂತೆ ಅದನ್ನು ಬದಲಾಯಿಸತಕ್ಕದ್ದು ಅಥವಾ ಅಂಥ ಮಾರುಕಟ್ಟೆ ಪ್ರದೇಶದ ಮಾರುಕಟ್ಟೆ ಸಮಿತಿಗಳನ್ನು ಸಮ್ಮಿಲನಗೊಳಿಸತಕ್ಕದ್ದು ಮತ್ತು 5ನೇ, 412ನೇ ಮತ್ತು 144ನೇ ಪ್ರಕರಣಗಳ ಉಪಬಂಧಗಳು ಎಲ್ಲೆಗಳ ಅಂಥ ಬದಲಾವಣೆಗೆ ಮತ್ತು ಸಮ್ಮಿಲನ ಕ್ರಮಕ್ಕೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.] [1]

1. 1991 ರ ಅಧಿನಿಯಮ ಸಂಖ್ಯೆ16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**5. ಮಾರುಕಟ್ಟೆ ಪ್ರದೇಶದ ಮತ್ತು ನಿಯಂತ್ರಿತ ಕೃಷಿ ಉತ್ಪನ್ನ ಬಾಬುಗಳ ಬದಲಾವಣೆ.**– 3ನೇ ಮತ್ತು 4ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಕಾರ್ಯವಿಧಾನಕ್ಕೊಳಪಟ್ಟು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ಯಾವುದೇ ಕಾಲದಲ್ಲಿ ಯಾವುದೇ ಮಾರುಕಟ್ಟೆ ಪ್ರದೇಶದಿಂದ ಯಾವುದೇ ಪ್ರದೇಶವನ್ನು ಹೊರತುಪಡಿಸಬಹುದು ಅಥವಾ ಅದರಲ್ಲಿ ಒಂದು ಹೆಚ್ಚಿನ ಪ್ರದೇಶವನ್ನು ಸೇರಿಸಬಹುದು ಅಥವಾ ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ ಯಾವುದೇ ಕೃಷಿ ಉತ್ಪನ್ನದ ಕ್ರಯ ವಿಕ್ರಯದ ನಿಯಂತ್ರಣವು ಕೊನೆಗೊಳ್ಳತಕ್ಕದ್ದೆಂದು ಅಥವಾ (ಈವರೆಗೆ ನಿಯಂತ್ರಿಸದಿರುವ) ಯಾವುದೇ ಕೃಷಿ ಉತ್ಪನ್ನದ ಕ್ರಯ ವಿಕ್ರಯವನ್ನು ಅಂಥ ಮಾರುಕಟ್ಟೆ ಪ್ರದೇಶದಲ್ಲಿ ನಿಯಂತ್ರಿಸತಕ್ಕದ್ದೆಂದು ಘೋಷಿಸಬಹುದು.

**6. ಮಾರುಕಟ್ಟೆಗಳು, ಮಾರುಕಟ್ಟೆ ಪ್ರಾಂಗಣಗಳು, ಮಾರುಕಟ್ಟೆ ಉಪಪ್ರಾಂಗಣಗಳು, ಉಪ ಮಾರುಕಟ್ಟೆಗಳು ಮತ್ತು ಉಪಮಾರುಕಟ್ಟೆ ಪ್ರಾಂಗಣಗಳು.**– (1) (ಎ) ಪ್ರತಿಯೊಂದು ಮಾರುಕಟ್ಟೆ ಪ್ರದೇಶಕ್ಕಾಗಿ,–

(i) ಒಂದು ಮಾರುಕಟ್ಟೆ ಇರತಕ್ಕದ್ದು; ಮತ್ತು

(ii) ಒಂದು ಅಥವಾ ಒಂದಕ್ಕಿಂತ ಹೆಚ್ಚು ಉಪಮಾರುಕಟ್ಟೆಗಳಿರಬಹುದು;

(ಬಿ) ಪ್ರತಿಯೊಂದು ಮಾರುಕಟ್ಟೆಗಾಗಿ,–

(i) ಒಂದು ಮಾರುಕಟ್ಟೆ ಪ್ರಾಂಗಣವಿರತಕ್ಕದ್ದು; ಮತ್ತು

(ii) ಒಂದು ಅಥವಾ ಒಂದಕ್ಕಿಂತ ಹೆಚ್ಚು ಮಾರುಕಟ್ಟೆ ಉಪ ಪ್ರಾಂಗಣಗಳಿರಬಹುದು;

(ಸಿ) ಪ್ರತಿಯೊಂದು ಉಪಮಾರುಕಟ್ಟೆಗೆ [1][ಒಂದು ಅಥವಾ ಒಂದಕ್ಕಿಂತ ಹೆಚ್ಚು ಉಪಮಾರುಕಟ್ಟೆ ಪ್ರಾಂಗಣ][1] ಗಳಿರಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(1ಎ) ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ ಮಾರುಕಟ್ಟೆ ಸಮಿತಿಯನ್ನು ಹೊರತುಪಡಿಸಿ ಖಾಸಗಿ ಮಾರುಕಟ್ಟೆ ಲೈಸೆನ್ಸುದಾರನಾದ ಅಥವಾ ರೈತ–ಗ್ರಾಹಕ ಮಾರುಕಟ್ಟೆ ಲೈಸನ್ಸುದಾರನಾದ ವ್ಯಕ್ತಿಯು ನಿರ್ವಹಿಸುವ ಒಂದು ಅಥವಾ ಹೆಚ್ಚು ಖಾಸಗಿ ಮಾರುಕಟ್ಟೆ ಪ್ರಾಂಗಣ ಅಥವಾ ರೈತ– ಗ್ರಾಹಕ ಮಾರುಕಟ್ಟೆ ಪ್ರಾಂಗಣ ಇರಬಹುದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) (ಎ) [1][ಕೃಷಿ ಮಾರುಕಟ್ಟೆ ನಿರ್ದೇಶಕನು,][1] 4ನೇ ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಹೊರಡಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ ಅಧಿಸೂಚನೆಯ ಮೂಲಕ, ಮಾರುಕಟ್ಟೆ ಪ್ರದೇಶದಲ್ಲಿನ ಯಾವುದೇ ನಿರ್ದಿಷ್ಟ ಪ್ರದೇಶವನ್ನು ಮಾರುಕಟ್ಟೆ ಪ್ರದೇಶವೆಂದು ಘೋಷಿಸತಕ್ಕದ್ದು ಮತ್ತು ಅವನು ಅದೇ ಅಧಿಸೂಚನೆಯ ಮೂಲಕ ಅಥವಾ ತರುವಾಯದ ಯಾವುದೇ ಅಧಿಸೂಚನೆಯ ಮೂಲಕ ಮಾರುಕಟ್ಟೆ ಪ್ರದೇಶದಲ್ಲಿನ ಯಾವುದೇ ಇತರ ನಿರ್ದಿಷ್ಟ ಪ್ರದೇಶವನ್ನು ಒಂದು ಉಪ ಮಾರುಕಟ್ಟೆ ಎಂದು ಘೋಷಿಸಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] (ಎ) ಖಂಡದ ಮೇರೆಗಿನ ಅಧಿಸೂಚನೆಯ ಮೂಲಕ, ಮಾರುಕಟ್ಟೆಯಲ್ಲಿ [2][XXX][2] ನಿರ್ದಿಷ್ಟಪಡಿಸಲಾದ ಒಂದು ಸ್ಥಳವನ್ನು ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ಅಧಿಸೂಚಿತ ಕೃಷಿ ಉತ್ಪನ್ನದ ನಿಯಂತ್ರಿತ ಮಾರುಕಟ್ಟೆಯ ಮಾರುಕಟ್ಟೆ ಪ್ರಾಂಗಣವೆಂದು ಕೂಡ ಘೋಷಿಸತಕ್ಕದ್ದು ಮತ್ತು ಅವನು, ಅದೇ ಅಧಿಸೂಚನೆಯ ಅಥವಾ ತರುವಾಯದ ಯಾವುದೇ ಅಧಿಸೂಚನೆಯ ಅಥವಾ ಯಾವುವೇ ಅಧಿಸೂಚನೆಗಳ ಮೂಲಕ ಸಂದರ್ಭಾನುಸಾರ, [2][XXX][2] ಮಾರುಕಟ್ಟೆ ಪ್ರದೇಶದಲ್ಲಿಯ [3][ನಿರ್ದಿಷ್ಟಪಡಿಸಲಾದ ಯಾವುದೇ ಇತರ ಪ್ರದೇಶವನ್ನು][3] ಅಥವಾ ಪ್ರದೇಶಗಳನ್ನು ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ಅಧಿಸೂಚಿತ ಕೃಷಿ ಉತ್ಪನ್ನದ ನಿಯಂತ್ರಿತ ಮಾರಾಟದ ಮಾರುಕಟ್ಟೆ ಉಪಪ್ರಾಂಗಣವೆಂದು ಅಥವಾ ಉಪಪ್ರಾಂಗಣಗಳೆಂದು ಘೋಷಿಸಬಹುದು.

1. 1986ರ ಅಧಿನಿಯಮ ಸಂಖ್ಯೆ35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1969ರ ಅಧಿನಿಯಮ ಸಂಖ್ಯೆ19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1969ರ ಅಧಿನಿಯಮ ಸಂಖ್ಯೆ19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) (ಎ) ಖಂಡದ ಮೇರೆಗೆ ಅಧಿಸೂಚನೆಯ ಮೂಲಕ ಯಾವುದೇ ನಿರ್ದಿಷ್ಟ ಪ್ರದೇಶವನ್ನು ಉಪ ಮಾರುಕಟ್ಟೆಯೆಂದು ಘೋಷಿಸಲಾಗಿರುವಲ್ಲಿ, [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] ಅದೇ ಅಧಿಸೂಚನೆಯ ಮೂಲಕ ಉಪ ಮಾರುಕಟ್ಟೆಯಲ್ಲಿನ ನಿರ್ದಿಷ್ಟ ಪ್ರದೇಶವನ್ನು ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ [2][XXX][2] ಅಧಿಸೂಚಿತ ಕೃಷಿ ಉತ್ಪನ್ನದ ನಿಯಂತ್ರಿತ ಮಾರಾಟದ ಉಪ ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸತಕ್ಕದ್ದು:

1. 1986ರ ಅಧಿನಿಯಮ ಸಂಖ್ಯೆ35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1969ರ ಅಧಿನಿಯಮ ಸಂಖ್ಯೆ19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

ಪರಂತು, ಮಾರುಕಟ್ಟೆ ಅಥವಾ ಸಂದರ್ಭಾನುಸಾರ ಉಪ ಮಾರುಕಟ್ಟೆಯ ಪರಿಮಿತಿಗಳು ಮಾರುಕಟ್ಟೆ ಪ್ರಾಂಗಣ ಅಥವಾ ಸಂದರ್ಭಾನುಸಾರ ಉಪಮಾರುಕಟ್ಟೆ ಪ್ರಾಂಗಣ ಇರುವ ನಗರದ, ಪಟ್ಟಣದ ಅಥವಾ ಗ್ರಾಮ ಪ್ರದೇಶದ ಪರಿಮಿತಿಗಳನ್ನು ಮೀರಿದ ಯಾವುದೇ ಪ್ರದೇಶವನ್ನು ಒಳಗೊಳ್ಳತಕ್ಕದ್ದಲ್ಲ:

[1][ಮತ್ತೂ ಪರಂತು, ಯಾವುದೇ ಮಾರುಕಟ್ಟೆ ಪ್ರದೇಶದ ಸಂಬಂಧದಲ್ಲಿ, ಮಾರುಕಟ್ಟೆ ಅಥವಾ ಉಪಮಾರುಕಟ್ಟೆ ಎಂದು ಘೋಷಿಸಲು ಪ್ರಸ್ತಾವಿಸಿದ, ನಗರದ, ಪಟ್ಟಣದ ಅಥವಾ ಗ್ರಾಮ ಪ್ರದೇಶದ ಪರಿಮಿತಿಗಳೊಳಗೆ ಮಾರುಕಟ್ಟೆ ಪ್ರಾಂಗಣ ಅಥವಾ ಉಪಮಾರುಕಟ್ಟೆ ಪ್ರಾಂಗಣಕ್ಕಾಗಿ ಸೂಕ್ತ ಸ್ಥಳ ದೊರಕುತ್ತಿಲ್ಲವೆಂದು [2][ಕೃಷಿ ಮಾರುಕಟ್ಟೆ ನಿರ್ದೇಶಕನು][2] ಅಭಿಪ್ರಾಯಪಟ್ಟರೆ, ನಗರದ, ಪಟ್ಟಣದ ಅಥವಾ ಗ್ರಾಮದ ಪರಿಮಿತಿಗಳ ಹೊರಗಿರುವ ಒಂದು ಅಥವಾ ಹೆಚ್ಚು ಗ್ರಾಮಗಳು ಸೇರಿದ ಪ್ರದೇಶವನ್ನು ಮಾರುಕಟ್ಟೆ ಅಥವಾ ಉಪಮಾರುಕಟ್ಟೆ ಎಂದು ಅವನು ಘೋಷಿಸಬಹುದು ಮತ್ತು ಯಾವುದೇ ಅಂಥ ಗ್ರಾಮದಲ್ಲಿಯ ಯಾವುದೇ ಸ್ಥಳವನ್ನು ಅಂಥ ಮಾರುಕಟ್ಟೆಯ ಅಥವಾ ಉಪ ಮಾರುಕಟ್ಟೆಯ ಮಾರುಕಟ್ಟೆ ಪ್ರಾಂಗಣ ಅಥವಾ ಉಪ ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಬಹುದು.][1]

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ಡಿ) ಕೃಷಿ ಮಾರುಕಟ್ಟೆ ನಿರ್ದೇಶಕನು, ಅಧಿಸೂಚನೆಯ ಮೂಲಕ, 72ಸಿ ಪ್ರಕರಣದ ಮೇರೆಗೆ ಲೈಸನ್ಸು ನೀಡಿದ ಮಾರುಕಟ್ಟೆ ಪ್ರದೇಶದಲ್ಲಿರುವ ಪ್ರದೇಶವನ್ನು, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅಧಿಸೂಚಿತ ಕೃಷಿ ಉತ್ಪನ್ನಗಳ ಮಾರಾಟಕ್ಕಾಗಿ ಖಾಸಗಿ ಮಾರುಕಟ್ಟೆ ಪ್ರಾಂಗಣವೆಂದು ಅಥವಾ ಸಂದರ್ಭಾನುಸಾರ, ರೈತ–ಗ್ರಾಹಕ ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಬಹುದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(2ಎ) 154ನೇ ಪ್ರಕರಣದ (1)ನೇ ಉಪಪ್ರಕರಣದಿಂದ ನಿರಸಿತವಾದ ಯಾವುದೇ ಅಧಿನಿಯಮಿತಿಯ ಮೇರೆಗೆ ಘೋಷಿಸಲಾದ ಯಾವುದೇ ಮಾರುಕಟ್ಟೆಯ ಸಂಬಂಧದಲ್ಲಿ [2][ಕೃಷಿ ಮಾರುಕಟ್ಟೆ ನಿರ್ದೇಶಕನು][2] ಈ ಅಧಿನಿಯಮವು ಪ್ರಾರಂಭವಾದ ಕೂಡಲೇ ಸಾಧ್ಯವಾದಷ್ಟು ಬೇಗನೆ, ಮತ್ತು (2) ನೇ ಉಪ ಪ್ರಕರಣದ ಉಪಬಂಧಗಳಿಗೊಳಪಟ್ಟು, ಅಂಥ ಮಾರುಕಟ್ಟೆ ಪ್ರದೇಶದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಪ್ರದೇಶವನ್ನು ಮಾರುಕಟ್ಟೆಯೆಂದು ಮತ್ತು ಅಂಥ ಮಾರುಕಟ್ಟೆ ಪ್ರದೇಶದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಇತರ ಪ್ರದೇಶವನ್ನು ಉಪಮಾರುಕಟ್ಟೆಯೆಂದು ಮತ್ತು ಮಾರುಕಟ್ಟೆಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು ಮಾರುಕಟ್ಟೆ ಪ್ರಾಂಗಣವೆಂದು ಮತ್ತು ಯಾವುದೇ ಇತರ ಸ್ಥಳ ಅಥವಾ ಸ್ಥಳಗಳನ್ನು ಮಾರುಕಟ್ಟೆ ಉಪಪ್ರಾಂಗಣ ಅಥವಾ ಮಾರುಕಟ್ಟೆ ಉಪಪ್ರಾಂಗಣಗಳೆಂದು, ಹಾಗೂ ಉಪಮಾರುಕಟ್ಟೆಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು ಉಪಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಬಹುದು.][1]

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) 3ನೇ ಮತ್ತು 4ನೇ ಪ್ರಕರಣಗಳಲ್ಲಿ ಗೊತ್ತುಪಡಿಸಿದ ಕಾರ್ಯವಿಧಾನಕ್ಕೊಳಪಟ್ಟು [1][ಕೃಷಿ ಮಾರುಕಟ್ಟೆ ನಿರ್ದೇಶಕನು][1], ಅಧಿಸೂಚನೆಯ ಮೂಲಕ ಯಾವುದೇ ಕಾಲದಲ್ಲಿ [2][ಯಾವುದೇ ಮಾರುಕಟ್ಟೆ ಅಥವಾ ಉಪಮಾರುಕಟ್ಟೆ ಅಥವಾ ಯಾವುದೇ ಮಾರುಕಟ್ಟೆ ಪ್ರಾಂಗಣವನ್ನು ಅಥವಾ ಮಾರುಕಟ್ಟೆ ಉಪಪ್ರಾಂಗಣವನ್ನು ಅಥವಾ ಉಪಮಾರುಕಟ್ಟೆ ಪ್ರಾಂಗಣವನ್ನು ಬದಲಾಯಿಸಬಹುದು ಅಥವಾ][2] ಯಾವುದೇ ಮಾರುಕಟ್ಟೆ ಅಥವಾ ಉಪ ಮಾರುಕಟ್ಟೆಯ ಯಾವುದೇ ಪ್ರದೇಶವನ್ನು ಅಥವಾ ಯಾವುದೇ ಮಾರುಕಟ್ಟೆ ಪ್ರಾಂಗಣ, ಮಾರುಕಟ್ಟೆ ಉಪಪ್ರಾಂಗಣ ಅಥವಾ ಉಪ ಮಾರುಕಟ್ಟೆ ಪ್ರಾಂಗಣದಿಂದ ಯಾವುದೇ ಸ್ಥಳವನ್ನು ಹೊರತು ಪಡಿಸಬಹುದು ಅಥವಾ (2) ನೇ ಉಪ ಪ್ರಕರಣದ [3][ಪರಂತುಕ][3] ಗಳಿಗೊಳಪಟ್ಟು ಸಂದರ್ಭಾನುಸಾರ ಅವುಗಳಿಗೆ ಹೆಚ್ಚಿನ ಪ್ರದೇಶವನ್ನು ಅಥವಾ ಸ್ಥಳವನ್ನು ಸೇರಿಸಬಹುದು ಅಥವಾ ಯಾವುದೇ ಮಾರುಕಟ್ಟೆ ಪ್ರಾಂಗಣ ಅಥವಾ ಮಾರುಕಟ್ಟೆ ಉಪಪ್ರಾಂಗಣ ಅಥವಾ ಉಪಮಾರುಕಟ್ಟೆ ಪ್ರಾಂಗಣದಲ್ಲಿ ಯಾವುದೇ ಅಧಿಸೂಚಿತ ಕೃಷಿ ಉತ್ಪನ್ನದ ನಿಯಂತ್ರಿತ ಕ್ರಯ ವಿಕ್ರಯವು ಕೊನೆಗೊಳ್ಳತಕ್ಕದ್ದೆಂದು ಅಥವಾ ಯಾವುದೇ ಅಧಿಸೂಚಿತ ಕೃಷಿ ಉತ್ಪನ್ನವನ್ನು ಯಾವುದೇ ಅಂಥ ಪ್ರಾಂಗಣ ಅಥವಾ ಉಪ ಪ್ರಾಂಗಣದಲ್ಲಿಯ ಕ್ರಯವಿಕ್ರಯದ ನಿಯಂತ್ರಣದಲ್ಲಿ ಸೇರಿಸತಕ್ಕದ್ದೆಂದು ನಿರ್ದೇಶಿಸಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**ವಿವರಣೆ:–** ಈ ಪ್ರಕರಣದಲ್ಲಿ "ಸ್ಥಳ" ಎಂಬ ಪದವು, ಮಾರುಕಟ್ಟೆ ಪ್ರದೇಶದ ಮಾರುಕಟ್ಟೆ ಸಮಿತಿಯಲ್ಲಿ ನಿಹಿತವಾಗಿರಲಿ ಅಥವಾ ನಿಹಿತವಾಗಿಲ್ಲದಿರಲಿ, ಯಾವುದೇ ರಚನೆ, ಆವರಣ, ಖಾಲಿ ಸ್ಥಳ, ನಿರ್ದಿಷ್ಟ ಸ್ಥಳ ಅಥವಾ ಬೀದಿಯನ್ನು ಒಳಗೊಳ್ಳುತ್ತದೆ.][1]

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(4) 5ನೇ ಪ್ರಕರಣದ ಮೇರೆಗೆ ಮಾರುಕಟ್ಟೆ ಪ್ರದೇಶವನ್ನು ಅಥವಾ ನಿಯಂತ್ರಿತ ಕೃಷಿ ಉತ್ಪನ್ನದ ಬಾಬುಗಳು ಯಾವುವಾದರೂ ಇದ್ದರೆ ಅವುಗಳನ್ನು ಬದಲಾವಣೆ ಮಾಡಿದ ತರುವಾಯ, [2][ಕೃಷಿ ಮಾರುಕಟ್ಟೆ ನಿರ್ದೇಶಕನು][2], ಈಗಿರುವ ಮಾರುಕಟ್ಟೆ, ಉಪ ಮಾರುಕಟ್ಟೆ, ಮಾರುಕಟ್ಟೆ ಪ್ರಾಂಗಣ, ಮಾರುಕಟ್ಟೆ ಉಪ ಪ್ರಾಂಗಣ ಅಥವಾ ಉಪ ಮಾರುಕಟ್ಟೆ ಪ್ರಾಂಗಣದ ಹೊರತಾಗಿ ಇತರ ಯಾವುದೇ ಪ್ರದೇಶವನ್ನು ಸಂದರ್ಭಾನುಸಾರ ಮಾರುಕಟ್ಟೆ, ಉಪಮಾರುಕಟ್ಟೆ, ಮಾರುಕಟ್ಟೆ ಪ್ರಾಂಗಣ, ಮಾರುಕಟ್ಟೆ ಉಪ ಪ್ರಾಂಗಣ ಅಥವಾ ಉಪಮಾರುಕಟ್ಟೆ ಪ್ರಾಂಗಣವೆಂದು ಘೋಷಿಸುವುದು ಅಗತ್ಯವಿದೆ ಎಂದು ಅಭಿಪ್ರಾಯಪಟ್ಟ ಹೊರತು, ಈ ಪ್ರಕರಣದ ಮೇರೆಗೆ ಯಾವುದೇ ಘೋಷಣೆಯನ್ನು ಮಾಡುವುದು ಅವಶ್ಯಕವಿಲ್ಲವೆಂದು ಸಂದೇಹಗಳ ನಿವಾರಣೆಗಾಗಿ ಈ ಮೂಲಕ ಘೋಷಿಸಲಾಗಿದೆ.][1]

1. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35 ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**7. ಮಾರುಕಟ್ಟೆಗಳ ಸ್ಥಾಪನೆ.–** 6ನೇ ಪ್ರಕರಣದ (2)ನೇ ಉಪ ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಹೊರಡಿಸಿದ ತರುವಾಯ ಮತ್ತು 149 ನೇ ಪ್ರಕರಣದ ಮೇರೆಗೆ ಮೊದಲ ಸಲ ಉಪ ವಿಧಿಗಳನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ [1][ಕೃಷಿ ಮಾರುಕಟ್ಟೆ ನಿರ್ದೇಶಕನು,][1] ಮಾರುಕಟ್ಟೆ ಪ್ರದೇಶದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನದ ಕ್ರಯವಿಕ್ರಯವನ್ನು ನಿಯಂತ್ರಿಸುವುದಕ್ಕಾಗಿ ಮಾರುಕಟ್ಟೆ ಸಮಿತಿಯು ವ್ಯವಸ್ಥೆ ಮಾಡಿದೆ ಎಂದು ಮನದಟ್ಟು ಮಾಡಿಕೊಂಡ ತರುವಾಯ, ಅಧಿಸೂಚನೆ ಮೂಲಕ ಆ ಅಧಿಸೂಚನೆಯನ್ನು ಹೊರಡಿಸಿದ ದಿನಾಂಕದಿಂದ ಮೂವತ್ತು ದಿನಗಳಿಗಿಂತ ಕಡಿಮೆಯಲ್ಲದ ಒಂದು ದಿನಾಂಕವನ್ನು ಮಾರುಕಟ್ಟೆ ಮತ್ತು ಉಪಮಾರುಕಟ್ಟೆ ಯಾವುದಾದರೂ ಇದ್ದರೆ, ಅದನ್ನು ಸ್ಥಾಪಿಸತಕ್ಕ ದಿನಾಂಕ 26 ಎಂಬುದಾಗಿ ಘೋಷಿಸತಕ್ಕದ್ದು. ಈ ಅಧಿನಿಯಮದ ಎಲ್ಲಾ ಉದ್ದೇಶಗಳಿಗಾಗಿ ಮಾರುಕಟ್ಟೆ ಮತ್ತು ಉಪ ಮಾರುಕಟ್ಟೆಗಳು, ಯುವುವಾದರೂ ಇದ್ದರೆ, ಅವುಗಳನ್ನು ಹಾಗೆ ಅಧಿಸೂಚಿಸಲಾದ ದಿನಾಂಕದಿಂದ ಜಾರಿಗೆ ಬರುವಂತೆ ಮಾರುಕಟ್ಟೆ ಪ್ರದೇಶಕ್ಕಾಗಿ ಸ್ಥಾಪಿಸಲಾಗಿದೆ ಎಂದು ಭಾವಿಸತಕ್ಕದ್ದು:

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಪರಂತು, 6ನೇ ಪ್ರಕರಣದ (2ಎ) ಉಪ ಪ್ರಕರಣದ ಮೇರೆಗೆ ಅಧಿಸೂಚಿಸಲಾದ ಮಾರುಕಟ್ಟೆ ಅಥವಾ ಉಪ ಮಾರುಕಟ್ಟೆಯ ಸಂಬಂಧದಲ್ಲಿ, ಮಾರುಕಟ್ಟೆ ಅಥವಾ ಉಪ ಮಾರುಕಟ್ಟೆಯನ್ನು [2][ಕೃಷಿ ಮಾರುಕಟ್ಟೆ ನಿರ್ದೇಶಕನು][2] ಹೊರಡಿಸಿದ ಅಧಿಸೂಚನೆಯ ದಿನಾಂಕದಂದು ಸ್ಥಾಪಿಸಲಾಗಿದೆ ಎಂದು ಭಾವಿಸತಕ್ಕದ್ದು.][1]

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**8. ಕೃಷಿ ಉತ್ಪನ್ನದ ಕ್ರಯವಿಕ್ರಯದ ನಿಯಂತ್ರಣ.–** (1) [1][ಮಾರುಕಟ್ಟೆ ಸ್ಥಾಪನೆಯ][1] ತರುವಾಯ,–

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎ) ಯಾವ ಸ್ಥಳೀಯ ಪ್ರಾಧಿಕಾರವೂ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಅಧಿಸೂಚಿಸಲಾದ ಯಾವುದೇ ಕೃಷಿ ಉತ್ಪನ್ನದ ಕ್ರಯ ವಿಕ್ರಯಕ್ಕಾಗಿ ಮಾರುಕಟ್ಟೆ ಪ್ರದೇಶದಲ್ಲಿ ಯಾವುದೇ ಸ್ಥಳವನ್ನು ಸ್ಥಾಪಿಸತಕ್ಕದ್ದಲ್ಲ, ಸ್ಥಾಪಿಸಲು ಅಧಿಕಾರ ನೀಡತಕ್ಕದ್ದಲ್ಲ ಅಥವಾ ಸ್ಥಾಪಿಸಿರುವಲ್ಲಿ ಮುಂದುವರಿಸತಕ್ಕದ್ದಲ್ಲ ಅಥವಾ ಸ್ಥಾಪಿಸುವುದಕ್ಕೆ, ಸ್ಥಾಪಿಸಲು ಅಧಿಕಾರ ನೀಡುವುದಕ್ಕೆ ಅಥವಾ ಸ್ಥಾಪಿಸಿರುವಲ್ಲಿ ಮುಂದುವರಿಸುವುದಕ್ಕೆ ಅನುಮತಿಸತಕ್ಕದ್ದಲ್ಲ:

ಪರಂತು, ಸ್ಥಳೀಯ ಪ್ರಾಧಿಕಾರವು, ಈ ಅಧಿನಿಯಮದ ಉಪಬಂಧಗಳು ಮತ್ತು ನಿಯಮಗಳು ಮತ್ತು ಉಪವಿಧಿಗಳು ಮತ್ತು ಮಾರುಕಟ್ಟೆ ಸಮಿತಿಯ ಸ್ಥಾಯೀ ಆದೇಶಗಳಿಗೆ ಅನುಸಾರವಾಗಿ ಹೊರತು, ಅಂಥ ಸ್ಥಳದಲ್ಲಿ ಮಾರುಕಟ್ಟೆ ಕಾರ್ಯನಿರ್ವಾಹಕನು ವ್ಯವಹಾರ ನಡೆಸತಕ್ಕದ್ದಲ್ಲ ಎಂಬ ಷರತ್ತುಗಳಿಗೊಳಪಟ್ಟು [1][ದನಕರು, ಕುರಿ, ಮತ್ತು ಆಡುಗಳ ಹೊರತಾಗಿ][1] ಯಾವುದೇ ಅಧಿಸೂಚಿತ ಕೃಷಿ ಉತ್ಪನ್ನದ ಚಿಲ್ಲರೆ ಮಾರಾಟಕ್ಕಾಗಿ ಯಾವುದೇ ಸ್ಥಳವನ್ನು ಸ್ಥಾಪಿಸಬಹುದು ಅಥವಾ ಮುಂದುವರಿಸಬಹುದು;

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) ಈ ಸಂಬಂಧದಲ್ಲಿ ಮಾರುಕಟ್ಟೆ ಸಮಿತಿಯು ಮಂಜೂರು ಮಾಡಿದ ಲೈಸೆನ್ಸಿನ ಹೊರತು ಅಥವಾ ಅನ್ಯಥಾ ಅಂಥ ಲೈಸನ್ಸಿನ ನಿಬಂಧನೆಗಳ ಮತ್ತು ಷರತ್ತುಗಳ ಅನುಸಾರವಾಗಿ ಹೊರತು ಯಾವನೇ ವ್ಯಕ್ತಿಯು,–

(i) ಅಧಿಸೂಚಿತ ಕೃಷಿ ಉತ್ಪನ್ನದ ಕ್ರಯವಿಕ್ರಯಕ್ಕಾಗಿ ಮಾರುಕಟ್ಟೆ ಪ್ರದೇಶದಲ್ಲಿನ ಯಾವುದೇ ಸ್ಥಳವನ್ನು ಉಪಯೋಗಿಸತಕ್ಕದ್ದಲ್ಲ, ಅಥವಾ

(ii) ಅಧಿಸೂಚಿತ ಕೃಷಿ ಉತ್ಪನ್ನದ ಕ್ರಯವಿಕ್ರಯಕ್ಕೆ ಸಂಬಂಧಿಸಿದಂತೆ ಒಬ್ಬ ವ್ಯಾಪಾರಿ, ಕಮೀಷನ್ ಏಜೆಂಟ್, ದಳ್ಳಾಳಿ, ಸಂಸ್ಕರಣಕಾರ, ತೂಕ ಮಾಡುವವ, ಉಗ್ರಾಣಪಾಲಕ ಎಂಬವನಾಗಿ ಅಥವಾ ಯಾವುದೇ ಅಧಿಕಾರ ಸಾಮರ್ಥ್ಯದಲ್ಲಿ ಮಾರುಕಟ್ಟೆ ಪ್ರದೇಶದಲ್ಲಿ ಅಥವಾ ಅದರಲ್ಲಿರುವ ಯಾವುದೇ ಮಾರುಕಟ್ಟೆಯಲ್ಲಿ ವ್ಯವಹರಿಸತಕ್ಕದ್ದಲ್ಲ:

ಪರಂತು (ಬಿ) ಖಂಡದಲ್ಲಿರುವುದಾವುದೂ,–

(i) ಅಂಥ ಉತ್ಪನ್ನದ ಉತ್ಪಾದಕನು ತಾನೇ ಮಾರಾಟಗಾರನಾಗಿದ್ದಲ್ಲಿ ಅಂಥ ಕೃಷಿ ಉತ್ಪನ್ನದ ಮಾರಾಟಕ್ಕೆ, ಅಥವಾ

[1][(ii) ಅಂಥ ಉತ್ಪನ್ನದ ಖರೀದಿದಾರನು ತನ್ನ ಗೃಹಬಳಕೆಗಾಗಿ ಅಂಥ ಉತ್ಪನ್ನವನ್ನು ಖರೀದಿಸುವ ವ್ಯಕ್ತಿಯಾಗಿದ್ದಲ್ಲಿ, ಅಂಥ ಕೃಷಿ ಉತ್ಪನ್ನದ ಮಾರಾಟಕ್ಕೆ][1]

– ಅನ್ವಯವಾಗತಕ್ಕದ್ದಲ್ಲ.

1. 1976ರ ಅಧಿನಿಯಮ ಸಂಖ್ಯೆ 43ರ ಮೂಲಕ 1–6–1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(2) ಸಂದರ್ಭಾನುಸಾರ ಮಾರುಕಟ್ಟೆ ಪ್ರಾಂಗಣದ, ಮಾರುಕಟ್ಟೆ ಉಪಪ್ರಾಂಗಣದ, [2][ಉಪ ಮಾರುಕಟ್ಟೆ ಪ್ರಾಂಗಣದ, ಖಾಸಗಿ ಮಾರುಕಟ್ಟೆ ಪ್ರಾಂಗಣದ ಅಥವಾ ರೈತ–ಗ್ರಾಹಕ ಮಾರುಕಟ್ಟೆ ಪ್ರಾಂಗಣದ][2] ಹೊರತಾಗಿ ಯಾವುದೇ ಸ್ಥಳವನ್ನು ಅಧಿಸೂಚಿತ ಕೃಷಿ ಉತ್ಪನ್ನಗಳ ಖರೀದಿಗಾಗಿ ಅಥವಾ ಮಾರಾಟಕ್ಕಾಗಿ ಉಪಯೋಗಿಸತಕ್ಕದ್ದಲ್ಲ.

(3) (2)ನೇ ಉಪಪ್ರಕರಣದಲ್ಲಿರುವ ಯಾವುದೂ,–

(ಎ) ಅಧಿಸೂಚಿತ ಕೃಷಿ ಉತ್ಪನ್ನಗಳನ್ನು,–

(i) ಒಂದು ತಾಲ್ಲೂಕು ಕೃಷಿ ಉತ್ಪನ್ನ ಸಹಕಾರ ಕ್ರಯ ವಿಕ್ರಯ ಸಂಘ;

(ii) ಒಂದು ಪ್ರಾಥಮಿಕ ಕೃಷಿ ಸಹಕಾರ ಪತ್ತಿನ ಸಂಘ; ಮತ್ತು

(iii) ರಾಜ್ಯ ಸರ್ಕಾರದ ಅನುಮತಿ ಪಡೆದ ಇತರ ಯಾವುದೇ ಸಹಕಾರ ಸಂಘ – ಇವುಗಳ ಮೂಲಕ ಖರೀದಿ ಅಥವಾ ಮಾರಾಟ ಮಾಡುವುದಕ್ಕೆ;

(ಬಿ) ಒಬ್ಬ ಚಿಲ್ಲರೆ ವ್ಯಾಪಾರಿಯು ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡುವುದಕ್ಕೆ

– ಅನ್ವಯವಾಗತಕ್ಕದ್ದಲ್ಲ.][1]

1. 1987ರ ಅಧಿನಿಯಮ ಸಂಖ್ಯೆ 29ರ ಮೂಲಕ 10–8–1987 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ಸಿ) ಕರಾರು ವ್ಯವಸಾಯದ ಒಪ್ಪಂದದ ಮೇರೆಗೆ ಕರಾರು ವ್ಯವಸಾಯ ಉತ್ಪಾದಕನು ಕರಾರು ವ್ಯವಸಾಯ ಪ್ರಾಯೋಜಕನಿಗೆ ಮಾರಾಟ ಮಾಡುವುದಕ್ಕೆ;

(ಡಿ) ಕೃಷಿಕನಿಂದ 72ಎ. ಪ್ರಕರಣದ ಮೇರೆಗೆ ಲೈಸೆನ್ಸುದಾರನು ಅಧಿಸೂಚಿತ ಕೃಷಿ ಉತ್ಪನ್ನವನ್ನು ನೇರವಾಗಿ ಖರೀದಿ ಮಾಡಿರುವುದಕ್ಕೆ][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ – III

## ಮಾರುಕಟ್ಟೆ ಸಮಿತಿಗಳ ರಚನೆ

**9. ಮಾರುಕಟ್ಟೆ ಸಮಿತಿಯ ಸ್ಥಾಪನೆ ಮತ್ತು ಅದರ ನಿಗಮನ.–** (1) IX ನೇ ಅಧ್ಯಾಯದಲ್ಲಿ ಉಪಬಂಧಿಸಿರುವುದನ್ನುಳಿದು ಪ್ರತಿಯೊಂದು ಮಾರುಕಟ್ಟೆ ಪ್ರದೇಶಕ್ಕಾಗಿ ಸಮಗ್ರ ಮಾರುಕಟ್ಟೆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಒಂದು ಮಾರುಕಟ್ಟೆ ಸಮಿತಿಯು ಇರತಕ್ಕದ್ದು.

(2) ಈ ಅಧಿನಿಯಮದ ಮೇರೆಗೆ ಸ್ಥಾಪಿತವಾದ ಪ್ರತಿಯೊಂದು ಮಾರುಕಟ್ಟೆ ಸಮಿತಿಯು–ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದ ಹೆಸರಿನ ನಿಗಮಿತ ನಿಕಾಯವಾಗಿರತಕ್ಕದ್ದು. ಅದು ನಿರಂತರ ಉತ್ತರಾಧಿಕಾರಿಯನ್ನು ಮತ್ತು ಸಾಮಾನ್ಯವಾದ ಮೊಹರನ್ನು ಹೊಂದಿರತಕ್ಕದ್ದು ಮತ್ತು ಆ ನಿಗಮಿತ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು ಮತ್ತು ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ವಿಧಿಸಲಾದ ನಿರ್ಬಂಧಗಳಿಗೊಳಪಟ್ಟು ಯಾವುದೇ ಸ್ವತ್ತನ್ನು ಕುರಿತು ಕರಾರು ಮಾಡಿಕೊಳ್ಳಲು ಮತ್ತು ಆರ್ಜಿಸಲು, ಧಾರಣ ಮಾಡಲು, ಗುತ್ತಿಗೆ, ಮಾರಾಟ ಅಥವಾ ಬೇರೆ ರೀತಿಯಲ್ಲಿ ವರ್ಗಾಯಿಸಲು ಮತ್ತು ಅದು ಯಾವ ಉದ್ದೇಶಗಳಿಗಾಗಿ ಸ್ಥಾಪಿತವಾಗಿದೆಯೋ ಆ ಉದ್ದೇಶಕ್ಕಾಗಿ ಅಗತ್ಯವಿರುವ ಎಲ್ಲಾ ಇತರ ಕೆಲಸಗಳನ್ನು ಮಾಡುವುದಕ್ಕೆ ಸಕ್ಷಮವಾಗಿರತಕ್ಕದ್ದು:

ಪರಂತು, [1][ಕೃಷಿ ಮಾರುಕಟ್ಟೆ ನಿರ್ದೇಶಕನ][1] ಅನುಮತಿ ಇಲ್ಲದೆ ಸ್ಥಿರ ಸ್ವತ್ತನ್ನು ಆರ್ಜಿಸತಕ್ಕದ್ದಲ್ಲ ಅಥವಾ ವರ್ಗಾವಣೆ ಮಾಡತಕ್ಕದ್ದಲ್ಲ:

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17–6–1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1]1[ಮತ್ತೂ ಪರಂತು, [2][ಕೃಷಿ ಮಾರುಕಟ್ಟೆ ನಿರ್ದೇಶಕನು][2] , ಕಾರಣಗಳನ್ನು ಲಿಖಿತದಲ್ಲಿ ದಾಖಲ್ಮಾಡಿ, ಸ್ವಾಧೀನವು ಪೂರ್ತಿಗೊಳ್ಳುವುದಕ್ಕೆ ಮುಂಚೆ ಅಥವಾ ಸಂದರ್ಭಾನುಸಾರ ವರ್ಗಾವಣೆ ಪತ್ರವನ್ನು ಬರೆದುಕೊಡುವುದಕ್ಕೆ ಮುಂಚೆ ಅಂಥ ಅನುಮತಿಯನ್ನು ರದ್ದುಪಡಿಸಬಹುದು:][1]

1. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 1-5-1968ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಅಲ್ಲದೆ ಪರಂತು, ಮಾರುಕಟ್ಟೆ ಸಮಿತಿಯು, ಕೃಷಿ ಮಾರುಕಟ್ಟೆ ನಿರ್ದೇಶಕನ ಪೂರ್ವಾನುಮತಿ ಪಡೆದು ಮತ್ತು ಡೆಪ್ಯೂಟಿ ಕಮಿಷನರನ ಮೌಲ್ಯ ನಿರ್ಣಯ ಪ್ರಮಾಣ ಪತ್ರವನ್ನು ಪಡೆದು ಯಾವುದೇ ಭೂಮಿಯ ಅಥವಾ ಕಟ್ಟಡದ ಮಾಲೀಕನೊಂದಿಗೆ ಒಪ್ಪಂದ ಮಾಡಿಕೊಳ್ಳಬಹುದು ಮತ್ತು ಆ ಭೂಮಿಯನ್ನು ಅಥವಾ ಕಟ್ಟಡವನ್ನು ಖರೀದಿಸಬಹುದು:][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(3) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಪ್ರತಿಯೊಂದು ಮಾರುಕಟ್ಟೆ ಸಮಿತಿಯನ್ನು ಸ್ಥಳೀಯ ಪ್ರಾಧಿಕಾರ ಎಂದು ಭಾವಿಸತಕ್ಕದ್ದು.][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

***10. ಮೊದಲನೇ ಮಾರುಕಟ್ಟೆ ಸಮಿತಿಯ ರಚನೆ.–** (1) 11ನೇ ಪ್ರಕರಣದಲ್ಲಿ ಏನೇ ಅಡಕವಾಗಿದ್ದಾಗ್ಯೂ, [1][ಈ ಅಧಿನಿಯಮದ ಪ್ರಾರಂಭದ ತರುವಾಯ 4ನೇ ಪ್ರಕರಣದ ಮೇರೆಗೆ ಘೋಷಿಸಲಾದ ಮಾರುಕಟ್ಟೆ ಪ್ರದೇಶಕ್ಕಾಗಿ ರಚಿಸಲಾಗುವ ಮೊದಲನೇ ಮಾರುಕಟ್ಟೆ ಸಮಿತಿಯು][1] ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಾಮ ನಿರ್ದೇಶಿಸುವ ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು,–

* 1998ರ ಅಧಿನಿಯಮ ಸಂಖ್ಯೆ 16ರ ಮೂಲಕ ಈ ಪ್ರಕರಣವನ್ನು ಮತ್ತು 11, 63 (2) ಮತ್ತು 75ನೇ ಪ್ರಕರಣಗಳನ್ನು ತಿದ್ದುಪಡಿ ಮಾಡಲಾಗಿದ್ದು, ಹೊಸ ಪ್ರಕರಣ 77ಎ ಸೇರಿಸಲಾಗಿದೆ ಮತ್ತು 78ನೇ ಪ್ರಕರಣವನ್ನು ಪ್ರತಿಯೋಜಿಸಲಾಗಿದೆ, ಆದರೆ ಸದರಿ ತಿದ್ದುಪಡಿಗಳನ್ನು ಇನ್ನೂ ಜಾರಿಗೆ ತಂದಿಲ್ಲ. ಮಾಡಲಾದ ತಿದ್ದುಪಡಿಗಳು ಇತ್ಯಾದಿ ಅಧಿನಿಯಮದ ಕೊನೆಯ ಭಾಗದಲ್ಲಿದೆ.

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(i) 16ನೇ ಪ್ರಕರಣದ (1)ನೇ ಖಂಡದ (ಎ) ಉಪಖಂಡದ ಅಥವಾ (2) ನೇ ಖಂಡದ ಮೇರೆಗೆ ಅನರ್ಹಗೊಳಿಸಿಲ್ಲದ ಮತ್ತು ಮಾರುಕಟ್ಟೆ ಪ್ರದೇಶದಲ್ಲಿ ವಾಸಿಸುವ [1][[2][ಹನ್ನೊಂದು ಜನ ಕೃಷಿಕರು, ಆ ಪೈಕಿ ಒಬ್ಬ ಮಹಿಳೆ ಇರತಕ್ಕದ್ದು.][2] [3][ಅನುಸೂಚಿತ ಜಾತಿಗೆ ಸೇರಿದ ಒಬ್ಬ ವ್ಯಕ್ತಿ, ಅನುಸೂಚಿತ ಪಂಗಡಕ್ಕೆ ಸೇರಿದ ಒಬ್ಬ ವ್ಯಕ್ತಿ 'ಎ' ಪ್ರವರ್ಗದ ಅಡಿಯಲ್ಲಿ ಬರುವ ಒಬ್ಬ ವ್ಯಕ್ತಿ ಮತ್ತು 'ಬಿ' ಪ್ರವರ್ಗದ ಅಡಿಯಲ್ಲಿ ಬರುವ ಒಬ್ಬ ವ್ಯಕ್ತಿಯಾಗಿರತಕ್ಕದ್ದು;][3]][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

3. 2002ರ ಅಧಿನಿಯಮ ಸಂಖ್ಯೆ 13ರ ಮೂಲಕ 11-4-2002ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ii) 16ನೇ ಪ್ರಕರಣದ (2)ನೇ ಖಂಡದ ಮೇರೆಗೆ ಅನರ್ಹಗೊಳಿಸಿಲ್ಲದ ಮಾರುಕಟ್ಟೆ ಪ್ರದೇಶದಲ್ಲಿ ವಾಸಿಸುವ [1][ಚಿಲ್ಲರೆ ವ್ಯಾಪಾರಿಯಾಗಿರದ][1] [2][ಒಬ್ಬ ವ್ಯಾಪಾರಿ;][2]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-06-1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(iii) [1][XXX][1];

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(iv) ಮಾರುಕಟ್ಟೆ ಪ್ರದೇಶದೊಳಗೆ ಅಧಿಸೂಚಿತ ಕೃಷಿ ಉತ್ಪನ್ನಗಳ ವ್ಯವಹಾರ ನಡೆಸುವ ಸಹಕಾರ ಮಾರುಕಟ್ಟೆ ವ್ಯವಹಾರ ಸಂಘದ ಆಡಳಿತ ಸಮಿತಿಗೆ ಸದಸ್ಯನಾಗಿರುವ ಮತ್ತು 16ನೇ ಪ್ರಕರಣದ ಮೇರೆಗೆ ಅನರ್ಹನಾಗಿರದ ಒಬ್ಬ ವ್ಯಕ್ತಿ;][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(v) ಮಾರುಕಟ್ಟೆ ಪ್ರದೇಶದೊಳಗೆ ಅಧಿಸೂಚಿತ ಕೃಷಿ ಉತ್ಪನ್ನಗಳ ವ್ಯವಹಾರ ನಡೆಸುವ ಕೃಷಿ ಸಹಕಾರ ಸಂಸ್ಕರಣ ಸಂಘದ ಆಡಳಿತ ಸಮಿತಿಯ ಸದಸ್ಯನಾಗಿರುವ ಮತ್ತು 16ನೆಯ ಪ್ರಕರಣದ ಮೇರೆಗೆ ಅನರ್ಹನಾಗಿರದ ಒಬ್ಬ ವ್ಯಕ್ತಿ;][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(vi),(vii) XXX][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(viii) ಕೃಷಿ ಮಾರುಕಟ್ಟೆ ನಿರ್ದೇಶಕನು ನಾಮ ನಿರ್ದೇಶನ ಮಾಡಿದ, ಸಂಬಂಧಪಟ್ಟ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯ ದರ್ಜೆಗಿಂತ ಕಡಿಮೆಯಲ್ಲದ 44ನೇ ಪ್ರಕರಣದ ಮೇರೆಗೆ ಮತ ಚಲಾಯಿಸಲು ಹಕ್ಕಿಲ್ಲದ ಒಬ್ಬ ಅಧಿಕಾರಿ;][1]

1. 1991ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ix) XXX:][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

ಪರಂತು,

[1][(ii), (iv) ಮತ್ತು (v) ನೆಯ ಖಂಡಗಳ][1] (ಎಲ್ಲಾ ಖಂಡಗಳನ್ನು ಒಳಗೊಂಡು) ವರೆಗಿನ ಯಾವುವೇ ಪ್ರವರ್ಗಗಳಲ್ಲಿ ನಿರ್ದಿಷ್ಟಪಡಿಸಲಾದ ಪ್ರವರ್ಗದ ಸೂಕ್ತ ವ್ಯಕ್ತಿಗಳು ದೊರೆಯದಿದ್ದಲ್ಲಿ, ಸಮಿತಿಯು ಲಭ್ಯವಿರುವ ಪ್ರವರ್ಗಗಳ ಸಂಬಂಧದಲ್ಲಿ ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ವ್ಯಕ್ತಿಗಳನ್ನು ಮಾತ್ರ ಒಳಗೊಂಡಿರತಕ್ಕದ್ದು:

1. 1991ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಮತ್ತೂ ಪರಂತು, ಈ ಮೊದಲು ನಾಮ ನಿರ್ದೇಶಿಸಿರದ ಪ್ರವರ್ಗಗಳ ಸೂಕ್ತ ವ್ಯಕ್ತಿಗಳು ತರುವಾಯ ಲಭ್ಯವಾದರೆ, ಅವರನ್ನು ಸದಸ್ಯರೆಂದು ನಾಮ ನಿರ್ದೇಶಿಸತಕ್ಕದ್ದು ಮತ್ತು ಅಂಥ ವ್ಯಕ್ತಿಗಳು ಮೊದಲು ನಾಮ ನಿರ್ದೇಶನ ಮಾಡಲಾದ ಸದಸ್ಯರು ಪದಧಾರಣ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

[1][(1ಎ) XXX.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ರಾಜ್ಯ ಸರ್ಕಾರವು (1)ನೇ ಉಪಪ್ರಕರಣದ (i) ನೇ ಖಂಡದ ಮೇರೆಗೆ ನಾಮ ನಿರ್ದೇಶಿತರಾದ ಸದಸ್ಯರೊಳಗಿಂದ ಅಧ್ಯಕ್ಷನನ್ನು ಮತ್ತು ಉಪಾಧ್ಯಕ್ಷನನ್ನು ಅಧಿಸೂಚನೆಯ ಮೂಲಕ ನಾಮ ನಿರ್ದೇಶನ ಮಾಡತಕ್ಕದ್ದು.

(3) ಯಾವುದೇ ನಿರ್ದಿಷ್ಟ ಪ್ರದೇಶವನ್ನು ಮಾರುಕಟ್ಟೆ ಎಂದು ಘೋಷಿಸಿ 6ನೇ ಪ್ರಕರಣದ (2)ನೇ ಉಪ ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಹೊರಡಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ (1) ಮತ್ತು (2)ನೇ ಉಪ ಪ್ರಕರಣಗಳ ಮೇರೆಗಿನ ಅಧಿಸೂಚನೆಯನ್ನು ಹೊರಡಿಸತಕ್ಕದ್ದು.

(4) (ಎ) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಉಳಿದು [1][ಆದರೆ ಸರ್ಕಾರದ ಇಚ್ಛೆಗೊಳಪಟ್ಟು][1] ಮೊದಲನೇ ಮಾರುಕಟ್ಟೆ ಸಮಿತಿಯ ಸದಸ್ಯರು (1)ನೇ ಉಪ ಪ್ರಕರಣದ ಮೇರೆಗಿನ ಅಧಿಸೂಚನೆಯ ದಿನಾಂಕದಿಂದ [2][ಎರಡು ವರ್ಷಗಳ][1] ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು:

ಪರಂತು, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಒಟ್ಟಾರೆ [2][ಎರಡು][2] ವರ್ಷಕ್ಕೆ ಮೀರದ ಅವಧಿಯವರೆಗೆ ಅಥವಾ ಅವಧಿಗಳವರೆಗೆ ಸದಸ್ಯರ ಪದಾವಧಿಯನ್ನು ವಿಸ್ತರಿಸಬಹುದು.

1. 1980 ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2001ರ ಅಧಿನಿಯಮ ಸಂಖ್ಯೆ 8ರ ಮೂಲಕ 24-1-2001ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ಬಿ) (1) ನೇ ಉಪಪ್ರಕರಣದ [2][(iv)ನೇ ಖಂಡದ ಅಥವಾ (v)ನೇ ಖಂಡದ][2] ಮೇರೆಗೆ ನಾಮ ನಿರ್ದೇಶಿತನಾದ ವ್ಯಕ್ತಿಯು, [2][ಸಹಕಾರ ಮಾರುಕಟ್ಟೆ ಸಂಘದ ಅಥವಾ ಕೃಷಿ ಸಹಕಾರ ಸಂಸ್ಕರಣ ಸಂಘದ][2] ಸದಸ್ಯನಾಗಿ ಮುಂದುವರಿಯುವವರೆಗೆ ಮಾತ್ರವೇ ಪದಧಾರಣ ಮಾಡತಕ್ಕದ್ದು.][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) ಮರಣದ ಅಥವಾ ರಾಜೀನಾಮೆಯ ಕಾರಣದಿಂದ ಅಥವಾ ಅನ್ಯಥಾ, ಸ್ಥಾನವು ಖಾಲಿಯಾದ ಸಂದರ್ಭದಲ್ಲಿ, ರಾಜ್ಯ ಸರ್ಕಾರವು ನಾಮ ನಿರ್ದೇಶನ ಮಾಡುವ ಮೂಲಕ ಆ ಖಾಲಿ ಸ್ಥಾನವನ್ನು ಭರ್ತಿ ಮಾಡತಕ್ಕದ್ದು ಮತ್ತು ನಾಮ ನಿರ್ದೇಶಿತನಾದ ವ್ಯಕ್ತಿಯು ಯಾವ ಸದಸ್ಯನ ಸ್ಥಾನದಲ್ಲಿ ನಾಮನಿರ್ದೇಶಿತನಾಗಿರುವನೋ ಆ ಸದಸ್ಯನು ಅಂಥ ಸ್ಥಾನವನ್ನು ಧಾರಣ ಮಾಡಬಹುದಾಗಿದ್ದ ಅವಧಿಯವರೆಗೆ ಮಾತ್ರವೇ ಪದಧಾರಣ ಮಾಡತಕ್ಕದ್ದು.

***11. ಎರಡನೇ ಮತ್ತು ತರುವಾಯದ ಮಾರುಕಟ್ಟೆ ಸಮಿತಿಯ ರಚನೆ:–** (1) 10ನೇ ಪ್ರಕರಣದಲ್ಲಿ ಉಪಬಂಧಿಸಿರುವುದನ್ನು ಉಳಿದು, ಪ್ರತಿಯೊಂದು ಮಾರುಕಟ್ಟೆ ಸಮಿತಿಯು ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

* 10ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿಯನ್ನು ನೋಡಿ.

[1][(i) ಮಾರುಕಟ್ಟೆ ಪ್ರದೇಶದಲ್ಲಿನ ಕೃಷಿಕರು ಚುನಾಯಿಸಿದ ಹನ್ನೊಂದು ಜನ ಸದಸ್ಯರು, ಅವರಲ್ಲಿ ಒಬ್ಬರು ಮಹಿಳೆಯಾಗಿರತಕ್ಕದ್ದು, ಒಬ್ಬರು ಅನುಸೂಚಿತ ಜಾತಿಗಳಿಗೆ ಸೇರಿದವರಾಗಿರತಕ್ಕದ್ದು, ಒಬ್ಬರು ಅನುಸೂಚಿತ ಪಂಗಡಗಳಿಗೆ ಸೇರಿದವರಾಗಿರತಕ್ಕದ್ದು ಮತ್ತು ಇಬ್ಬರು ವ್ಯಕ್ತಿಗಳು ಹಿಂದುಳಿದ ವರ್ಗಗಳಿಗೆ ಸೇರಿದವರಾಗಿರತಕ್ಕದ್ದು. ಅದರಲ್ಲಿ ಒಬ್ಬರು 'ಎ' ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಯಾಗಿರತಕ್ಕದ್ದು ಮತ್ತು ಒಬ್ಬರು 'ಬಿ' ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಯಾಗಿರತಕ್ಕದ್ದು:

ಪರಂತು, ಅನುಸೂಚಿತ ಜಾತಿಗಳಿಗೆ ಸೇರಿದ ವ್ಯಕ್ತಿಯು ಲಭ್ಯವಿಲ್ಲದಿದ್ದಲ್ಲಿ, ಆ ಪ್ರವರ್ಗಕ್ಕಾಗಿ ಮೀಸಲಿರಿಸಿದ ಸ್ಥಾನವನ್ನು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಯಿಂದಲೂ ಸಹ ತುಂಬತಕ್ಕದ್ದು ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ

ವ್ಯಕ್ತಿಯೂ ಲಭ್ಯವಿಲ್ಲದಿದ್ದಲ್ಲಿ ಆ ಪ್ರವರ್ಗಕ್ಕಾಗಿ ಮೀಸಲಿರಿಸಿದ ಸ್ಥಾನವನ್ನು ಅನುಸೂಚಿತ ಜಾತಿಗಳಿಗೆ ಸೇರಿದ ವ್ಯಕ್ತಿಯಿಂದ ತುಂಬತಕ್ಕದ್ದು:

ಮತ್ತೂ ಪರಂತು, 'ಎ' ಪ್ರವರ್ಗಕ್ಕೆ ಸೇರಿದ ವ್ಯಕ್ತಿಯು ಲಭ್ಯವಿಲ್ಲದಿದ್ದಲ್ಲಿ, ಆ ಪ್ರವರ್ಗಕ್ಕೆ ಮೀಸಲಿರಿಸಿದ ಸ್ಥಾನವನ್ನು 'ಬಿ' ಪ್ರವರ್ಗಕ್ಕೆ ಸೇರಿದ ವ್ಯಕ್ತಿಯಿಂದಲೂ ಸಹ ತುಂಬತಕ್ಕದ್ದು ಮತ್ತು 'ಬಿ' ಪ್ರವರ್ಗಕ್ಕೆ ಸೇರಿದ ವ್ಯಕ್ತಿಯು ಲಭ್ಯವಿಲ್ಲದಿದ್ದಲ್ಲಿ ಆ ಪ್ರವರ್ಗಕ್ಕೆ ಮೀಸಲಿರಿಸಿದ ಸ್ಥಾನವನ್ನು 'ಎ' ಪ್ರವರ್ಗದ ವ್ಯಕ್ತಿಯಿಂದ ತುಂಬತಕ್ಕದ್ದು;][1]

1. 2002ರ ಅಧಿನಿಯಮ ಸಂಖ್ಯೆ 13ರ ಮೂಲಕ 11-4-2002ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

*[1][(ii) ಮಾರುಕಟ್ಟೆ ಪ್ರದೇಶದಲ್ಲಿನ ಚಿಲ್ಲರೆ ವ್ಯಾಪಾರಿಗಳಲ್ಲದ ಇತರ ವ್ಯಾಪಾರಿಗಳು ಚುನಾಯಿಸಿದ ಒಬ್ಬ ಸದಸ್ಯ;][1]

* 10ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿಯನ್ನು ನೋಡಿ.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(iii) XXX;][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(iv) ಮಾರುಕಟ್ಟೆ ಪ್ರದೇಶದೊಳಗೆ ಅಧಿಸೂಚಿತ ಕೃಷಿ ಉತ್ಪನ್ನದ ವ್ಯವಹಾರ ನಡೆಸುವ ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳ ಪ್ರತಿನಿಧಿಯಾಗಿರುವ ಮತ್ತು 16ನೇ ಪ್ರಕರಣದ ಮೇರೆಗೆ ಅನರ್ಹನಾಗಿರದ ಹಾಗೂ ಅಂಥ ಸಂಘಗಳ ಆಡಳಿತ ಸಮಿತಿಗಳಿಂದ ಚುನಾಯಿತನಾದ ಒಬ್ಬ ಸದಸ್ಯ;]1

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(v) ಮಾರುಕಟ್ಟೆ ಪ್ರದೇಶದೊಳಗೆ ಅಧಿಸೂಚಿತ ಕೃಷಿ ಉತ್ಪನ್ನದ ವ್ಯವಹಾರ ನಡೆಸುವ ಕೃಷಿ ಸಹಕಾರ ಸಂಸ್ಕರಣ ಸಂಘಗಳ ಪ್ರತಿನಿಧಿಯಾಗಿರುವ ಮತ್ತು 16ನೆಯ ಪ್ರಕರಣದ ಮೇರೆಗೆ ಅನರ್ಹನಾಗಿರದ ಹಾಗೂ ಅಂಥ ಸಂಘಗಳ ಆಡಳಿತ ಸಮಿತಿಗಳಿಂದ ಚುನಾಯಿತನಾದ ಒಬ್ಬ ಸದಸ್ಯ;][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ ಪರಂತುಕಗಳ ಸಹಿತ (v)ನೇ ಖಂಡವನ್ನು 3-11-1979ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ ಮತ್ತು 1991ರ ಅಧಿನಿಯಮ ಸಂಖ್ಯೆ 16ರ ಮೂಲಕ v ನೇ ಖಂಡವನ್ನು 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(vi) XXX]
(vii)XXX;][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(viii) ಕೃಷಿ ಮಾರುಕಟ್ಟೆ ನಿರ್ದೇಶಕನು ನಾಮ ನಿರ್ದೇಶನ ಮಾಡಿದ, ಸಂಬಂಧಪಟ್ಟ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯ ದರ್ಜೆಗಿಂತ ಕಡಿಮೆಯಲ್ಲದ 41 ಮತ್ತು 44ನೇ ಪ್ರಕರಣದ ಮೇರೆಗೆ ಮತ ಚಲಾಯಿಸಲು ಹಕ್ಕಿಲ್ಲದ ಒಬ್ಬ ಅಧಿಕಾರಿ;][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ix) ಮಾರುಕಟ್ಟೆ ಸಮಿತಿಯ ಎಲ್ಲಾ ಸಭೆಗಳಲ್ಲಿ ಮತ ಚಲಾಯಿಸಲು ಹಕ್ಕನ್ನು ಹೊಂದಿರುವ, ರಾಜ್ಯ ಸರ್ಕಾರದಿಂದ ನಾಮ ನಿರ್ದೇಶಿತರಾದ ಮೂವರು ಸದಸ್ಯರು ಮತ್ತು ಅವರು ರಾಜ್ಯ ಸರ್ಕಾರದ ಇಚ್ಛಾನುಸಾರ ಪದಧಾರಣ ಮಾಡತಕ್ಕದ್ದು:][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ ಮತ್ತು 1998 ರ ಅಧಿನಿಯಮ ಸಂಖ್ಯೆ 17ರ ಮೂಲಕ 31-3-1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

ಪರಂತು, [1][(ii) ನೇ, (iv)ನೇ ಮತ್ತು (v)][1] ನೇ ಖಂಡಗಳ (ಎಲ್ಲಾ ಖಂಡಗಳೂ ಒಳಗೊಂಡು) ಯಾವುದೇ ವರ್ಗದಲ್ಲಿ ನಿರ್ದಿಷ್ಟಪಡಿಸಿದ ವರ್ಗಗಳ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ, ಸಮಿತಿಯು ಲಭ್ಯವಿರುವ ವರ್ಗಗಳ ವ್ಯಕ್ತಿಗಳನ್ನು ಮಾತ್ರ ಒಳಗೊಂಡಿರತಕ್ಕದ್ದು:

1. 1991 ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಮತ್ತೂ ಪರಂತು, ಆ ವರ್ಗಗಳ ವ್ಯಕ್ತಿಗಳು ಲಭ್ಯವಿರುವಲ್ಲಿ ಅವರನ್ನು ಸದಸ್ಯರನ್ನಾಗಿ ಚುನಾಯಿಸಬಹುದು ಮತ್ತು ಅಂಥ ಸದಸ್ಯರುಗಳು ಈ ಮೊದಲು ಚುನಾಯಿತ ಸದಸ್ಯರು ಪದಧಾರಣ ಮಾಡಿರುವ ಸದಸ್ಯರಂತೆ ಆವರೆಗೆ ಮಾತ್ರ ಪದಧಾರಣ ಮಾಡಿರತಕ್ಕದ್ದು.

[1][ಪರಂತುಕ XXX.][1]

1. 1991 ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][ವಿವರಣೆ XXX.][1]

1. 1980 ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(2) (1)ನೇ ಉಪ-ಪ್ರಕರಣದ (i)ನೇ ಖಂಡದ ಅಡಿಯಲ್ಲಿ ಸದಸ್ಯರುಗಳಿಗಾಗಿ ಮೀಸಲಿರಿಸಿದ ಸ್ಥಾನಗಳನ್ನು ಮಾರುಕಟ್ಟೆ ಪ್ರದೇಶದಲ್ಲಿರುವ ವಿವಿಧ ಮತಕ್ಷೇತ್ರಗಳಿಗೆ ಸರದಿಯ ಪ್ರಕಾರ ಹಂಚಿಕೆ ಮಾಡತಕ್ಕದ್ದು:

ಪರಂತು, (1)ನೇ ಉಪ-ಪ್ರಕರಣದ (i)ನೇ ಖಂಡದ ಅಡಿಯಲ್ಲಿ ಸದಸ್ಯರಿಗಾಗಿ ಸ್ಥಾನಗಳ ಮೀಸಲಾತಿಯ ಉದ್ದೇಶಕ್ಕಾಗಿ ಸರದಿಯ ತತ್ವವು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) (ತಿದ್ದುಪಡಿ) ಅಧಿನಿಯಮ, 2002ರ ಪ್ರಾರಂಭದ ತರುವಾಯ ನಡೆಸಲಾಗುವ ಪ್ರಥಮ ಸಾರ್ವತ್ರಿಕ ಚುನಾವಣೆಯಿಂದ ಪ್ರಾರಂಭವಾಗತಕ್ಕದ್ದು.

(3) ಈ ಪ್ರಕರಣದಲ್ಲಿರುವುದಾವುದೂ, (1)ನೇ ಉಪಪ್ರಕರಣದ (i)ನೇ ಖಂಡದ ಅಡಿಯಲ್ಲಿ ಒಂದು ಮಾರುಕಟ್ಟೆ ಸಮಿತಿಯಲ್ಲಿ ಅನುಸೂಚಿತ ಜಾತಿಗಳಿಗೆ ಅಥವಾ ಅನುಸೂಚಿತ ಪಂಗಡಗಳಿಗೆ ಅಥವಾ ಹಿಂದುಳಿದ ವರ್ಗಗಳಿಗೆ ಸೇರಿದ ವ್ಯಕ್ತಿಗಳಿಗಾಗಿ ಅಥವಾ ಮಹಿಳೆಯರಿಗೆ ಸ್ಥಾನಗಳನ್ನು ಮೀಸಲಿರಿಸಿದ್ದರೆ ಅವರುಗಳು ಅಂಥ ಮಾರುಕಟ್ಟೆ ಸಮಿತಿಯಲ್ಲಿನ ಮೀಸಲಿಟ್ಟಿರದ ಸ್ಥಾನಗಳಿಗೆ ಚುನಾವಣೆಗೆ ನಿಲ್ಲುವುದನ್ನು ತಡೆಯುವುದೆಂದು ಭಾವಿಸತಕ್ಕದ್ದಲ್ಲ.

ವಿವರಣೆ: ಈ ಪ್ರಕರಣದ, 10ನೇ ಪ್ರಕರಣದ ಮತ್ತು 14ನೇ ಪ್ರಕರಣದ ಉದ್ದೇಶಕ್ಕಾಗಿ 'ಎ' ಮತ್ತು 'ಬಿ' ಪ್ರವರ್ಗಗಳು 2ನೇ ಪ್ರಕರಣದ (2ಬಿ) ಖಂಡದಲ್ಲಿ ಉಲ್ಲೇಖಿಸಿದ 'ಎ' ಮತ್ತು 'ಬಿ' ಪ್ರವರ್ಗಗಳಾಗಿರತಕ್ಕದ್ದು.][1]

1. 2002 ರ ಅಧಿನಿಯಮ ಸಂಖ್ಯೆ 13ರ ಮೂಲಕ 11-4-2002 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**12. ಚುನಾವಣೆಗಳ ಬಗ್ಗೆ ಏರ್ಪಾಡು.-** ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು ಮಾರುಕಟ್ಟೆ ಸಮಿತಿಯ ಸದಸ್ಯರನ್ನು ನಿಯಮಗಳ ಮೂಲಕ ಗೊತ್ತುಪಡಿಸಲಾದ ರೀತಿಯಲ್ಲಿ ಚುನಾಯಿಸತಕ್ಕದ್ದು. ಅಂಥ ನಿಯಮಗಳು ಮತದಾರರ ಪಟ್ಟಿಯ ತಯಾರಿಕೆ ಮತ್ತು ನಿರ್ವಹಣೆ, ಮತದಾರರ ಅರ್ಹತೆಗಳು ಮತ್ತು ಅನರ್ಹತೆಗಳು, ಅಭ್ಯರ್ಥಿಗಳು ಠೇವಣಿಗಳನ್ನು ಸಂದಾಯ ಮಾಡುವುದು ಮತ್ತು ಠೇವಣಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಮತ್ತು ಅಂಥ ಚುನಾವಣೆಗಳಿಗೆ ಸಂಬಂಧಿಸಿದ ಇತರ ಎಲ್ಲ ವಿಷಯಗಳ ಬಗ್ಗೆ ಸಹ ಏರ್ಪಾಟು ಮಾಡತಕ್ಕದ್ದು.

**13. ಚುನಾವಣೆಗಳ ಅಧೀಕ್ಷಣೆ, ನಿರ್ದೇಶನ ಮತ್ತು ನಿಯಂತ್ರಣ.-** (1) [1][ಕೃಷಿ ಮಾರುಕಟ್ಟೆ ನಿರ್ದೇಶಕನ][1], ಆಜ್ಞೆಗಳಿಗೊಳಪಟ್ಟು ಮಾರುಕಟ್ಟೆ ಸಮಿತಿಯ ಚುನಾವಣೆಗಳ ಮತದಾರರ ಪಟ್ಟಿಗಳ ತಯಾರಿಕೆ ಮತ್ತು ಆ ಚುನಾವಣೆಗಳ ಅಧೀಕ್ಷಣೆ, ನಿರ್ದೇಶನ ಮತ್ತು ನಿಯಂತ್ರಣವು ಡೆಪ್ಯುಟಿ ಕಮೀಷನರನಲ್ಲಿ ನಿಹಿತವಾಗಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಪರಂತುಕ XXX.][1]

1. 1991ರ ಅಧಿನಿಯಮ ಸಂಖ್ಯೆ16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ರಾಜ್ಯ ಸರ್ಕಾರವು, ಈ ಅಧಿನಿಯಮದ ಮೇರೆಗೆ ಡೆಪ್ಯುಟಿ ಕಮಿಷನರಿಗೆ ವಹಿಸಿಕೊಟ್ಟ ಪ್ರಕಾರ್ಯಗಳ ಮತ್ತು ಹೊಣೆಗಾರಿಕೆಗಳ ನಿರ್ವಹಣೆಗೆ ಅಗತ್ಯವಿರುವ ಸಿಬ್ಬಂದಿ ಮತ್ತು ನಿಧಿಗಳನ್ನು ಆ ಡೆಪ್ಯುಟಿ ಕಮಿಷನರನಿಗೆ ಒದಗಿಸಿ ಕೊಡುವ ವ್ಯವಸ್ಥೆ ಮಾಡತಕ್ಕದ್ದು.

(3) ಮಾರುಕಟ್ಟೆಯ ಸಮಿತಿಯ ಸದಸ್ಯರ ಚುನಾವಣೆಗೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ಎಲ್ಲಾ ವೆಚ್ಚಗಳನ್ನು ರಾಜ್ಯದ ಸಂಚಿತ ನಿಧಿಯಿಂದ ಭರಿಸತಕ್ಕದ್ದು.

[1][(4) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದಾಗ್ಯೂ, ರಾಜ್ಯ ಸರ್ಕಾರವು ಚುನಾವಣಾ ವೇಳಾಪಟ್ಟಿಯನ್ನು ರದ್ದುಪಡಿಸುವ ಬಗ್ಗೆ ಅಥವಾ ಚುನಾವಣೆಯನ್ನು ಮುಂದೂಡುವ ಬಗ್ಗೆ ಹೊರಡಿಸುವ ನಿರ್ದೇಶನಗಳು ಸೇರಿ ಮಾರುಕಟ್ಟೆ ಸಮಿತಿಗಳ ಚುನಾವಣೆಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ಆಜ್ಞೆಗಳನ್ನು ಹೊರಡಿಸಬಹುದು.][1]

1. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 4-11-1981ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**14. ಕೆಲವು ಸದಸ್ಯರ ಚುನಾವಣೆಯ ಚುನಾವಣಾ ಕ್ಷೇತ್ರಗಳು.-** (1) ಮಾರುಕಟ್ಟೆ ಸಮಿತಿಗೆ 11ನೇ ಪ್ರಕರಣದ (1)ನೇ ಉಪ ಪ್ರಕರಣದ [1][(i), (ii)ನೇ ಖಂಡಗಳಲ್ಲಿ][1] ಉಲ್ಲೇಖಿಸಲಾದ ಸದಸ್ಯರನ್ನು ಚುನಾಯಿಸುವ ಉದ್ದೇಶಗಳಿಗಾಗಿ, ಪ್ರತಿಯೊಂದು ಮಾರುಕಟ್ಟೆ ಪ್ರದೇಶದಲ್ಲಿ ಈ ಕೆಳಕಂಡ ಚುನಾವಣಾ ಕ್ಷೇತ್ರಗಳಿರತಕ್ಕದ್ದು:-

1. 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(i) ಕೃಷಿಕರ ಪ್ರತಿನಿಧಿಗಳನ್ನು ಚುನಾಯಿಸಲು [1][ಹನ್ನೊಂದು][1] ಕೃಷಿಕರ ಚುನಾವಣಾ ಕ್ಷೇತ್ರಗಳು, ಅವುಗಳಲ್ಲಿ ಪ್ರತಿಯೊಂದು ಏಕಸದಸ್ಯ ಚುನಾವಣಾ ಕ್ಷೇತ್ರವಾಗಿರುತ್ತದೆ;

1. 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ii) ಲೈಸನ್ಸನ್ನು ಪಡೆದ ವ್ಯಾಪಾರಿಗಳ [1][ಒಬ್ಬ ಪ್ರತಿನಿಧಿ][1] ಯನ್ನು ಚುನಾಯಿಸಲು ಇಡೀ ಮಾರುಕಟ್ಟೆ ಪ್ರದೇಶಕ್ಕೆ ವ್ಯಾಪಾರಿಗಳ ಒಂದು ಚುನಾವಣಾ ಕ್ಷೇತ್ರ ; ಮತ್ತು

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(iii) XXX][1].

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) (1)ನೇ ಉಪಪ್ರಕರಣದ (i)ನೇ ಖಂಡದ ಉದ್ದೇಶಕ್ಕಾಗಿ, ಡೆಪ್ಯುಟಿ ಕಮೀಷನರನು, ಅಧಿಸೂಚನೆಯ ಮೂಲಕ [1][[2][ಹನ್ನೊಂದು ಕೃಷಿಕರ ಚುನಾವಣಾ ಕ್ಷೇತ್ರಗಳ][2] ಪ್ರಾದೇಶಿಕ ವ್ಯಾಪ್ತಿಯನ್ನು ನಿರ್ಧರಿಸತಕ್ಕದ್ದು [2][ಮತ್ತು ಆ ಪೈಕಿ ಒಂದು ಚುನಾವಣಾ ಕ್ಷೇತ್ರವನ್ನು ಮಹಿಳೆಯರಿಗಾಗಿ][2] [3][ಒಂದನ್ನು ಅನುಸೂಚಿತ ಜಾತಿಗಳಿಗೆ ಸೇರಿದ ವ್ಯಕ್ತಿಗಳಿಗೆ, ಒಂದನ್ನು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗೆ, ಒಂದನ್ನು 'ಎ' ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಗಳಿಗೆ ಒಂದನ್ನು ಮತ್ತು 'ಬಿ' ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಗಳಿಗೆ ಒಂದನ್ನು ಮೀಸಲಿಡತಕ್ಕದ್ದು.][3]][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1991 ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

3. 2002ರ ಅಧಿನಿಯಮ ಸಂಖ್ಯೆ 13ರ ಮೂಲಕ 11-4-2002 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**15. ಚುನಾವಣಾ ಅಭ್ಯರ್ಥಿಗಳ ಅರ್ಹತೆ.–** ಪ್ರತಿಯೊಬ್ಬ ವ್ಯಕ್ತಿಯು, ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಉಪಬಂಧಗಳ ಮೇರೆಗೆ ಅನರ್ಹನಾಗಿರುವ ಹೊರತು, ಮಾರುಕಟ್ಟೆ ಸಮಿತಿಯ ಸದಸ್ಯನಾಗಿ ಕೆಳಕಂಡ ಚುನಾವಣಾ ಕ್ಷೇತ್ರಗಳಿಂದ ಚುನಾಯಿತನಾಗಲು ಅರ್ಹನಾಗಿರತಕ್ಕದ್ದು, ಎಂದರೆ:–

(i) ಮಾರುಕಟ್ಟೆ ಪ್ರದೇಶದ ಕೃಷಿಕರ ಚುನಾವಣಾ ಕ್ಷೇತ್ರಗಳ ಪೈಕಿ ಯಾವುದೇ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ಅವನ ಹೆಸರು ಇದ್ದರೆ, ಆ ಕೃಷಿಕರ ಚುನಾವಣಾ ಕ್ಷೇತ್ರ:

[1][ಪರಂತು, ಒಬ್ಬ ವ್ಯಕ್ತಿಯು ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಗಳು ಅಥವಾ ಹಿಂದುಳಿದ ವರ್ಗಗಳಿಗೆ ಸೇರಿದ ವ್ಯಕ್ತಿಗಳಿಗಾಗಿ ಅಥವಾ ಮಹಿಳೆಯರಿಗಾಗಿ ಮೀಸಲಿಡಲಾದ ಕೃಷಿಕರ ಚುನಾವಣಾ ಕ್ಷೇತ್ರಗಳಿಂದ ಚುನಾಯಿತನಾಗುವುದಕ್ಕೆ, ಅಂಥ ವ್ಯಕ್ತಿಯು, ಆ ಜಾತಿಗಳಿಗೆ, ಪಂಗಡಗಳಿಗೆ ಅಥವಾ ವರ್ಗಗಳಿಗೆ ಸೇರಿದವನಾಗಿದ್ದ ಹೊರತು ಅಥವಾ ಮಹಿಳೆಯಾಗಿದ್ದ ಹೊರತು, ಅರ್ಹನಾಗಿರತಕ್ಕದ್ದಲ್ಲ;][1]

1. 2002ರ ಅಧಿನಿಯಮ ಸಂಖ್ಯೆ 13ರ ಮೂಲಕ 11-4-2002 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ii) ಮಾರುಕಟ್ಟೆ ಪ್ರದೇಶದ ವ್ಯಾಪಾರಿಗಳ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ಅವನ ಹೆಸರು ಇದ್ದರೆ, ವ್ಯಾಪಾರಿಗಳ ಚುನಾವಣಾ ಕ್ಷೇತ್ರ; ಮತ್ತು

[1][(iii) XXX][1].

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**16. ಸದಸ್ಯತ್ವಕ್ಕೆ ಅನರ್ಹತೆಗಳು.–** ಈ ಅಧಿನಿಯಮದಲ್ಲಿ ಉಪಬಂಧಿಸಲಾದ ಯಾವುವೇ ಇತರ ಅನರ್ಹತೆಗಳಿಗೆ ಪ್ರತಿಕೂಲವಾಗದಂತೆ,–

(1) ಒಬ್ಬ ವ್ಯಕ್ತಿಯು,–

(ಎ) ಅವನು ಅಥವಾ ಅವನು ಪಾಲುಗಾರನಾಗಿರುವಂತಹ ಸಂಸ್ಥೆ ಅಥವಾ ಅವನು ನಿರ್ದೇಶಕನಾಗಿರುವ ನಿಗಮಿತ ನಿಕಾಯವು (ಸಹಕಾರ ಸಂಘದ ಹೊರತಾಗಿ) ಅಥವಾ ಅವನು ಸದಸ್ಯನಾಗಿರುವಂತಹ ಅವಿಭಕ್ತ ಕುಟುಂಬವು [1][ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ][1] ವ್ಯಾಪಾರಿಯಾಗಿ, [1][ಕಮಿಷನ್ ಏಜೆಂಟನಾಗಿ, ಬ್ರೋಕರ್‌ನಾಗಿ, ಆಮದುದಾರರ ಅಥವಾ ರಫ್ತುದಾರನಾಗಿ][1] ವ್ಯವಹಾರ ಮಾಡಿದರೆ [2][ಅಥವಾ ಚುನಾವಣೆಯ ದಿನಾಂಕದ ನಿಕಟ ಪೂರ್ವದ ಐದು ವರ್ಷಗಳ ಅವಧಿಗೆ ಕಡಿಮೆಯಲ್ಲದ ದಿನಾಂಕದವರೆಗೆ ವ್ಯಾಪಾರಿಯಾಗಿ, ಕಮೀಷನ್ ಏಜೆಂಟನಾಗಿ, ದಲ್ಲಾಳಿಯಾಗಿ, ಆಮದುದಾರ ಅಥವಾ ರಫ್ತುದಾರನಾಗಿ ವ್ಯವಹಾರ ಮಾಡುತ್ತಿದ್ದರೆ,][2] ಕೃಷಿಕರ ಒಬ್ಬ ಪ್ರತಿನಿಧಿಯಾಗಿ;

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) ಅವನು ಲೈಸನ್ಸ್ ಪಡೆದ ವ್ಯಾಪಾರಿಯಾಗಿರುವುದು ಕೊನೆಗೊಂಡಿದ್ದರೆ, ವ್ಯಾಪಾರಿಗಳ ಪ್ರತಿನಿಧಿಯಾಗಿ

– ಮಾರುಕಟ್ಟೆ ಸಮಿತಿಯ ಸದಸ್ಯನಾಗಿ ಚುನಾಯಿತನಾಗಲು ಅಥವಾ ಸದಸ್ಯನಾಗಿರಲು ಅನರ್ಹನಾಗತಕ್ಕದ್ದು.

[1][([1]) XXX][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ಒಬ್ಬ ವ್ಯಕ್ತಿಯು,–

(ಎ) ಅವನು ಇಪ್ಪತ್ತೊಂದು ವರ್ಷಕ್ಕಿಂತ ಕಡಿಮೆ ವಯಸ್ಸಿನವನಾಗಿದ್ದರೆ; ಅಥವಾ

*(ಬಿ) ಅವನು ನೈತಿಕ ಅಧಃಪತನವನ್ನು ಒಳಗೊಂಡಿರುವ ಮತ್ತು ಆರು ತಿಂಗಳಿಗೆ ಮೀರುವ ಅವಧಿಯ ಕಾರಾವಾಸ ಶಿಕ್ಷೆಯಿಂದ ದಂಡನೀಯವಾಗುವಂಥ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ, ಕಾರಾವಾಸ ಶಿಕ್ಷೆಗೆ ಒಳಗಾಗಿದ್ದು, ಆ ತರುವಾಯ ಅಂಥ ಶಿಕ್ಷೆಯನ್ನು ವ್ಯತಿರಿಕ್ತಗೊಳಿಸಿರದಿದ್ದರೆ ಅಥವಾ ಮಾಫಿ ಮಾಡಿರದಿದ್ದರೆ; ಅಥವಾ

* ಈ ಖಂಡವನ್ನು 1984ರ ಅಧಿನಿಯಮ ಸಂಖ್ಯೆ 2ರ ಮೂಲಕ ತಿದ್ದುಪಡಿ ಮಾಡಲಾಗಿದೆ. ಆದರೆ ಸದರಿ ತಿದ್ದುಪಡಿಯನ್ನು ಇದುವರೆಗೂ ಜಾರಿಗೆ ತಂದಿಲ್ಲ. ಈ ತಿದ್ದುಪಡಿಯು ಅಧಿನಿಯಮದ ಕೊನೆಯ ಭಾಗದಲ್ಲಿದೆ.

[1][(ಬಿಎ) ಈ ಅಧಿನಿಯಮದ [2][114, 117 ಮತ್ತು 118ನೇ][2] ಪ್ರಕರಣಗಳ ಮೇರೆಗೆ ದಂಡನೀಯವಾದ ಅಪರಾಧದ ಬಗ್ಗೆ ಅಪರಾಧಿ ಎಂದು ನಿರ್ಣೀತನಾಗಿದ್ದು ಅಂಥ ಅಪರಾಧ ನಿರ್ಣಯವನ್ನು ತರುವಾಯ ತಳ್ಳಿಹಾಕಿರದಿದ್ದರೆ; ಅಥವಾ][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1987ರ ಅಧಿನಿಯಮ ಸಂಖ್ಯೆ 29ರ ಮೂಲಕ 10-8-1987ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) [1][ದಂಡ ಪ್ರಕ್ರಿಯಾ ಸಂಹಿತೆ, 1973 ರ (1974 ರ ಕೇಂದ್ರ ಅಧಿನಿಯಮ 2)][1] 110ನೇ ಪ್ರಕರಣದ ಮೇರೆಗೆ ಹೂಡಲಾದ ವ್ಯವಹರಣೆಗಳಲ್ಲಿ ಆ ಸಂಹಿತೆಯ 108ನೇ ಪ್ರಕರಣದ ಮೇರೆಗೆ ಅವನ ವಿರುದ್ಧ ಆದೇಶವನ್ನು ಹೊರಡಿಸಲಾಗಿದ್ದು, ಆ ತರುವಾಯ ಅಂತಹ ಆದೇಶವನ್ನು ರದ್ದುಗೊಳಿಸಿರದಿದ್ದರೆ ಅಥವಾ ತಳ್ಳಿಹಾಕಿರದಿದ್ದರೆ; ಅಥವಾ

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಡಿ) ಅವನು ಅನನ್ಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಇ) ಅವನು ಅಸ್ವಸ್ಥಚಿತ್ತನಾಗಿದ್ದರೆ ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲ್ಪಟ್ಟಿದ್ದರೆ; ಅಥವಾ

(ಎಫ್) ಅವನು ಯಾವುದೇ ಮಾರುಕಟ್ಟೆ ಸಮಿತಿಯ, ಸ್ಥಳೀಯ ಪ್ರಾಧಿಕಾರದ ಅಥವಾ ಸಹಕಾರ ಸಂಘದ ನೌಕರನಾಗಿದ್ದರೆ ಅಥವಾ ತೂಕ ಮಾಡುವವನೆಂದು, ಅಳತೆಗಾರನೆಂದು [1][ಸರ್ವೇಯರ್‌ನೆಂದು ಅಥವಾ ಹಮಾಲನೆಂದು][1] ಮಾರುಕಟ್ಟೆ ಸಮಿತಿಯಿಂದ ಲೈಸೆನ್ಸ್ ಪಡೆದವನಾಗಿದ್ದರೆ; ಅಥವಾ

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಜಿ) ಇದರಲ್ಲಿ ಇನ್ನು ಮುಂದೆ ಉಪಬಂಧಿತವಾದಂತೆ ಹೊರತು, ಮಾರುಕಟ್ಟೆ ಸಮಿತಿಯ ಆದೇಶದ ಮೂಲಕ ಮಾಡಲಾದ ಯಾವುದೇ ಕಾಮಗಾರಿಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಪಾಲು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ, ಅಥವಾ ಮಾರುಕಟ್ಟೆ ಸಮಿತಿಯೊಂದಿಗೆ ಅಥವಾ ಅದರ ಮೇರೆಗೆ ಅಥವಾ ಅದರ ಮೂಲಕ ಅಥವಾ ಅದರ ಪರವಾಗಿ ನಿಯೋಜನೆಯ ಯಾವುದೇ ಕರಾರನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಹೊಂದಿದ್ದರೆ; ಅಥವಾ

(ಹೆಚ್) ಮಾರುಕಟ್ಟೆ ಸಮಿತಿಯ ಪರವಾಗಿ ಅವನು ನ್ಯಾಯವಾದಿಯಾಗಿ ನಿಯೋಜಿತನಾಗಿದ್ದರೆ ಅಥವಾ ಮಾರುಕಟ್ಟೆ ಸಮಿತಿಯ ವಿರುದ್ಧ ನ್ಯಾಯವಾದಿಯಾಗಿ ನಿಯೋಜನೆಯನ್ನು ಒಪ್ಪಿಕೊಂಡಿದ್ದರೆ; ಅಥವಾ

[1][(ಹೆಚ್‌ಹೆಚ್) ಮಾರಾಟದ ದಿನಾಂಕದಿಂದ ಮಾರಾಟದ ಉತ್ಪತ್ತಿಯ ಮೊತ್ತವನ್ನು ಅಥವಾ ಮಾರಾಟಗಾರನಿಗೆ ಬಾಕಿ ಇರುವ ಇತರ ಮೊತ್ತವನ್ನು ಏಳು ದಿನಗಳು ಅಥವಾ ಅದಕ್ಕಿಂತ ಹೆಚ್ಚು ದಿನಗಳ ಅವಧಿಯವರೆಗೆ ಸಂದಾಯ ಮಾಡಲು ತಪ್ಪಿದ ಬಾಕಿದಾರನಾದರೆ;][1] ಅಥವಾ

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಐ) ಮಾರುಕಟ್ಟೆ ಸಮಿತಿಗೆ ಬಾಕಿ ಇರುವ ಯಾವುದೇ ಫೀಜು ಅಥವಾ ಇತರ ಮೊತ್ತವನ್ನು ಸಂದಾಯ ಮಾಡುವ ಬಗ್ಗೆ ಅವನಿಗೆ ಬಿಲ್ಲನ್ನು ಒಪ್ಪಿಸಿದ ದಿನಾಂಕದಿಂದ ಹದಿನೈದು ದಿನಗಳ ಅವಧಿ ಮೀರಿದ ನಂತರವೂ ಅದನ್ನು ಸಂದಾಯ ಮಾಡಲು ತಪ್ಪಿದರೆ, ಅವನು ಮಾರುಕಟ್ಟೆ ಸಮಿತಿಯ ಸದಸ್ಯನಾಗಿ ಚುನಾಯಿತನಾಗಲು ಅಥವಾ ಸದಸ್ಯನಾಗಿರಲು ಅನರ್ಹನಾಗತಕ್ಕದ್ದು:

ಪರಂತು,–

(i) [1][ಸಂದರ್ಭಾನುಸಾರ][1] ಅಂತಹ ಶಿಕ್ಷೆಯ [1][ಅಥವಾ ಅಪರಾಧ ನಿರ್ಣಯ][1]ದ ದಿನಾಂಕದಿಂದ ಐದು ವರ್ಷಗಳು ಮುಗಿದ ತರುವಾಯ [2][(ಬಿ) ಮತ್ತು (ಬಿಎ) ಉಪಖಂಡ][2] ಗಳಲ್ಲಿ ಹೇಳಿದ ಅನರ್ಹತೆಯು, ಪರಿಣಾಮಕಾರಿಯಾಗಿರುವುದು ನಿಂತುಹೋಗತಕ್ಕದ್ದು;

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3 -11-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ii) ಯಾವ ಅವಧಿಗೆ ಸಂಬಂಧಿಸಿ ಭದ್ರತೆಯನ್ನು ಒದಗಿಸುವಂತೆ ಒಬ್ಬ ವ್ಯಕ್ತಿಗೆ ಆದೇಶ ನೀಡಲಾಗಿತ್ತೋ ಆ ಅವಧಿಯು ಮುಕ್ತಾಯವಾದ ತರುವಾಯ (ಸಿ) ಉಪಖಂಡದಲ್ಲಿ ಹೇಳಿದ ಅನರ್ಹತೆಯು ಪರಿಣಾಮಕಾರಿಯಾಗಿರುವುದು ನಿಂತುಹೋಗತಕ್ಕದ್ದು;

(iii) ಒಬ್ಬ ವ್ಯಕ್ತಿಯು,–

(ಎ) ಯಾವುದೇ ಜಂಟಿ ಸ್ಟಾಕ್ ಕಂಪನಿಯಲ್ಲಿ ಷೇರನ್ನು ಹೊಂದಿರುವ ಅಥವಾ [1][ಕರ್ನಾಟಕ][1] ಸಂಘಗಳ ನೋಂದಣಿ ಅಧಿನಿಯಮ, 1960ರ ಮೇರೆಗೆ ನೋಂದಾಯಿತವಾದ ಯಾವುದೇ ಸಂಘದಲ್ಲಿ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿರುವ ಅಥವಾ ಮಾರುಕಟ್ಟೆ ಸಮಿತಿಯೊಂದಿಗೆ ಕರಾರು ಮಾಡಿಕೊಂಡಿರುವ ಅಥವಾ ಅದರಿಂದ ಅಥವಾ ಅದರ ಪರವಾಗಿ ನಿಯೋಜಿತವಾದ ಯಾವುದೇ ಸಹಕಾರ ಸಂಘದಲ್ಲಿ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿರುವ ಕಾರಣ; ಅಥವಾ

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಬಿ) ಮಾರುಕಟ್ಟೆ ಸಮಿತಿಯಿಂದ ಅಥವಾ ಅದರ ಪರವಾಗಿ ಎತ್ತಲಾಗುವ ಯಾವುದೇ ಡಿಬೆಂಚರನ್ನು ಹೊಂದಿರುವ ಅಥವಾ ಸಾಲದ ಸಂಬಂಧದಲ್ಲಿ ಅನ್ಯಥಾ ಸಂಬಂಧಪಡುವ ಕಾರಣ

– (ಜಿ) ಖಂಡದ ಮೇರೆಗೆ ಅನರ್ಹತೆಗೆ ಒಳಗಾಗಿದ್ದಾನೆಂದು ಭಾವಿಸತಕ್ಕದ್ದಲ್ಲ.

[1][(3) XXX][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**17. ಹಾಲಿ ಸದಸ್ಯರ ಅನರ್ಹತೆ.–** (1) ಮಾರುಕಟ್ಟೆ ಸಮಿತಿಯ ಯಾವನೇ ಸದಸ್ಯನು,–

(ಎ) 16ನೇ ಪ್ರಕರಣದಲ್ಲಿ ನಮೂದಿಸಿದ ಯಾವುದೇ ಅನರ್ಹತೆಗಳಿಗೆ ಒಳಪಟ್ಟರೆ; ಅಥವಾ

[1][(ಬಿ) [2][ಪದನಿಮಿತ್ತ ಸದಸ್ಯನನ್ನು ಹೊರತುಪಡಿಸಿ ಯಾರೇ][2] ಒಬ್ಬ ಸದಸ್ಯನು ಮಾರುಕಟ್ಟೆ ಸಮಿತಿಯ ಅನುಮತಿ ಪಡೆಯದೆ, ಸತತವಾಗಿ ಮೂರಕ್ಕಿಂತ ಹೆಚ್ಚು ಸಾಮಾನ್ಯ ಸಭೆಗಳಿಗೆ ಗೈರು ಹಾಜರಾದರೆ ಅವನ ಸ್ಥಾನವು ಸಂದರ್ಭಾನುಸಾರ ಖಾಲಿಯಾಗುವುದೆಂದು ಅಥವಾ ಖಾಲಿಯಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಆ ಸಂಗತಿಯನ್ನು ಮಾರುಕಟ್ಟೆ ಸಮಿತಿಯು ಆ ಕೂಡಲೇ ಆ ಸದಸ್ಯನಿಗೆ ಲಿಖಿತದಲ್ಲಿ ತಿಳಿಸತಕ್ಕದ್ದು:][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಸದಸ್ಯನು ತಾನು ಗೈರು ಹಾಜರಾಗಲು ಅನುಮತಿ ಕೋರಿ ಮಾರುಕಟ್ಟೆ ಸಮಿತಿಗೆ ಅರ್ಜಿಯನ್ನು ಸಲ್ಲಿಸಿದ್ದು ಮಾರುಕಟ್ಟೆ ಸಮಿತಿಯು, ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳ ಅವಧಿಯೊಳಗೆ ಆ ಬಗ್ಗೆ ತನ್ನ ನಿರ್ಣಯವನ್ನು ಅರ್ಜಿದಾರನಿಗೆ ತಿಳಿಸುವುದಕ್ಕೆ ತಪ್ಪಿದಲ್ಲಿ, ಕೋರಿರುವ ರಜೆಯನ್ನು ಮಾರುಕಟ್ಟೆ ಸಮಿತಿಯು ಮಂಜೂರು ಮಾಡಿದೆ ಎಂದು ಭಾವಿಸತಕ್ಕದ್ದು.

(2) ಯಾವನೇ [1][ಸದಸ್ಯನು (1)ನೆಯ ಉಪಪ್ರಕರಣದ ಮೇರೆಗೆ ಅನರ್ಹನಾಗಿರುವನೇ ಅಥವಾ ಅನರ್ಹತೆಗೆ ಗುರಿಯಾಗಿರುವನೇ ಎಂಬ ಪ್ರಶ್ನೆ ಉದ್ಭವಿಸಿದಾಗಲೆಲ್ಲ ಕೃಷಿ ಮಾರುಕಟ್ಟೆ ನಿರ್ದೇಶಕನು][1] ಸ್ವಪ್ರೇರಣೆಯಿಂದ ಅಥವಾ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯ ವರದಿಯ ಮೇಲೆ ಅಥವಾ ಅನ್ಯಥಾ ಮತ್ತು ಆ ಬಗ್ಗೆ ಸಂಬಂಧಪಟ್ಟ ಸದಸ್ಯರಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ ಮತ್ತು ತಾನು ಸೂಕ್ತವೆಂದು ಭಾವಿಸುವಂತಹ ವಿಚಾರಣೆಯನ್ನು ನಡೆಸಿದ ನಂತರ ಆ ಪ್ರಶ್ನೆಯನ್ನು ತೀರ್ಮಾನಿಸತಕ್ಕದ್ದು ಮತ್ತು ಅವನ ತೀರ್ಮಾನವು ಅಂತಿಮವಾಗಿರತಕ್ಕದ್ದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(3) ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ ಮತ್ತು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 1991 ಜಾರಿಗೆ ಬಂದ ದಿನಾಂಕದಂದು ಡೆಪ್ಯೂಟಿ ಕಮೀಷನರ್‌ನ ಮುಂದೆ 2ನೇ ಉಪ ಪ್ರಕರಣದ ಮೇರೆಗೆ ಇತ್ಯರ್ಥದಲ್ಲಿರುವ ಯಾವುದೇ ಪ್ರಶ್ನೆಯು ಕೃಷಿಮಾರುಕಟ್ಟೆ ನಿರ್ದೇಶಕನಿಗೆ ವರ್ಗಾವಣೆಯಾಗಿರತಕ್ಕದ್ದು ಮತ್ತು ಅಂಥ ಪ್ರಶ್ನೆಯನ್ನು ಅವನಿಗೆ ವರದಿ ಮಾಡಿದ್ದರೆ ಅಥವಾ ಆ ಕುರಿತು ಅವನೇ ಕ್ರಮ ಪ್ರಾರಂಭಿಸಿದ್ದರೆ ಹೇಗೋ ಹಾಗೆ ಅದು ಇತ್ಯರ್ಥವಾಗತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**18. ಪ್ರತಿನಿಧಿಯನ್ನು ಚುನಾಯಿಸಲು ತಪ್ಪುವ ಚುನಾವಣಾ ಕ್ಷೇತ್ರ ಅಥವಾ ಸಂಸ್ಥೆ.–** (1) ಯಾವುದೇ ಚುನಾವಣಾ ಕ್ಷೇತ್ರದಲ್ಲಿ ಅಗತ್ಯ ಸಂಖ್ಯೆಯ ಅಭ್ಯರ್ಥಿಗಳ ನಾಮನಿರ್ದೇಶನಗಳು ಇಲ್ಲದಿದ್ದ ಕಾರಣ ಅದಕ್ಕೆ ಅಗತ್ಯವಾದಷ್ಟು ಪ್ರತಿನಿಧಿಗಳನ್ನು ಚುನಾಯಿಸಲು ತಪ್ಪಿದರೆ, ಆಗ ರಾಜ್ಯ ಸರ್ಕಾರವು, ಅಂತಹ ಚುನಾವಣಾ ಕ್ಷೇತ್ರವನ್ನು ಪ್ರತಿನಿಧಿಸುವ ಸದಸ್ಯರಾಗಿ ಚುನಾಯಿತರಾಗಲು ಅರ್ಹರಾಗಿರಬಹುದಾದಂಥ ವ್ಯಕ್ತಿಗಳನ್ನು, ಸದಸ್ಯರ ಅಗತ್ಯ ಸಂಖ್ಯೆಗೆ ಕಡಿಮೆಯಿರುವಷ್ಟು ಸದಸ್ಯರನ್ನು ಭರ್ತಿ ಮಾಡಲು ಅಗತ್ಯವಿರುವ ವ್ಯಕ್ತಿಗಳನ್ನು ನಾಮ ನಿರ್ದೇಶನ ಮಾಡತಕ್ಕದ್ದು ಮತ್ತು ಹಾಗೆ ನಾಮ ನಿರ್ದೇಶಿತರಾದ ವ್ಯಕ್ತಿಗಳು ಅಂಥ ಚುನಾವಣಾ ಕ್ಷೇತ್ರದಿಂದ ಕ್ರಮಬದ್ಧವಾಗಿ ಚುನಾಯಿತರಾಗಿದ್ದಾರೆಂದು ಭಾವಿಸತಕ್ಕದ್ದು. ನಾಮಪತ್ರಗಳ ಪರಿಶೀಲನೆಯ ಕಾಲದಲ್ಲಿ ಯಾವುವೇ ನಾಮಪತ್ರಗಳನ್ನು ನಿರಾಕರಿಸಿರುವ ಕಾರಣ ಅಗತ್ಯವಾದಷ್ಟು ಪ್ರತಿನಿಧಿಗಳನ್ನು ಚುನಾವಣಾ ಕ್ಷೇತ್ರದಿಂದ ಚುನಾಯಿಸಲು ಸಾಧ್ಯವಾಗದಿದ್ದರೆ ಆಗ ಡೆಪ್ಯುಟಿ ಕಮಿಷನರನು, ಆ ಚುನಾವಣಾ ಕ್ಷೇತ್ರದಲ್ಲಿ ಮತ್ತೊಂದು ಚುನಾವಣೆಯನ್ನು ನಡೆಸತಕ್ಕದ್ದು.

(2) ಯಾವುದೇ ಸಂಸ್ಥೆಯು ತನ್ನ ಪ್ರತಿನಿಧಿಯನ್ನು ಚುನಾಯಿಸಲು ತಪ್ಪಿದಲ್ಲಿ, ಆಗ ರಾಜ್ಯ ಸರ್ಕಾರವು, ಅಂಥ ಪ್ರತಿನಿಧಿಯಾಗಿ ಚುನಾಯಿತನಾಗಲು ಅರ್ಹನಾದ ಆ ಸಂಸ್ಥೆಯ ಸದಸ್ಯನನ್ನು ನಾಮ ನಿರ್ದೇಶನ ಮಾಡತಕ್ಕದ್ದು.

**19. ಏಕಕಾಲದಲ್ಲಿ ಅನೇಕ ಸದಸ್ಯತ್ವದ ನಿಷೇಧ.–** [1][(1)][1] [1][(i)][1] ಒಬ್ಬ ವ್ಯಕ್ತಿಯು, ಒಂದಕ್ಕಿಂತ ಹೆಚ್ಚು ಚುನಾವಣಾ ಕ್ಷೇತ್ರಗಳಿಂದ ಚುನಾಯಿತನಾಗಿದ್ದರೆ, ತಾನು ರುಜು ಮಾಡಿದ ಲಿಖಿತ ನೋಟೀಸನ್ನು ಗೊತ್ತುಪಡಿಸಿದ ಅವಧಿಯೊಳಗೆ ಡೆಪ್ಯುಟಿ ಕಮೀಷನರನಿಗೆ ಕೊಟ್ಟು ತಾನು ಸೇವೆ ಸಲ್ಲಿಸಬೇಕೆಂದಿರುವ ಯಾವುದಾದರೂ ಒಂದು ಚುನಾವಣಾ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳತಕ್ಕದ್ದು ಮತ್ತು ಆ ಆಯ್ಕೆಯು ಅಂತಿಮವಾಗಿರತಕ್ಕದ್ದು.

1. 1970ರ ಅಧಿನಿಯಮ ಸಂಖ್ಯೆ 3ರ ಮೂಲಕ 17-10-1969ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

[1][(ii)][1] ಯಾವುದೇ ಅಂತಹ ಆಯ್ಕೆಯನ್ನು ಮಾಡಿರುವಾಗ, ಅಂತಹ ವ್ಯಕ್ತಿಯು ಸೇವೆ ಮಾಡಲು ಆಯ್ಕೆ ಮಾಡಿಕೊಂಡ ಚುನಾವಣಾ ಕ್ಷೇತ್ರದ ಹೊರತಾಗಿ, ಇತರ ಚುನಾವಣಾ ಕ್ಷೇತ್ರವು ಅಥವಾ ಪ್ರತಿಯೊಂದು ಇತರ ಚುನಾವಣಾ ಕ್ಷೇತ್ರವು ಮತ್ತೊಬ್ಬ ವ್ಯಕ್ತಿಯನ್ನು ಚುನಾಯಿಸುವಂತೆ ಆ ಕ್ಷೇತ್ರವನ್ನು ಅಥವಾ ಕ್ಷೇತ್ರಗಳನ್ನು ಕೋರತಕ್ಕದ್ದು.

1. 1970ರ ಅಧಿನಿಯಮ ಸಂಖ್ಯೆ 3ರ ಮೂಲಕ 17-10-1969ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

[1][[2][(iii)][1] ಅಭ್ಯರ್ಥಿಯು, (i)ನೇ ಖಂಡದಲ್ಲಿ ಉಲ್ಲೇಖಿಸಿರುವ ಆಯ್ಕೆಯನ್ನು ಆ ಖಂಡದಡಿಯಲ್ಲಿ ಗೊತ್ತುಪಡಿಸಿದ ಅವಧಿಯು ಮುಕ್ತಾಯವಾಗುವ ಮೊದಲು ಮಾಡದಿದ್ದಲ್ಲಿ, ಎಲ್ಲಾ ಚುನಾವಣಾ ಕ್ಷೇತ್ರಗಳಲ್ಲಿನ ಅವನ ಸ್ಥಾನಗಳು ಖಾಲಿಯಾಗತಕ್ಕದ್ದು.][2]

1. 1970ರ ಅಧಿನಿಯಮ ಸಂಖ್ಯೆ 3ರ ಮೂಲಕ 17-10-1969ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

2. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**ವಿವರಣೆ:** [1][ಈ ಉಪಪ್ರಕರಣ][1] ದ ಉದ್ದೇಶಗಳಿಗಾಗಿ "ಚುನಾವಣಾ ಕ್ಷೇತ್ರ" ಎಂಬುದರಲ್ಲಿ 11ನೇ ಪ್ರಕರಣದ (1)ನೇ ಉಪಪ್ರಕರಣದ [2][(iv)ನೇ ಖಂಡದಲ್ಲಿ ಉಲ್ಲೇಖಿಸಿರುವ ಸಂಸ್ಥೆಯು][2] ಒಳಗೊಳ್ಳತಕ್ಕದ್ದು.

1. 1970ರ ಅಧಿನಿಯಮ ಸಂಖ್ಯೆ 3ರ ಮೂಲಕ 17-10-1969ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(2) ಯಾವ ವ್ಯಕ್ತಿಯೂ ಎರಡು ಅಥವಾ ಹೆಚ್ಚು ಮಾರುಕಟ್ಟೆ ಸಮಿತಿಗಳ ಸದಸ್ಯನಾಗಿರತಕ್ಕದ್ದಲ್ಲ ಮತ್ತು ಒಬ್ಬ ವ್ಯಕ್ತಿಯು ಎರಡು ಅಥವಾ ಹೆಚ್ಚು ಮಾರುಕಟ್ಟೆ ಸಮಿತಿಗಳಿಗೆ ಸದಸ್ಯನಾಗಿ ಆಯ್ಕೆಗೊಂಡಿದ್ದರೆ, ಆಗ ಅವನು ಅಂಥ ಮಾರುಕಟ್ಟೆ ಸಮಿತಿಗಳಲ್ಲಿ ಒಂದನ್ನು ಬಿಟ್ಟು ಇತರ ಮಾರುಕಟ್ಟೆ ಸಮಿತಿಗಳಲ್ಲಿನ ತನ್ನ ಸ್ಥಾನಕ್ಕೆ ಮುಂಚೆಯೇ ರಾಜೀನಾಮೆ ನೀಡಿದ್ದ ಹೊರತು ಗೊತ್ತುಪಡಿಸಬಹುದಾದಂಥ ಅವಧಿಯು ಮುಕ್ತಾಯವಾದಾಗ ಎಲ್ಲ ಮಾರುಕಟ್ಟೆ ಸಮಿತಿಗಳಲ್ಲಿನ ಅವನ ಸ್ಥಾನಗಳು ಖಾಲಿಯಾಗತಕ್ಕದ್ದು.

(3) ಯಾವ ವ್ಯಕ್ತಿಯು, ಈಗಾಗಲೇ ಒಂದು ಮಾರುಕಟ್ಟೆ ಸಮಿತಿಯ ಸದಸ್ಯನಾಗಿರುವನೋ ಮತ್ತು ಅಂಥ ಸಮಿತಿಯ ಸದಸ್ಯನಾಗಿ ಅವನ ಪದಾವಧಿಯು ಪ್ರಾರಂಭವಾಗಿರುವುದೋ ಆ ವ್ಯಕ್ತಿಯು ಮತ್ತೊಂದು ಮಾರುಕಟ್ಟೆ ಸಮಿತಿಯ ಸದಸ್ಯನಾಗಿ ಆಯ್ಕೆಯಾದರೆ ಮೊದಲು ಹೇಳಿರುವ ಮಾರುಕಟ್ಟೆ ಸಮಿತಿಯಲ್ಲಿನ ಅವನ ಸ್ಥಾನವು ಅವನು ಹಾಗೆ ಆಯ್ಕೆಯಾದ ದಿನಾಂಕದಿಂದ ಖಾಲಿಯಾಗತಕ್ಕದ್ದು.][1]

1. 1970ರ ಅಧಿನಿಯಮ ಸಂಖ್ಯೆ 3ರ ಮೂಲಕ 17-10-1969ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**20. ಚುನಾವಣೆಯ ಸಿಂಧುತ್ವವನ್ನು ನಿರ್ಧರಿಸುವುದು.-** (1) 27ನೇ ಪ್ರಕರಣದ ಮೇರೆಗೆ ಚುನಾವಣೆಯ ಫಲಿತಾಂಶವನ್ನು ಪ್ರಕಟಿಸಿದ ದಿನಾಂಕದಿಂದ ಹದಿನೈದು ದಿವಸಗಳೊಳಗೆ ಯಾವುದೇ ಸಮಯದಲ್ಲಿ, ಚುನಾವಣೆಯಲ್ಲಿ ಸ್ಪರ್ಧಿಸಿರುವ ಯಾವನೇ ಅಭ್ಯರ್ಥಿಯು ಅಥವಾ ಆ ಚುನಾವಣೆಯಲ್ಲಿ ಮತ ನೀಡಲು ಅರ್ಹನಾದ ಯಾವನೇ ವ್ಯಕ್ತಿಯು, ಆ ಚುನಾವಣೆಯ ಸಿಂಧುತ್ವವನ್ನು ನಿರ್ಧರಿಸುವುದಕ್ಕಾಗಿ ಮತ್ತು ಈ ಕೆಳಕಂಡ ಎರಡು ಪರಿಹಾರಗಳಲ್ಲಿ ಯಾವುದೇ ಒಂದನ್ನು ಅಥವಾ ಆ ಎರಡೂ ಪರಿಹಾರಗಳನ್ನು ಕ್ಲೇಮು ಮಾಡುವುದಕ್ಕಾಗಿ ಸಂಬಂಧಪಟ್ಟ ಮಾರುಕಟ್ಟೆ ಪ್ರದೇಶದ ಮಾರುಕಟ್ಟೆ ಪ್ರಾಂಗಣವು ಯಾವ ಮುನ್ಸೀಫ್‌ನ ಅಧಿಕಾರ ವ್ಯಾಪ್ತಿಯೊಳಗೆ ಬರುವುದೋ ಅವನಿಗೆ ಗೊತ್ತುಪಡಿಸಿದ ರೀತಿಯಲ್ಲಿ ವೆಚ್ಚಗಳ ಬಗ್ಗೆ, ಭದ್ರತೆಯಾಗಿ ಎರಡು ನೂರು ರೂಪಾಯಿಗಳನ್ನು ಠೇವಣಿ ಮಾಡಿ ಚುನಾವಣೆಯಲ್ಲಿನ ಅಭ್ಯರ್ಥಿಗಳನ್ನು ಪಕ್ಷಕಾರರನ್ನಾಗಿ ಮಾಡಿ ಚುನಾವಣಾ ತಕರಾರು ಅರ್ಜಿಯನ್ನು ಸಲ್ಲಿಸಿ ಆ ಚುನಾವಣೆಯನ್ನು ಪ್ರಶ್ನಿಸಬಹುದು,-

(ಎ) ಚುನಾಯಿತರಾದ ಎಲ್ಲ ಅಭ್ಯರ್ಥಿಗಳ ಚುನಾವಣೆಯು ಅಥವಾ ಅವರ ಪೈಕಿ ಯಾವನೇ ಅಭ್ಯರ್ಥಿಯ ಚುನಾವಣೆಯು ಶೂನ್ಯವಾಗಿದೆ ಎಂಬ ಘೋಷಣೆ;

(ಬಿ) ತಾನೇ ಅಥವಾ ಯಾವನೇ ಇತರ ಅಭ್ಯರ್ಥಿಯು ಕ್ರಮಬದ್ಧವಾಗಿ ಚುನಾಯಿತ ನಾಗಿದ್ದಾನೆಂಬ ಘೋಷಣೆ.

(2) ಮುನ್ಸೀಫನು, ತಾನು ಅವಶ್ಯವೆಂದು ಭಾವಿಸುವಂತಹ ವಿಚಾರಣೆಯನ್ನು ನಡೆಸಿದ ಅನಂತರ,-

(ಎ) ಚುನಾವಣಾ ಅರ್ಜಿಯನ್ನು ವಜಾ ಮಾಡುವ; ಅಥವಾ

(ಬಿ) ಚುನಾಯಿತರಾದ ಎಲ್ಲಾ ಅಭ್ಯರ್ಥಿಗಳ ಅಥವಾ ಅವರಲ್ಲಿ ಯಾವನೇ ಅಭ್ಯರ್ಥಿಯ ಚುನಾವಣೆಯು ಶೂನ್ಯವೆಂದು ಘೋಷಿಸುವ; ಅಥವಾ

(ಸಿ) ಚುನಾಯಿತರಾದ ಎಲ್ಲಾ ಅಭ್ಯರ್ಥಿಗಳ ಅಥವಾ ಅವರಲ್ಲಿ ಯಾವನೇ ಅಭ್ಯರ್ಥಿಯ ಚುನಾವಣೆಯು ಶೂನ್ಯವಾಗಿದೆ ಎಂದು ಮತ್ತು ಅರ್ಜಿದಾರನು ಅಥವಾ ಇತರ ಯಾವನೇ ಅಭ್ಯರ್ಥಿಯು ಕ್ರಮಬದ್ಧವಾಗಿ ಚುನಾಯಿತನಾಗಿದ್ದಾನೆಂದು ಘೋಷಿಸುವ

– ಆದೇಶವನ್ನು ಮಾಡತಕ್ಕದ್ದು.

ಸದರಿ ವಿಚಾರಣೆಯ ಉದ್ದೇಶಕ್ಕಾಗಿ, ಮುನ್ಸೀಫನು ಸಿವಿಲ್ ನ್ಯಾಯಾಲಯದ ಅಧಿಕಾರಗಳ ಪೈಕಿ ಯಾವುವೇ ಅಧಿಕಾರಗಳನ್ನು ಚಲಾಯಿಸಬಹುದು ಮತ್ತು ಅವನು ಸೂಕ್ತವೆಂದು ಭಾವಿಸಬಹುದಾದಂತಹ ರೀತಿಯಲ್ಲಿ ಖರ್ಚುಗಳನ್ನು

ಕೊಡುವಂತೆ ಆದೇಶ ಮಾಡಬಹುದು ಮತ್ತು ಅಂತಹ ಖರ್ಚುಗಳನ್ನು ನೀಡುವಂತೆ 1908 ರ ಸಿವಿಲ್ ಪ್ರಕ್ರಿಯಾ ಸಂಹಿತೆಯ (1908 ರ ಕೇಂದ್ರ ಅಧಿನಿಯಮ 5 ) ಮೇರೆಗೆ ಆದೇಶ ಮಾಡಲಾಗಿದ್ದರೆ ಹೇಗೋ ಹಾಗೆ ಅವುಗಳನ್ನು ವಸೂಲು ಮಾಡತಕ್ಕದ್ದು ಮತ್ತು ಅವನ ಆದೇಶದ ಪರಿಣಾಮವಾಗಿ, ಘೋಷಿತ ಚುನಾವಣಾ ಫಲಿತಾಂಶವನ್ನು ತಿದ್ದುಪಡಿ ಮಾಡಿದ್ದರೆ ಅಥವಾ ರದ್ದುಗೊಳಿಸಿದ್ದರೆ, ಹಾಗೆ ಚುನಾವಣೆಯನ್ನು ರದ್ದುಗೊಳಿಸಿದ ಬಗ್ಗೆ ಅವನು ಕೂಡಲೇ ಡೆಪ್ಯುಟಿ ಕಮಿಷನರನಿಗೆ ತಿಳಿಸತಕ್ಕದ್ದು, ಡೆಪ್ಯುಟಿ ಕಮಿಷನರನು ಹೊಸ ಚುನಾವಣೆಯನ್ನು ನಡೆಸುವುದಕ್ಕಾಗಿ ಅವಶ್ಯ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

**21. ಚುನಾವಣೆ ಶೂನ್ಯವೆಂದು ಘೋಷಿಸುವುದಕ್ಕೆ ಆಧಾರಗಳು.**– ಮುನ್ಸೀಫನು,–

(ಎ) ಚುನಾಯಿತ ಅಭ್ಯರ್ಥಿಯು, ಚುನಾವಣೆಯ ದಿನಾಂಕದಂದು, ಆ ಸ್ಥಾನವನ್ನು ಭರ್ತಿ ಮಾಡುವುದಕ್ಕೆ ಆಯ್ಕೆಯಾಗಲು ಅರ್ಹನಾಗಿರಲಿಲ್ಲವೆಂದು ಅಥವಾ ಅನರ್ಹನಾಗಿದ್ದಾನೆಂದು, ಅಥವಾ

(ಬಿ) ಚುನಾಯಿತ ಅಭ್ಯರ್ಥಿಯು ಅಥವಾ ಅವನ ಚುನಾವಣಾ ಏಜೆಂಟನು ಅಥವಾ ಚುನಾಯಿತ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯಿಂದ ಯಾವನೇ ಇತರ ವ್ಯಕ್ತಿಯು ಯಾವುದೇ ಭ್ರಷ್ಟಾಚಾರ ಎಸಗಿದ್ದಾನೆಂದು, ಅಥವಾ

(ಸಿ) ಯಾವುದೇ ನಾಮಪತ್ರವನ್ನು ಅನುಚಿತವಾಗಿ ತಿರಸ್ಕರಿಸಲಾಗಿದೆ ಎಂದು, ಅಥವಾ

(ಡಿ) ಚುನಾವಣೆಯ ಫಲಿತಾಂಶವು,–

(i) ಯಾವುದೇ ನಾಮಪತ್ರವನ್ನು ಅನುಚಿತವಾಗಿ ಸ್ವೀಕರಿಸುವ, ಅಥವಾ

(ii) ಅಭ್ಯರ್ಥಿಯ ಹೊರತಾಗಿ ಯಾವನೇ ವ್ಯಕ್ತಿಯು ಅಥವಾ ಅವನ ಚುನಾವಣಾ ಏಜೆಂಟನು ಅಥವಾ ಅಂತಹ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯಿಂದ ಕೆಲಸ ಮಾಡುತ್ತಿರುವ ವ್ಯಕ್ತಿಯು ಚುನಾಯಿತ ಅಭ್ಯರ್ಥಿಯ ಹಿತಾಸಕ್ತಿಯಲ್ಲಿ ಯಾವುದೇ ಭ್ರಷ್ಟಾಚಾರ ಮಾಡಿರುವ, ಅಥವಾ

(iii) ಯಾವುದೇ ಮತವನ್ನು ಅನುಚಿತವಾಗಿ ಸ್ವೀಕರಿಸುವ, ನಿರಾಕರಿಸುವ ಅಥವಾ ತಿರಸ್ಕರಿಸುವ ಅಥವಾ ಶೂನ್ಯವಾದ ಯಾವುದೇ ಮತವನ್ನು ಸ್ವೀಕರಿಸುವ, ಅಥವಾ

(iv) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಲಾದ ಯಾವುವೇ ನಿಯಮಗಳ ಅಥವಾ ಮಾಡಲಾದ ಯಾವುವೇ ಆದೇಶಗಳ ಉಪಬಂಧಗಳನ್ನು ಪಾಲಿಸದಿರುವ

– ಕಾರಣದಿಂದಾಗಿ ಚುನಾಯಿತ ಅಭ್ಯರ್ಥಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಗಣನೀಯವಾಗಿ ಬಾಧಿತವಾಗಿದೆ ಎಂದು ಅಭಿಪ್ರಾಯ ಪಟ್ಟರೆ, ಚುನಾಯಿತನಾದ ಯಾವನೇ ಅಭ್ಯರ್ಥಿಯ ಅಥವಾ ಎಲ್ಲಾ ಅಭ್ಯರ್ಥಿಗಳ ಚುನಾವಣೆಯು ಶೂನ್ಯವಾಗಿದೆ ಎಂದು ಘೋಷಿಸತಕ್ಕದ್ದು.

**22. ಚುನಾಯಿತ ಅಭ್ಯರ್ಥಿಯ ಹೊರತಾಗಿ ಇತರ ಅಭ್ಯರ್ಥಿಯು ಚುನಾಯಿತ ನಾಗಿದ್ದಾನೆಂದು ಘೋಷಿಸಲು ಆಧಾರ.**– ಚುನಾವಣಾ ಅರ್ಜಿಯನ್ನು ಸಲ್ಲಿಸಿರುವ ಯಾವನೇ ವ್ಯಕ್ತಿಯು, ಚುನಾಯಿತನಾದ ಅಭ್ಯರ್ಥಿಯ ಚುನಾವಣೆಯನ್ನು ಪ್ರಶ್ನಿಸುವುದರ ಜೊತೆಗೆ ತಾನು ಅಥವಾ ಯಾವನೇ ಇತರ ವ್ಯಕ್ತಿಯು ಕ್ರಮವಾಗಿ ಚುನಾಯಿತನಾಗಿದ್ದಾನೆಂಬ ಬಗ್ಗೆ ಘೋಷಣೆ ಕೋರಿ ಕ್ಲೇಮು ಮಾಡಿದ್ದರೆ, ಮತ್ತು ಮುನ್ಸೀಫನು,–

(ಎ) ಅರ್ಜಿದಾರನು ಅಥವಾ ಅಂಥ ಇತರ ಅಭ್ಯರ್ಥಿಯು ಅಧಿಕ ಸಂಖ್ಯೆಯ ಸಿಂಧುವಾದ ಮತಗಳನ್ನು ವಾಸ್ತವವಾಗಿ ಪಡೆದಿದ್ದಾನೆಂದು; ಅಥವಾ

(ಬಿ) ಚುನಾಯಿತ ಅಭ್ಯರ್ಥಿಯು ಭ್ರಷ್ಟಾಚಾರದ ಮೂಲಕ ಮತಗಳನ್ನು ಪಡೆಯದೆ ಹೋಗಿದ್ದರೆ ಅರ್ಜಿದಾರನು ಅಥವಾ ಅಂಥ ಇತರ ಅಭ್ಯರ್ಥಿಯು ಅಧಿಕ ಸಂಖ್ಯೆಯ ಸಿಂಧುವಾದ ಮತಗಳನ್ನು ಪಡೆಯಬಹುದಾಗಿತ್ತೆಂದು ಅಭಿಪ್ರಾಯಪಟ್ಟರೆ ಮುನ್ಸೀಫ್‌ನು ಆ ಚುನಾಯಿತ ಅಭ್ಯರ್ಥಿಯ ಚುನಾವಣೆಯು ಶೂನ್ಯವಾಗಿರುವುದಾಗಿ ಘೋಷಿಸಿದ ತರುವಾಯ ಸಂದರ್ಭಾನುಸಾರ ಅರ್ಜಿದಾರನು ಅಥವಾ ಅಂಥ ಇತರ ಅಭ್ಯರ್ಥಿಯು ಕ್ರಮಬದ್ಧವಾಗಿ ಚುನಾಯಿತನಾಗಿದ್ದಾನೆಂದು ಘೋಷಿಸತಕ್ಕದ್ದು.

**23. ಸಮಮತಗಳ ಸಂದರ್ಭದಲ್ಲಿ ಕಾರ್ಯವಿಧಾನ.**– ಚುನಾವಣಾ ಅರ್ಜಿಯ ಅಧಿವಿಚಾರಣೆಯ ಕಾಲದಲ್ಲಿ ಆ ಚುನಾವಣೆಯಲ್ಲಿ ಯಾರೇ ಅಭ್ಯರ್ಥಿಗಳ ನಡುವೆ ಸಮಮತಗಳು ಇವೆಯೆಂದು ಮತ್ತು ಒಂದು ಮತವನ್ನು ಸೇರಿಸಿದರೆ, ಆ ಅಭ್ಯರ್ಥಿಗಳಲ್ಲಿ ಯಾವನಾದರೂ ಚುನಾಯಿತನಾಗಿದ್ದಾನೆಂದು ಘೋಷಿಸಲ್ಪಡಲು ಹಕ್ಕುಳ್ಳವನಾಗುತ್ತಾನೆಂದು ಕಂಡುಬಂದ ಸಂದರ್ಭದಲ್ಲಿ,–

(ಎ) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಲಾದ ನಿಯಮಗಳ ಉಪಬಂಧಗಳ ಮೇರೆಗೆ ಚುನಾವಣಾ ಅಧಿಕಾರಿಯು ಕೈಕೊಂಡ ಯಾವುದೇ ತೀರ್ಮಾನವು, ಆ ಅಭ್ಯರ್ಥಿಗಳ ನಡುವಣ ಪ್ರಶ್ನೆಯನ್ನು ನಿರ್ಧರಿಸುವಷ್ಟರ ಮಟ್ಟಿಗೆ ಅದು ಆ ಅರ್ಜಿಯ ಉದ್ದೇಶಗಳ ಬಗ್ಗೆ ಸಹ ಪರಿಣಾಮಕಾರಿಯಾಗತಕ್ಕದ್ದು; ಮತ್ತು

(ಬಿ) ಅಂತಹ ತೀರ್ಮಾನದಿಂದ ಆ ಪ್ರಶ್ನೆಯು ನಿರ್ಧಾರವಾಗದಿರುವ ಸಂದರ್ಭದಲ್ಲಿ ಮುನ್ಸೀಫ್‍ನು, ಚೀಟಿ ಎತ್ತುವ ಮೂಲಕ ಆ ಪ್ರಶ್ನೆಯನ್ನು ನಿರ್ಧರಿಸತಕ್ಕದ್ದು ಮತ್ತು ಯಾವ ಅಭ್ಯರ್ಥಿಯ ಪರವಾಗಿ ಚೀಟಿ ಬರುವುದೋ ಅವನು ಒಂದು ಹೆಚ್ಚು ಮತವನ್ನು ಪಡೆದಿದ್ದರೆ ಹೇಗೋ ಹಾಗೆ ಎಂದು ತೀರ್ಮಾನಿಸಿ ಕ್ರಮ ಕೈಕೊಳ್ಳತಕ್ಕದ್ದು.

**24. ಭ್ರಷ್ಟ ಆಚರಣೆಗಳು.–** (1) ಯಾವನೇ ವ್ಯಕ್ತಿಯು,–

(ಎ) ಯಾವನೇ ಮತದಾರನನ್ನು ಯಾವನೇ ಅಭ್ಯರ್ಥಿಯ ಪರವಾಗಿ ಮತವನ್ನು ಕೊಡುವಂತೆ ಪ್ರೇರೇಪಿಸಲು ಅಥವಾ ಮತವನ್ನು ಕೊಡದಂತೆ ತಡೆಯಲು, ಹಣವನ್ನು ಅಥವಾ ಬೆಲೆಯುಳ್ಳ ಪ್ರತಿಫಲವನ್ನು ಕೊಡಮಾಡುವುದಾಗಿ ಹೇಳಿದರೆ ಅಥವಾ ಕೊಟ್ಟರೆ ಅಥವಾ ಯಾವನೇ ವ್ಯಕ್ತಿಗೆ ಹಾನಿ ಉಂಟು ಮಾಡುವುದಾಗಿ ಬೆದರಿಕೆ ಹಾಕಿದರೆ; ಅಥವಾ

(ಬಿ) ಅಂಥ ಮತವನ್ನು ನೀಡುವವನಾಗಿಲ್ಲದ ಮತದಾರನ ಹೆಸರಿನಲ್ಲಿ ಮತವನ್ನು ಕೊಟ್ಟರೆ, ಕೊಡಿಸಿದರೆ ಅಥವಾ ಕೊಡುವಂತೆ ದುಷ್ಪ್ರೇರಿಸಿದರೆ; ಅಥವಾ

(ಸಿ) ಯಾವನೇ ಮತದಾರನು (ಸ್ವತಃ ಅವನ ಕುಟುಂಬದ ಸದಸ್ಯರ ಅಥವಾ ಅವನ ಏಜೆಂಟನ ಹೊರತಾಗಿ) ಯಾವುದೇ ಮತದಾನ ಕೇಂದ್ರಕ್ಕೆ ಹೋಗಿ ಬರಲು ಅವನಿಗಾಗಿ ಯಾವುದೇ ವಾಹನವನ್ನು ಅಥವಾ ನೌಕೆಯನ್ನು ಹಣ ಸಂದಾಯದ ಮೇಲೆ ಅಥವಾ ಅನ್ಯಥಾ ಬಾಡಿಗೆಗೆ ತೆಗೆದುಕೊಂಡರೆ ಅಥವಾ ದೊರಕಿಸಿಕೊಟ್ಟರೆ ಭ್ರಷ್ಟ ಆಚರಣೆಯನ್ನು ಮಾಡಿರುವುದಾಗಿ ಭಾವಿಸತಕ್ಕದ್ದು:

ಪರಂತು, ಮತದಾರನು ಅಥವಾ ಹಲವು ಮತದಾರರು ಅಂಥ ಮತದಾನ ಕೇಂದ್ರಕ್ಕೆ ಹೋಗಿ ಬರಲು ಅಥವಾ ಅವನನ್ನು ಅಥವಾ ಅವರನ್ನು ಕರೆದುಕೊಂಡು ಹೋಗುವ ಉದ್ದೇಶಕ್ಕಾಗಿ ಅವರ ಜಂಟಿ ಖರ್ಚಿನಲ್ಲಿ ಒಂದು ವಾಹನವನ್ನು ಅಥವಾ ನೌಕೆಯನ್ನು ಬಾಡಿಗೆಗೆ ತೆಗೆದುಕೊಂಡಲ್ಲಿ, ಹಾಗೆ ಬಾಡಿಗೆಗೆ ತೆಗೆದುಕೊಳ್ಳಲಾದ ವಾಹನ ಅಥವಾ ನೌಕೆಯು ಯಾಂತ್ರಿಕ ಶಕ್ತಿಯಿಂದ ನಡೆಸಲಾಗುವ ಒಂದು ವಾಹನ ಅಥವಾ ನೌಕೆಯಾಗಿರದಿದ್ದಲ್ಲಿ, ಆ ಆಚರಣೆಯನ್ನು ಈ ಖಂಡದ ಮೇರೆಗೆ ಭ್ರಷ್ಟ ಆಚರಣೆ ಎಂದು ಭಾವಿಸತಕ್ಕದ್ದಲ್ಲ:

ಮತ್ತೂ ಪರಂತು, ಅಂಥ ಯಾವುದೇ ಮತದಾನ ಕೇಂದ್ರಕ್ಕೆ ಅಥವಾ ಮತದಾನಕ್ಕಾಗಿ ನಿಗದಿಪಡಿಸಿರುವ ಸ್ಥಳಕ್ಕೆ ಹೋಗಿಬರುವ ಉದ್ದೇಶಕ್ಕಾಗಿ ತನ್ನ ಸ್ವಂತ ಖರ್ಚಿನಲ್ಲಿ ಯಾವುದೇ ಸಾರ್ವಜನಿಕ ಸಾರಿಗೆ ವಾಹನ ಅಥವಾ ನೌಕೆ ಅಥವಾ ಯಾವುದೇ ರೈಲ್ವೆ ಕ್ಯಾರೇಜನ್ನು ಮತದಾರನು ಉಪಯೋಗಿಸಿದರೆ ಆ ಆಚರಣೆಯನ್ನು ಈ ಖಂಡದ ಮೇರೆಗೆ ಭ್ರಷ್ಟ ಆಚರಣೆಯೆಂದು ಭಾವಿಸತಕ್ಕದ್ದಲ್ಲ.

ಅಭ್ಯರ್ಥಿಯ ತಿಳುವಳಿಕೆ ಮತ್ತು ಸಮ್ಮತಿಯಿಂದ ಅಥವಾ ಚುನಾವಣೆಯ ಸಂಬಂಧದಲ್ಲಿ ಅಂತಹ ಅಭ್ಯರ್ಥಿಯ ಸಾಮಾನ್ಯ ಅಥವಾ ವಿಶೇಷ ಅಧಿಕಾರದ ಮೇರೆಗೆ ಕಾರ್ಯನಿರ್ವಹಿಸುವ ವ್ಯಕ್ತಿಯು ಭ್ರಷ್ಟಾಚಾರವನ್ನು ಮಾಡಿದ್ದರೆ ಆ ಅಭ್ಯರ್ಥಿಯು ಅದನ್ನು ಮಾಡಿರುವುದಾಗಿ ಭಾವಿಸತಕ್ಕದ್ದು.

**ವಿವರಣೆ I:–** "ವೈಯಕ್ತಿಕ ಲಾಭದ ಭರವಸೆ" ಎಂಬ ಪದಾವಳಿಯಲ್ಲಿ,–

(i) ಮಾರುಕಟ್ಟೆ ಸಮಿತಿಯ ಪರ್ಯಾಲೋಚನೆಗೆ ಬರಬಹುದಾದಂತಹ ಯಾವುದೇ ನಿರ್ದಿಷ್ಟ ಕ್ರಮದ ಪರವಾಗಿ ಅಥವಾ ಅದರ ವಿರುದ್ಧ ಮತನೀಡುವ ಭರವಸೆಯು ಒಳಗೊಳ್ಳುವುದಿಲ್ಲ; ಆದರೆ

(ii) ಮೇಲಿನದಕ್ಕೊಳಪಟ್ಟು ಸ್ವತಃ ತನ್ನ ಅಥವಾ ತಾನು ಆಸಕ್ತನಾಗಿರುವ ಯಾವನೇ ವ್ಯಕ್ತಿಯ ಪ್ರಯೋಜನಕ್ಕಾಗಿರುವ ಭರವಸೆಯು ಒಳಗೊಳ್ಳುತ್ತದೆ.

**ವಿವರಣೆ II:** (1) "ವಾಹನ" ಎಂದರೆ ರಸ್ತೆ ಸಾರಿಗೆಯ ಉದ್ದೇಶಕ್ಕಾಗಿ ಉಪಯೋಗಿಸಿದ ಅಥವಾ ಉಪಯೋಗಿಸಲು ಸಮರ್ಥವಾದ ಯಾವುದೇ ವಾಹನ, ಅದು ಯಂತ್ರಚಾಲಿತವಾಗಿರಬಹುದು, ಅನ್ಯಥಾ ಆಗಿರಬಹುದು ಮತ್ತು ಅದನ್ನು ಇತರ ವಾಹನಗಳನ್ನು ಎಳೆಯುವುದಕ್ಕಾಗಿ ಅಥವಾ ಅನ್ಯಥಾ ಉಪಯೋಗಿಸಬಹುದು.

(2) ಚುನಾವಣೆಗಳಿಗೆ ಸಂಬಂಧಪಟ್ಟ ನಿಯಮಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಜವಾಬ್ದಾರನಾದ ಅಧಿಕಾರಿಯು ಮಾಡಿದ ತಪ್ಪಿನ ಅಥವಾ ಭ್ರಷ್ಟ ರೀತಿಯಲ್ಲಿ ಉಂಟಾಗಿರದ ಅಕ್ರಮ ಅಥವಾ ಅನೌಪಚಾರಿಕತೆಯ ಆಧಾರದ ಮೇಲೆ ಮಾತ್ರವೇ ಚುನಾವಣೆಯ ಸಿಂಧುತ್ವವನ್ನು ಪ್ರಶ್ನಿಸಿದರೆ, ಮುನ್ಸೀಫ್‍ನು ಆ ಚುನಾವಣೆಯನ್ನು ರದ್ದುಗೊಳಿಸತಕ್ಕದ್ದಲ್ಲ.

**ವಿವರಣೆ III:–** ಈ ಉಪಪ್ರಕರಣದಲ್ಲಿ "ತಪ್ಪು" ಎಂಬ ಪದವು, ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ ಉಪಬಂಧಗಳ ಯಾವ ಉಲ್ಲಂಘನೆಯಿಂದ ಅಥವಾ ಅವುಗಳನ್ನು ಕಾರ್ಯಗತಗೊಳಿಸುವಲ್ಲಿನ ಯಾವ ಲೋಪದಿಂದ ಅಥವಾ ಯಾವ ಅನನುಪಾಲನೆಯಿಂದ ಚುನಾವಣೆಯ ಫಲಿತಾಂಶದ ಮೇಲೆ ಗಣನೀಯ ಪರಿಣಾಮ ಉಂಟಾಗಿದೆಯೋ ಆ ಯಾವುದೇ ಉಲ್ಲಂಘನೆಯನ್ನು ಅಥವಾ ಲೋಪವನ್ನು ಅಥವಾ ಅನನುಪಾಲನೆಯನ್ನು ಒಳಗೊಳ್ಳುವುದಿಲ್ಲ.

**25. ಮುನ್ಸೀಫನು ಮಾಡಬೇಕಾದ ಇತರ ಆದೇಶಗಳು.–** ಮುನ್ಸೀಫನು, 21ನೇ ಪ್ರಕರಣದ ಮೇರೆಗೆ ತನ್ನ ಆದೇಶದ ಮೂಲಕ ಆ ಪ್ರಕರಣದ (ಬಿ) ಖಂಡದಲ್ಲಿ ನಿರ್ದಿಷ್ಟಪಡಿಸಿರುವ ಆಧಾರದ ಮೇಲೆ ಯಾವನೇ ಅಭ್ಯರ್ಥಿಯ ಚುನಾವಣೆಯು ಶೂನ್ಯವಾಗಿದೆಯೆಂದು ಘೋಷಿಸಿದರೆ, ಅವನು ಸೂಕ್ತವೆಂದು ಯೋಚಿಸಿದಲ್ಲಿ ಈ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ

ಯಾವುದೇ ಭ್ರಷ್ಟಾಚಾರವನ್ನು ಮಾಡಿರುವ ಯಾವನೇ ವ್ಯಕ್ತಿಯು, ಐದು ವರ್ಷಗಳು ಮೀರದ ಅವಧಿಯವರೆಗೆ ಯಾವುದೇ ಮಾರುಕಟ್ಟೆ ಸಮಿತಿಯ ಸದಸ್ಯನಾಗಿರಲು ಅನರ್ಹನಾಗಿರುವನೆಂದು ಘೋಷಿಸಬಹುದು:

ಪರಂತು, ಚುನಾಯಿತ ಅಭ್ಯರ್ಥಿಯ ಹೊರತಾಗಿ ಇತರ ಯಾವನೇ ವ್ಯಕ್ತಿಯ ಸಂಬಂಧದಲ್ಲಿ, ಅಂತಹ ಘೋಷಣೆಯನ್ನು ಏಕೆ ಮಾಡಬಾರದು ಎಂಬುದಕ್ಕೆ ಕಾರಣ ತೋರಿಸಲು ಅವಕಾಶವನ್ನು ಕೊಟ್ಟ ಹೊರತು ಅಂತಹ ಘೋಷಣೆಯನ್ನು ಮಾಡತಕ್ಕದ್ದಲ್ಲ:

ಮತ್ತೂ ಪರಂತು, ಈ ಬಗ್ಗೆ ರಾಜ್ಯ ಸರ್ಕಾರದ ಆದೇಶದ ಮೂಲಕ ಯಾವುದೇ ಕಾಲದಲ್ಲಿ ಯಾವನೇ ವ್ಯಕ್ತಿಯನ್ನು ಅಂತಹ ಅನರ್ಹತೆಯಿಂದ ಮುಕ್ತಗೊಳಿಸಬಹುದು.

**26. ಮುನ್ಸೀಫನ ಆದೇಶಗಳ ವಿರುದ್ಧ ಅಪೀಲು.–** (1) 20, 21, 22, 23 ಅಥವಾ 25ನೇ ಪ್ರಕರಣಗಳ ಮೇರೆಗೆ ಮುನ್ಸೀಫನ ಯಾವುದೇ ತೀರ್ಮಾನ ಅಥವಾ ಆದೇಶದಿಂದ ಬಾಧಿತನಾದ ಯಾವನೇ ವ್ಯಕ್ತಿಯು, ಅಂತಹ ತೀರ್ಮಾನ ಅಥವಾ ಆದೇಶದ ದಿನಾಂಕದಿಂದ ಮೂವತ್ತು ದಿವಸಗಳೊಳಗೆ, ಯಾವ ಜಿಲ್ಲಾ ನ್ಯಾಯಾಧೀಶನ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯೊಳಗೆ ಸಂಬಂಧಪಟ್ಟ ಮಾರುಕಟ್ಟೆ ಪ್ರದೇಶದ ಮಾರುಕಟ್ಟೆ ಪ್ರಾಂಗಣವು ಇರುವುದೋ ಆ ಜಿಲ್ಲಾ ನ್ಯಾಯಾಧೀಶನಿಗೆ ಗೊತ್ತುಪಡಿಸಿದ ರೀತಿಯಲ್ಲಿ ಅಪೀಲನ್ನು ಸಲ್ಲಿಸಬಹುದು, ಅಂತಹ ಅಪೀಲಿನ ಸಂಬಂಧದಲ್ಲಿ ಜಿಲ್ಲಾ ನ್ಯಾಯಾಧೀಶನ ತೀರ್ಮಾನವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು, ಜಿಲ್ಲಾ ನ್ಯಾಯಾಧೀಶನು ತನ್ನ ತೀರ್ಮಾನ ಅಥವಾ ಆದೇಶದ ಪರಿಣಾಮವನ್ನು ಡೆಪ್ಯುಟಿ ಕಮಿಷನರನಿಗೆ ಆ ಕೂಡಲೇ ತಿಳಿಸತಕ್ಕದ್ದು; ಡೆಪ್ಯುಟಿ ಕಮಿಷನರನು ಸಂದರ್ಭಾನುಸಾರ, ಚುನಾಯಿತರಾದವರೆಂದು ಘೋಷಿಸಲಾದ ವ್ಯಕ್ತಿಗಳ ಹೆಸರುಗಳನ್ನು ಪ್ರಕಟಿಸಲು ಅಥವಾ ಹೊಸ ಚುನಾವಣೆಯನ್ನು ನಡೆಸಲು ಕ್ರಮ ತೆಗೆದುಕೊಳ್ಳತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಉಪಬಂಧಿಸಲಾದ ಅಪೀಲಿನ ಹಕ್ಕನ್ನು ಚಲಾಯಿಸಲು ಉದ್ದೇಶಿಸುವ ಯಾವನೇ ವ್ಯಕ್ತಿಯು, 20ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಮಾಡಲಾದ ಠೇವಣಿ ಮೊಬಲಗು ಯಾವುದಾದರೂ ಇದ್ದರೆ ಅದನ್ನು ಹೊರತುಪಡಿಸಿ, ಮುನ್ಸೀಫ್ ನ್ಯಾಯಾಲಯದಲ್ಲಿ ವೆಚ್ಚಗಳಿಗೆ ಭದ್ರತೆಯಾಗಿ ನಾಲ್ಕು ನೂರು ರೂಪಾಯಿಗಳ ಮೊಬಲಗನ್ನು ಗೊತ್ತುಪಡಿಸಿದ ರೀತಿಯಲ್ಲಿ ಠೇವಣಿ ಇಟ್ಟು 20, 21, 22, 23 ಅಥವಾ 25ನೇ ಪ್ರಕರಣಗಳ ಮೇರೆಗೆ ಹೊರಡಿಸಿದ ಮುನ್ಸೀಫ್‌ನ ಆದೇಶದಿಂದಾಗಿ ಉಂಟಾಗುವ ಯಾವುವೇ ಪರಿಣಾಮಗಳನ್ನು ತಡೆಹಿಡಿಯುವ ಆದೇಶವನ್ನು ಪಡೆಯಬಹುದು. ಅಂತಹ ಠೇವಣಿ ಇಟ್ಟ ಮೇಲೆ ಮುನ್ಸೀಫ್‌ನು ತನ್ನ ಆದೇಶದ ದಿನಾಂಕದಿಂದ ಎರಡು ತಿಂಗಳು ಮೀರದ ಅವಧಿಯವರೆಗೆ ಅಂಥ ತಡೆಯಾಜ್ಞೆಯನ್ನು ನೀಡತಕ್ಕದ್ದು. ಅಂತಹ ಅವಧಿಯ ಮುಕ್ತಾಯಕ್ಕೆ ಮುಂಚೆ ಜಿಲ್ಲಾ ನ್ಯಾಯಾಧೀಶನಿಂದ ಇನ್ನೂ ಹೆಚ್ಚಿನ ಅವಧಿಯ ತಡೆಯಾಜ್ಞೆಯನ್ನು ಪಡೆಯದಿದ್ದರೆ ಅಥವಾ ಜಿಲ್ಲಾ ನ್ಯಾಯಾಧೀಶನಿಂದ ಅಂಥ ತಡೆಯಾಜ್ಞೆಯನ್ನು ಪಡೆದುಕೊಂಡಿದ್ದು, ಆ ತಡೆಯಾಜ್ಞೆಯ ಅವಧಿಯು ಮುಕ್ತಾಯಗೊಂಡಿದ್ದರೆ ಅಥವಾ ಅಂಥ ತಡೆಯಾಜ್ಞೆಯನ್ನು ಅಂತಿಮವಾಗಿ ರದ್ದುಗೊಳಿಸಲಾಗಿದ್ದರೆ, ಠೇವಣಿ ಇಟ್ಟ ಮೊಬಲಗನ್ನು ಅಥವಾ ಆ ಅಪೀಲನ್ನು ಅಥವಾ ತಡೆಯಾಜ್ಞೆಯನ್ನು ವಿರೋಧಿಸಿರುವ ಪಕ್ಷಕಾರರಿಗೆ ಜಿಲ್ಲಾ ನ್ಯಾಯಾಧೀಶನು ಅಂಥ ಅಪೀಲಿನಲ್ಲಿ ತನ್ನ ಆದೇಶದ ಮೂಲಕ ನೀಡಿದ ಖರ್ಚುಗಳು ಯಾವುವಾದರೂ ಇದ್ದರೆ ಅವುಗಳ ಮೊಬಲಗನ್ನು ಅಂಥ ಠೇವಣಿ ಇಟ್ಟ ಮೊಬಲಗಿನಿಂದ ವಜಾ ಮಾಡಿದ ತರುವಾಯ ಯಾವುದಾದರೂ ಶಿಲ್ಕು ಉಳಿದರೆ, ಆ ಶಿಲ್ಕನ್ನು ಜಿಲ್ಲಾ ನ್ಯಾಯಾಧೀಶನು ಅಪೀಲಿನಲ್ಲಿ ಅಥವಾ ಆ ತರುವಾಯ ತನ್ನ ತೀರ್ಮಾನವನ್ನು ಕೊಡುವ ಕಾಲದಲ್ಲಿ ಆ ಬಗ್ಗೆ ಮಾಡಿದ ಆದೇಶದ ಮೂಲಕ ಸಂದರ್ಭಾನುಸಾರ ಠೇವಣಿ ಮೊಬಲಗನ್ನು ಅಥವಾ ಆ ಮೊಬಲಗಿನ ಶಿಲ್ಕನ್ನು ಅಥವಾ ಅದರ ಯಾವುದೇ ಭಾಗವನ್ನು ಮರುಪಾವತಿ ಮಾಡಲು ಆದೇಶಿಸಿರುವ ಮತ್ತು ಅಂಥ ಆದೇಶವನ್ನು ಮುನ್ಸೀಫನಿಗೆ ತಿಳಿಸಿರುವ ಹೊರತು, ಮುನ್ಸೀಫನು ಈ ಬಗ್ಗೆ ಮಾಡಿದ ಆದೇಶದ ಮೂಲಕ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು.

(3) ಈ ಪ್ರಕರಣದ ಮೇರೆಗಿನ ಪ್ರತಿಯೊಂದು ಅಪೀಲನ್ನು, ಸಾಧ್ಯವಾದಷ್ಟು ಬೇಗನೆ ತೀರ್ಮಾನಿಸತಕ್ಕದ್ದು ಮತ್ತು ಜಿಲ್ಲಾ ನ್ಯಾಯಾಧೀಶನಿಗೆ ಸಲ್ಲಿಸಲಾಗುವ ಅಪೀಲು ಜ್ಞಾಪನ ಪತ್ರದ ದಿನಾಂಕದಿಂದ ಮೂರು ತಿಂಗಳೊಳಗೆ ಆ ಅಪೀಲನ್ನು ಅಂತಿಮವಾಗಿ ನಿರ್ಧರಿಸಲು ಪ್ರಯತ್ನಿಸತಕ್ಕದ್ದು.

**27. ಚುನಾಯಿತ ಸದಸ್ಯರ ಹೆಸರುಗಳ ಪ್ರಕಟಣೆ.–** ಡೆಪ್ಯುಟಿ ಕಮಿಷನರನು, ಎಲ್ಲಾ ಚುನಾಯಿತ ಸದಸ್ಯರ ಹೆಸರುಗಳನ್ನು ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ [1][ಎರಡು ಕೆಲಸದ ದಿನಗಳೊಳಗೆ][1] ಪ್ರಕಟಿಸತಕ್ಕದ್ದು.

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**28. ಆಕಸ್ಮಿಕ ಖಾಲಿಸ್ಥಾನಗಳು.–** ಸದಸ್ಯನಾಗಿ ಚುನಾಯಿತನಾದ ಅಥವಾ ನಾಮ ನಿರ್ದೇಶಿತನಾದ ವ್ಯಕ್ತಿಯು ಪದಕ್ಕೆ ರಾಜೀನಾಮೆ ನೀಡುವ ಅಥವಾ ಅವನನ್ನು ತೆಗೆದುಹಾಕುವ ಅಥವಾ ಅವನು ಆ ಪದವನ್ನು ಸ್ವೀಕರಿಸದಿರುವ ಕಾರಣದಿಂದ ಅಥವಾ ಅಂಥ ವ್ಯಕ್ತಿಯು ಸದಸ್ಯನಾಗಿರುವುದಕ್ಕೆ ಅನರ್ಹನಾಗಿರುವ ಕಾರಣದಿಂದ ಅಥವಾ ಯಾವುದೇ ಚುನಾವಣೆಯನ್ನು ತಳ್ಳಿಹಾಕಿರುವ ಕಾರಣದಿಂದ ಅಥವಾ ಅವನ ಪದಾವಧಿಯು ಮುಗಿಯುವುದಕ್ಕೆ ಮುಂಚೆ ಅವನ ಮರಣದ ಕಾರಣದಿಂದ ಅಥವಾ ಅನ್ಯಥಾ ಸ್ಥಾನವು ಖಾಲಿಯಾದಲ್ಲಿ ಸಂದರ್ಭಾನುಸಾರ ಅದಕ್ಕೆ ಒಬ್ಬ ವ್ಯಕ್ತಿಯನ್ನು ಚುನಾಯಿಸುವ ಅಥವಾ ನಾಮ

ನಿರ್ದೇಶನ ಮಾಡುವ ಮೂಲಕ ಆ ಖಾಲಿ ಸ್ಥಾನವನ್ನು ಸಾಧ್ಯವಾದಷ್ಟು ಬೇಗನೆ ಭರ್ತಿ ಮಾಡತಕ್ಕದ್ದು. ಅಂಥ ವ್ಯಕ್ತಿಯು ಯಾವ ಸದಸ್ಯನ ಸ್ಥಾನದಲ್ಲಿ ತಾನು ಚುನಾಯಿತನಾಗಿರುವನೋ ಅಥವಾ ನಾಮ ನಿರ್ದೇಶಿತನಾಗಿರುವನೋ ಆ ಸದಸ್ಯನ ಸ್ಥಾನವು ಖಾಲಿಯಾಗಿರದಿದ್ದಲ್ಲಿ ಪದಧಾರಣ ಮಾಡಬಹುದಾಗಿದ್ದಂಥ ಅವಧಿಯವರೆಗೆ ಮಾತ್ರ ಪದಧಾರಣ ಮಾಡತಕ್ಕದ್ದು:

ಪರಂತು, ಮಾರುಕಟ್ಟೆ ಸಮಿತಿಯ ಸದಸ್ಯರ ಪದಾವಧಿಯು ಮುಗಿಯುವ ದಿನಾಂಕಕ್ಕೆ ಆರು ತಿಂಗಳಿಗಿಂತ ಮುಂಚೆ ಒಬ್ಬ ಸದಸ್ಯನ ಸ್ಥಾನವು ಖಾಲಿಯಾದರೆ, ಯಾವ ಸದಸ್ಯನ ಸ್ಥಾನವು ಖಾಲಿಯಾಗಿದೆಯೋ ಆ ಸದಸ್ಯನ ಸ್ಥಾನದಲ್ಲಿ ಸದಸ್ಯನಾಗಿ ಚುನಾಯಿತನಾಗಲು ಅರ್ಹನಾದ ಒಬ್ಬ ವ್ಯಕ್ತಿಯನ್ನು ಸಹಯೋಜಿಸುವ ಮೂಲಕ ಮಾರುಕಟ್ಟೆ ಸಮಿತಿಯು ಆ ಖಾಲಿ ಸ್ಥಾನವನ್ನು ಭರ್ತಿ ಮಾಡಬಹುದು.

**29. ಮತದಾನದ ಕೇಂದ್ರಗಳಲ್ಲಿ ಅಥವಾ ಅವುಗಳ ಸಮೀಪದಲ್ಲಿ ಮತ ಕೋರಿಕೆಯ ನಿಷೇಧ.–** (1) ಯಾವನೇ ವ್ಯಕ್ತಿಯು, ಯಾವುದೇ ಮತದಾನ ಕೇಂದ್ರದಲ್ಲಿ ಮತದಾನ ನಡೆಯುವ ದಿನಾಂಕದಂದು ಅಥವಾ ದಿನಾಂಕಗಳಂದು, ಆ ಮತದಾನ ಕೇಂದ್ರದಿಂದ ಒಂದು ನೂರು ಮೀಟರ್ ಅಂತರದೊಳಗೆ ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸ್ಥಳದಲ್ಲಿ ಈ ಕೆಳಕಂಡ ಯಾವುದೇ ಕಾರ್ಯಗಳನ್ನು ಮಾಡತಕ್ಕದ್ದಲ್ಲ, ಎಂದರೆ,–

(ಎ) ಮತಗಳನ್ನು ಕೋರುವುದು; ಅಥವಾ

(ಬಿ) ಯಾವನೇ ಮತದಾರನ ಮತವನ್ನು ಯಾಚಿಸುವುದು; ಅಥವಾ

(ಸಿ) ಚುನಾವಣೆಯಲ್ಲಿ ಮತಹಾಕದಂತೆ ಯಾವನೇ ಮತದಾರನನ್ನು ಮನ ಒಲಿಸುವುದು; ಅಥವಾ

(ಡಿ) ಚುನಾವಣೆಗೆ ಸಂಬಂಧಿಸಿದ ಅಧಿಕೃತ ನೋಟೀಸಿನ ಹೊರತಾಗಿ ಯಾವುದೇ ಇತರ ನೋಟೀಸು ಅಥವಾ ಚಿಹ್ನೆಯನ್ನು ಪ್ರದರ್ಶಿಸುವುದು.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾವನೇ ವ್ಯಕ್ತಿಯು ಅಪರಾಧ ನಿರ್ಣೀತನಾದ ಮೇಲೆ, ಎರಡು ನೂರು ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂತಹ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(3) ಈ ಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾಗಿರತಕ್ಕದ್ದು.

**30. ಮತದಾನ ಕೇಂದ್ರದಲ್ಲಿ ಅಥವಾ ಅದರ ಸಮೀಪ ಅವ್ಯವಸ್ಥಿತ ನಡತೆಗಾಗಿ ದಂಡನೆ.–** (1) ಯಾವನೇ ವ್ಯಕ್ತಿಯು ಯಾವುದೇ ಮತದಾನ ಕೇಂದ್ರದಲ್ಲಿ ಮತದಾನ ನಡೆಯುವ ದಿನಾಂಕದಂದು ಅಥವಾ ದಿನಾಂಕಗಳಂದು,–

(ಎ) ಯಾವುದೇ ಮತದಾನ ಕೇಂದ್ರದೊಳಗೆ ಅಥವಾ ಪ್ರವೇಶದ್ವಾರದಲ್ಲಿ, ಅಥವಾ ಅದರ ಅಕ್ಕಪಕ್ಕದ ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸ್ಥಳದಲ್ಲಿ, ಮೆಗಾಫೋನ್ ಅಥವಾ ಧ್ವನಿವರ್ಧಕದಂಥ ಸಲಕರಣೆಯನ್ನು ಮಾನವ ಧ್ವನಿಯನ್ನು ವರ್ಧಿಸುವುದಕ್ಕಾಗಿ ಅಥವಾ ಯಥಾವತ್ತಾಗಿ ನಿರೂಪಿಸುವುದಕ್ಕಾಗಿ ಉಪಯೋಗಿಸತಕ್ಕದ್ದಲ್ಲ ಅಥವಾ ಚಾಲನೆ ಮಾಡತಕ್ಕದ್ದಲ್ಲ; ಅಥವಾ

(ಬಿ) ಮತದಾನಕ್ಕಾಗಿ ಮತದಾನ ಕೇಂದ್ರಕ್ಕೆ ಭೇಟಿ ಮಾಡುವ ಯಾವನೇ ವ್ಯಕ್ತಿಗೆ ಕಿರುಕುಳ ಉಂಟು ಮಾಡುವ ಹಾಗೆ ಅಥವಾ ಮತದಾನ ಕೇಂದ್ರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ಮತ್ತು ಇತರ ವ್ಯಕ್ತಿಗಳ ಕೆಲಸಕ್ಕೆ ಅಡ್ಡಿಯುಂಟು ಮಾಡುವ ಹಾಗೆ ಮತದಾನ ಕೇಂದ್ರದೊಳಗೆ ಅಥವಾ ಅದರ ಪ್ರವೇಶ ದ್ವಾರದಲ್ಲಿ ಅಥವಾ ಅದರ ಅಕ್ಕಪಕ್ಕದಲ್ಲಿರುವ ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸ್ಥಳದಲ್ಲಿ ಗಟ್ಟಿಯಾಗಿ ಕೂಗಾಡತಕ್ಕದ್ದಲ್ಲ ಅಥವಾ ಅನ್ಯಥಾ ಅವ್ಯವಸ್ಥಿತ ರೀತಿಯಲ್ಲಿ ನಡೆದುಕೊಳ್ಳತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಅಥವಾ ಉದ್ದೇಶ ಪೂರ್ವಕವಾಗಿ ಆ ಉಲ್ಲಂಘನೆಗೆ ಸಹಾಯ ಮಾಡುವ ಅಥವಾ ದುಷ್ಪ್ರೇರಿಸುವ ಯಾವನೇ ವ್ಯಕ್ತಿಯು ಅಪರಾಧ ನಿರ್ಣೀತನಾದ ಮೇಲೆ, ಇನ್ನೂರ ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(3) ಮತದಾನ ಕೇಂದ್ರದ ಪ್ರಿಸೈಡಿಂಗ್ ಆಫೀಸರ್‌ನಿಗೆ ಯಾವನೇ ವ್ಯಕ್ತಿಯು ಈ ಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವನ್ನು ಮಾಡುತ್ತಿದ್ದಾನೆ ಅಥವಾ ಮಾಡಿದ್ದಾನೆ ಎಂದು ನಂಬಲು ಕಾರಣಗಳಿದ್ದರೆ ಆ ಅಧಿಕಾರಿಯು ಅಂತಹ ವ್ಯಕ್ತಿಯನ್ನು ದಸ್ತಗಿರಿ ಮಾಡಲು ಯಾವನೇ ಪೊಲೀಸ್ ಅಧಿಕಾರಿಗೆ ನಿರ್ದೇಶಿಸಬಹುದು ಮತ್ತು ತದನಂತರ ಪೊಲೀಸ್ ಅಧಿಕಾರಿಯು ಅವನನ್ನು ದಸ್ತಗಿರಿ ಮಾಡತಕ್ಕದ್ದು.

(4) ಯಾವನೇ ಪೊಲೀಸ್ ಅಧಿಕಾರಿಯು (1)ನೇ ಉಪಪ್ರಕರಣದ ಉಪಬಂಧಗಳ ಯಾವುದೇ ಉಲ್ಲಂಘನೆಯನ್ನು ತಡೆಗಟ್ಟುವುದಕ್ಕಾಗಿ ಯುಕ್ತವಾಗಿ ಅವಶ್ಯಕವಾಗಬಹುದಾದ ಕ್ರಮಗಳನ್ನು ತೆಗೆದುಕೊಳ್ಳಬಹುದು ಮತ್ತು ಅಂಥ ಬಲವನ್ನು ಉಪಯೋಗಿಸಬಹುದು ಮತ್ತು ಅಂಥ ಉಲ್ಲಂಘನೆಗಾಗಿ ಉಪಯೋಗಿಸಲಾದ ಯಾವುದೇ ಸಲಕರಣೆಯನ್ನು ಅಭಿಗ್ರಹಿಸಬಹುದು.

**31. ಮತದಾನ ಕೇಂದ್ರದಲ್ಲಿ ದುರ್ವರ್ತನೆಗಾಗಿ ದಂಡನೆ.–** (1) ಯಾವನೇ ವ್ಯಕ್ತಿಯು ಯಾವುದೇ ಮತದಾನ ಕೇಂದ್ರದಲ್ಲಿ ಮತದಾನಕ್ಕಾಗಿ ನಿಗದಿಪಡಿಸಿರುವ ಸಮಯದಲ್ಲಿ, ದುರ್ವರ್ತಿಸಿದರೆ ಅಥವಾ ಪ್ರಿಸೈಡಿಂಗ್ ಆಫೀಸರ್‌ನ ಕಾನೂನುಸಮ್ಮತ ನಿರ್ದೇಶನಗಳನ್ನು ಪಾಲಿಸಲು ತಪ್ಪಿದರೆ, ಪ್ರಿಸೈಡಿಂಗ್ ಆಫೀಸರ್ ಅಥವಾ ಕರ್ತವ್ಯನಿರತನಾದ ಯಾವನೇ

ಪೊಲೀಸ್ ಅಧಿಕಾರಿಯು ಅಥವಾ ಈ ಬಗ್ಗೆ ಅಂಥ ಪ್ರಿಸೈಡಿಂಗ್ ಆಫೀಸರನು ಅಧಿಕೃತಗೊಳಿಸಿದ ಯಾವನೇ ಅಧಿಕಾರಿಯು ಅವನನ್ನು ಮತದಾನ ಕೇಂದ್ರದಿಂದ ಹೊರಗೆ ಹಾಕಬಹುದು.

(2) ಆ ಮತದಾನ ಕೇಂದ್ರದಲ್ಲಿ ಮತ ನೀಡಲು ಅನ್ಯಥಾ ಹಕ್ಕುಳ್ಳವನಾಗಿರುವ ಯಾವನೇ ಮತದಾರನು ಆ ಕೇಂದ್ರದಲ್ಲಿ ಮತ ನೀಡಲು ಹೊಂದಿರುವ ಅವಕಾಶಕ್ಕೆ ಅಡ್ಡಿಯಾಗುವ ಹಾಗೆ (1)ನೇ ಉಪಪ್ರಕರಣದ ಮೂಲಕ ಪ್ರದಾನ ಮಾಡಲಾದ ಅಧಿಕಾರಗಳನ್ನು ಚಲಾಯಿಸತಕ್ಕದ್ದಲ್ಲ.

(3) ಮತದಾನ ಕೇಂದ್ರದಿಂದ ಹಾಗೆ ಹೊರಗೆ ಹಾಕಲಾದ ಯಾವನೇ ವ್ಯಕ್ತಿಯು ಪ್ರಿಸೈಡಿಂಗ್ ಆಫೀಸರ್‌ನ ಅನುಮತಿ ಇಲ್ಲದೆ ಮತದಾನ ಕೇಂದ್ರವನ್ನು ಪುನಃ ಪ್ರವೇಶಿಸಿದರೆ ಅವನು ಅಪರಾಧ ನಿರ್ಣೀತನಾದ ಮೇಲೆ, ಇನ್ನೂರ ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(4) (3)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾಗಿರತಕ್ಕದ್ದು.

**32. ಮತದಾನ ರಹಸ್ಯವನ್ನು ಕಾಪಾಡುವುದು.**– (1) ಚುನಾವಣೆಯಲ್ಲಿ ಮತಗಳನ್ನು ದಾಖಲ್ಮಾಡುವ ಅಥವಾ ಎಣಿಕೆ ಮಾಡುವ ಸಂಬಂಧದಲ್ಲಿ ಯಾವುದೇ ಕರ್ತವ್ಯವನ್ನು ನೆರವೇರಿಸುವ ಪ್ರತಿಯೊಬ್ಬ ಅಧಿಕಾರಿಯು, ಗುಮಾಸ್ತನು, ಏಜೆಂಟನು ಅಥವಾ ಇತರ ವ್ಯಕ್ತಿಯು, ಮತದಾನದ ರಹಸ್ಯವನ್ನು ಕಾಪಾಡತಕ್ಕದ್ದು ಮತ್ತು ಹಾಗೆ ಕಾಪಾಡುವಲ್ಲಿ ಸಹಾಯ ಮಾಡತಕ್ಕದ್ದು ಮತ್ತು (ಯಾವುದೇ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ಅಧಿಕೃತಗೊಳಿಸಿದ ಯಾವುದೇ ಉದ್ದೇಶಕ್ಕಾಗಿ ಹೊರತು) ಅಂತಹ ರಹಸ್ಯವನ್ನು ಉಲ್ಲಂಘಿಸುವ ಉದ್ದೇಶವುಳ್ಳ ಯಾವುದೇ ಮಾಹಿತಿಯನ್ನು ಯಾವನೇ ವ್ಯಕ್ತಿಗೆ ತಿಳಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾವನೇ ವ್ಯಕ್ತಿಯು, ಅಪರಾಧ ನಿರ್ಣೀತನಾದ ಮೇಲೆ, ಮೂರು ತಿಂಗಳಿಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಎರಡು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**33. ಚುನಾವಣೆಗಳಲ್ಲಿ ಅಧಿಕಾರಿಗಳು ಮುಂತಾದವರು ಅಭ್ಯರ್ಥಿಗಳ ಪರವಾಗಿ ಕೆಲಸ ಮಾಡತಕ್ಕದ್ದಲ್ಲ ಅಥವಾ ಮತದಾನದ ಮೇಲೆ ಪ್ರಭಾವ ಬೀರತಕ್ಕದ್ದಲ್ಲ.**– (1) ಚುನಾವಣೆಯಲ್ಲಿ ರಿಟರ್ನಿಂಗ್ ಆಫೀಸರ್ ಅಥವಾ ಪ್ರಿಸೈಡಿಂಗ್ ಆಫೀಸರ್ ಅಥವಾ ಪೋಲಿಂಗ್ ಆಫೀಸರ್ ಆಗಿರುವ ಯಾವನೇ ವ್ಯಕ್ತಿಯು ಅಥವಾ ಚುನಾವಣೆಯ ಸಂಬಂಧದಲ್ಲಿ ಯಾವುದೇ ಕರ್ತವ್ಯವನ್ನು ನಿರ್ವಹಿಸಲು ರಿಟರ್ನಿಂಗ್ ಆಫೀಸರ್ ಅಥವಾ ಪ್ರಿಸೈಡಿಂಗ್ ಆಫೀಸರ್‌ನು ನೇಮಕ ಮಾಡಿದ ಅಧಿಕಾರಿ ಅಥವಾ ಗುಮಾಸ್ತನು ಚುನಾವಣೆಯ ನಿರ್ವಹಣೆ ಅಥವಾ ಅದರ ವ್ಯವಸ್ಥಾಪನೆಯಲ್ಲಿ ಮತಪತ್ರ ನೀಡಿಕೆಯ ಹೊರತಾಗಿ ಅಭ್ಯರ್ಥಿಯ ಚುನಾವಣೆಯ ಭವಿತವ್ಯದ ಪುರೋಭಿವೃದ್ಧಿಗಾಗಿ ಯಾವುದೇ ಕಾರ್ಯವನ್ನು ಮಾಡತಕ್ಕದ್ದಲ್ಲ.

(2) ಮೇಲೆ ಹೇಳಲಾದ ಯಾವನೇ ವ್ಯಕ್ತಿಯು ಮತ್ತು ಪೊಲೀಸು ಪಡೆಯ ಯಾವನೇ ಸದಸ್ಯನು:–

(ಎ) ಚುನಾವಣೆಯಲ್ಲಿ ತನ್ನ ಮತ ಕೊಡುವುದಕ್ಕೆ ಯಾವನೇ ವ್ಯಕ್ತಿಯ ಮನವೊಲಿಸಲು; ಅಥವಾ

(ಬಿ) ಚುನಾವಣೆಯಲ್ಲಿ ತನ್ನ ಮತವನ್ನು ಕೊಡದಿರುವಂತೆ ಯಾವನೇ ವ್ಯಕ್ತಿಯನ್ನು ವಿಮುಖಗೊಳಿಸಲು; ಅಥವಾ

(ಸಿ) ಚುನಾವಣೆಯಲ್ಲಿ ಯಾವುದೇ ರೀತಿಯಲ್ಲಿ ಯಾವನೇ ವ್ಯಕ್ತಿಯ ಮತದಾನದ ಮೇಲೆ ಪ್ರಭಾವ ಬೀರಲು

– ಪ್ರಯತ್ನಿಸತಕ್ಕದ್ದಲ್ಲ.

(3) (1)ನೇ ಉಪಪ್ರಕರಣದ ಅಥವಾ (2)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾವನೇ ವ್ಯಕ್ತಿಯು, ಅಪರಾಧ ನಿರ್ಣೀತನಾದ ಮೇಲೆ, ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಎರಡು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**34. ಚುನಾವಣೆಗಳಿಗೆ ಸಂಬಂಧಿಸಿದ ಪದೀಯ ಕರ್ತವ್ಯದ ಉಲ್ಲಂಘನೆ.**– (1) ಈ ಪ್ರಕರಣವು ಅನ್ವಯವಾಗುವ ಯಾವನೇ ವ್ಯಕ್ತಿಯು, ಯುಕ್ತ ಕಾರಣಗಳಿಲ್ಲದೆ ತನ್ನ ಪದೀಯ ಕರ್ತವ್ಯಗಳನ್ನು ಉಲ್ಲಂಘಿಸಿ ಯಾವುದೇ ಕಾರ್ಯ ಅಥವಾ ಲೋಪದ ಬಗ್ಗೆ ತಪ್ಪಿತಸ್ಥನಾಗಿದ್ದರೆ, ಅಪರಾಧ ನಿರ್ಣೀತನಾದ ಮೇಲೆ, ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) ಮೇಲೆ ಹೇಳಿದಂಥ ಯಾವುದೇ ಕಾರ್ಯ ಅಥವಾ ಲೋಪದ ಬಗ್ಗೆ ಹಾನಿ ಪರಿಹಾರಕ್ಕಾಗಿ ಯಾವನೇ ಅಂಥ ವ್ಯಕ್ತಿಯ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

(3) ಈ ಪ್ರಕರಣವು ಅನ್ವಯವಾಗುವಂತಹ ವ್ಯಕ್ತಿಗಳೆಂದರೆ, ರಿಟರ್ನಿಂಗ್ ಆಫೀಸರ್‌ಗಳು, ಪ್ರಿಸೈಡಿಂಗ್ ಆಫೀಸರ್‌ಗಳು, ಪೋಲಿಂಗ್ ಆಫೀಸರ್‌ಗಳು ಮತ್ತು ನಾಮಪತ್ರಗಳ ಸ್ವೀಕಾರ ಅಥವಾ ಉಮೇದುವಾರಿಕೆಗಳ ವಾಪಸಾತಿ ಅಥವಾ ಚುನಾವಣೆಯಲ್ಲಿ ಮತಗಳ ದಾಖಲೆ ಅಥವಾ ಎಣಿಕೆ – ಇವುಗಳ ಸಂಬಂಧದಲ್ಲಿ ಯಾವುದೇ ಕರ್ತವ್ಯವನ್ನು ನಿರ್ವಹಿಸುವುದಕ್ಕೆ ನೇಮಕನಾದ ಯಾವನೇ ಇತರ ವ್ಯಕ್ತಿ ಮತ್ತು "ಪದೀಯ ಕರ್ತವ್ಯ" ಎಂಬ ಪದಾವಳಿಯನ್ನು ಈ ಪ್ರಕರಣದ ಉದ್ದೇಶಕ್ಕಾಗಿ ತದನುಸಾರವಾಗಿ ಅರ್ಥೈಸತಕ್ಕದ್ದು, ಆದರೆ ಆ ಪದಾವಳಿಯು ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಅಥವಾ ಮಾಡಿದ ಆದೇಶಗಳ ಮೂಲಕ ಅಥವಾ ಅವುಗಳ ಮೇರೆಗೆ ಅನ್ಯಥಾ ವಿಧಿಸಲಾದ ಕರ್ತವ್ಯಗಳನ್ನು ಒಳಗೊಳ್ಳತಕ್ಕದ್ದಲ್ಲ.

**35. ಮತದಾನ ಕೇಂದ್ರದಿಂದ ಮತಪತ್ರಗಳನ್ನು ತೆಗೆದುಕೊಂಡು ಹೋಗುವುದು ಅಪರಾಧವಾಗುವುದು.–** (1) ಯಾವುದೇ ಚುನಾವಣೆಯಲ್ಲಿ ಯಾವನೇ ವ್ಯಕ್ತಿಯು ಮತದಾನ ಕೇಂದ್ರದಿಂದ ಮತಪತ್ರಗಳನ್ನು ಮೋಸದಿಂದ ತೆಗೆದುಕೊಂಡು ಹೋದರೆ ಅಥವಾ ತೆಗೆದುಕೊಂಡು ಹೋಗಲು ಪ್ರಯತ್ನಿಸಿದರೆ ಅಥವಾ ಅಂಥ ಯಾವುದೇ ಕಾರ್ಯವನ್ನು ಮಾಡಲು ಉದ್ದೇಶಪೂರ್ವಕವಾಗಿ ಸಹಾಯ ಮಾಡಿದರೆ ಅಥವಾ ದುಷ್ಪ್ರೇರಿಸಿದರೆ, ಅವನು ಅಪರಾಧ ನಿರ್ಣಿತನಾದ ಮೇಲೆ ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದುನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು.

(2) ಮತದಾನ ಕೇಂದ್ರದ ಪ್ರಿಸೈಡಿಂಗ್ ಆಫೀಸರ್‌ನಿಗೆ, ಯಾವನೇ ವ್ಯಕ್ತಿಯು (1)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವನ್ನು ಮಾಡುತ್ತಿರುವನೆಂದು ಅಥವಾ ಮಾಡಿದ್ದಾನೆಂದು ನಂಬಲು ಕಾರಣವಿದ್ದರೆ, ಅಂಥ ವ್ಯಕ್ತಿಯು ಮತದಾನ ಕೇಂದ್ರವನ್ನು ಬಿಡುವ ಮೊದಲು ಅಂಥ ಅಧಿಕಾರಿಯು ಅವನನ್ನು ದಸ್ತಗಿರಿ ಮಾಡಬಹುದು ಅಥವಾ ಅಂಥ ವ್ಯಕ್ತಿಯನ್ನು ದಸ್ತಗಿರಿ ಮಾಡುವಂತೆ ಪೊಲೀಸ್ ಅಧಿಕಾರಿಗೆ ನಿರ್ದೇಶಿಸಬಹುದು ಮತ್ತು ಅಂಥ ವ್ಯಕ್ತಿಯನ್ನು ಶೋಧಿಸಬಹುದು ಅಥವಾ ಪೊಲೀಸ್ ಅಧಿಕಾರಿಯು ಅವನನ್ನು ಶೋಧಿಸುವಂತೆ ಮಾಡಬಹುದು:

ಪರಂತು, ಮಹಿಳೆಯನ್ನು ಶೋಧಿಸುವಂತೆ ಮಾಡುವುದು ಅವಶ್ಯವಾದಲ್ಲಿ, ಸಭ್ಯತೆಗೆ ಕಟ್ಟುನಿಟ್ಟಾದ ಗಮನಕೊಟ್ಟು ಅಂಥ ಶೋಧನೆಯನ್ನು ಮತ್ತೊಬ್ಬ ಮಹಿಳೆಯಿಂದ ಮಾಡಿಸತಕ್ಕದ್ದು.

(3) ಶೋಧನೆಯ ತರುವಾಯ ದಸ್ತಗಿರಿಯಾದ ವ್ಯಕ್ತಿಯ ಬಳಿ ಸಿಕ್ಕಿದ ಯಾವುದೇ ಮತಪತ್ರವನ್ನು ಪ್ರಿಸೈಡಿಂಗ್ ಆಫೀಸರ್‌ನು, ಸುರಕ್ಷಿತ ಅಭಿರಕ್ಷೆಗಾಗಿ ಪೊಲೀಸ್ ಅಧಿಕಾರಿಗೆ ಒಪ್ಪಿಸತಕ್ಕದ್ದು ಅಥವಾ ಪೊಲೀಸ್ ಅಧಿಕಾರಿಯು ಶೋಧನೆಯನ್ನು ಮಾಡಿದ್ದರೆ, ಅಂತಹ ಅಧಿಕಾರಿಯು ಅದನ್ನು ತನ್ನ ಸುರಕ್ಷಿತ ಅಭಿರಕ್ಷೆಯಲ್ಲಿ ಇಟ್ಟುಕೊಳ್ಳತಕ್ಕದ್ದು.

(4) (1)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು, ಸಂಜ್ಞೇಯವಾಗಿರತಕ್ಕದ್ದು.

**36. ಇತರ ಅಪರಾಧಗಳು ಮತ್ತು ಆ ಬಗ್ಗೆ ದಂಡನೆಗಳು.–** (1) ಯಾವನೇ ವ್ಯಕ್ತಿಯು ಯಾವುದೇ ಚುನಾವಣೆಯಲ್ಲಿ,–

(ಎ) ಯಾವುದೇ ನಾಮಪತ್ರವನ್ನು ಮೋಸದಿಂದ ವಿರೂಪಗೊಳಿಸಿದರೆ ಅಥವಾ ಮೋಸದಿಂದ ನಾಶಪಡಿಸಿದರೆ; ಅಥವಾ

(ಬಿ) ರಿಟರ್ನಿಂಗ್ ಆಫೀಸರ್‌ನ ಅಧಿಕಾರದ ಮೂಲಕ ಅಥವಾ ಅದರ ಮೇರೆಗೆ ಅಂಟಿಸಿರುವ ಯಾವುದೇ ಪಟ್ಟಿ, ನೋಟೀಸು ಅಥವಾ ಇತರ ದಸ್ತಾವೇಜನ್ನು ಮೋಸದಿಂದ ವಿರೂಪಗೊಳಿಸಿದರೆ, ನಾಶಪಡಿಸಿದರೆ ಅಥವಾ ತೆಗೆದುಹಾಕಿದರೆ; ಅಥವಾ

(ಸಿ) ಯಾವುದೇ ಮತಪತ್ರವನ್ನು ಅಥವಾ ಯಾವುದೇ ಮತಪತ್ರದ ಮೇಲಿನ ಅಧಿಕೃತ ಚಿಹ್ನೆಯನ್ನು ಮೋಸದಿಂದ ವಿರೂಪಗೊಳಿಸಿದರೆ ಅಥವಾ ಮೋಸದಿಂದ ನಾಶಪಡಿಸಿದರೆ; ಅಥವಾ

(ಡಿ) ಕ್ರಮಬದ್ಧ ಅಧಿಕಾರವಿಲ್ಲದೆ, ಯಾವನೇ ವ್ಯಕ್ತಿಗೆ ಯಾವುದೇ ಮತಪತ್ರವನ್ನು ಸರಬರಾಜು ಮಾಡಿದರೆ; ಅಥವಾ

(ಇ) ಕಾನೂನಿನ ಮೇರೆಗೆ ಮತಪೆಟ್ಟಿಗೆಯಲ್ಲಿ ಹಾಕಲು ತನಗೆ ಅಧಿಕಾರ ಇರುವ ಮತಪತ್ರದ ಹೊರತಾಗಿ ಯಾವುದೇ ವಸ್ತುವನ್ನು ಅದರಲ್ಲಿ ಮೋಸದಿಂದ ಹಾಕಿದರೆ; ಅಥವಾ

(ಎಫ್) ಚುನಾವಣೆಯ ಉದ್ದೇಶಕ್ಕಾಗಿ ಉಪಯೋಗದಲ್ಲಿರುವ ಯಾವುದೇ ಮತಪೆಟ್ಟಿಗೆಯನ್ನು ಅಥವಾ ಮತಪತ್ರಗಳನ್ನು ಕ್ರಮಬದ್ಧ ಅಧಿಕಾರವಿಲ್ಲದೆ ನಾಶಪಡಿಸಿದರೆ, ತೆಗೆದುಕೊಂಡರೆ, ತೆರೆದರೆ ಅಥವಾ ಆ ಸಂಬಂಧದಲ್ಲಿ ಹಸ್ತಕ್ಷೇಪ ಮಾಡಿದರೆ; ಅಥವಾ

(ಜಿ) ಸಂದರ್ಭಾನುಸಾರ, ಮೋಸದಿಂದ ಅಥವಾ ಕ್ರಮಬದ್ಧ ಅಧಿಕಾರವಿಲ್ಲದೆ ಮೇಲೆ ಹೇಳಲಾದ ಯಾವುದೇ ಕಾರ್ಯವನ್ನು ಮಾಡಲು ಪ್ರಯತ್ನಿಸಿದರೆ ಅಥವಾ ಯಾವುದೇ ಅಂತಹ ಕಾರ್ಯವನ್ನು ಮಾಡಲು ಉದ್ದೇಶಪೂರ್ವಕವಾಗಿ ಸಹಾಯ ಮಾಡಿದರೆ ಅಥವಾ ದುಷ್ಪ್ರೇರಿಸಿದರೆ

– ಅವನು ಅಪರಾಧದ ತಪ್ಪಿತಸ್ಥನಾಗತಕ್ಕದ್ದು.

(2) ಈ ಪ್ರಕರಣದ ಮೇರೆಗೆ ಅಪರಾಧದ ತಪ್ಪಿತಸ್ಥನಾದ ಯಾವನೇ ವ್ಯಕ್ತಿಯು,–

(ಎ) ಅವನು ರಿಟರ್ನಿಂಗ್ ಆಫೀಸರ್ ಅಥವಾ ಮತದಾನ ಕೇಂದ್ರದ ಪ್ರಿಸೈಂಡಿಂಗ್ ಆಫೀಸರ್ ಅಥವಾ ಚುನಾವಣೆಯ ಸಂಬಂಧದಲ್ಲಿ ಪದೀಯ ಕರ್ತವ್ಯದ ಮೇಲೆ ನಿಯೋಜಿತನಾದ ಯಾವನೇ ಇತರ ಅಧಿಕಾರಿ ಅಥವಾ ಗುಮಾಸ್ತನಾಗಿದ್ದರೆ, ಅಪರಾಧ ನಿರ್ಣಯವಾದ ಮೇಲೆ ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಐದುನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು;

(ಬಿ) ಅವನು, ಯಾವನೇ ಇತರ ವ್ಯಕ್ತಿಯಾಗಿದ್ದರೆ, ಅಪರಾಧ ನಿರ್ಣಯವಾದ ಮೇಲೆ, ಆರು ತಿಂಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಎರಡು ನೂರು ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು.

(3) ಈ ಪ್ರಕರಣದ ಉದ್ದೇಶಕ್ಕಾಗಿ ಒಬ್ಬ ವ್ಯಕ್ತಿಯು, ಮತಗಳ ಎಣಿಕೆಯೂ ಸೇರಿದಂತೆ ಚುನಾವಣೆಯನ್ನು ಅಥವಾ ಚುನಾವಣೆಯ ಒಂದು ಭಾಗವನ್ನು ನಡೆಸುವಲ್ಲಿ ಪಾಲ್ಗೊಳ್ಳಬೇಕಾಗಿದ್ದರೆ ಅಥವಾ ಅಂಥ ಚುನಾವಣೆಗೆ ಸಂಬಂಧಿಸಿದಂತೆ ಚುನಾವಣೆ ನಡೆದ ತರುವಾಯ ಉಪಯೋಗಿಸಿದ ಮತಪತ್ರಗಳ ಬಗ್ಗೆ ಅಥವಾ ಇತರ ದಸ್ತಾವೇಜುಗಳ ಬಗ್ಗೆ ಜವಾಬ್ದಾರನಾಗಬೇಕಾಗಿದ್ದರೆ, ಆಗ ಅವನು ಪದೀಯ ಕರ್ತವ್ಯನಿರತನಾಗಿರುವುದಾಗಿ ಭಾವಿಸತಕ್ಕದ್ದು. ಆದರೆ ಪದೀಯ ಕರ್ತವ್ಯ ಎಂಬ ಪದಾವಳಿಯು, ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಅನ್ಯಥಾ ವಿಧಿಸಲಾಗುವ ಯಾವುದೇ ಕರ್ತವ್ಯವನ್ನು ಒಳಗೊಳ್ಳತಕ್ಕದ್ದಲ್ಲ.

(4) (2)ನೇ ಉಪಪ್ರಕರಣದ (ಬಿ) ಖಂಡದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾಗಿರತಕ್ಕದ್ದು.

**37. ಕೆಲವು ಅಪರಾಧಗಳ ಸಂಬಂಧದಲ್ಲಿ ಪ್ರಾಸಿಕ್ಯೂಷನ್.–** ಡೆಪ್ಯೂಟಿ ಕಮಿಷನರ್‌ನ ಆದೇಶದ ಮೂಲಕ ಅಥವಾ ಅವನ ಪ್ರಾಧಿಕಾರದ ಮೇರೆಗೆ ಫಿರ್ಯಾದು ಮಾಡಿದ್ದ ಹೊರತು ಯಾವ ನ್ಯಾಯಾಲಯವೂ 33ನೇ ಅಥವಾ 34ನೇ ಪ್ರಕರಣದ ಮೇರೆಗೆ ಅಥವಾ 36ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೇರೆಗೆ ದಂಡನೀಯವಾದ ಅಪರಾಧವನ್ನು ಸಂಜ್ಞಾನಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

**38. ಸದಸ್ಯರ ಪದಾವಧಿ.–** (1) ಮಾರುಕಟ್ಟೆ ಸಮಿತಿಯ ಸದಸ್ಯರು, ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು [1][ಐದು ವರ್ಷಗಳ][1] ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು ಮತ್ತು [2][ಆ ಅವಧಿಯು ಮುಕ್ತಾಯಗೊಳ್ಳುವುದಕ್ಕೆ ಮುಂಚೆ ಮಾರುಕಟ್ಟೆ ಸಮಿತಿಗೆ ಚುನಾವಣೆಗಳನ್ನು ನಡೆಸತಕ್ಕದ್ದು.][2]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][ಪರಂತುಕ xxx][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(2). (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಸಂದರ್ಭಾನುಸಾರ ಸಹಕಾರ ಮಾರುಕಟ್ಟೆ ವ್ಯವಹಾರ ಸಂಘದ ಅಥವಾ ಕೃಷಿ ಸಹಕಾರ ಸಂಸ್ಕರಣ ಸಂಘದ ಪ್ರತಿನಿಧಿಯಾಗಿ ನೇಮಕಗೊಂಡ ಕಾರಣದಿಂದ ಮಾರುಕಟ್ಟೆ ಸಮಿತಿಯ ಸದಸ್ಯನಾಗಿರುವ ಯಾವನೇ ವ್ಯಕ್ತಿಯು ಅವನ ಅಧಿಕಾರಾವಧಿಯು ಮುಕ್ತಾಯವಾದ ಕಾರಣ ಅಥವಾ ಅನ್ಯಥಾ ಸಂಬಂಧಪಟ್ಟ ಸಂಘದ ಆಡಳಿತ ಸಮಿತಿಯಲ್ಲಿನ ಅವನ ಸದಸ್ಯತ್ವವು ಕೊನೆಗೊಂಡರೆ ಅಂಥ ಮಾರುಕಟ್ಟೆ ಸಮಿತಿಯಲ್ಲಿನ ಅವನ ಸದಸ್ಯತ್ವವು ಕೊನೆಗೊಳ್ಳತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**39. ಪದಾವಧಿಯ ಪ್ರಾರಂಭ.–** (1) ಮಾರುಕಟ್ಟೆ ಸಮಿತಿಯ ಸದಸ್ಯರ ಪದಾವಧಿಯು ಮಾರುಕಟ್ಟೆ ಸಮಿತಿಯ ಹೊರಹೋಗುವ ಸದಸ್ಯರ ಪದಾವಧಿಯು ಮುಕ್ತಾಯವಾದ ತರುವಾಯದ ನಿಕಟೋತ್ತರ ದಿನಾಂಕ [1][ಅಥವಾ 41ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಅಧ್ಯಕ್ಷನ ಮತ್ತು ಉಪಾಧ್ಯಕ್ಷನ ಚುನಾವಣೆಗಾಗಿ ಕರೆಯಲಾಗುವ ಮೊದಲ ಸಭೆಯ ದಿನಾಂಕ][1] ಇವುಗಳಲ್ಲಿ ಯಾವುದು ತರುವಾಯದ ದಿನಾಂಕವೋ ಅಂದಿನಿಂದ ಪ್ರಾರಂಭವಾಗತಕ್ಕದ್ದು.

1. 2002ರ ಅಧಿನಿಯಮ ಸಂಖ್ಯೆ 13ರ ಮೂಲಕ 8-10-1996 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಸಾರ್ವತ್ರಿಕ ಚುನಾವಣೆಯ ತರುವಾಯ ಕೃಷಿಕರ ಪ್ರತಿನಿಧಿಗಳ ಪೈಕಿ ಮೂರನೇ ಎರಡರಷ್ಟಕ್ಕೆ ಕಡಿಮೆಯಿಲ್ಲದಷ್ಟು ಮತ್ತು ಮಾರುಕಟ್ಟೆ ಸಮಿತಿಯ ಸದಸ್ಯರ ಒಟ್ಟು ಸಂಖ್ಯೆ ಮೂರನೇ ಎರಡರಷ್ಟಕ್ಕೆ ಕಡಿಮೆಯಿಲ್ಲದಷ್ಟು ಸದಸ್ಯರು ದೊರೆತರೆ, ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಮಾರುಕಟ್ಟೆ ಸಮಿತಿಯು ಕ್ರಮಬದ್ಧವಾಗಿ ರಚಿತವಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಹಾಗೆ ರಚಿತವಾದ ಮಾರುಕಟ್ಟೆ ಸಮಿತಿಯು ಮಾರುಕಟ್ಟೆ ಸಮಿತಿಯ ಅಧಿಕಾರಗಳನ್ನು ಚಲಾಯಿಸಲು ಮತ್ತು ಪ್ರಕಾರ್ಯಗಳನ್ನು ನೆರವೇರಿಸಲು ಸಕ್ಷಮವಾಗಿರತಕ್ಕದ್ದು.

[1][**40. ಸದಸ್ಯರ ರಾಜೀನಾಮೆ.–** ಮಾರುಕಟ್ಟೆ ಸಮಿತಿಯ ಪದನಿಮಿತ್ತ ಸದಸ್ಯನಲ್ಲದ ಯಾವನೇ ಇತರ ಸದಸ್ಯನು ತನ್ನ ರಾಜೀನಾಮೆಯನ್ನು ಮಾರುಕಟ್ಟೆ ಸಮಿತಿಯ ಅಧ್ಯಕ್ಷನಿಗೆ ಲಿಖಿತ ರೂಪದಲ್ಲಿ ಸಲ್ಲಿಸುವ ಮೂಲಕ ಅಥವಾ ಆ ಬಗ್ಗೆ ವ್ಯವಸ್ಥೆ ಮಾಡುವ ಮೂಲಕ ತನ್ನ ಸದಸ್ಯತ್ವಕ್ಕೆ ರಾಜೀನಾಮೆ ಕೊಡಬಹುದು ಮತ್ತು ಮಾರುಕಟ್ಟೆ ಸಮಿತಿಯ ಅಧ್ಯಕ್ಷನು ಅದು ತಲುಪಿದ ಬಗ್ಗೆ ಸ್ವೀಕೃತಿ ಕೊಡುವ ವ್ಯವಸ್ಥೆ ಮಾಡತಕ್ಕದ್ದು ಮತ್ತು ರಾಜೀನಾಮೆಯು ತಲುಪಿದ ಬಗ್ಗೆ ಸ್ವೀಕೃತಿ ನೀಡಿದ ದಿನಾಂಕದಿಂದ ಹದಿನೈದು ದಿನಗಳೊಳಗೆ ಆ ಸದಸ್ಯನು ಅಧ್ಯಕ್ಷನಿಗೆ ಪತ್ರ ಬರೆದು ತನ್ನ ರಾಜೀನಾಮೆಯನ್ನು ವಾಪಸು ಪಡೆಯದ ಹೊರತು ಅವನ ಸ್ಥಾನವು ಸದರಿ ಅವಧಿಯು ಮುಗಿದ ತರುವಾಯ ತೆರವಾಗತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**41. ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಚುನಾವಣೆ.–** (1) (2)ನೇ ಮತ್ತು (3)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಪ್ರತಿಯೊಂದು ಮಾರುಕಟ್ಟೆ ಸಮಿತಿಯು ಅದರ ಕ್ರಮವಾಗಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರಾಗಲು ಆ ಮಾರುಕಟ್ಟೆ ಸಮಿತಿಯ ಕೃಷಿಕರ ಚುನಾವಣಾ ಕ್ಷೇತ್ರಗಳನ್ನು ಪ್ರತಿನಿಧಿಸುವ ಇಬ್ಬರು ಸದಸ್ಯರನ್ನು ಆಯ್ಕೆ ಮಾಡತಕ್ಕದ್ದು ಮತ್ತು ಅಧ್ಯಕ್ಷನ

ಅಥವಾ ಉಪಾಧ್ಯಕ್ಷನ ಪದವು, ಮರಣದ, ರಾಜೀನಾಮೆಯ, ತೆಗೆದುಹಾಕುವಿಕೆಯ ಕಾರಣದಿಂದ ಅಥವಾ ಅನ್ಯಥಾ ಖಾಲಿಯಾದಾಗಲೆಲ್ಲ, ಮಾರುಕಟ್ಟೆ ಸಮಿತಿಯು, ಈ ಅಧಿನಿಯಮ ಮತ್ತು ನಿಯಮಗಳ ಉಪಬಂಧಗಳಿಗನುಸಾರ ಸಂದರ್ಭಾನುಸಾರ ಅಧ್ಯಕ್ಷ ಅಥವಾ ಉಪಾಧ್ಯಕ್ಷನಾಗಿರಲು ಮತ್ತೊಬ್ಬ ಸದಸ್ಯನನ್ನು ಆಯ್ಕೆ ಮಾಡತಕ್ಕದ್ದು.

[1][(2) 11ನೇ ಪ್ರಕರಣದ ಮೇರೆಗೆ ಮಾರುಕಟ್ಟೆ ಸಮಿತಿಯ ರಚನೆಯ ಅಥವಾ [2][ಪುನರ್ ರಚನೆಯ ದಿನಾಂಕದಿಂದ ಹದಿನೈದು ದಿನಗಳೊಳಗೆ ನಿಯಮಿಸಿದ ಅಧಿಕಾರಿಯು][2] ಸಮಿತಿಯ ಸಭೆಯನ್ನು ಕರೆಯತಕ್ಕದ್ದು ಮತ್ತು ತಾನೇ ಆ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು. ಆದರೆ ಅವನಿಗೆ ಆ ಸಭೆಯಲ್ಲಿ ಮತನೀಡುವ ಅಧಿಕಾರವಿರತಕ್ಕದ್ದಲ್ಲ ಮತ್ತು ಅಂಥ ಸಭೆಯಲ್ಲಿ ಇಲ್ಲಿ ಇನ್ನು ಮುಂದೆ ಉಪಬಂಧಿಸಲಾಗುವ ರೀತಿಯಲ್ಲಿ ಕೃಷಿಕರ ಚುನಾವಣಾ ಕ್ಷೇತ್ರವನ್ನು ಪ್ರತಿನಿಧಿಸುವ ಸದಸ್ಯನೊಬ್ಬನನ್ನು ಅಧ್ಯಕ್ಷನನ್ನಾಗಿ ಮೊದಲ ಆಯ್ಕೆ ಮಾಡತಕ್ಕದ್ದು ಮತ್ತು ತದನಂತರ, ಮತ್ತೊಂದು ಕೃಷಿಕರ ಚುನಾವಣಾ ಕ್ಷೇತ್ರವನ್ನು ಪ್ರತಿನಿಧಿಸುವ ಮತ್ತೊಬ್ಬ ಸದಸ್ಯನನ್ನು ಉಪಾಧ್ಯಕ್ಷನನ್ನಾಗಿ ಆಯ್ಕೆ ಮಾಡತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 47ರ ಮೂಲಕ 22-6-1976ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2ಎ) ಸಭೆಯಲ್ಲಿ:-

(ಎ) ಅಧ್ಯಕ್ಷ ಪದದ [1][ಅಥವಾ, ಸಂದರ್ಭಾನುಸಾರ, ಉಪಾಧ್ಯಕ್ಷ][1] ಪದದ ಅಭ್ಯರ್ಥಿಯ ಹೆಸರನ್ನು ಒಬ್ಬ ಸದಸ್ಯನು ಪ್ರಸ್ತಾವಿಸತಕ್ಕದ್ದು ಮತ್ತು ಮತ್ತೊಬ್ಬನು ಅದನ್ನು ಅನುಮೋದಿಸತಕ್ಕದ್ದು. ಪ್ರಸ್ತಾವಿಸಲಾದ ಮತ್ತು ಅನುಮೋದಿಸಲಾದ ಎಲ್ಲಾ ಸದಸ್ಯರ ಹೆಸರುಗಳನ್ನು ಅಧ್ಯಕ್ಷಾಧಿಕಾರಿಯು ಓದಿ ಹೇಳತಕ್ಕದ್ದು;

(ಬಿ) ಯಾವುದೇ ಅಭ್ಯರ್ಥಿಯು ತನ್ನ ಉಮೇದುವಾರಿಕೆಯನ್ನು ವಾಪಸು ತೆಗೆದುಕೊಳ್ಳಲು ಇಚ್ಛಿಸಿದಲ್ಲಿ, ಅವನು ಲಿಖಿತದ ಮೂಲಕ ತಿಳಿಸಿ ಹಾಗೆ ವಾಪಸು ತೆಗೆದುಕೊಳ್ಳಬಹುದು. ತದನಂತರ ಸ್ಪರ್ಧಿಸುವ ಅಭ್ಯರ್ಥಿಗಳ ಹೆಸರುಗಳನ್ನು ಅಧ್ಯಕ್ಷಾಧಿಕಾರಿಯು ಓದಿ ಹೇಳತಕ್ಕದ್ದು;

(ಸಿ) ಒಬ್ಬನೇ ಒಬ್ಬ ಅಭ್ಯರ್ಥಿ ಇದ್ದಲ್ಲಿ ಅವನು ಅಧ್ಯಕ್ಷನಾಗಿ [1][ಅಥವಾ ಸಂದರ್ಭಾನುಸಾರ ಉಪಾಧ್ಯಕ್ಷ][1] ನಾಗಿ ಆಯ್ಕೆಯಾಗಿರುವುದಾಗಿ ಘೋಷಿಸತಕ್ಕದ್ದು. ಇಬ್ಬರು ಅಥವಾ ಹೆಚ್ಚು ಅಭ್ಯರ್ಥಿಗಳು ಇದ್ದಲ್ಲಿ, ಸಭೆಯಲ್ಲಿ ಹಾಜರಿರುವ ಸದಸ್ಯರ ಮತಗಳನ್ನು ಮತಪತ್ರದ ಮೂಲಕ ಪಡೆದುಕೊಳ್ಳತಕ್ಕದ್ದು ಮತ್ತು ಅತ್ಯಂತ ಹೆಚ್ಚಿನ ಸಂಖ್ಯೆಯ ಮತಗಳನ್ನು ಪಡೆದಿರುವ ಅಭ್ಯರ್ಥಿಯು ಅಧ್ಯಕ್ಷನಾಗಿ [1][ಅಥವಾ ಸಂದರ್ಭಾನುಸಾರ ಉಪಾಧ್ಯಕ್ಷ][1]ನಾಗಿ ಆಯ್ಕೆಯಾಗಿರುವನೆಂದು ಘೋಷಿಸತಕ್ಕದ್ದು;

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಡಿ) ಸಮಾನ ಮತಗಳು ಬಂದ ಸಂದರ್ಭದಲ್ಲಿ, ಚೀಟಿ ಎತ್ತುವ ಮೂಲಕ ಫಲಿತಾಂಶವನ್ನು ತೀರ್ಮಾನಿಸತಕ್ಕದ್ದು.

[1][(2ಬಿ) XXX][1].

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2ಸಿ) (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಸಭೆಯಲ್ಲಿ ಯಾವುದೇ ಕಾರಣಕ್ಕಾಗಿ ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಚುನಾವಣೆಯಾಗದಿದ್ದಲ್ಲಿ, ಅಂಥ ಚುನಾವಣೆಯನ್ನು [1][ಅಧ್ಯಕ್ಷನ ಮತ್ತು ಉಪಾಧ್ಯಕ್ಷನ ಚುನಾವಣೆ ಬಗ್ಗೆ ನಿಯಮಿಸಿದ ಅಧಿಕಾರಿಯು (2ಎ) ಉಪ-ಪ್ರಕರಣದಲ್ಲಿ, ನಮೂದಿಸಿದ ಕಾರ್ಯವಿಧಾನವನ್ನು ಅನುಸರಿಸಿ][1] ಮುಂದೂಡಿದ ಸಭೆಯಲ್ಲಿ ನಡೆಸತಕ್ಕದ್ದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(i) XXX

(ii) XXX][1]][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(3) ಅಧ್ಯಕ್ಷನ [1][ಅಥವಾ ಉಪಾಧ್ಯಕ್ಷನ][1] ಪದವು ಖಾಲಿಯಾದ ಸಂದರ್ಭದಲ್ಲಿ ಆ ಅಧ್ಯಕ್ಷನ [1][ಅಥವಾ ಉಪಾಧ್ಯಕ್ಷನ][1] ಸ್ಥಾನವನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾದಾಗ, ನಿಯಮಿಸಿದ ಅಧಿಕಾರಿಯು ಅಂಥ ಚುನಾವಣೆಯ ಬಗ್ಗೆ ಸಭೆಯನ್ನು ಕರೆಯತಕ್ಕದ್ದು ಮತ್ತು (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ರೀತಿಯಲ್ಲಿ ಚುನಾವಣೆಯನ್ನು ನಡೆಸತಕ್ಕದ್ದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) (1)ನೇ, (2)ನೇ ಅಥವಾ (3)ನೇ ಉಪಪ್ರಕರಣಗಳ ಮೇರೆಗೆ ನಡೆಸಲಾದ ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಚುನಾವಣೆಯ ಸಿಂಧುತ್ವಕ್ಕೆ ಸಂಬಂಧಿಸಿದ ಯಾವುದೇ ವಿವಾದವನ್ನು ನಿಯಮಿಸಬಹುದಾದಂಥ ನಿಯಮಗಳಿಗನುಸಾರ ಮಾರುಕಟ್ಟೆ ಸಮಿತಿಯ ಕಛೇರಿಯು ಇರುವ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯುಳ್ಳ ಜಿಲ್ಲಾ ನ್ಯಾಯಾಧೀಶನು ತೀರ್ಮಾನಿಸತಕ್ಕದ್ದು. ಆ ಸಂಬಂಧದಲ್ಲಿ ಜಿಲ್ಲಾ ನ್ಯಾಯಾಧೀಶನ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅಂತಹ ಯಾವುದೇ ನಿರ್ಣಯದ ಸಂಬಂಧದಲ್ಲಿ ಯಾವುದೇ ಸಿವಿಲ್ ನ್ಯಾಯಾಲಯದಲ್ಲಿ ದಾವೆಯನ್ನು ಅಥವಾ ವ್ಯವಹರಣೆಯನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

**42. ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಪದಾವಧಿ [1][XXX][1].–** (1) ಈ ಅಧಿನಿಯಮದಲ್ಲಿ ಉಪಬಂಧಿಸಿರುವುದನ್ನು ಉಳಿದು, ಅಧ್ಯಕ್ಷನು ಮತ್ತು ಉಪಾಧ್ಯಕ್ಷನು ಮಾರುಕಟ್ಟೆ ಸಮಿತಿಯ ಅವಧಿಯವರೆಗೆ ತನ್ನ ಪದದಲ್ಲಿ ಮುಂದುವರಿಯತಕ್ಕದ್ದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಮಾರುಕಟ್ಟೆ ಸಮಿತಿಯ, ಅಧ್ಯಕ್ಷನ ಮತ್ತು ಉಪಾಧ್ಯಕ್ಷನ ಪದಾವಧಿಯು ಮುಗಿದ ಮೇಲೆ ಮಾರುಕಟ್ಟೆ ಪ್ರಾಂಗಣ ಇರುವ ತಾಲ್ಲೂಕಿನ ತಹಸೀಲ್ದಾರನು ಮಾರುಕಟ್ಟೆ ಸಮಿತಿಯು ಪುನರ್ ರಚಿತವಾಗುವವರೆಗೆ ಮತ್ತು ಅದರ ಅಧ್ಯಕ್ಷನು ಚುನಾಯಿತನಾಗುವವರೆಗೆ ಮಾರುಕಟ್ಟೆ ಸಮಿತಿಯ ಮತ್ತು ಅದರ ಅಧ್ಯಕ್ಷನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು:

[1][ಪರಂತು, [2][ಕೃಷಿ ಮಾರುಕಟ್ಟೆ ನಿರ್ದೇಶಕನು][2] ಆ ತರುವಾಯ ಯಾವುದೇ ಕಾಲದಲ್ಲಿ, ಮಾರುಕಟ್ಟೆ ಸಮಿತಿಯ ಮತ್ತು ಅದರ ಅಧ್ಯಕ್ಷನ ಅಧಿಕಾರಗಳನ್ನು ಚಲಾಯಿಸಲು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸಲು ಯಾವನೇ ಅಧಿಕಾರಿಯನ್ನು ನೇಮಕ ಮಾಡಬಹುದು.

[3][(3)XXX][3]][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

3. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**43. ಅಧ್ಯಕ್ಷನ ಮತ್ತು ಉಪಾಧ್ಯಕ್ಷನ ಸ್ಥಾನವು ಖಾಲಿಯಾಗುವುದು.–** (1) ಅಧ್ಯಕ್ಷನಾಗಿ ಅಥವಾ ಉಪಾಧ್ಯಕ್ಷನಾಗಿ, ಪದಧಾರಣ ಮಾಡಿರುವ ಸದಸ್ಯನು, ಯಾವುದೇ ಸಮಯದಲ್ಲಿ [1][ಕೃಷಿ ಮಾರುಕಟ್ಟೆ ನಿರ್ದೇಶಕನಿ][1] ಗೆ ತನ್ನ ಹಸ್ತಾಕ್ಷರದೊಡನೆ ಬರೆದು ತನ್ನ ಪದಕ್ಕೆ ರಾಜೀನಾಮೆ ಸಲ್ಲಿಸಬಹುದು ಮತ್ತು ಅಂಥ ರಾಜೀನಾಮೆಯ ದಿನಾಂಕದಿಂದ ಸ್ಪಷ್ಟ ಹದಿನೈದು ದಿನಗಳ ಅವಧಿಯೊಳಗೆ [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನಿಗೆ ತನ್ನ ಸ್ವಹಸ್ತಾಕ್ಷರದೊಡನೆ ಬರೆದು ಅಂಥ ರಾಜೀನಾಮೆಯನ್ನು ಹಿಂತೆಗೆದುಕೊಳ್ಳದ ಹೊರತು ಆ ಪದವು ಸದರಿ ಅವಧಿಯು ಮುಗಿದ ಮೇಲೆ ಖಾಲಿಯಾಗತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಪ್ರತಿಯೊಬ್ಬ ಅಧ್ಯಕ್ಷನು ಅಥವಾ ಉಪಾಧ್ಯಕ್ಷನು, ಮಾರುಕಟ್ಟೆ ಸಮಿತಿಯ ಸದಸ್ಯನಾಗಿರುವುದು ನಿಂತುಹೋದರೆ ತನ್ನ ಪದವನ್ನು ಖಾಲಿ ಮಾಡತಕ್ಕದ್ದು.

(3) ಅಧ್ಯಕ್ಷನ ಪದವು ಖಾಲಿಯಾದಾಗ ಮತ್ತು ಅವನ ಪದವನ್ನು ವಹಿಸಿಕೊಳ್ಳಲು ಉಪಾಧ್ಯಕ್ಷನು ಇಲ್ಲದಿದ್ದಾಗ, ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ [1][ಈ ಸಂಬಂಧದಲ್ಲಿ ಕೃಷಿ ಮಾರುಕಟ್ಟೆ ನಿರ್ದೇಶಕನು ನೇಮಿಸಿದ ಅಧಿಕಾರಿಯು][1] ಅಧ್ಯಕ್ಷನನ್ನು ಅಥವಾ ಉಪಾಧ್ಯಕ್ಷನನ್ನು ಕ್ರಮಬದ್ಧವಾಗಿ ಚುನಾಯಿಸುವವರೆಗೆ, ಅಧ್ಯಕ್ಷನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಪರಂತುಕ XXX][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**44. ಅವಿಶ್ವಾಸ ಸೂಚನೆ.–** (1) ಯಾವನೇ ಸದಸ್ಯನು, ನಿಯಮಿಸಬಹುದಾದಂಥ ನೋಟೀಸನ್ನು ಕೊಟ್ಟ ಅನಂತರ ಅಧ್ಯಕ್ಷನ ವಿರುದ್ಧ ಅವಿಶ್ವಾಸ ಸೂಚನೆಯನ್ನು ಮಂಡಿಸಬಹುದು ಮತ್ತು ಅಂತಹ ನೋಟೀಸನ್ನು ಮಾರುಕಟ್ಟೆ ಸಮಿತಿಯ ಸದಸ್ಯರ ಒಟ್ಟು ಸಂಖ್ಯೆಯ [1][ಮೂರನೇ ಒಂದಕ್ಕಿಂತ ಕಡಿಮೆ ಇಲ್ಲದ ಸದಸ್ಯರು ಸಮರ್ಥಿಸಿರತಕ್ಕದ್ದು ಮತ್ತು ಅಂಥ ನೋಟೀಸಿನ ದಿನಾಂಕದಿಂದ ಹದಿನೈದು ದಿನಗಳೊಳಗೆ ಅಧ್ಯಕ್ಷನು ಆ ಅವಿಶ್ವಾಸ ಸೂಚನೆಯ ಪರ್ಯಾಲೋಚನೆಗಾಗಿ ಸಭೆಯನ್ನು ಕರೆಯುವಂತೆ ನಿರ್ದೇಶನ ನೀಡದಿದ್ದರೆ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯು ಮಾರುಕಟ್ಟೆ ಸಮಿತಿಯ ಕಚೇರಿಯು ಇರುವ ತಾಲೂಕಿನ ತಹಶೀಲ್ದಾರರ ಅಧ್ಯಕ್ಷತೆಯಲ್ಲಿ ಆ ಸಭೆಯನ್ನು ಕರೆಯತಕ್ಕದ್ದು][1];

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಪರಂತು, ಆ ಮೊದಲು ಮಂಡಿಸಲಾಗಿದ್ದ ಅವಿಶ್ವಾಸ ಸೂಚನೆಯು ವಿಫಲವಾದ ತರುವಾಯ [2][ಆರು ತಿಂಗಳ][2] ಅವಧಿಯೊಳಗೆ ಅದೇ ಬಗೆಯ ಅವಿಶ್ವಾಸ ಸೂಚನೆಯನ್ನು ಮಂಡಿಸತಕ್ಕದ್ದಲ್ಲ.][1]

1. 1987ರ ಅಧಿನಿಯಮ ಸಂಖ್ಯೆ 29ರ ಮೂಲಕ 10-8-1987ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2001ರ ಅಧಿನಿಯಮ ಸಂಖ್ಯೆ 8ರ ಮೂಲಕ 24-1-2001ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(2) ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಅಥವಾ ಅವರಿಬ್ಬರ ವಿರುದ್ಧ ಮಂಡಿಸಲಾದ ಸೂಚನೆಯನ್ನು, ಈ ಉದ್ದೇಶಕ್ಕಾಗಿ ವಿಶೇಷವಾಗಿ ನಡೆಸಲಾದ ಸಭೆಯಲ್ಲಿ ಹಾಜರಿರುವ ಮತ್ತು ಮತ ಚಲಾಯಿಸುವ ಸದಸ್ಯರ ಒಟ್ಟು ಸಂಖ್ಯೆಯ ಬಹುಮತದಿಂದ ಅಂಗೀಕರಿಸಿದರೆ, ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ಸಂದರ್ಭಾನುಸಾರ ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಪದವನ್ನು ಕೂಡಲೇ ತೆರವು ಮಾಡತಕ್ಕದ್ದು:][1]

1. 2001ರ ಅಧಿನಿಯಮ ಸಂಖ್ಯೆ 8ರ ಮೂಲಕ 24-1-2001ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಸದರಿ ಅವಧಿಯೊಳಗೆ ಹಾಗೆ ತೆಗೆದು ಹಾಕುವ ಆದೇಶವನ್ನು ಹೊರಡಿಸದಿದ್ದಲ್ಲಿ, ಅವಿಶ್ವಾಸ ಸೂಚನೆಯು ಅಂಗೀಕೃತವಾದ ದಿನಾಂಕದಿಂದ ಮೂವತ್ತು ದಿವಸಗಳು ಮುಗಿದ ಮೇಲೆ ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ತನ್ನ ಪದವನ್ನು ಖಾಲಿ ಮಾಡತಕ್ಕದ್ದು.

(3) ಈ ಅಧಿನಿಯಮದಲ್ಲಿ ಅಥವಾ ಈ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ಅಧ್ಯಕ್ಷನು ಅಥವಾ ಉಪಾಧ್ಯಕ್ಷನು, ಅವನ ವಿರುದ್ಧ ಮಂಡಿಸಲಾದ ಅವಿಶ್ವಾಸ ಸೂಚನೆಯನ್ನು ಚರ್ಚಿಸಲಾಗುವ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದಲ್ಲ, ಆದರೆ ಮಾರುಕಟ್ಟೆ ಸಮಿತಿಯ ನಡವಳಿಗಳಲ್ಲಿ ಮಾತನಾಡಲು ಮತ್ತು ಅನ್ಯಥಾ ಭಾಗವಹಿಸಲು ಹಕ್ಕುಳ್ಳವನಾಗಿರತಕ್ಕದ್ದು:

[1][ಪರಂತು, ಅಧ್ಯಕ್ಷ ಮತ್ತು ಉಪಾಧ್ಯಕ್ಷ ಇವರಿಬ್ಬರ ವಿರುದ್ಧ ಅವಿಶ್ವಾಸ ನಿರ್ಣಯವನ್ನು ತಂದಾಗ, ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಈ ಸಂಬಂಧದಲ್ಲಿ ಅವನಿಂದ ಅಧಿಕಾರ ಪಡೆದ ಅಧಿಕಾರಿಯು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**45. ಅಧ್ಯಕ್ಷನಿಗೆ ಮತ್ತು ಉಪಾಧ್ಯಕ್ಷನಿಗೆ ಗೈರುಹಾಜರಿ ರಜೆ ಮತ್ತು ರಜೆ ಇಲ್ಲದ ಗೈರು ಹಾಜರಿಯ ಪರಿಣಾಮಗಳು.**- (1) ಅಧ್ಯಕ್ಷನಾಗಿ ಮತ್ತು ಅಧ್ಯಕ್ಷನ ಕಾರ್ಯ ನಿರ್ವಹಿಸುವ ಉಪಾಧ್ಯಕ್ಷನಾಗಿ ತನ್ನ ಕರ್ತವ್ಯಗಳನ್ನು ನಿರ್ವಹಿಸಲಾಗದ ರೀತಿಯಲ್ಲಿ ನಲವತ್ತು ದಿವಸಗಳನ್ನು ಮೀರುವ ನಿರಂತರ ಅವಧಿಯವರೆಗೆ ಮಾರುಕಟ್ಟೆ ಪ್ರದೇಶದಿಂದ ಅಥವಾ ಮಾರುಕಟ್ಟೆ ಸಮಿತಿಯ ಕಚೇರಿಯಿಂದ ಗೈರು ಹಾಜರಾಗುವ ಪ್ರತಿಯೊಬ್ಬ ಅಧ್ಯಕ್ಷನು ಅಥವಾ ಸಂದರ್ಭಾನುಸಾರ ಅಧ್ಯಕ್ಷನ ಕಾರ್ಯ ನಿರ್ವಹಿಸುವ ಪ್ರತಿಯೊಬ್ಬ ಉಪಾಧ್ಯಕ್ಷನು ಹಾಗೆ ಗೈರು ಹಾಜರಾಗಲು ಮಾರುಕಟ್ಟೆ ಸಮಿತಿಯಿಂದ ರಜೆ ಪಡೆದಿದ್ದ ಹೊರತು ಅವನು ಹಾಗೆ ಅಧ್ಯಕ್ಷನಾಗಿರುವುದು ಅಥವಾ ಸಂದರ್ಭಾನುಸಾರ ಉಪಾಧ್ಯಕ್ಷನಾಗಿರುವುದು ನಿಂತುಹೋಗತಕ್ಕದ್ದು.

(2) (1)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, ಮಾರುಕಟ್ಟೆ ಪ್ರದೇಶದಿಂದ ನಿರಂತರವಾಗಿ ಮೂರು ತಿಂಗಳು ಮೀರುವ ಅವಧಿಯವರೆಗೆ ಗೈರುಹಾಜರಾಗುವ ಪ್ರತಿಯೊಬ್ಬ ಉಪಾಧ್ಯಕ್ಷನು ಹಾಗೆ ಗೈರುಹಾಜರಾಗುವುದಕ್ಕೆ ಮಾರುಕಟ್ಟೆ ಸಮಿತಿಯಿಂದ ರಜೆ ಪಡೆದಿದ್ದ ಹೊರತು ಅವನು ಉಪಾಧ್ಯಕ್ಷನಾಗಿರುವುದು ನಿಂತುಹೋಗತಕ್ಕದ್ದು.

(3) (1) ಅಥವಾ (2)ನೇ ಉಪಪ್ರಕರಣದ ಮೇರೆಗೆ ಮಂಜೂರು ಮಾಡಲಾಗುವ ರಜೆಯನ್ನು ಯಾವುದೇ ಒಂದು ವರ್ಷದಲ್ಲಿ ಒಂದು ನೂರಎಂಬತ್ತು ದಿವಸಗಳಿಗೆ ಮೀರಿದ ಅವಧಿಗೆ ಮಂಜೂರು ಮಾಡತಕ್ಕದ್ದಲ್ಲ. ಅಧ್ಯಕ್ಷನಿಗೆ ಅಂಥ ರಜೆಯನ್ನು ನೀಡಿದಾಗಲೆಲ್ಲ ಉಪಾಧ್ಯಕ್ಷನು ಅಧ್ಯಕ್ಷರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ಮಾರುಕಟ್ಟೆ ಸಮಿತಿಯು ಆ ಉಪಾಧ್ಯಕ್ಷನ ಬದಲಾಗಿ ಅವನ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನಿರ್ವಹಿಸಲು ಉಪಾಧ್ಯಕ್ಷನಾಗಿ ಚುನಾಯಿತನಾಗಲು ಅರ್ಹನಾಗಿರುವ ಸದಸ್ಯರಲ್ಲಿ ಒಬ್ಬನನ್ನು ಉಪಾಧ್ಯಕ್ಷನಾಗಿ ಚುನಾಯಿಸತಕ್ಕದ್ದು. ಅಂಥ ರಜೆಯನ್ನು ಉಪಾಧ್ಯಕ್ಷನಿಗೆ ನೀಡಿದಾಗಲೆಲ್ಲ ಮಾರುಕಟ್ಟೆ ಸಮಿತಿಯು, ಅಂಥ ರಜೆಯನ್ನು ನೀಡಿರುವಂಥ ಅವಧಿಯಲ್ಲಿ ಉಪಾಧ್ಯಕ್ಷನ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನಿರ್ವಹಿಸಲು ಉಪಾಧ್ಯಕ್ಷನಾಗಿ ಚುನಾಯಿತನಾಗಲು ತನ್ನ ಸದಸ್ಯರಲ್ಲಿ ಅರ್ಹನಾದ ಒಬ್ಬನನ್ನು ಉಪಾಧ್ಯಕ್ಷನಾಗಿ ಚುನಾಯಿಸತಕ್ಕದ್ದು.

## ಅಧ್ಯಾಯ- IV

## ವ್ಯವಹಾರ ನಿರ್ವಹಣೆ

**46. ಅಧ್ಯಕ್ಷನ ಅಧಿಕಾರಗಳು ಮತ್ತು ಕರ್ತವ್ಯಗಳು.**- ಈ ಅಧಿನಿಯಮದ ಯಾವುದೇ ಇತರ ಉಪಬಂಧದ ಮೇರೆಗೆ ಅಧ್ಯಕ್ಷನಿಗೆ ಪ್ರದಾನ ಮಾಡಲಾದ ಅಧಿಕಾರಗಳಿಗೆ ಬಾಧಕವಾಗದಂತೆ,-

(1) ಮಾರುಕಟ್ಟೆ ಸಮಿತಿಯ ಅಧ್ಯಕ್ಷನು, ಆ ಸಮಿತಿಯ ಮುಖ್ಯ ನಿಯಂತ್ರಣಾಧಿಕಾರಿ ಮತ್ತು ಮೇಲ್ವಿಚಾರಣಾ ಅಧಿಕಾರಿಯಾಗಿರತಕ್ಕದ್ದು. ಮಾರುಕಟ್ಟೆ ಸಮಿತಿಯ ಎಲ್ಲಾ ಅಧಿಕಾರಿಗಳು ಮತ್ತು ನೌಕರರು, ಈ ಅಧಿನಿಯಮ, ನಿಯಮಗಳು, ಉಪವಿಧಿಗಳು ಮತ್ತು ಆ ಸಮಿತಿಯು ನೀಡಿದ ನಿರ್ದೇಶನಗಳು ಯಾವುವಾದರೂ ಇದ್ದರೆ ಅವುಗಳಿಗೆ ಒಳಪಟ್ಟು ಅಧ್ಯಕ್ಷನ ನಿಯಂತ್ರಣಕ್ಕೊಳಪಟ್ಟಿರತಕ್ಕದ್ದು.

(2) ಅಧ್ಯಕ್ಷನು,-

(ಎ) ಮಾರುಕಟ್ಟೆ ಸಮಿತಿಯ ಮತ್ತು ಉಪಸಮಿತಿ ಸಭೆಗಳ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಅಂಥ ಸಭೆಗಳಲ್ಲಿನ ವ್ಯವಹಾರವನ್ನು ನಿರ್ವಹಿಸತಕ್ಕದ್ದು;

(ಬಿ) ಮಾರುಕಟ್ಟೆ ಸಮಿತಿಯ ಆರ್ಥಿಕ ಮತ್ತು ಕಾರ್ಯನಿರ್ವಾಹಕ ಆಡಳಿತದ ಮೇಲೆ ನಿಗಾ ಇಡತಕ್ಕದ್ದು;

(ಸಿ) ಲೆಕ್ಕಪತ್ರಗಳು ಮತ್ತು ದಾಖಲೆಗಳು ಮತ್ತು ನಿಯೋಜಿತರ ಸೇವೆಗೆ ಸಂಬಂಧಪಟ್ಟ ಎಲ್ಲಾ ಪ್ರಶ್ನೆಗಳ ಇತ್ಯರ್ಥಕ್ಕೆ ಸಂಬಂಧಿಸಿದಂತೆ ಕಾರ್ಯನಿರ್ವಾಹಕ ಆಡಳಿತದ ವಿಷಯಗಳಲ್ಲಿ ಮಾರುಕಟ್ಟೆ ಸಮಿತಿಯ ಅಧಿಕಾರಿಗಳ ಮತ್ತು ನೌಕರರ (ಅಂತಹ ಅಧಿಕಾರಿಗಳು ಅಥವಾ ನೌಕರರು ಸರ್ಕಾರಿ ನೌಕರರಾಗಿರಲಿ ಅಥವಾ ಇಲ್ಲದಿರಲಿ) ಮೇಲೆ ಮೇಲ್ವಿಚಾರಣೆ ನಡೆಸತಕ್ಕದ್ದು ಮತ್ತು ನಿಯಂತ್ರಣವನ್ನು ಹೊಂದಿರತಕ್ಕದ್ದು; ಮತ್ತು

(ಡಿ) ಜರೂರು ಸಂದರ್ಭಗಳಲ್ಲಿ, ಮಾರುಕಟ್ಟೆ ಸಮಿತಿಯ ಮಂಜೂರಾತಿಯು ಅಗತ್ಯವಾದ ಯಾವುದೇ ಕೆಲಸ ಅಥವಾ ಯಾವುದೇ ಕಾರ್ಯನಿರ್ವಹಣೆಯನ್ನು ನಿಲ್ಲಿಸುವಂತೆ ನಿರ್ದೇಶನ ನೀಡತಕ್ಕದ್ದು.

**47. ಉಪಾಧ್ಯಕ್ಷನ ಅಧಿಕಾರಗಳು ಮತ್ತು ಕರ್ತವ್ಯಗಳು.–** ಮಾರುಕಟ್ಟೆ ಸಮಿತಿಯ ಉಪಾಧ್ಯಕ್ಷನು,–

(ಎ) ಈ ಅಧಿನಿಯಮದಲ್ಲಿ ಅಥವಾ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸುವುದನ್ನುಳಿದು ಅಧ್ಯಕ್ಷನ ಗೈರುಹಾಜರಿಯಲ್ಲಿ, ಮಾರುಕಟ್ಟೆ ಸಮಿತಿಯ ಮತ್ತು ಅದರ ಉಪಸಮಿತಿ ಸಭೆಗಳ ಅಧ್ಯಕ್ಷತೆ ವಹಿಸತಕ್ಕದ್ದು;

[1][(ಬಿ) XXX][1];

1. 1991ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಸಿ) ಅಧ್ಯಕ್ಷನ ಚುನಾವಣೆಯಾಗುವವರೆಗೆ ಅಥವಾ ಅಧ್ಯಕ್ಷನು ರಜೆ ಕಾರಣ ಗೈರುಹಾಜರಾಗುವ ಅವಧಿಯಲ್ಲಿ ಅಧ್ಯಕ್ಷನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**48. ಮಾರುಕಟ್ಟೆ ಸಮಿತಿಯ ಸಭೆ.–** (1) ಮಾರುಕಟ್ಟೆ ಸಮಿತಿಯು, ಅಧ್ಯಕ್ಷನು ನಿರ್ಧರಿಸಬಹುದಾದಂಥ ದಿನಾಂಕದಂದು ಮತ್ತು ಸಮಯದಲ್ಲಿ ಮಾರುಕಟ್ಟೆ ಸಮಿತಿಯ ಕಚೇರಿಯಲ್ಲಿ ಪ್ರತಿ ತಿಂಗಳು ಕೊನೆಪಕ್ಷ ಒಂದು ಸಲ ಅದರ ವ್ಯವಹಾರ ನಿರ್ವಹಣೆಗಾಗಿ ಸಭೆ ಸೇರತಕ್ಕದ್ದು:

ಪರಂತು, ಮಾರುಕಟ್ಟೆ ಸಮಿತಿಯು ವಿಶೇಷ ಸಂದರ್ಭಗಳಲ್ಲಿ, ಅದರ ಯಾವುದೇ ಸಭೆಯನ್ನು ಆ ಮಾರುಕಟ್ಟೆ ಸಮಿತಿಯ ಕಚೇರಿಯಲ್ಲಲ್ಲದೆ ಆ ಪ್ರದೇಶದ ಯಾವುದೇ ಇತರ ಸ್ಥಳದಲ್ಲಿ ಸಭೆಯನ್ನು ನಡೆಸಬೇಕೆಂದು ನಿರ್ಣಯವನ್ನು ಅಂಗೀಕರಿಸಿ ನಿರ್ದೇಶಿಸಿದರೆ, ಆಗ, ಆ ಸಮಿತಿಯು ಆ ಮಾರುಕಟ್ಟೆ ಪ್ರದೇಶದ ಸದರಿ ಸ್ಥಳದಲ್ಲಿ ಸಭೆಯನ್ನು ನಡೆಸಬಹುದು.

(2) ಅಧ್ಯಕ್ಷನು, ತಾನು ಸೂಕ್ತವೆಂದು ಯೋಚಿಸಿದಾಗಲೆಲ್ಲ ಒಂದು ವಿಶೇಷ ಸಭೆಯನ್ನು ಕರೆಯಬಹುದು ಮತ್ತು ಸದಸ್ಯರ ಒಟ್ಟು ಸಂಖ್ಯೆಯ ಮೂರನೇ ಒಂದಕ್ಕಿಂತ ಕಡಿಮೆ ಇಲ್ಲದಷ್ಟು ಸದಸ್ಯರ ಲಿಖಿತ ಕೋರಿಕೆಯ ಮೇಲೆ ಮತ್ತು ಅಂಥ ಕೋರಿಕೆಯನ್ನು ಸ್ವೀಕರಿಸಿದ [1][ಹದಿನೈದು ದಿವಸಗಳೊಳಗಿನ][1] ದಿನಾಂಕದಂದು ಆ ವಿಶೇಷ ಸಭೆಯನ್ನು ಕರೆಯತಕ್ಕದ್ದು. ಯಾವ ಉದ್ದೇಶಕ್ಕಾಗಿ ಆ ಸಭೆಯನ್ನು ಕರೆಯಲು ಉದ್ದೇಶಿಸಲಾಗಿದೆಯೋ ಆ ಉದ್ದೇಶವನ್ನು ಅಂತಹ ಕೋರಿಕೆಯಲ್ಲಿ ನಿರ್ದಿಷ್ಟಪಡಿಸಿರತಕ್ಕದ್ದು.

1. 1991ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) (2)ನೇ ಉಪಪ್ರಕರಣದಲ್ಲಿ ಉಪಬಂಧಿಸಲಾದಂತೆ ವಿಶೇಷ ಸಭೆಯನ್ನು ಕರೆಯಲು ಅಧ್ಯಕ್ಷನು ತಪ್ಪಿದರೆ, ಆಗ ಉಪಾಧ್ಯಕ್ಷನು ಅಥವಾ ಸದಸ್ಯರ ಒಟ್ಟು ಸಂಖ್ಯೆಯ ಮೂರನೇ ಒಂದರಷ್ಟು ಸದಸ್ಯರು ಅಂಥ ಕೋರಿಕೆಯನ್ನು ಸಲ್ಲಿಸಿದ ತರುವಾಯ [1][ಮೂವತ್ತು ದಿವಸಗಳಿಗೆ][1] ಮೀರದ ದಿನದಂದು ಅಂಥ ಸಭೆಯನ್ನು ಕರೆಯಬಹುದು ಮತ್ತು ಆ ಬಗ್ಗೆ ಸದಸ್ಯರಿಗೆ ನೋಟೀಸು ಕೊಡುವಂತೆ ಮತ್ತು ಸದರಿ ಸಭೆಯನ್ನು ಕರೆಯಲು ಅವಶ್ಯವಾಗಬಹುದಾದಂಥ ಕ್ರಮವನ್ನು ಕೈಗೊಳ್ಳುವಂತೆ ಕಾರ್ಯದರ್ಶಿಯನ್ನು ಅಗತ್ಯಪಡಿಸಬಹುದು ಮತ್ತು ಅಂಥ ಕೋರಿಕೆಯ ಮೇಲೆ ಕಾರ್ಯದರ್ಶಿಯು ತದನುಸಾರ ಆ ಸಭೆಯನ್ನು ಕರೆಯತಕ್ಕದ್ದು.

1. 1991ರ ಅಧಿನಿಯಮ ಸಂಖ್ಯೆ 16 ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) ಅಂಥ ಸಭೆಯು ನಡೆಯುವ ದಿನಾಂಕ, ವೇಳೆ ಮತ್ತು ಸ್ಥಳ ಮತ್ತು ಆ ಸಭೆಯಲ್ಲಿ ನಡೆಸಬೇಕಾದ ವ್ಯವಹಾರ– ಇವುಗಳನ್ನು ನಿರ್ದಿಷ್ಟಪಡಿಸಿ, ಸಾಮಾನ್ಯ ಸಭೆಯ ಸಂದರ್ಭದಲ್ಲಿ ಸ್ಪಷ್ಟ ಏಳು ದಿವಸಗಳ ನೋಟೀಸನ್ನು ಮತ್ತು ವಿಶೇಷ ಸಭೆಯ ಸಂದರ್ಭದಲ್ಲಿ ಸ್ಪಷ್ಟ ಐದು ದಿವಸಗಳ ನೋಟೀಸನ್ನು ಆ ಸಭೆಗೆ ಹಾಜರಾಗಲು ಹಕ್ಕುಳ್ಳ ಸದಸ್ಯರಿಗೆ ಕಳಿಸತಕ್ಕದ್ದು ಮತ್ತು ಆ ನೋಟೀಸುಗಳನ್ನು ಮಾರುಕಟ್ಟೆ ಸಮಿತಿಯ ಕಛೇರಿಯ ಸೂಚನಾ ಫಲಕದ ಮೇಲೆ ಅಂಟಿಸತಕ್ಕದ್ದು. ವಿಶೇಷ ಸಭೆಯ ಸಂದರ್ಭದಲ್ಲಿ ಅಂಥ ನೋಟೀಸು ಆ ಸಭೆಯಲ್ಲಿ ಪರ್ಯಾಲೋಚಿಸಬೇಕಾದ ಯಾವುದೇ ಸೂಚನೆ ಅಥವಾ ಪ್ರಸ್ತಾವವನ್ನು ಒಳಗೊಂಡಿರತಕ್ಕದ್ದು:

ಪರಂತು, ತುರ್ತಿನ ಸಂದರ್ಭದಲ್ಲಿ, ಅಧ್ಯಕ್ಷನು, ಲಿಖಿತದಲ್ಲಿ ಕಾರಣಗಳನ್ನು ದಾಖಲು ಮಾಡಿ, ಸದಸ್ಯರಿಗೆ ಮೂವತ್ತಾರು ಗಂಟೆಗಳ ಮುಂಚಿನ ನೋಟೀಸನ್ನು ಕೊಡುವುದರ ಮೂಲಕ ಮಾರುಕಟ್ಟೆ ಸಮಿತಿಯ ವಿಶೇಷ ಸಭೆಯನ್ನು ಕರೆಯಬಹುದು.

**49. ಸಭೆಗಳಲ್ಲಿ ಕೋರಂ ಮತ್ತು ಅನುಸರಿಸಬೇಕಾದ ಪ್ರಕ್ರಿಯೆ.–** (1) ಮಾರುಕಟ್ಟೆ ಸಮಿತಿಯ ಸದಸ್ಯರ ಒಟ್ಟು ಸಂಖ್ಯೆಯಲ್ಲಿ ಸರಿಸುಮಾರು ಮೂರನೇ ಒಂದರಷ್ಟು ಸಂಖ್ಯೆಯ ಸದಸ್ಯರು ಆ ಸಮಿತಿಯ ಸಭೆಯಲ್ಲಿ ವ್ಯವಹಾರ ನಡೆಸಲು ಕೋರಂ ಆಗಿರತಕ್ಕದ್ದು. ಸಭೆ ನಡೆಯಲು ಗೊತ್ತುಪಡಿಸಿದ ಸಮಯದ ಅರ್ಧಗಂಟೆಯೊಳಗೆ, ಕೋರಂ ಸೇರದಿದ್ದರೆ, ಅಧ್ಯಕ್ಷತೆ ವಹಿಸಿರುವ ಪ್ರಾಧಿಕಾರಿಯು, ತಾನು ನಿಗದಿಪಡಿಸಬಹುದಾದಂಥ ಮುಂದಿನ ದಿನಾಂಕ ಮತ್ತು ಸಮಯದವರೆಗೆ ಅಂತಹ ಸಭೆಯನ್ನು ಮುಂದೂಡತಕ್ಕದ್ದು. ಸಭೆ ಪ್ರಾರಂಭವಾದ ತರುವಾಯ ಯಾವುದೇ ಸಮಯದಲ್ಲಿ ಕೋರಂ ಇಲ್ಲದಿರುವ ಬಗ್ಗೆ ಅಧ್ಯಕ್ಷತೆ ವಹಿಸಿದ ಪ್ರಾಧಿಕಾರಿಯ ಗಮನವನ್ನು ಸೆಳೆದಾಗ ಅದೇ ರೀತಿ ಸಭೆಯನ್ನು ಮುಂದೂಡತಕ್ಕದ್ದು. ಮುಂದೂಡಲಾದ ಸಭೆಯಲ್ಲಿ, ಕೋರಂ ಇರುವಾಗ ಮೊದಲಿನ ಸಭೆಯಲ್ಲಿ ನಡೆಸಬಹುದಾಗಿದ್ದ ವ್ಯವಹಾರಗಳನ್ನು ಈ ಸಭೆಯಲ್ಲಿ ನಡೆಸತಕ್ಕದ್ದು.

(2) ಮಾರುಕಟ್ಟೆ ಸಮಿತಿಯ ಮುಂದೆ ಇತ್ಯರ್ಥದಲ್ಲಿರುವ ಯಾವುದೇ ವಿಚಾರಣೆ ಅಥವಾ ಚರ್ಚೆಯನ್ನು ರಹಸ್ಯವಾಗಿ ನಡೆಸತಕ್ಕದ್ದೆಂದು ಸಭೆಯ ಅಧ್ಯಕ್ಷತೆ ವಹಿಸಿರುವ ಪ್ರಾಧಿಕಾರಿಯು ಭಾವಿಸುವ ಹೊರತು ಪ್ರತಿಯೊಂದು ಸಭೆಯು ಸಾರ್ವಜನಿಕರಿಗೆ ಮುಕ್ತವಾಗಿರತಕ್ಕದ್ದು:

ಪರಂತು, ಸಭೆಯ ನಡವಳಿಗಳಿಗೆ ಅಡ್ಡಿಪಡಿಸುವ ಯಾವನೇ ವ್ಯಕ್ತಿಯನ್ನು ಅಧ್ಯಕ್ಷತೆ ವಹಿಸಿದ ಪ್ರಾಧಿಕಾರಿಯು ಯಾವುದೇ ಸಮಯದಲ್ಲಿ ಹೊರ ಹಾಕಿಸಬಹುದು ಮತ್ತು ಆ ಉದ್ದೇಶಕ್ಕಾಗಿ ಅವಶ್ಯವಾಗಬಹುದಾದ ಬಲವನ್ನು ಉಪಯೋಗಿಸಬಹುದು.

(3) ಪ್ರತಿಯೊಂದು ಸಭೆಯಲ್ಲಿ ಅಧ್ಯಕ್ಷನು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಅವನು ಗೈರು ಹಾಜರಾಗಿದ್ದರೆ ಅಥವಾ ಅಧ್ಯಕ್ಷತೆ ವಹಿಸಲು ಅನರ್ಹನಾಗಿದ್ದರೆ ಉಪಾಧ್ಯಕ್ಷನು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಇಬ್ಬರೂ ಗೈರುಹಾಜರಾಗಿದ್ದರೆ ಅಥವಾ ಅಧ್ಯಕ್ಷತೆ ವಹಿಸಲು ಅನರ್ಹರಾಗಿದ್ದರೆ ಅಥವಾ ಅಧ್ಯಕ್ಷನು ಗೈರು ಹಾಜರಾಗಿದ್ದು ಉಪಾಧ್ಯಕ್ಷನು ಸಹ ಇಲ್ಲದಿದ್ದರೆ, ಅಂಥ ಸಂದರ್ಭದಲ್ಲಿ ಸಭೆಯಲ್ಲಿ ಹಾಜರಿರುವ ಸದಸ್ಯರಲ್ಲಿ ಒಬ್ಬನನ್ನು ಅಧ್ಯಕ್ಷನನ್ನಾಗಿ ಸಭೆಯು ಆಯ್ಕೆ ಮಾಡಬಹುದು ಮತ್ತು ಅವನು ಅಧ್ಯಕ್ಷತೆ ವಹಿಸತಕ್ಕದ್ದು. ಕೋರಂ ಇಲ್ಲದಿರುವಂಥ ಸಭೆಯನ್ನು ಮುಂದೂಡುವುದಕ್ಕಾಗಿ ಆ ಸಭೆಯ ಅಧ್ಯಕ್ಷತೆ ವಹಿಸಲು ಒಬ್ಬ ಸದಸ್ಯನನ್ನು ಆಯ್ಕೆ ಮಾಡುವುದಕ್ಕೆ ಕೋರಂ ಅಗತ್ಯವಿರತಕ್ಕದ್ದಲ್ಲ.

(4) ಈ ಅಧಿನಿಯಮದಲ್ಲಿ, ನಿಯಮಗಳಲ್ಲಿ ಅಥವಾ ಉಪವಿಧಿಗಳಲ್ಲಿ ವಿಶೇಷವಾಗಿ ಅನ್ಯಥಾ ಉಪಬಂಧಿಸಲಾಗಿದ್ದ ಹೊರತು ಎಲ್ಲಾ ಪ್ರಶ್ನೆಗಳನ್ನು, ಹಾಜರಿದ್ದು ಮತ ನೀಡುವ ಸದಸ್ಯರ ಬಹುಮತದಿಂದ ನಿರ್ಧರಿಸತಕ್ಕದ್ದು. ಅಧ್ಯಕ್ಷತೆ ವಹಿಸಿರುವ ಪ್ರಾಧಿಕಾರಿಯು, ಮತದಾನ ಮಾಡದಿದ್ದ ಹೊರತು, ಪ್ರಶ್ನೆಯ ಪರವಾಗಿ ಬಂದ ಮತ್ತು ವಿರುದ್ಧವಾಗಿ ಬಂದ ಮತಗಳ ಸಂಖ್ಯೆಯನ್ನು ಘೋಷಿಸುವುದಕ್ಕೆ ಮೊದಲು ತನ್ನ ಮತವನ್ನು ನೀಡತಕ್ಕದ್ದು ಮತ್ತು ಸಮ ಮತಗಳ ಸಂದರ್ಭದಲ್ಲಿ ಅವನು ಒಂದು ಹೆಚ್ಚಿನ ಅಥವಾ ನಿರ್ಣಾಯಕ ಮತವನ್ನು ನೀಡತಕ್ಕದ್ದು.

(5) ಮಾರುಕಟ್ಟೆ ಸಮಿತಿಯ ಅಥವಾ ಅದರ ಯಾವುದೇ ಉಪಸಮಿತಿಯ ಸಭೆಯಲ್ಲಿ ಪರ್ಯಾಲೋಚನೆಗಾಗಿ ಬರುವಂತಹ ಯಾವುದೇ ಪ್ರಶ್ನೆಯೂ ಸಾರ್ವಜನಿಕವಾಗಿ ಅನ್ವಯವಾಗುವ ಪ್ರಶ್ನೆಯಾಗಿರುವುದಲ್ಲದೆ, ಮಾರುಕಟ್ಟೆ ಸಮಿತಿಯ ಸದಸ್ಯನ ಆರ್ಥಿಕ ಹಿತಾಸಕ್ತಿಗೆ ಪ್ರತ್ಯೇಕವಾಗಿ ಅಥವಾ ಪರೋಕ್ಷವಾಗಿ ಸಂಬಂಧಿಸಿದ್ದರೆ ಆ ಸದಸ್ಯರು ಅಂಥ ಪ್ರಶ್ನೆ ಕುರಿತು ಮತ ಚಲಾಯಿಸತಕ್ಕದ್ದಲ್ಲ ಅಥವಾ ಸಂಬಂಧಪಟ್ಟ ಚರ್ಚೆಗಳಲ್ಲಿ ಭಾಗವಹಿಸತಕ್ಕದ್ದಲ್ಲ.

(6) ಅಧ್ಯಕ್ಷತೆ ವಹಿಸಿರುವ ಪ್ರಾಧಿಕಾರಿಯು ಚರ್ಚಿಸಲ್ಪಡುವ ಯಾವುದೇ ವಿಷಯದಲ್ಲಿ ಯಾವುದೇ ಅಂಥ ಆರ್ಥಿಕ ಹಿತಾಸಕ್ತಿಯನ್ನು ಹೊಂದಿರುವನೆಂದು ಸಭೆಯಲ್ಲಿ ಹಾಜರಿರುವ ಯಾವನೇ ಸದಸ್ಯನು ನಂಬಿರುವ ಸಂದರ್ಭದಲ್ಲಿ ಮತ್ತು ಆ ಬಗ್ಗೆ ಒಂದು ಸೂಚನೆಯು ಅಂಗೀಕೃತವಾಗಿರುವಲ್ಲಿ, ಅಂಥ ಚರ್ಚೆಯು ನಡೆಯುವ ಸಭೆಯಲ್ಲಿ ಆ ಪ್ರಾಧಿಕಾರಿಯು ಅಧ್ಯಕ್ಷತೆ ವಹಿಸತಕ್ಕದ್ದಲ್ಲ ಅಥವಾ ಮತ ಚಲಾಯಿಸತಕ್ಕದ್ದಲ್ಲ ಅಥವಾ ಅದರಲ್ಲಿ ಭಾಗವಹಿಸತಕ್ಕದ್ದಲ್ಲ ಮತ್ತು ಅಂತಹ ಚರ್ಚೆಯನ್ನು ಮುಂದುವರಿಸುವುದಕ್ಕಾಗಿ ಸಭೆಯ ಅಧ್ಯಕ್ಷತೆ ವಹಿಸಲು ಸಮಿತಿಯ ಯಾವನೇ ಸದಸ್ಯನನ್ನು ಆಯ್ಕೆ ಮಾಡಬಹುದು.

(7) ಯಾವುದೇ ಸಭೆಯನ್ನು ಕರೆಯುವ ನೋಟೀಸಿನಲ್ಲಿ ಸಭೆಯ ವ್ಯವಹಾರವನ್ನು ಮತ್ತು ಪ್ರಸ್ತಾವವನ್ನು ನಿರ್ದಿಷ್ಟಪಡಿಸಿದ ಹೊರತು ಅಂಥ ಸಭೆಯಲ್ಲಿ, ಆ ವ್ಯವಹಾರವನ್ನು ನಡೆಸತಕ್ಕದ್ದಲ್ಲ ಮತ್ತು ಪ್ರಸ್ತಾವವನ್ನು ಚರ್ಚಿಸತಕ್ಕದ್ದಲ್ಲ:

ಪರಂತು, ನೋಟೀಸಿನಲ್ಲಿ ಸೇರಿಸದಿರುವ ವಾಡಿಕೆಯ ಸ್ವರೂಪದ ಯಾವುದೇ ತುರ್ತು ವಿಷಯದ ಪ್ರಸ್ತಾವಕ್ಕೆ ಯಾವನೇ ಸದಸ್ಯನು ಆಕ್ಷೇಪಣೆ ಮಾಡದಿದ್ದಲ್ಲಿ ಅಧ್ಯಕ್ಷನು ಅದನ್ನು ಪ್ರಸ್ತಾವಿಸಬಹುದು:

ಮತ್ತೂ ಪರಂತು, ನೋಟೀಸಿನಲ್ಲಿ ಸೇರಿಸಿರುವ ವಿಷಯಗಳಿಗೆ ಸಂಬಂಧಪಟ್ಟ ಅಥವಾ ಅವುಗಳಿಗೆ ಪ್ರಾಸಂಗಿಕವಾದ ಯಾವುದೇ ನಿರ್ಣಯವನ್ನು ಯಾವನೇ ಸದಸ್ಯನು ಪ್ರಸ್ತಾವಿಸಬಹುದು.

(8) ಯಾವುದೇ ವ್ಯವಹಾರ ಅಥವಾ ಪ್ರಸ್ತಾವವನ್ನು ಅಂಥ ಸಭೆಯ ಮುಂದೆ ಯಾವ ಕ್ರಮದಲ್ಲಿ ತರಬೇಕೆಂಬುದನ್ನು ಅಧ್ಯಕ್ಷತೆ ವಹಿಸಿರುವ ಪ್ರಾಧಿಕಾರಿಯು ನಿರ್ಧರಿಸತಕ್ಕದ್ದು ಮತ್ತು ಆ ಪ್ರಾಧಿಕಾರಿಯು, ಯಾವನೇ ಸದಸ್ಯನು ಅಂಥ ವ್ಯವಹಾರದ ಯಾವುದೇ ನಿರ್ದಿಷ್ಟ ಬಾಬಿಗೆ ಅಥವಾ ಯಾವುದೇ ನಿರ್ದಿಷ್ಟ ಪ್ರಸ್ತಾವಕ್ಕೆ ಆದ್ಯತೆ ಕೊಡಬೇಕೆಂದು ಪ್ರಸ್ತಾವಿಸಿದ ಸಂದರ್ಭದಲ್ಲಿ ಅಂಥ ಪ್ರಸ್ತಾವದ ಮೇಲೆ ಸಮಿತಿಯು ಕೈಗೊಳ್ಳುವ ತೀರ್ಮಾನಕ್ಕನುಸಾರ ನಡೆದುಕೊಳ್ಳತಕ್ಕದ್ದು.

(9) ಯಾವುದೇ ಸಾಮಾನ್ಯ ಸಭೆಯನ್ನು, ಹಾಜರಿದ್ದ ಸದಸ್ಯರ ಬಹುಮತದ ಸಮ್ಮತಿಯಿಂದ ಕಾಲಕಾಲಕ್ಕೆ ಮುಂದೂಡಬಹುದು, ಆದರೆ ಅಂಥ ಸಭೆಯಲ್ಲಿ ವಿಲೆಯಾಗದೆ ಉಳಿದಿರುವ ವಿಷಯಗಳ ಹೊರತಾಗಿ ಯಾವುದೇ ಇತರ ವಿಷಯವನ್ನು ಹಾಗೆ ಮುಂದೂಡಲಾದ ಸಭೆಯಲ್ಲಿ ವ್ಯವಹರಿಸತಕ್ಕದ್ದಲ್ಲ.

**50. ನಿರ್ಣಯಗಳ ಮಾರ್ಪಾಟು ಅಥವಾ ರದ್ದಿಯಾತಿ.–** [1][ಮಾರುಕಟ್ಟೆ ಸಮಿತಿಯ][1] ಯಾವುದೇ ನಿರ್ಣಯವು, ಅಂಗೀಕೃತವಾದ ಅನಂತರ ಆರು ತಿಂಗಳೊಳಗಾಗಿ, ಆ ಸಮಿತಿಯ ಸಾಮಾನ್ಯ ಅಥವಾ ವಿಶೇಷ ಸಭೆಯಲ್ಲಿ [2][ಆಗ ಹಾಜರಿದ್ದ ಎಲ್ಲ ಸದಸ್ಯರ][2] [1][ಮೂರನೇ ಎರಡಕ್ಕಿಂತ][1] ಕಡಿಮೆಯಿಲ್ಲದ ಸದಸ್ಯರು ಅಂಗೀಕರಿಸಿದ ನಿರ್ಣಯದ ಮೂಲಕ ಹೊರತಾಗಿ, ಅದನ್ನು ಮಾರ್ಪಾಟುಗೊಳಿಸತಕ್ಕದ್ದಲ್ಲ ಅಥವಾ ರದ್ದು ಮಾಡತಕ್ಕದ್ದಲ್ಲ ಮತ್ತು ಅಂಥ ಸಭೆಯ ನೋಟೀಸನ್ನು ಆ ಸಭೆಯಲ್ಲಿ ಮಾರ್ಪಾಟುಗೊಳಿಸಲು ಅಥವಾ ರದ್ದು ಮಾಡಲು ಪ್ರಸ್ತಾವಿಸಲಾಗುವ ನಿರ್ಣಯವನ್ನು ಮತ್ತು ಅಂತಹ ನಿರ್ಣಯದ ಮಾರ್ಪಾಟಿನ ಅಥವಾ ರದ್ದಿಯಾತಿಯ ಸೂಚನೆಯನ್ನು ಅಥವಾ ಪ್ರಸ್ತಾವವನ್ನು ಪೂರ್ಣವಾಗಿ ನಿರೂಪಿಸಿ ಕೊಟ್ಟಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**51. ನಡವಳಿಗಳ ಸಂಕ್ಷಿಪ್ತ ವರದಿ.–** ನಡವಳಿಗಳನ್ನು ದಾಖಲು ಮಾಡಲು ಒದಗಿಸಿದ ಪುಸ್ತಕದಲ್ಲಿ ಸಮಿತಿಯ ಪ್ರತಿಯೊಂದು ಸಭೆಯಲ್ಲಿ ಹಾಜರಿದ್ದ ಸದಸ್ಯರ ಹೆಸರುಗಳನ್ನು ಮತ್ತು ನಡವಳಿಗಳ ಸಂಕ್ಷಿಪ್ತ ವರದಿಯನ್ನು ಮತ್ತು ಅನುಕ್ರಮವಾಗಿ ನಿರ್ಣಯದ ಪರವಾಗಿ ಅಥವಾ ವಿರುದ್ಧವಾಗಿ ಮತ ನೀಡುವ ಸದಸ್ಯರ ಹೆಸರುಗಳನ್ನು ನಮೂದಿಸಬೇಕೆಂದು ಹಾಜರಿದ್ದ ಯಾವನೇ ಸದಸ್ಯನು ಇಚ್ಛಿಸಿದರೆ, ಅಂಥ ಹೆಸರುಗಳನ್ನು ಸಹ ಬರೆದಿಡತಕ್ಕದ್ದು ಮತ್ತು ಅದಕ್ಕೆ ಸಾಧ್ಯವಾದಷ್ಟು ಬೇಗನೆ ಕಾರ್ಯದರ್ಶಿಯು ಮತ್ತು ಅಂಥ ಸಭೆಯ ಅಧ್ಯಕ್ಷತೆ ವಹಿಸುವ ಪ್ರಾಧಿಕಾರಿಯು ಸಹಿ ಹಾಕತಕ್ಕದ್ದು ಮತ್ತು ಆ ಪುಸ್ತಕವು ಎಲ್ಲಾ ಯುಕ್ತ ಸಮಯದಲ್ಲಿ ಸಮಿತಿಯ ಯಾವನೇ ಸದಸ್ಯನ ಪರಿಶೀಲನೆಗೆ ಅಥವಾ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು ಮಾರುಕಟ್ಟೆ ಸಮಿತಿಯ ಸದಸ್ಯರ ಚುನಾವಣೆಗಳಲ್ಲಿ ಮತ ನೀಡಲು ಅರ್ಹನಾಗಿರುವ ಯಾವನೇ ವ್ಯಕ್ತಿಯು ಉಪವಿಧಿಯಲ್ಲಿ ಗೊತ್ತುಪಡಿಸಿದ ಫೀಜನ್ನು ಸಂದಾಯ ಮಾಡಿದ ಮೇಲೆ ಅವನ ಪರಿಶೀಲನೆಗೆ ಮುಕ್ತವಾಗಿರತಕ್ಕದ್ದು.

**52. ನಡವಳಿಗಳ ಸ್ಥಿರೀಕರಣ.–** ಮಾರುಕಟ್ಟೆ ಸಮಿತಿಯ ಪ್ರತಿಯೊಂದು ಸಭೆಯ ನಡವಳಿಗಳನ್ನು ತದನಂತರದ ಪ್ರತಿಯೊಂದು ಸಭೆಯ ಪ್ರಾರಂಭದಲ್ಲಿ ಓದಿ ಹೇಳತಕ್ಕದ್ದು ಮತ್ತು ಅವುಗಳು ದಾಖಲಾಗಿರುವಂತೆ ಅಥವಾ ಅವುಗಳಿಗೆ ಸಂಬಂಧಪಡುವಂಥ ಸಭೆಯ ವ್ಯವಹಾರದ ನಿರ್ವಹಣೆಗೆ ಸುಸಂಗತವಾಗುವ ಹಾಗೆ ಮಾಡಬೇಕಾಗಿರುವ ಮಾರ್ಪಾಟುಗಳು ಯಾವುವಾದರೂ ಇದ್ದಲ್ಲಿ, ಅವುಗಳೊಂದಿಗೆ ಸ್ಥಿರೀಕರಿಸತಕ್ಕದ್ದು.

**53. ಅಡ್ಡ ಪ್ರಶ್ನೆ ಮತ್ತು ನಿರ್ಣಯಗಳು.–** (1) ಮಾರುಕಟ್ಟೆ ಸಮಿತಿಯ ಸದಸ್ಯನು, ಸಮಿತಿಯು ರಚಿಸಬಹುದಾದಂಥ ಉಪವಿಧಿಗಳಿಗೊಳಪಟ್ಟು, ಮಾರುಕಟ್ಟೆ ಸಮಿತಿಯ ಆಡಳಿತಕ್ಕೆ ಸಂಬಂಧಪಡುವ ವಿಷಯಗಳ ಬಗ್ಗೆ ನಿರ್ಣಯಗಳನ್ನು ಮಂಡಿಸಬಹುದು ಮತ್ತು ಅಧ್ಯಕ್ಷನಿಗೆ ಅಡ್ಡ ಪ್ರಶ್ನೆಗಳನ್ನು ಕೇಳಬಹುದು.

(2) ಮಾರುಕಟ್ಟೆ ಸಮಿತಿಯ ಸದಸ್ಯನು, ಮಾರುಕಟ್ಟೆ ಸಮಿತಿಯ ವ್ಯವಹಾರದಲ್ಲಿ ಯಾವುದೇ ಅಲಕ್ಷ್ಯ ಅಥವಾ ಅಕ್ರಮ, ಮಾರುಕಟ್ಟೆ ಸಮಿತಿಗೆ ಸೇರಿರುವ ಸ್ವತ್ತಿನ ಯಾವುದೇ ಪೋಲು, ಅಥವಾ ಮಾರುಕಟ್ಟೆ ಪ್ರದೇಶದೊಳಗೆ ಅಗತ್ಯವಿರುವ ಯಾವುದೇ ಸೌಕರ್ಯಗಳ ಅಭಾವ ಅಥವಾ ಮಾರುಕಟ್ಟೆಯ ನಿಯಂತ್ರಣಕ್ಕೆ ಸಂಬಂಧಪಡುವ ಯಾವುದೇ ಸಾಮಾನ್ಯ ಅಥವಾ ನಿರ್ದಿಷ್ಟ ಕುಂದುಕೊರತೆ ಬಗ್ಗೆ ಸಹ ಅಧ್ಯಕ್ಷನ ಗಮನ ಸೆಳೆಯಬಹುದು. ಮತ್ತು ಅಪೇಕ್ಷಣೀಯವಾದಂಥ ಯಾವುದೇ ಸುಧಾರಣೆಗಳನ್ನು ಸೂಚಿಸಬಹುದು.

(3) ಮಾರುಕಟ್ಟೆ ಸಮಿತಿಯು, ಮಾರುಕಟ್ಟೆ ಪ್ರದೇಶದ ಆಡಳಿತಕ್ಕೆ ಸಂಬಂಧಪಡುವ ಯಾವುದೇ ಪ್ರಶ್ನೆಯನ್ನು ಕುರಿತು ನಿರ್ಣಯಗಳನ್ನು ಅಂಗೀಕರಿಸಬಹುದು ಮತ್ತು ಅವುಗಳನ್ನು ಪರಿಶೀಲನೆಗಾಗಿ [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನಿಗೆ ಸಲ್ಲಿಸಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**54. ಸಭೆಗಳ ಸವಿಸ್ತಾರ ಪ್ರಕ್ರಿಯೆಯನ್ನು ನಿಯಂತ್ರಿಸುವ ಉಪವಿಧಿಗಳು:–** ಈ ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳಿಗೊಳಪಟ್ಟು ಮಾರುಕಟ್ಟೆ ಸಮಿತಿಯ ಸಭೆಯ ಅಥವಾ ಮಾರುಕಟ್ಟೆ ಸಮಿತಿಯ ಉಪಸಮಿತಿಗಳ ಪ್ರಕ್ರಿಯೆಯು ಆ ಉದ್ದೇಶಕ್ಕಾಗಿ ರಚಿಸಲಾದ ಉಪವಿಧಿಗಳಿಗನುಸಾರವಾಗಿರತಕ್ಕದ್ದು.

**55. ಕರಾರು ಮಾಡಿಕೊಳ್ಳುವ ವಿಧಾನ:–** (1) ಮಾರುಕಟ್ಟೆ ಸಮಿತಿಯ ಪರವಾಗಿ ಸ್ಥಿರಸ್ವತ್ತಿನ ಖರೀದಿ, ಮಾರಾಟ, ಗುತ್ತಿಗೆ, ಅಡಮಾನ ಅಥವಾ ಅದರಲ್ಲಿನ ಹಿತಾಸಕ್ತಿಯ ವರ್ಗಾವಣೆ ಅಥವಾ ಆರ್ಜನೆ ಇವುಗಳ ಬಗ್ಗೆ ಕರಾರು ಅಥವಾ ಒಪ್ಪಂದವನ್ನು ಮಾರುಕಟ್ಟೆ ಸಮಿತಿಯ ಮಂಜೂರಾತಿಯ ಹೊರತಾಗಿ ಮಾಡಿಕೊಳ್ಳತಕ್ಕದ್ದಲ್ಲ:

ಪರಂತು, ಯಾವುವೇ ವಿಷಯಗಳ ಸಂಬಂಧದಲ್ಲಿ ಈ ಉಪಪ್ರಕರಣದ ಮೇರೆಗಿನ ಅಧಿಕಾರಗಳನ್ನು ಒಂದು ಉಪಸಮಿತಿಗೆ ವಹಿಸಿಕೊಟ್ಟಿರುವ ಸಂದರ್ಭಗಳಲ್ಲಿ ಅಂಥ ಉಪಸಮಿತಿಯ ಮಂಜೂರಾತಿಯನ್ನು ಪಡೆದುಕೊಳ್ಳತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಉಪಬಂಧಿಸಿರುವುದನ್ನುಳಿದು,–

(i) ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯು ಯಾವ ವಿಷಯಗಳ ಸಂಬಂಧದಲ್ಲಿ ಸಮಿತಿಯ ನಿರ್ಣಯದ ಮೂಲಕ ಮಾರುಕಟ್ಟೆ ಸಮಿತಿಯ ಪರವಾಗಿ ಕರಾರು ಅಥವಾ ಒಪ್ಪಂದವನ್ನು ಮಾಡಿಕೊಳ್ಳಲು ಸಾಮಾನ್ಯವಾಗಿ ಅಥವಾ ವಿಶೇಷವಾಗಿ ಅಧಿಕೃತನಾಗಿರುವನೋ ಆ ವಿಷಯಗಳ ಸಂಬಂಧದಲ್ಲಿ ಅವನು [1][ಗೊತ್ತುಪಡಿಸಬಹುದಾದಂಥ ಮೊಬಲಗನ್ನು][1] ಮೀರದ ಮೊಬಲಗಿನ ಅಥವಾ ಮೌಲ್ಯದ ಅಂಥ ಕರಾರು ಅಥವಾ ಒಪ್ಪಂದವನ್ನು ಮಾಡಿಕೊಳ್ಳಬಹುದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-4-1994ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ii) (i)ನೇ ಖಂಡದಲ್ಲಿ ಉಲ್ಲೇಖಿಸಿದ ಸಂದರ್ಭದ ಹೊರತಾಗಿ ಯಾವುದೇ ಇತರ ಸಂದರ್ಭದಲ್ಲಿ ಮಾರುಕಟ್ಟೆ ಸಮಿತಿಯ ಪರವಾಗಿ ಒಂದು ಕರಾರು ಅಥವಾ ಒಪ್ಪಂದವನ್ನು ಮಾರುಕಟ್ಟೆ ಸಮಿತಿಯ ಅಧ್ಯಕ್ಷ ಮತ್ತು ಕಾರ್ಯದರ್ಶಿಯು ಮಾಡಿಕೊಳ್ಳತಕ್ಕದ್ದು][1];

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(iii) XXX][1].

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(3) ಮಾರುಕಟ್ಟೆ ಸಮಿತಿಯು ಮಾಡಿಕೊಳ್ಳುವ ಪ್ರತಿಯೊಂದು ಕರಾರು ಲಿಖಿತದಲ್ಲಿರತಕ್ಕದ್ದು ಮತ್ತು (2)ನೇ ಉಪಪ್ರಕರಣದ ಉಪಬಂಧಗಳ ಮೇರೆಗೆ ಹಾಗೆ ಮಾಡಿಕೊಳ್ಳಲು ಅಧಿಕೃತನಾದ ವ್ಯಕ್ತಿಯು ಅಥವಾ ಅಧಿಕೃತರಾದ ವ್ಯಕ್ತಿಗಳು ಮಾರುಕಟ್ಟೆ ಸಮಿತಿಯ ಪರವಾಗಿ ಆ ಕರಾರಿಗೆ ಸಹಿ ಹಾಕತಕ್ಕದ್ದು.

(4) (1)ನೇ, (2)ನೇ ಮತ್ತು (3)ನೇ ಉಪಪ್ರಕರಣಗಳಲ್ಲಿ ಉಪಬಂಧಿತವಾದಂತೆ ಮಾಡಿಕೊಳ್ಳಲಾದ ಕರಾರಿನ ಹೊರತಾಗಿ ಯಾವುದೇ ಕರಾರು ಸಿಂಧುವಾಗತಕ್ಕದ್ದಲ್ಲ, ಅಥವಾ ಮಾರುಕಟ್ಟೆ ಸಮಿತಿಯು ಅದಕ್ಕೆ ಬದ್ಧವಾಗತಕ್ಕದ್ದಲ್ಲ.

(5) ಮಾರುಕಟ್ಟೆ ಸಮಿತಿಯ ಪರವಾಗಿ ಒಂದು ಕರಾರು ಅಥವಾ ಒಪ್ಪಂದವನ್ನು ಮಾಡಿಕೊಂಡಿರುವಲ್ಲಿ, ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯು, ಅಂಥ ಕರಾರು ಅಥವಾ ಒಪ್ಪಂದವನ್ನು ಮಾಡಿಕೊಂಡ ದಿನಾಂಕದ ಅನಂತರದ ಯಾವುದೇ ದಿನಾಂಕದಂದು ಸೇರುವ ಮಾರುಕಟ್ಟೆ ಸಮಿತಿಯ ಸಭೆಯಲ್ಲಿ ಆ ಸಂಗತಿಯನ್ನು ವರದಿ ಮಾಡತಕ್ಕದ್ದು.

[1][(6) (1)ರಿಂದ (5)ರವರೆಗಿನ ಉಪಪ್ರಕರಣಗಳ ಉಪಬಂಧಗಳು, ಮಾರುಕಟ್ಟೆ ಸಮಿತಿಯ ವೆಚ್ಚದಲ್ಲಿ ನಿರ್ವಹಿಸಲು ಉದ್ದೇಶಿಸಲಾದ ಯಾವುವೇ ಕಾಮಗಾರಿಗಳ ನಿರ್ವಹಣೆಗೆ ಸಂಬಂಧಿಸಿದ ಕರಾರುಗಳಿಗೂ ಸಹ ಅನ್ವಯವಾಗತಕ್ಕದ್ದು:

ಪರಂತು, ರಾಜ್ಯ ಸರ್ಕಾರವು ಅಥವಾ ಕೇಂದ್ರ ಸರ್ಕಾರವು ಅನುದಾನದ ರೂಪದಲ್ಲಿ ಒದಗಿಸಿದ ಅಥವಾ ಹಣಕಾಸು ನೀಡಿಕೆ ಸಂಸ್ಥೆಯು ನೀಡುವ ಯಾವ ಸಾಲದ ಮಾರುಪಾವತಿಯ ಬಗ್ಗೆ ರಾಜ್ಯ ಸರ್ಕಾರವು ಖಾತರಿ ನೀಡುವುದೋ ಅಂಥ ಸಾಲದ ರೂಪದಲ್ಲಿ ಒದಗಿಸಿದ ನೆರವಿನಿಂದ ಅಂಥ ಕಾಮಗಾರಿಗಳನ್ನು ಕೈಕೊಂಡಿದ್ದರೆ, ರಾಜ್ಯ ಸರ್ಕಾರವು ಅಧಿಕೃತಗೊಳಿಸಿದ ಅಧಿಕಾರಿಯು ಆ ಕಾಮಗಾರಿಗಳಿಗೆ ಸಂಬಂಧಿಸಿದ ಕರಾರನ್ನು ಮಾಡಿಕೊಳ್ಳತಕ್ಕದ್ದು ಮತ್ತು ಅಂಥ ಅಧಿಕಾರಿಯ ಮೇಲ್ವಿಚಾರಣೆಯಲ್ಲಿ ಆ ಕಾಮಗಾರಿಗಳ ನಿರ್ವಹಣೆಯಾಗತಕ್ಕದ್ದು.][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**56. ಕಾರ್ಯದರ್ಶಿಯ ಅಧಿಕಾರಗಳು, ಪ್ರಕಾರ್ಯಗಳು ಮತ್ತು ಕರ್ತವ್ಯಗಳು.**– 46ನೇ ಪ್ರಕರಣದ ಮತ್ತು ಈ ಅಧಿನಿಯಮದ ಮತ್ತು ನಿಯಮಗಳ ಇತರ ಉಪಬಂಧಗಳ ಮೇರೆಗೆ ಅಧ್ಯಕ್ಷನ ಅಧಿಕಾರಗಳಿಗೊಳಪಟ್ಟು ಕಾರ್ಯದರ್ಶಿಯು ಮಾರುಕಟ್ಟೆ ಸಮಿತಿಯ ಮುಖ್ಯ ನಿರ್ವಹಣಾಧಿಕಾರಿ ಯಾಗಿರತಕ್ಕದ್ದು [1][ಮತ್ತು ಅವನು, ಅದರ ಎಲ್ಲ ದಾಖಲೆಗಳ ಮತ್ತು ಸ್ವತ್ತುಗಳ ಅಭಿರಕ್ಷಕ]1ನಾಗಿರತಕ್ಕದ್ದು ಮತ್ತು ಈ ಅಧಿನಿಯಮದಲ್ಲಿ, ನಿಯಮಗಳಲ್ಲಿ ಅಥವಾ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಇತರ ಕರ್ತವ್ಯಗಳೊಂದಿಗೆ, ಈ ಕೆಳಕಂಡ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ:–

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(i) ಮಾರುಕಟ್ಟೆ ಸಮಿತಿ ಮತ್ತು ಉಪಸಮಿತಿಗಳು ಯಾವುವಾದರೂ ಇದ್ದಲ್ಲಿ [1][ಅಧ್ಯಕ್ಷನೊಡನೆ ಸಮಾಲೋಚಿಸಿ][1] ಅವುಗಳ ಸಭೆಗಳನ್ನು ಕರೆಯುವುದು ಮತ್ತು ಅವುಗಳ ನಡವಳಿಗಳ ಸಂಕ್ಷಿಪ್ತ ವರದಿಗಳನ್ನು ಇಟ್ಟುಕೊಂಡು ಬರತಕ್ಕದ್ದು;

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ii) ಮಾರುಕಟ್ಟೆ ಸಮಿತಿಯ ಮತ್ತು ಪ್ರತಿಯೊಂದು ಉಪಸಮಿತಿಯ ಸಭೆಯಲ್ಲಿ ಹಾಜರಾಗತಕ್ಕದ್ದು ಮತ್ತು ಚರ್ಚೆಯಲ್ಲಿ ಭಾಗವಹಿಸತಕ್ಕದ್ದು, ಆದರೆ ಯಾವುದೇ ಅಂಥ ಸಭೆಯಲ್ಲಿ ಯಾವುದೇ ನಿರ್ಣಯವನ್ನು ಮಂಡಿಸತಕ್ಕದ್ದಲ್ಲ ಅಥವಾ ಮತವನ್ನು ಚಲಾಯಿಸತಕ್ಕದ್ದಲ್ಲ;

(iii) ಸಮಿತಿಯ ಮತ್ತು ಉಪಸಮಿತಿಗಳ ನಿರ್ಣಯಗಳನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳತಕ್ಕದ್ದು ಮತ್ತು ಅಂತಹ ನಿರ್ಣಯಗಳಿಗೆ ಅನುಸಾರವಾಗಿ ಕೈಕೊಳ್ಳಲಾದ ಎಲ್ಲಾ ಕ್ರಮಗಳನ್ನು, ಸಾಧ್ಯವಾದಷ್ಟು ಬೇಗನೆ ಸಂಬಂಧಪಟ್ಟ ಸಮಿತಿಗೆ ವರದಿ ಮಾಡತಕ್ಕದ್ದು;

(iv) ಕೆಳಕಂಡ ವರದಿಗಳು, ಎಂದರೆ,–

(ಎ) ಮಾರುಕಟ್ಟೆ ಸಮಿತಿಯ ಸಿಬ್ಬಂದಿ ವರ್ಗದ ಮತ್ತು ಕಾರ್ಯನಿರ್ವಾಹಕ ಮತ್ತು ಇತರರ ವಿರುದ್ಧ ಕೈಕೊಳ್ಳಲಾದ ಯಾವುದೇ ಶಿಸ್ತು ಕ್ರಮ ಮತ್ತು ವಿಧಿಸಲಾದ ಜುಲ್ಮಾನೆಗಳು ಮತ್ತು ದಂಡಗಳು;

(ಬಿ) ವ್ಯಾಪಾರಿಗಳು ಮಾಡುವ ಮಿತಿಮೀರಿದ ವ್ಯಾಪಾರ;

(ಸಿ) ಯಾವನೇ ವ್ಯಕ್ತಿಯು ಅಧಿನಿಯಮ, ನಿಯಮಗಳು, ಉಪವಿಧಿಗಳು ಅಥವಾ ಸ್ಥಾಯಿ ಆದೇಶಗಳನ್ನು ಉಲ್ಲಂಘಿಸುವುದು;

(ಡಿ) [1][ತಾನು ಅಥವಾ ಅಧ್ಯಕ್ಷನು,][1] ಅಥವಾ [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] ಲೈಸನ್ಸ್‌ಗಳನ್ನು ಅಮಾನತುಗೊಳಿಸುವುದು ಅಥವಾ ರದ್ದುಮಾಡುವುದು.

(ಇ) ಮಾರುಕಟ್ಟೆ ಸಮಿತಿಯ ಆಡಳಿತ ಮತ್ತು ಮಾರುಕಟ್ಟೆ ವ್ಯವಹಾರದ ನಿಯಂತ್ರಣ

– ಇವುಗಳ ಸಂಬಂಧದಲ್ಲಿನ ವರದಿಗಳೂ ಸೇರಿ, ಮಾರುಕಟ್ಟೆ ಸಮಿತಿಯು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂಥ ರಿಟರ್ನುಗಳನ್ನು, ವಿವರ ಪತ್ರಗಳನ್ನು, ಅಂದಾಜುಗಳನ್ನು, ಅಂಕಿಅಂಶಗಳನ್ನು ಮತ್ತು ವರದಿಗಳನ್ನು ಮಾರುಕಟ್ಟೆ ಸಮಿತಿಗೆ ಒದಗಿಸತಕ್ಕದ್ದು;

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(v) ಮಾರುಕಟ್ಟೆ ಸಮಿತಿಯ ಅಥವಾ ಉಪಸಮಿತಿಗಳ ವ್ಯವಹಾರ ನಿರ್ವಹಣೆಗೆ ಅವಶ್ಯವಾಗಬಹುದಾದಂಥ ದಸ್ತಾವೇಜುಗಳನ್ನು, ಪುಸ್ತಕಗಳನ್ನು, ರಿಜಿಸ್ಟರುಗಳನ್ನು ಮಾರುಕಟ್ಟೆ ಸಮಿತಿಯ ಮುಂದೆ ಹಾಜರುಪಡಿಸತಕ್ಕದ್ದು ಮತ್ತು ಹಾಗೆ ಹಾಜರುಪಡಿಸುವಂತೆ ಮಾರುಕಟ್ಟೆ ಸಮಿತಿಯು ಕೋರಿದಾಗಲೆಲ್ಲ ಹಾಗೆ ಹಾಜರುಪಡಿಸತಕ್ಕದ್ದು;

(vi) ಸಮಿತಿಯ ಎಲ್ಲಾ ಅಧಿಕಾರಿಗಳ ಮತ್ತು ನೌಕರರ ಕಾರ್ಯಗಳ ಮೇಲ್ವಿಚಾರಣೆ ನಡೆಸತಕ್ಕದ್ದು ಮತ್ತು ಅವುಗಳನ್ನು ನಿಯಂತ್ರಿಸತಕ್ಕದ್ದು;

(vii) ಮಾರುಕಟ್ಟೆ ಸಮಿತಿಯು ವಿಧಿಸಬಹುದಾದ ಅಥವಾ ಅದಕ್ಕೆ ಬಾಕಿ ಇರುವ ಫೀಜುಗಳನ್ನು ಮತ್ತು ಇತರ ಹಣಗಳನ್ನು ವಸೂಲಿ ಮಾಡತಕ್ಕದ್ದು;

(viii) ಮಾರುಕಟ್ಟೆ ಸಮಿತಿಯ ಪರವಾಗಿ ಜಮೆ ಮಾಡಿದ ಅಥವಾ ಸ್ವೀಕರಿಸಿದ ಎಲ್ಲಾ ಹಣಕಾಸಿಗೆ ಹೊಣೆಯಾಗಿರತಕ್ಕದ್ದು;

(ix) ಮಾರುಕಟ್ಟೆ ಸಮಿತಿಯು ಕಾನೂನು ಸಮ್ಮತವಾಗಿ ಸಂದಾಯ ಮಾಡಬೇಕಾದ ಎಲ್ಲಾ ಹಣಕಾಸನ್ನು ಬಟವಾಡೆ ಮಾಡತಕ್ಕದ್ದು;

(x) ಮಾರುಕಟ್ಟೆ ಸಮಿತಿಯ ನಿಧಿಗಳಲ್ಲಿ ಅಥವಾ ಸ್ವತ್ತಿನ ಸಂಬಂಧದಲ್ಲಿ [1][ಮೋಸ, ಕಾನೂನು ಬಾಹಿರ ಕೃತ್ಯಗಳು][1], ದುರ್ವಿನಿಯೋಗ, ಕಳವು ಅಥವಾ ನಷ್ಟ ಇವುಗಳ ಬಗ್ಗೆ [1][ಆ ಕೂಡಲೇ][1] ಅಧ್ಯಕ್ಷನಿಗೆ ಮತ್ತು [2][ಕೃಷಿ ಮಾರುಕಟ್ಟೆ ನಿರ್ದೇಶಕ][2] ನಿಗೆ ವರದಿ ಮಾಡತಕ್ಕದ್ದು;

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ix) ಮಾರುಕಟ್ಟೆ ಸಮಿತಿಯ ಪರವಾಗಿ ಪ್ರಾರಂಭಿಸತಕ್ಕ ಕಾನೂನು ಕ್ರಮ ಜರುಗಿಸಲು ದೂರು ಸಲ್ಲಿಸತಕ್ಕದ್ದು ಮತ್ತು ಮಾರುಕಟ್ಟೆ ಸಮಿತಿಯ ಪರವಾಗಿ ಸಿವಿಲ್ ಅಥವಾ ಕ್ರಿಮಿನಲ್ ವ್ಯವಹರಣೆಗಳನ್ನು ನಡೆಸತಕ್ಕದ್ದು.

**57. ಮಾರುಕಟ್ಟೆ ಸಮಿತಿ, ಮುಂತಾದವುಗಳ ಕಾರ್ಯಗಳನ್ನು ಅಸಿಂಧುಗೊಳಿಸದಿರುವುದು.–** ಮಾರುಕಟ್ಟೆ ಸಮಿತಿಯ ಅಥವಾ ಅದರ ಯಾವುದೇ ಉಪಸಮಿತಿಯ ಅಥವಾ ಅಧ್ಯಕ್ಷನ, ಉಪಾಧ್ಯಕ್ಷನ, ಅಧ್ಯಕ್ಷತೆ ವಹಿಸುವ ಪ್ರಾಧಿಕಾರಿಯ, ಅಥವಾ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುವ ಯಾವನೇ ವ್ಯಕ್ತಿಯ ಯಾವುದೇ ಕಾರ್ಯವು, ಅಂಥ ಮಾರುಕಟ್ಟೆ ಸಮಿತಿಯ, ಉಪಸಮಿತಿಯ ರಚನೆಯಲ್ಲಿನ ಸದಸ್ಯ, ಅಧ್ಯಕ್ಷ, ಉಪಾಧ್ಯಕ್ಷ, ಅಧ್ಯಕ್ಷತೆ ವಹಿಸುವ ಪ್ರಾಧಿಕಾರಿಯ ಅಥವಾ ಕಾರ್ಯದರ್ಶಿಯ ನೇಮಕದಲ್ಲಿಯ ಯಾವುದೇ ದೋಷದ ಕಾರಣ ಮಾತ್ರದಿಂದಲೇ ಅಥವಾ ಅವರು ಅಥವಾ ಅವರಲ್ಲಿ ಯಾವನಾದರೂ, ಅಂಥ ಹುದ್ದೆಗೆ ಅನರ್ಹಗೊಳಿಸಲ್ಪಟ್ಟಿದ್ದನೆಂಬ/ರೆಂಬ ಅಥವಾ ಸಮಿತಿಯ ಅಥವಾ ಉಪಸಮಿತಿಯ ಸಭೆ ನಡೆಸುವ ಉದ್ದೇಶದ ಬಗ್ಗೆ ಔಪಚಾರಿಕ ನೋಟೀಸನ್ನು ಯುಕ್ತವಾಗಿ ಕೊಟ್ಟಿರಲಿಲ್ಲವೆಂಬ ಆಧಾರದ ಮೇಲೆ ಅಥವಾ ಅಂಥ ಸಮಿತಿಯ ಅಥವಾ ಉಪಸಮಿತಿಯ ಅಧ್ಯಕ್ಷ, ಉಪಾಧ್ಯಕ್ಷ ಅಥವಾ ಕಾರ್ಯದರ್ಶಿಯ ಪದವು ಅಥವಾ ಸದಸ್ಯನ ಸ್ಥಾನವು ಖಾಲಿಯಾದ ಅವಧಿಯಲ್ಲಿ ಆ ಯಾವುದೇ ಕಾರ್ಯವನ್ನು ಮಾಡಲಾಯಿತೆಂಬ ಕಾರಣದಿಂದ ಅಥವಾ ಸಂದರ್ಭದ ಗುಣದೋಷಗಳ ಮೇಲೆ ಪರಿಣಾಮ ಉಂಟಾಗದಿರುವ ಯಾವುದೇ ಇತರ ಅನೌಪಚಾರಿಕತೆಯ ಕಾರಣದಿಂದಾಗಿ ಅಸಿಂಧುವಾಗಿದೆ ಎಂದು ಭಾವಿಸತಕ್ಕದ್ದಲ್ಲ.

## ಅಧ್ಯಾಯ-V

## ಮಾರುಕಟ್ಟೆ ಸಮಿತಿಗಳ ಸಿಬ್ಬಂದಿ

**58. ಮಾರುಕಟ್ಟೆ ಸಮಿತಿಗೆ ಕಾರ್ಯದರ್ಶಿ ಮತ್ತು ತಾಂತ್ರಿಕ ಸಿಬ್ಬಂದಿಯ ನೇಮಕ.–** (1) ಪ್ರತಿಯೊಂದು ಮಾರುಕಟ್ಟೆ ಸಮಿತಿಗೆ, ರಾಜ್ಯ ಸರ್ಕಾರವು ಅಥವಾ ಆ ಸಂಬಂಧದಲ್ಲಿ ರಾಜ್ಯ ಸರ್ಕಾರದಿಂದ ಅಧಿಕೃತನಾದ ಅಧಿಕಾರಿಯು ಅಥವಾ ಪ್ರಾಧಿಕಾರಿಯು ನೇಮಿಸಿದ ಸರ್ಕಾರಿ ನೌಕರನು ಕಾರ್ಯದರ್ಶಿಯಾಗಿರತಕ್ಕದ್ದು.

(2) ಮಾರುಕಟ್ಟೆ ಸಮಿತಿಗೆ ಒಬ್ಬ [1][ಅಡಿಷನಲ್ ಕಾರ್ಯದರ್ಶಿ ಅಥವಾ ಸಹಾಯಕ ಕಾರ್ಯದರ್ಶಿ][1] ಅಥವಾ [2][ಕೃಷಿ ಮಾರುಕಟ್ಟೆ ನಿರ್ದೇಶಕನು][2] ನಿರ್ಧರಿಸಬಹುದಾದಷ್ಟು ಸಂಖ್ಯೆಯ ಸಹಾಯಕ ಕಾರ್ಯದರ್ಶಿಗಳು ಇರಬಹುದು ಮತ್ತು ಅವರು ರಾಜ್ಯ ಸರ್ಕಾರವು ಅಥವಾ ಈ ಸಂಬಂಧದಲ್ಲಿ ಅಧಿಕೃತವಾದ ಅಧಿಕಾರಿಯು ಅಥವಾ ಪ್ರಾಧಿಕಾರವು ನೇಮಕ ಮಾಡಿದ ಸರ್ಕಾರಿ ನೌಕರರಾಗಿರಬೇಕು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಪ್ರತಿಯೊಂದು ಮಾರುಕಟ್ಟೆ ಸಮಿತಿಯ ಲೆಕ್ಕಪತ್ರ ಮತ್ತು ಲೆಕ್ಕ ಪರಿಶೋಧನೆಯ ಸಿಬ್ಬಂದಿಯು, ರಾಜ್ಯ ಸರ್ಕಾರವು ಅಥವಾ ಈ ಸಂಬಂಧದಲ್ಲಿ ಅಧಿಕೃತನಾದ ಅಧಿಕಾರಿ ಅಥವಾ ಪ್ರಾಧಿಕಾರವು ನೇಮಕ ಮಾಡಿದ ಸರ್ಕಾರಿ ನೌಕರರಾಗಿರಬೇಕು.

(4) ರಾಜ್ಯ ಸರ್ಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶಗಳ ಮೂಲಕ ನಿರ್ಧರಿಸಬಹುದಾದಷ್ಟು ಸಂಖ್ಯೆಯ ಮಾರುಕಟ್ಟೆ ಸಮಿತಿಗಳ ಗುಂಪಿಗೆ ಅಂಥ ಮಾರುಕಟ್ಟೆ ಸಮಿತಿಗಳ ಪ್ರಾಮುಖ್ಯತೆ ಮತ್ತು ಕೆಲಸ ಕಾರ್ಯಗಳನ್ನು ಪರಿಗಣಿಸಿ, ಒಬ್ಬ ಇಂಜಿನಿಯರ್‌ನನ್ನು ಮತ್ತು ಆತನ ಅಧೀನದಲ್ಲಿ ಇತರ ಅಧೀನ ಸಿಬ್ಬಂದಿಯನ್ನು ನೇಮಿಸಿಕೊಳ್ಳಬಹುದು.

[1][(4ಎ) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಹೊರತುಪಡಿಸಿ, 63ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ (iv)ನೇ (vi)ನೇ ಮತ್ತು (xii)ನೇ ಬಾಬುಗಳ ಮತ್ತು (ಬಿ) ಖಂಡದ (ii)ನೇ (iv)ನೇ ಮತ್ತು (v)ನೇ ಬಾಬುಗಳ ಮತ್ತು 66ನೇ, 67ನೇ ಮತ್ತು 70ನೇ ಪ್ರಕರಣಗಳ ಯಾವುವೇ ಉಪಬಂಧಗಳ ಮೇರೆಗೆ ಮಾರುಕಟ್ಟೆ ಸಮಿತಿಯು ಚಲಾಯಿಸಬಹುದಾದಂಥ ಎಲ್ಲ ಅಧಿಕಾರಗಳನ್ನು ಮತ್ತು ನಿರ್ವಹಿಸಬಹುದಾದಂಥ ಎಲ್ಲ ಕರ್ತವ್ಯಗಳನ್ನು ಚಲಾಯಿಸಲು ಮತ್ತು ನಿರ್ವಹಿಸಲು ರಾಜ್ಯ ಸರ್ಕಾರದ [2][ಕರ್ನಾಟಕ ಆಡಳಿತ ಸೇವೆ ಅಥವಾ ಕರ್ನಾಟಕ ರಾಜ್ಯ ಮಾರುಕಟ್ಟೆ ಸೇವೆಯ)][2] 'ಎ' ವರ್ಗದ ಅಧಿಕಾರಿಯ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿಯು ಮುಖ್ಯಸ್ಥನಾಗಿರುವ ಒಂದು ಜಾರಿ ಘಟಕವನ್ನು [2][ರಾಜ್ಯ ಸರ್ಕಾರವು ಕೃಷಿ ಮಾರುಕಟ್ಟೆ ನಿರ್ದೇಶಕರ ಶಿಫಾರಸ್ಸಿನ ಮೇಲೆ][2] ರಚಿಸಬಹುದು.][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(5) (1)ನೇ, (2)ನೇ, (3)ನೇ ಮತ್ತು (4)ನೇ ಪ್ರಕರಣಗಳ ಮೇರೆಗೆ ನಿರ್ದಿಷ್ಟಪಡಿಸಿರುವ ಎಲ್ಲಾ ಅಧಿಕಾರಿಗಳು ರಾಜ್ಯ ಸರ್ಕಾರದ ನೌಕರರಾಗಿರತಕ್ಕದ್ದು. ಅವರು ತಮ್ಮ ವೇತನ ಮತ್ತು ಭತ್ಯೆಗಳನ್ನು ರಾಜ್ಯದ ಸಂಚಿತ ನಿಧಿಯಿಂದ ಪಡೆಯತಕ್ಕದ್ದು. ಅಂತಹ ಅಧಿಕಾರಿಗಳ ಮತ್ತು ಸಿಬ್ಬಂದಿಯ ಸೇವಾ ಷರತ್ತುಗಳು, 59ನೇ ಪ್ರಕರಣದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಉಳಿದು ರಾಜ್ಯ ಸರ್ಕಾರವು ನಿರ್ಧರಿಸಬಹುದಾದಂತಿರತಕ್ಕದ್ದು.

**59. [1][XXX][1] ಮಾರುಕಟ್ಟೆ ಸಮಿತಿಯ ಸಿಬ್ಬಂದಿಯನ್ನು ಸರ್ಕಾರದ ಸೇವೆಯಲ್ಲಿ ವಿಲೀನಗೊಳಿಸುವುದು.–** (1) ಈ ಅಧಿನಿಯಮದ ಪ್ರಾರಂಭದ ದಿನಾಂಕಕ್ಕೆ ನಿಕಟಪೂರ್ವದ ದಿನಾಂಕದಂದು [2][XXX][2] 58ನೇ ಪ್ರಕರಣದ (1)ನೇ, (2)ನೇ ಮತ್ತು (3)ನೇ ಉಪಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿರುವ ವರ್ಗಗಳ ಹುದ್ದೆಗಳನ್ನು ಹೊಂದಿರುವ ಮಾರುಕಟ್ಟೆ ಸಮಿತಿಗಳ ಅಧಿಕಾರಿಗಳು ಮತ್ತು ನೌಕರರು (ಯಾವುದೇ ಹೆಸರಿನಿಂದ ಕರೆಯಲಿ) ಅಂತಹ ಪ್ರಾರಂಭದ ದಿನಾಂಕದಿಂದ ಜಾರಿಗೆ ಬರುವಂತೆ, ರಾಜ್ಯ ಸರ್ಕಾರದ ಅಧಿಕಾರಿಗಳು ಮತ್ತು ನೌಕರರಾಗತಕ್ಕದ್ದು.

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**ವಿವರಣೆ:–** ಈ ಉಪಪ್ರಕರಣದ ಮೇರೆಗೆ ರಾಜ್ಯ ಸರ್ಕಾರದ ಅಧಿಕಾರಿಗಳು ಮತ್ತು ನೌಕರರಾಗತಕ್ಕ ಮಾರುಕಟ್ಟೆ ಸಮಿತಿಗಳ ಅಧಿಕಾರಿಗಳ ಮತ್ತು ನೌಕರರ ಪದನಾಮಗಳನ್ನು ರಾಜ್ಯ ಸರ್ಕಾರವು ನಿರ್ಧರಿಸತಕ್ಕದ್ದು.

[1][(1ಎ) ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಅಡಕವಾಗಿದ್ದಾಗ್ಯೂ, ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ದಿನಾಂಕಗಳಂದು, ಅಂಥ ವರ್ಗಗಳ ಹುದ್ದೆಗಳನ್ನು ಹೊಂದಿರುವ ಮಾರುಕಟ್ಟೆ ಸಮಿತಿಗಳ ಅಧಿಕಾರಿಗಳು ಮತ್ತು ನೌಕರರು, ಅಂಥ ದಿನಾಂಕಗಳಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರದ ಅಧಿಕಾರಿಗಳು ಮತ್ತು ನೌಕರರಾಗಿರತಕ್ಕದ್ದು ಮತ್ತು ಅವರು ತಮ್ಮ ಸಂಬಳ ಮತ್ತು ಭತ್ಯೆಗಳನ್ನು ರಾಜ್ಯದ ಸಂಚಿತ ನಿಧಿಯಿಂದ ಪಡೆಯತಕ್ಕದ್ದು.][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) (1)ನೇ ಉಪಪ್ರಕರಣ [1][ಅಥವಾ (1ಎ) ಉಪಪ್ರಕರಣದ][1] ಮೇರೆಗೆ ರಾಜ್ಯ ಸರ್ಕಾರದ ಅಧಿಕಾರಿಗಳಾಗುವ ಮತ್ತು ನೌಕರರಾಗುವ ಮಾರುಕಟ್ಟೆ ಸಮಿತಿಗಳ ಅಧಿಕಾರಿಗಳು ಮತ್ತು ನೌಕರರು ಸಂಬಂಧಪಟ್ಟ ಮಾರುಕಟ್ಟೆ ಸಮಿತಿಯ ಅಧೀನದಲ್ಲಿ ಅವರು ಯಾವ ಪರಿಶ್ರಮಧನವನ್ನು ಪಡೆಯಬಹುದಾಗಿತ್ತೋ ಅದೇ ಪರಿಶ್ರಮಧನದ ಮೇಲೆ ಮತ್ತು ಯಾವ ಸೇವಾ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಡಬಹುದಾಗಿತ್ತೋ ಅವೇ ಸೇವಾ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಮತ್ತು ನಿವೃತ್ತಿವೇತನ, ಉಪದಾನ, ಭವಿಷ್ಯನಿಧಿ ಮತ್ತು ಅಂಥ ಇತರ ವಿಷಯಗಳಿಗೆ ಸಂಬಂಧಪಟ್ಟ ಹಾಗೆ ಯಾವ ಹಕ್ಕುಗಳನ್ನು ಮತ್ತು ವಿಶೇಷಾಧಿಕಾರಗಳನ್ನು ಹೊಂದಿರಬಹುದಾಗಿತ್ತೋ ಅವೇ ಹಕ್ಕುಗಳು ಮತ್ತು ವಿಶೇಷಾಧಿಕಾರಗಳೊಂದಿಗೆ ಯಾವ ಕಾಲಾವಧಿಯವರೆಗೆ ಪದಧಾರಣ ಮಾಡಬಹುದಾಗಿತ್ತೋ ಅಷ್ಟೇ ಕಾಲಾವಧಿಯವರೆಗೆ ಪದಧಾರಣ ಮಾಡತಕ್ಕದ್ದು; ಮತ್ತು ಅವರು ನಿವೃತ್ತಿ ವೇತನ, ಭವಿಷ್ಯನಿಧಿ ಮತ್ತು ಉಪದಾನಗಳಿಗೆ ಸಂಬಂಧಪಟ್ಟ ವಿಶೇಷಾಧಿಕಾರಗಳು ಸೇರಿ ಅವರ ಪರಿಶ್ರಮಧನ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು [2][ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ ಮೇರೆಗೆ][2] ರಚಿಸಲಾದ ನಿಯಮಗಳ ಮತ್ತು ಇತರ ಉಪಬಂಧಗಳ ಮೂಲಕ ಮಾರ್ಪಾಟಾಗುವವರೆಗೆ ಅವುಗಳನ್ನು ಹಾಗೆ ಹೊಂದಿರುವುದು ಮುಂದುವರಿಯತಕ್ಕದ್ದು ಮತ್ತು ಯಾವುದೇ ಅಂಥ ಮಾರ್ಪಾಟು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕರಾರು ಅಥವಾ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ ಪರಿಣಾಮಕಾರಿ ಯಾಗತಕ್ಕದ್ದು.

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1990ರ ಅಧಿನಿಯಮ ಸಂಖ್ಯೆ 14ರ ಮೂಲಕ 2-4-1992 ರಿಂದ ಜಾರಿಗೆ ಬರುವಂತೆ ಅಧಿಸೂಚನೆಯ ಮೂಲಕ ಪ್ರತಿಯೋಜಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

(3) ಕೈಗಾರಿಕಾ ವಿವಾದಗಳ ಅಧಿನಿಯಮ, 1974 (1974ರ ಕೇಂದ್ರಾಧಿನಿಯಮ 14)ರಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಅಥವಾ ಯಾವುದೇ ಕರಾರಿನಲ್ಲಿ ಏನೇ ಒಳಗೊಂಡಿದ್ದರೂ (1)ನೇ ಉಪಪ್ರಕರಣದ [1][ಅಥವಾ 1ಎ ಉಪಪ್ರಕರಣದ][1] ಮೂಲಕ ಮಾಡಲಾದ ಮಾರುಕಟ್ಟೆ ಸಮಿತಿಯ ಯಾವನೇ ಅಧಿಕಾರಿಯ ಅಥವಾ ನೌಕರನ ಸೇವೆಗಳ ವರ್ಗಾವಣೆಯಿಂದಾಗಿ ಆ ಅಧಿನಿಯಮದ ಅಥವಾ ಇತರ ಕಾನೂನಿನ ಅಥವಾ ಕರಾರಿನ ಮೇರೆಗೆ ಯಾವುದೇ ನಷ್ಟ ಪರಿಹಾರಕ್ಕೆ ಅಥವಾ ಸಂದಾಯಕ್ಕೆ ಯಾವನೇ ಅಂಥ ಅಧಿಕಾರಿಯು ಅಥವಾ ನೌಕರನು ಹಕ್ಕುಳ್ಳವನಾಗತಕ್ಕದ್ದಲ್ಲ ಮತ್ತು ಆ ಸಂಬಂಧವಾದ ಯಾವುದೇ ಕ್ಲೇಮನ್ನು ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಇತರ ಪ್ರಾಧಿಕಾರವು ಸ್ವೀಕರಿಸತಕ್ಕದ್ದಲ್ಲ.

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**[1][60. XXX][1]**

1. 1976ರ ಅಧಿನಿಯಮ ಸಂಖ್ಯೆ 14ರ ಮೂಲಕ 24-1-1976 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1]**[61. ಮಾರುಕಟ್ಟೆ ಸಮಿತಿಗೆ ಇತರ ಸಿಬ್ಬಂದಿಯ ನೇಮಕ.–** (1) 58ನೇ ಪ್ರಕರಣದಲ್ಲಿ ಅನ್ಯಥಾ ಉಪಬಂಧಿಸಲಾಗಿರುವುದನ್ನು ಹೊರತುಪಡಿಸಿ, ರಾಜ್ಯ ಸರ್ಕಾರ ಅಥವಾ ಈ ಸಂಬಂಧವಾಗಿ ಅದು ಅಧಿಕೃತಗೊಳಿಸಿದ ಅಧಿಕಾರಿಯು 62ನೇ ಪ್ರಕರಣದ ಮೇರೆಗೆ ರಚಿತವಾದ ಕರ್ನಾಟಕ ರಾಜ್ಯ ಮಾರುಕಟ್ಟೆ ಸಮಿತಿ ಸೇವೆಯ ಅಥವಾ ಕರ್ನಾಟಕ ರಾಜ್ಯ ಮಾರುಕಟ್ಟೆ ವ್ಯವಹಾರ ಸೇವೆಯ ಕೆಲವು ಅಧಿಕಾರಿಗಳನ್ನು ಮತ್ತು ನೌಕರರನ್ನು ಮಾರುಕಟ್ಟೆ ಸಮಿತಿಯ ಇತರ ಅಧಿಕಾರಿಗಳನ್ನಾಗಿ ಮತ್ತು ನೌಕರರನ್ನಾಗಿ ನೇಮಕ ಮಾಡಬಹುದು.

(2) ಪ್ರತಿಯೊಂದು ಮಾರುಕಟ್ಟೆ ಸಮಿತಿಯ ಕೇಡರ್ ಸಂಖ್ಯಾ ಬಲವನ್ನು ಕೃಷಿ ಮಾರುಕಟ್ಟೆ ನಿರ್ದೇಶಕನು ಗೊತ್ತುಪಡಿಸತಕ್ಕದ್ದು.

*(3) (1)ನೇ ಮತ್ತು (2)ನೇ ಉಪಪ್ರಕರಣಗಳಲ್ಲಿ ಏನೇ ಇದ್ದರೂ, ಮಾರುಕಟ್ಟೆ ಸಮಿತಿಯು ಕೃಷಿ ಮಾರುಕಟ್ಟೆ ನಿರ್ದೇಶಕರಿಂದ ಅಥವಾ ಈ ಸಂಬಂಧವಾಗಿ ಅವರು ಅಧಿಕೃತಗೊಳಿಸಿದ ಅಧಿಕಾರಿಯಿಂದ ಮುಂಚಿತವಾಗಿಯೇ ಅನುಮತಿ ಪಡೆದು, 3 ತಿಂಗಳುಗಳಿಗೆ ಮೀರದ ಅವಧಿಯವರೆಗೆ ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಬಹುದು ಮತ್ತು ಅಂಥ ಯಾವುದೇ ಹುದ್ದೆಯ ಗರಿಷ್ಠ ಮಾಸಿಕ ವೇತನವು 300 ರೂಪಾಯಿಗೆ ಮೀರಬಾರದೆಂಬ ಷರತ್ತಿಗೆ ಒಳಪಟ್ಟು, ಆ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳಬಹುದು.][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

* 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 61 (3), 78, 85,86,90, 106, 112 ಮತ್ತು 147ನೇ ಪ್ರಕರಣಗಳನ್ನು ತಿದ್ದುಪಡಿ ಮಾಡಲಾಗಿದೆ ಮತ್ತು 63ಎ, 106ಎ ಮತ್ತು 109ಎ ಈ ಹೊಸ ಪ್ರಕರಣಗಳನ್ನು ಸೇರಿಸಲಾಗಿದೆ. ಆದರೆ ಅವುಗಳನ್ನು ಇನ್ನೂ ಜಾರಿಗೆ ತಂದಿಲ್ಲ. ಮೇಲೆ ಹೇಳಿದ ಪ್ರಕರಣಗಳಿಗೆ ಮಾಡಲಾದ ತಿದ್ದುಪಡಿಗಳ ಮತ್ತು ಸೇರಿಸಲಾದ ಹೊಸಪ್ರಕರಣಗಳ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

[1]**[61ಎ. ನೇಮಕಾತಿಗಳಲ್ಲಿ ಹುದ್ದೆಗಳ ಮೀಸಲಾತಿ.–** ನೇಮಕಗಳನ್ನು ಮಾಡುವಾಗ ಮಾರುಕಟ್ಟೆ ಸಮಿತಿಯು, ರಾಜ್ಯ ಸರ್ಕಾರವು ಸಿವಿಲ್ ಸೇವೆಗಳ ಹುದ್ದೆಗಳಿಗೆ ನೇಮಕಗಳನ್ನು ಮಾಡಿಕೊಳ್ಳುವಾಗ ಮೀಸಲಾತಿಯನ್ನು ಒದಗಿಸುವ ರೀತಿಯಲ್ಲಿ ಮತ್ತು ಅಷ್ಟು ಮಟ್ಟಿಗೆ ಅನುಸೂಚಿತ ಜಾತಿ, ಅನುಸೂಚಿತ ಬುಡಕಟ್ಟುಗಳವರಿಗೆ ಮತ್ತು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗಗಳವರಿಗೆ ಸಾಕಷ್ಟು ಸಂಖ್ಯೆಯಲ್ಲಿ ಹುದ್ದೆಗಳನ್ನು ಮೀಸಲಿಡತಕ್ಕದ್ದು.][1]

1. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 4-11-1981 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**62. [1][ಕರ್ನಾಟಕ ರಾಜ್ಯ ಮಾರುಕಟ್ಟೆ ಸೇವೆ,][1] [2][ಇತ್ಯಾದಿ][2].–** [3][(1)][3] ಈ ಅಧಿನಿಯಮದಲ್ಲಿ ಅಥವಾ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉದ್ದೇಶಗಳಿಗಾಗಿ, ನಿಯೋಜಿತರಾದ ಅಧಿಕಾರಿಗಳ ಅಥವಾ ನೌಕರರ ಯಾವುದೇ ವರ್ಗವನ್ನು "[1][ಕರ್ನಾಟಕ ರಾಜ್ಯ ಮಾರುಕಟ್ಟೆ ಸೇವೆ][1]" ಎಂಬ ಹೆಸರಿನ ರಾಜ್ಯ ಮಾರುಕಟ್ಟೆ ಸೇವೆಯನ್ನಾಗಿ ರಚಿಸಬಹುದು:

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

2. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 27-6-1995 ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

[1][ಪರಂತು, 59ನೇ ಪ್ರಕರಣದ (1ಎ) ಉಪಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ಹುದ್ದೆಗಳನ್ನು ಧಾರಣ ಮಾಡಿರುವ ಅಧಿಕಾರಿಗಳು ಮತ್ತು ನೌಕರರ ವರ್ಗಗಳನ್ನು ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ಅಧಿಸೂಚನೆ ಮೂಲಕ "ಕರ್ನಾಟಕ ರಾಜ್ಯ ಮಾರುಕಟ್ಟೆ ಸಮಿತಿ ಸೇವೆ" ಎಂದು ಕರೆಯಲಾಗುವ ರಾಜ್ಯದ ಪ್ರತ್ಯೇಕ ಸೇವೆಯನ್ನಾಗಿ ರಚಿಸಬಹುದು.][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(2) ರಾಜ್ಯ ಸರ್ಕಾರವು, ಅಧಿಸೂಚನೆ ಮೂಲಕ ಕರ್ನಾಟಕ ರಾಜ್ಯ ಮಾರುಕಟ್ಟೆ ಸಮಿತಿ ಸೇವೆ ಮತ್ತು ಕರ್ನಾಟಕ ರಾಜ್ಯ ಮಾರುಕಟ್ಟೆ ಸೇವೆ ಇವುಗಳನ್ನು ಒಂದೇ ಸೇವೆಯಾಗಿ ವಿಲೀನಗೊಳಿಸಬಹುದು ಮತ್ತು ಈ ಉದ್ದೇಶಕ್ಕಾಗಿ ವಿಲೀನ ಕಾರ್ಯವನ್ನು ಕಾರ್ಯಗತಗೊಳಿಸಲು ಹುದ್ದೆಗಳ ಸಮೀಕರಣ, ವೇತನ ಶ್ರೇಣಿಗಳ ನಿರ್ಧಾರ ಮತ್ತಿತರ ಅವಶ್ಯಕವಾದ ಅಥವಾ ಆನುಷಂಗಿಕವಾದ ಕಾರ್ಯಗಳನ್ನು ಮಾಡಲು ಸರ್ಕಾರಕ್ಕೆ ಅಧಿಕಾರವಿರತಕ್ಕದ್ದು.][1]

1. 1991ರ ಅಧಿನಿಯಮದ ಸಂಖ್ಯೆ 16ರ ಮೂಲಕ 27-6-1995 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ-VI

## ಮಾರುಕಟ್ಟೆ ಸಮಿತಿಗಳ ಅಧಿಕಾರಗಳು ಮತ್ತು ಕರ್ತವ್ಯಗಳು

**63. ಮಾರುಕಟ್ಟೆ ಸಮಿತಿಯ ಅಧಿಕಾರಗಳು ಮತ್ತು ಕರ್ತವ್ಯಗಳು.**- (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಮಾರುಕಟ್ಟೆ ಸಮಿತಿಯು ಈ ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು:

(i) ಈ ಅಧಿನಿಯಮದ, ನಿಯಮಗಳ ಮತ್ತು ಉಪವಿಧಿಗಳ ಮೇರೆಗಿನ ಉಪಬಂಧಗಳನ್ನು ಮಾರುಕಟ್ಟೆ ಪ್ರದೇಶದಲ್ಲಿ ಕಾರ್ಯಗತಗೊಳಿಸುವುದು;

(ii) ಮಾರುಕಟ್ಟೆ ಪ್ರದೇಶದಲ್ಲಿ ಕೃಷಿ ಉತ್ಪನ್ನಗಳ [1][ಸಾಗಣೆ ಮತ್ತು ಮಾರುಕಟ್ಟೆ][1] ವ್ಯವಹಾರದ ಬಗ್ಗೆ ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ದೇಶಿಸಬಹುದಾದಂಥ ಸೌಲಭ್ಯಗಳನ್ನು ಒದಗಿಸುವುದು;

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 19-5-1975 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(iii) ಮಾರುಕಟ್ಟೆಗಳ ಅಧೀಕ್ಷಣೆ, ನಿರ್ದೇಶನ ಮತ್ತು ನಿಯಂತ್ರಣದ ಸಂಬಂಧದಲ್ಲಿ ಅಥವಾ ಮಾರುಕಟ್ಟೆ ಪ್ರದೇಶದ ಯಾವುದೇ ಸ್ಥಳದಲ್ಲಿ ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಹಾರದ ನಿಯಂತ್ರಣಕ್ಕಾಗಿ ಮತ್ತು ಮೇಲೆ ಹೇಳಲಾದ ವಿಷಯಗಳಿಗೆ ಸಂಬಂಧಿಸಿದ ಉದ್ದೇಶಗಳಿಗಾಗಿ ಅಗತ್ಯವಾಗಬಹುದಾದಂಥ ಇತರ ಕಾರ್ಯಗಳನ್ನು ಮಾಡುವುದು,

ಮತ್ತು ಆ ಉದ್ದೇಶಕ್ಕಾಗಿ, ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಉಪಬಂಧಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸಬಹುದು ಮತ್ತು ಅಂತಹ ಪ್ರಕಾರ್ಯಗಳನ್ನು ನಿರ್ವಹಿಸಬಹುದು.

(2) ಮೇಲೆ ಹೇಳಲಾದ ಉಪಬಂಧದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ,-

(ಎ) ಮಾರುಕಟ್ಟೆ ಸಮಿತಿಯು ಈ ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು,-

(i) [1][ಮಾರುಕಟ್ಟೆ ಸಮಿತಿಯಲ್ಲಿ ನಿಹಿತವಾದ][1] ಪ್ರಾಂಗಣಗಳ ನಿರ್ವಹಣೆಯನ್ನು ಮತ್ತು ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು [2][ಮತ್ತು ಮಾರುಕಟ್ಟೆ ಕಾರ್ಯನಿರ್ವಾಹಕರಿಗೆ ಸೇರಿದ ಆವರಣಗಳೂ ಒಳಗೊಂಡಂತೆ ಪ್ರಾಂಗಣದಲ್ಲಿರುವ ಆವರಣಗಳನ್ನು ಬಾಡಿಗೆಗೆ ಕೊಡುವ ರೀತಿಯನ್ನು ವಿನಿಯಮಿಸುವುದು;][2]

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(iಎ) ಮಾರುಕಟ್ಟೆ ಪ್ರಾಂಗಣದ ಒಳಗೆ ಅಥವಾ ಪ್ರಾಂಗಣಕ್ಕೆ ಅಧಿಸೂಚಿತ ಕೃಷಿ ಉತ್ಪನ್ನಗಳ ಸಾಗಣೆಗಾಗಿ ಪ್ರತ್ಯೇಕವಾಗಿ ಅಥವಾ ಇತರ ಯಾವುದೇ ಪ್ರಾಧಿಕಾರದೊಡನೆ ಸೇರಿ ಅವಶ್ಯಕ ಸೌಲಭ್ಯಗಳನ್ನು ಒದಗಿಸುವುದು;][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 19-5-1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ii) ಮಾರುಕಟ್ಟೆ ಪ್ರದೇಶದಲ್ಲಿನ ಪ್ರಾಂಗಣಗಳ ಒಳಗೆ ಮತ್ತು ಮಾರುಕಟ್ಟೆಗಳ ಮತ್ತು ಉಪ ಮಾರುಕಟ್ಟೆಗಳ ಹೊರಗೆ ಕೃಷಿ ಉತ್ಪನ್ನದ [1][ಸಾಗಣೆ ಮತ್ತು ಮಾರುಕಟ್ಟೆ][1] ವ್ಯವಹಾರದ ಬಗ್ಗೆ ಅವಶ್ಯವಾದ ಸೌಲಭ್ಯಗಳನ್ನು ಒದಗಿಸುವುದು;

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 19-5-1975 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(iii) ಮಾರುಕಟ್ಟೆ ಕಾರ್ಯನಿರ್ವಾಹಕರಿಗೆ ಲೈಸೆನ್ಸ್‌ಗಳನ್ನು ಮಂಜೂರು ಮಾಡುವುದು ಅಥವಾ ನಿರಾಕರಿಸುವುದು ಮತ್ತು ಅಂತಹ ಲೈಸೆನ್ಸ್‌ಗಳ ನವೀಕರಣ, ಅಮಾನತು ಅಥವಾ ರದ್ದಿಯಾತಿ ಮಾಡುವುದು;

(iv) ಮಾರುಕಟ್ಟೆ ಕಾರ್ಯನಿರ್ವಾಹಕರ ಕಾರ್ಯನಿರ್ವಹಣೆಯ ಮೇಲ್ವಿಚಾರಣೆ ಮಾಡುವುದು;

(v) ಪ್ರಾಂಗಣದಲ್ಲಿ ವ್ಯಾಪಾರದ ಪ್ರಾರಂಭ, ಮುಕ್ತಾಯ ಮತ್ತು ತಡೆ ಹಿಡಿಯುವಿಕೆಯನ್ನು ನಿಯಂತ್ರಿಸುವುದು;

(vi) ಲೈಸೆನ್ಸ್‌ಗಳ ಷರತ್ತುಗಳನ್ನು ಜಾರಿ ಮಾಡುವುದು;

(vii) ಮಾರಾಟದ ಒಪ್ಪಂದಗಳನ್ನು ಮಾಡಿಕೊಳ್ಳುವುದನ್ನು, ನಿರ್ವಹಿಸುವುದನ್ನು ಮತ್ತು ಜಾರಿಗೊಳಿಸುವುದನ್ನು ಅಥವಾ ರದ್ದುಗೊಳಿಸುವುದನ್ನು ನಿಯಂತ್ರಿಸುವುದು ಮತ್ತು ಅಧಿಸೂಚಿತ ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಹಾರಕ್ಕೆ ಸಂಬಂಧಿಸಿದಂತೆ ತೂಕ ಮಾಡುವುದನ್ನು, ಬಟವಾಡೆ ಮಾಡುವುದನ್ನು, ಸಂದಾಯ ಮಾಡುವುದನ್ನು ಮತ್ತು ಇತರ ಎಲ್ಲ ವಿಷಯಗಳನ್ನು ನಿಯಂತ್ರಿಸುವುದು;

(viii) ಅಧಿಸೂಚಿತ ಕೃಷಿ ಉತ್ಪನ್ನದ ಮತ್ತು ಅದಕ್ಕೆ ಪೂರಕವಾದ ಬಾಬುಗಳಿಗೆ ಸಂಬಂಧಿಸಿದ ಯಾವುದೇ ವಿಷಯ ಕುರಿತು, ಮಾರಾಟಗಾರ ಮತ್ತು ಖರೀದಿದಾರನ ನಡುವೆ ಉಂಟಾಗುವ ಎಲ್ಲಾ ವಿವಾದಗಳನ್ನು ಇತ್ಯರ್ಥಪಡಿಸಲು ಏರ್ಪಾಡು ಮಾಡುವುದು;

(ix) ಅಧಿಸೂಚಿತ ಕೃಷಿ ಉತ್ಪನ್ನದ ಉತ್ಪಾದನೆ, ಮಾರಾಟ, ಸಂಗ್ರಹಣೆ, ಸಂಸ್ಕರಣೆ, ಬೆಲೆಗಳು ಮತ್ತು ಸಾಗಣೆಯ ಸಂಬಂಧದಲ್ಲಿ ಮಾಹಿತಿಯನ್ನು ಸಂಗ್ರಹಿಸುವುದು, ನಿರ್ವಹಿಸುವುದು ಮತ್ತು ಪ್ರಸಾರ ಮಾಡುವುದು;

(x) ಅಧಿಸೂಚಿತ ಕೃಷಿ ಉತ್ಪನ್ನಗಳ ಕಲಬೆರಕೆಯನ್ನು ತಡೆಯುವುದು ಮತ್ತು ಅವುಗಳ ಶ್ರೇಣೀಕರಣ ಮಾಡುವುದು ಮತ್ತು ಪ್ರಮಾಣ ನಿಷ್ಕರ್ಷೆ ಮಾಡುವುದು–ಇವುಗಳ ಬಗ್ಗೆ ಸಾಧ್ಯವಾದ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು;

(xi) ಅಧಿಕ ವ್ಯಾಪಾರವನ್ನು ತಡೆಯುವುದು ಮತ್ತು ಆ ಮೂಲಕ ಅಧಿಸೂಚಿತ ಕೃಷಿ ಉತ್ಪನ್ನದ ಮಾರಾಟ ಮತ್ತು ಖರೀದಿ ವ್ಯವಹಾರದ ಕ್ರಮದಲ್ಲಿ ಉಂಟಾಗುವ ಸ್ಥಳೀಯ ಹಾನಿ ಸಂಭವವನ್ನು ತಗ್ಗಿಸಿ ಮಾರುಕಟ್ಟೆಯ ಸ್ಥಿರತೆಯನ್ನು ಕಾಯ್ದುಕೊಂಡು ಬರಲು ಕ್ರಮಗಳನ್ನು ತೆಗೆದುಕೊಳ್ಳುವುದು;

(xii) ಮಾರುಕಟ್ಟೆ ಸಮಿತಿಯು ಹಕ್ಕು ಹೊಂದಿರುವಂಥ ದರಗಳು, ಶುಲ್ಕಗಳು, ಫೀಸುಗಳು ಮತ್ತು ಹಣಕಾಸಿನ ಇತರ ಮೊತ್ತಗಳು– ಇವುಗಳನ್ನು ವಿಧಿಸುವುದು, ತೆಗೆದುಕೊಳ್ಳುವುದು, ವಸೂಲ್ಮಾಡುವುದು ಮತ್ತು ಸ್ವೀಕರಿಸುವುದು;

[1][(xiii)][1] [2][ಫ್ಲೋರ್‌ಪ್ರೈಸ್ ಸ್ಕೀಮಿಗೆ ಮತ್ತು ರೈತ ಸಂಜೀವಿನಿ ಅಪಘಾತ ವಿಮಾಯೋಜನೆಗೆ ಕೃಷಿ ಮಾರುಕಟ್ಟೆಯ ನಿರ್ದೇಶಕರು ನಿರ್ಧರಿಸ ಬಹುದಾದಂತೆ ಅಂಥ ದರದಲ್ಲಿ ವಂತಿಗೆ ನೀಡುವುದು][2].

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17–6–1986 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 2001ರ ಅಧಿನಿಯಮ ಸಂಖ್ಯೆ 8ರ ಮೂಲಕ 24–1–2001ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(xiv) ಮಾರುಕಟ್ಟೆ ಪ್ರಾಂಗಣಗಳ ಅಥವಾ ಮಾರುಕಟ್ಟೆ ಉಪ ಪ್ರಾಂಗಣಗಳ ಆಡಳಿತ ನಿರ್ವಹಣೆಯಲ್ಲಿ ಸಾರ್ವಜನಿಕ ವಲಯದ ಮತ್ತು ಖಾಸಗಿ ವಲಯದ ಪಾಲುಗಾರಿಕೆಯನ್ನು ಏರ್ಪಡಿಸುವುದು ಮತ್ತು ಪ್ರೋತ್ಸಾಹಿಸುವುದು;

(xv) ಅಧಿಸೂಚಿತ ಕೃಷಿ ಉತ್ಪನ್ನದ ಉತ್ಪಾದನೆಗೆ, ಮಾರಾಟಕ್ಕೆ, ದಾಸ್ತಾನಿಗೆ, ಸಂಸ್ಕರಣೆಗೆ, ಮೌಲ್ಯವರ್ಧನೆಗೆ, ಬೆಲೆಗಳಿಗೆ ಹಾಗೂ ಸಾಗಣೆಗೆ ಸಂಬಂಧಪಟ್ಟ ಮಾಹಿತಿಯ ಸಂಗ್ರಹಣೆ, ನಿರ್ವಹಣೆ ಮತ್ತು ಪ್ರಸಾರದಂಥ ಕ್ಷೇತ್ರಗಳಲ್ಲಿ ತನ್ನ ವಿಸ್ತರಣಾ ಚಟುವಟಿಕೆಗಳನ್ನು ನಿರ್ವಹಿಸುವುದಕ್ಕಾಗಿ ಸಾರ್ವಜನಿಕ ವಲಯದ ಮತ್ತು ಖಾಸಗಿ ವಲಯದ ಪಾಲುಗಾರಿಕೆಯನ್ನು ಪ್ರೋತ್ಸಾಹಿಸುವುದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) ಮಾರುಕಟ್ಟೆ ಸಮಿತಿಯು ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸಬಹುದು:–

(i) [1][ಮಾರುಕಟ್ಟೆ ಸಮಿತಿಯಲ್ಲಿ ನಿಹಿತವಾದ][1] ಪ್ರಾಂಗಣದಲ್ಲಿ ವ್ಯಕ್ತಿಗಳ ಪ್ರವೇಶವನ್ನು ಮತ್ತು ವಾಹನ ಸಂಚಾರವನ್ನು ನಿಯಂತ್ರಿಸುವುದು;

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1–5–1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ii) ಈ ಅಧಿನಿಯಮದ, ನಿಯಮಗಳ ಮತ್ತು ಉಪವಿಧಿಗಳ ಉಪಬಂಧಗಳನ್ನು ಉಲ್ಲಂಘಿಸುವ ವ್ಯಕ್ತಿಗಳನ್ನು ಕಾನೂನು ವ್ಯವಹರಣೆಗೆ ಗುರಿಪಡಿಸುವುದು ಮತ್ತು ಅಂತಹ ಅಪರಾಧಗಳ ಬಗ್ಗೆ ರಾಜಿಮಾಡಿಕೊಳ್ಳುವುದು;

(iii) ತನ್ನ ಕರ್ತವ್ಯಗಳನ್ನು ದಕ್ಷ ರೀತಿಯಲ್ಲಿ ನಿರ್ವಹಿಸುವ ಉದ್ದೇಶಕ್ಕಾಗಿ ಯಾವುದೇ ಚರ ಅಥವಾ ಸ್ಥಿರ ಸ್ವತ್ತನ್ನು ಆರ್ಜಿಸುವುದು, ಧಾರಣ ಮಾಡುವುದು ಮತ್ತು ವಿಲೆ ಮಾಡುವುದು;

(iv) ಈ ಅಧಿನಿಯಮದ, ನಿಯಮಗಳ ಅಥವಾ ಉಪವಿಧಿಗಳ ಉಪಬಂಧಗಳನ್ನು ಅಥವಾ ಮಾರುಕಟ್ಟೆ ಸಮಿತಿಯ ಅಧ್ಯಕ್ಷನು ಅಥವಾ ಈ ಸಂಬಂಧದಲ್ಲಿ ಯುಕ್ತವಾಗಿ ಅಧಿಕೃತನಾದ ಯಾವನೇ ಅಧಿಕಾರಿಯು ಈ ಅಧಿನಿಯಮದ, ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಹೊರಡಿಸಿದ ಆದೇಶಗಳನ್ನು ಅಥವಾ ನಿರ್ದೇಶನಗಳನ್ನು ಉಲ್ಲಂಘಿಸುವ ವ್ಯಕ್ತಿಗಳಿಗೆ ದಂಡನೆಗಳನ್ನು ವಿಧಿಸುವುದು;

(v) ಯಾವುದೇ ದಾವೆ, ಕಾನೂನು ಕ್ರಮ, ವ್ಯವಹರಣೆ, ಅರ್ಜಿ ಅಥವಾ ಮಧ್ಯಸ್ಥಗಾರಿಕೆ–ಇವುಗಳನ್ನು ಹೂಡುವುದು, ಸಲ್ಲಿಸುವುದು ಅಥವಾ ಸಮರ್ಥಿಸಿಕೊಳ್ಳುವುದು ಮತ್ತು ಅಂತಹ ದಾವೆ, ಕಾನೂನು ಕ್ರಮ, ವ್ಯವಹರಣೆ, ಅರ್ಜಿ ಅಥವಾ ಮಧ್ಯಸ್ಥಿಕೆಗಾರಿಕೆ– ಇವುಗಳ ಬಗ್ಗೆ ರಾಜಿ ಮಾಡಿಕೊಳ್ಳುವುದು;

(vi) ಉತ್ಪಾದಕನು ನೇರವಾಗಿ ಮಾರಾಟ ಮಾಡಲು ಸಾಕಷ್ಟು ಸ್ಥಳಾವಕಾಶ ಮುಂತಾದ ಸೌಲಭ್ಯಗಳನ್ನು ಒದಗಿಸುವುದು ಮತ್ತು ಉತ್ಪಾದಕನು ಕಮೀಷನ್ ಏಜೆಂಟನನ್ನು ನಿಯೋಜಿಸಿಕೊಳ್ಳದೆ, ವ್ಯಾಪಾರಿಗೆ ತನ್ನ ಉತ್ಪನ್ನವನ್ನು ಮಾರಾಟ ಮಾಡಿದಾಗ ಉತ್ಪಾದಕನ ಪರವಾಗಿ ಬೆಲೆಪಟ್ಟಿ ಮತ್ತು ಬಿಲ್ಲುಗಳನ್ನು ತಯಾರಿಸಲು ಅವನಿಗೆ ನೆರವು ನೀಡುವುದು;

[1][(vii) ಸಂಸ್ಕರಣೆ ಮತ್ತು ಪ್ಯಾಕಿಂಗ್ ಮಾಡಲು ಸೌಲಭ್ಯಗಳನ್ನು ಒದಗಿಸುವುದು;][1]

1. 1976ರ ಅಧಿನಿಯಮ ಸಂಖ್ಯೆ 14ರ ಮೂಲಕ 24-1-1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(viii) ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಗೆ ಮತ್ತು ಇತರ ಮಾರುಕಟ್ಟೆ ಸಮಿತಿಗಳಿಗೆ ಸಾಲಗಳನ್ನು ಮಂಜೂರು ಮಾಡುವುದು;][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 19-5-1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(viii-ಎ) ಮಾರುಕಟ್ಟೆ ಪ್ರದೇಶದೊಳಗೆ ಅಧಿಸೂಚಿತ ಕೃಷಿ ಉತ್ಪನ್ನಗಳ ವ್ಯವಹಾರ ನಡೆಸುತ್ತಿರುವ ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳು ಅಥವಾ ಕೃಷಿ ಸಹಕಾರ ಸಂಸ್ಕರಣ ಸಂಘಗಳು ಮತ್ತು ಯಾವುದೇ ಇತರ ಸಹಕಾರ ಸಂಘ- ಇವುಗಳಿಗೆ ಅಧಿಸೂಚಿತ ಕೃಷಿ ಉತ್ಪನ್ನಗಳ ವ್ಯವಹಾರಗಳಿಗೆ ಸಂಬಂಧಿಸಿದಂತೆ ಅವುಗಳ ಕಾರ್ಯೋಪಯೋಗಿ ಬಂಡವಾಳದ ಅಗತ್ಯತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮತ್ತು ಗೊತ್ತುಪಡಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಸಾಲವನ್ನು ಮಂಜೂರು ಮಾಡುವುದು;

(viiiಬಿ) ಮಾರುಕಟ್ಟೆ ಪ್ರದೇಶದೊಳಗೆ ಸ್ಥಾಪಿಸಲಾಗಿರುವ ಮತ್ತು ಅಧಿಸೂಚಿತ ಕೃಷಿ ಉತ್ಪನ್ನಗಳ ವ್ಯವಹಾರ ನಡೆಸುತ್ತಿರುವ ಸಹಕಾರ ಮಾರುಕಟ್ಟೆ ಸಂಘಗಳಿಗೆ ಅಥವಾ ಕೃಷಿ ಸಹಕಾರ ಸಂಸ್ಕರಣ ಸಂಘಗಳಿಗೆ ಷೇರುಗಳ ಸಂಬಂಧದಲ್ಲಿ ಕೃಷಿ ಮಾರುಕಟ್ಟೆ ನಿರ್ದೇಶಕನ ಪೂರ್ವಾನುಮೋದನೆ ಪಡೆದು ಷೇರುಗಳಲ್ಲಿ ತೊಡಗಿಸುವುದು;

(viiiಸಿ) ಯಾವುದೇ ಮಾರುಕಟ್ಟೆಯ ಕಾರ್ಯನಿರ್ವಾಹಕರ ಮುಷ್ಕರದಿಂದಾಗಿ ಮಾರುಕಟ್ಟೆ ಪ್ರಾಂಗಣದಲ್ಲಿ ಅಥವಾ ಉಪ-ಮಾರುಕಟ್ಟೆ ಪ್ರಾಂಗಣದಲ್ಲಿ ಕಾರ್ಯನಿರ್ವಹಣೆಗೆ ಅಡ್ಡಿಯುಂಟಾದ ಸಮಯದಲ್ಲಿ ಸಹಕಾರ ಸಂಘಗಳ ಮೂಲಕ ಕೃಷಿ ಉತ್ಪನ್ನದ ಖರೀದಿ, ಮಾರಾಟ, ದಾಸ್ತಾನು ಅಥವಾ ಸಾಗಣೆ ಬಗ್ಗೆ ಅಥವಾ ಅಂಥದೇ ಇತರ ವಿಷಯಗಳ ಬಗ್ಗೆ ಅವಶ್ಯಕವಾದಂಥ ಕ್ರಮಗಳನ್ನು ಕೃಷಿ ಮಾರುಕಟ್ಟೆ ನಿರ್ದೇಶಕನ ಪೂರ್ವಾನುಮೋದನೆ ಪಡೆದು ಕೈಕೊಳ್ಳುವುದು;

(viiiಡಿ) ಮಾರುಕಟ್ಟೆಯ ವಶದಲ್ಲಿರುವ ಮಾರುಕಟ್ಟೆ ಹೆಚ್ಚುವರಿ ನಿಧಿಯ ಲಭ್ಯತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮತ್ತು ಕೃಷಿ ಮಾರುಕಟ್ಟೆ ನಿರ್ದೇಶಕನ ಪೂರ್ವಾನುಮೋದನೆ ಪಡೆದು, ಮಾರುಕಟ್ಟೆ ಪ್ರದೇಶದೊಳಗೆ ಆ ಮಾರುಕಟ್ಟೆ ಬಳಕೆದಾರರ ಪ್ರಯೋಜನಕ್ಕಾಗಿ ಗೊತ್ತುಪಡಿಸಬಹುದಾದಂಥ ಯಾವುದೇ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು;][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ (viiiಎ) ಯಿಂದ (viiiಡಿ) ವರೆಗಿನ ಖಂಡಗಳನ್ನು 1-4-1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][[2][(ix) XXX][2] ;

(x) ಮಾರುಕಟ್ಟೆ ಸಮಿತಿಯ ಪರವಾಗಿ ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಒತ್ತೆ ಇಟ್ಟುಕೊಂಡು ಮಾರುಕಟ್ಟೆ ಪ್ರದೇಶದಲ್ಲಿನ ಉತ್ಪಾದಕ- ಮಾರಾಟಗಾರರಿಗೆ ಗೊತ್ತು ಪಡಿಸಬಹುದಾದಂಥ ಅಲ್ಪಾವಧಿ ಸಾಲಗಳನ್ನು ಒದಗಿಸುವುದು;][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-4-1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(xi) ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು ಕೃಷಿ ಇಂಜಿನಿಯರಿಂಗ್‌ನಲ್ಲಿ ಮತ್ತು ಕೃಷಿ ಸಂಶೋಧನೆಯಲ್ಲಿ ಶಿಕ್ಷಣ ನೀಡಲು ಯಾವುದೇ ಕೃಷಿ ವಿಶ್ವವಿದ್ಯಾನಿಲಯಕ್ಕೆ ನಿಧಿಗಳನ್ನು ಕೊಡುವುದು;][1]

1. 1988ರ ಅಧಿನಿಯಮ ಸಂಖ್ಯೆ 6ರ ಮೂಲಕ 19-11-1987 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

*(xii)

* 10ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿಯನ್ನು ನೋಡಿ.

**63ಎ.**

** 61ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿಯನ್ನು ನೋಡಿ.

[1][**64. ಉಪಸಮಿತಿಗಳ ನೇಮಕ.-** ಮಾರುಕಟ್ಟೆ ಸಮಿತಿಯು ತನ್ನ ಸದಸ್ಯರ ಪೈಕಿ ಇಬ್ಬರು ಸದಸ್ಯರಿಗೆ ಕಡಿಮೆಯಲ್ಲದ ಮತ್ತು ಐದು ಸದಸ್ಯರಿಗೆ ಮೀರದ ಸದಸ್ಯರನ್ನೊಳಗೊಂಡ ಒಂದು ಅಥವಾ ಹೆಚ್ಚು ಉಪ-ಸಮಿತಿಗಳನ್ನು ತಾನು ಅವುಗಳಿಗೆ ಒಪ್ಪಿಸುವ ಯಾವುದೇ ವಿಷಯದ ಬಗ್ಗೆ ವರದಿಯನ್ನು ಸಲ್ಲಿಸುವ ಅಥವಾ ಅಭಿಪ್ರಾಯವನ್ನು ಕೊಡುವ ಉದ್ದೇಶಕ್ಕಾಗಿ ನೇಮಕ ಮಾಡಬಹುದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][64ಎ. **ಖಾಸಗಿ ಮಾರುಕಟ್ಟೆ ಪ್ರಾಂಗಣದ ಲೈಸೆನ್ಸುದಾರನ ಕರ್ತವ್ಯಗಳು ಹಾಗೂ ಜವಾಬ್ದಾರಿಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಹಾಗೂ ನಿಯಮಗಳಿಗೆ ಒಳಪಟ್ಟು,–

(ಎ) ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಬೆಳೆಗಾರರಿಂದ ಖರೀದಿಸುವುದಕ್ಕೆ ಮತ್ತು ಅದರ ದಾಸ್ತಾನು ಮಾಡುವುದಕ್ಕೆ ಹಾಗೂ ತನಗೆ ಮಂಜೂರು ಮಾಡಿದ ಲೈಸೆನ್ಸಿನ ಷರತ್ತುಗಳ ಮೇರೆಗೆ ಮತ್ತು ನಿಯಮಿಸಲಾದ ಕಾರ್ಯವಿಧಾನಗಳ ಪ್ರಕಾರ ಉತ್ಪನ್ನವನ್ನು ಮಾರಾಟ ಮಾಡುವುದಕ್ಕೆ ಅವಶ್ಯಕವಾದ ಮೂಲ ಸೌಲಭ್ಯಗಳನ್ನು ಖಾಸಗಿ ಮಾರುಕಟ್ಟೆ ಪ್ರಾಂಗಣದಲ್ಲಿ ಒದಗಿಸುವುದು;

(ಬಿ) ಖಾಸಗಿ ಮಾರುಕಟ್ಟೆ ಪ್ರಾಂಗಣದಲ್ಲಿ ನೋಂದಾಯಿಸಿಕೊಂಡ ಅಥವಾ ಅದನ್ನು ಬಳಸುತ್ತಿರುವ, ಮಾರಾಟಗಾರರಿಗೆ, ಖರೀದಿದಾರರಿಗೆ ಮತ್ತು ಇತರ ಎಲ್ಲ ಕಾರ್ಯಕರ್ತರಿಗೆ ಒದಗಿಸಿದ ಸೇವೆಗಳ ಮತ್ತು ಸೌಲಭ್ಯಗಳ ಬಗ್ಗೆ ನಿಯಮಿಸಬಹುದಾದಂಥ ಮೊಬಲಗನ್ನು ಮೀರದ ನೋಂದಣಿ ಶುಲ್ಕಗಳನ್ನು, ಮತ್ತಿತರ ಚಾರ್ಜುಗಳನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು

– ಖಾಸಗಿ ಮಾರುಕಟ್ಟೆ ಪ್ರಾಂಗಣದ ಲೈಸೆನ್ಸುದಾರನ ಕರ್ತವ್ಯಗಳಾಗಿರತಕ್ಕದ್ದು.

**64ಬಿ. ಆವರ್ತಕ ನಿಧಿಯ ರಚನೆ.–** (1) ರಾಜ್ಯ ಸರ್ಕಾರವು ಆವರ್ತಕ ನಿಧಿ ಎನ್ನುವ ಒಂದು ನಿಧಿಯನ್ನು ರಚಿಸತಕ್ಕದ್ದು. ಈ ಕೆಳಗಿನವುಗಳನ್ನು ಸದರಿ ನಿಧಿಗೆ ಜಮೆ ಮಾಡತಕ್ಕದ್ದು, ಎಂದರೆ:–

(i) ರೈತ– ಗ್ರಾಹಕ ಮಾರುಕಟ್ಟೆಯನ್ನು ಸ್ಥಾಪಿಸಿದ ವ್ಯಕ್ತಿಯು ಸಂಗ್ರಹಿಸಿದ ಸೇವಾ ಶುಲ್ಕಗಳ, ಕೃಷಿ ಮಾರುಕಟ್ಟೆ ನಿರ್ದೇಶಕನು ಅಧಿಸೂಚಿಸಬಹುದಾದ ಶೇಕಡಾ ಪ್ರಮಾಣ;

(ii) 63 (2) (ಎ) (xiii)ನೇ ಪ್ರಕರಣದ ಮೇರೆಗೆ ಕನಿಷ್ಠ ಬೆಲೆ ಯೋಜನೆಗಾಗಿ ಮಾರುಕಟ್ಟೆ ಸಮಿತಿಗಳ ಮೂಲಕ ಸಂಗ್ರಹಿಸಲಾದ ವಂತಿಗೆಗಳು;

(iii) ರಾಜ್ಯ ಸರ್ಕಾರದಿಂದ ವಂತಿಗೆಗಳು;

(iv) ಕೇಂದ್ರ ಸರ್ಕಾರದಿಂದ ವಂತಿಗೆಗಳು; ಮತ್ತು

(v) ಯಾವುದೇ ಇತರ ಮೂಲಗಳಿಂದ ಬಂದ ಹಣ.

(2) ಕೃಷಿ ಮಾರುಕಟ್ಟೆ ಮಂಡಲಿಯ ವ್ಯವಸ್ಥಾಪಕ ನಿರ್ದೇಶಕನು ಆವರ್ತಕ ನಿಧಿಯನ್ನು ನಿರ್ವಹಿಸತಕ್ಕದ್ದು ಮತ್ತು ಅದನ್ನು ಅನುಸೂಚಿತ ಬ್ಯಾಂಕುಗಳಲ್ಲಿ ಠೇವಣಿ ಇಡತಕ್ಕದ್ದು ಅಥವಾ ಹೂಡಿಕೆ ಮಾಡತಕ್ಕದ್ದು ಮತ್ತು 64ಸಿ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ನಿಧಿಯನ್ನು ವಿನಿಯೋಗಿಸತಕ್ಕದ್ದು.

(3) ಆವರ್ತಕ ನಿಧಿಗೆ ಸಂಬಂಧಿಸಿದ ಲೆಕ್ಕಪತ್ರಗಳನ್ನು ವಾರ್ಷಿಕವಾಗಿ ತಯಾರಿಸತಕ್ಕದ್ದು ಮತ್ತು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು. ಅಂಥ ಪರಿಶೋಧಿತ ಲೆಕ್ಕಪತ್ರಗಳನ್ನು ಅನುಮೋದನೆಗಾಗಿ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**64ಸಿ. ಆವರ್ತಕ ನಿಧಿಯ ವಿನಿಯೋಗ.–** (1) ಈ ಅಧಿನಿಯಮದ ಉಪಬಂಧಕ್ಕೆ ಮತ್ತು ಅದರ ಮೇರೆಗೆ ರಚಿತವಾದ ನಿಯಮಗಳಿಗೆ ಒಳಪಟ್ಟು, ಈ ನಿಧಿಯನ್ನು,–

(i) ಕನಿಷ್ಠ ಬೆಲೆ ಯೋಜನೆಯ ಅನುಷ್ಠಾನದ; ಮತ್ತು

(ii) ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಕನಿಷ್ಠ ಬೆಂಬಲ ಬೆಲೆಗೆ ಖರೀದಿಸುವ

– ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು.

**ವಿವರಣೆ.–** (1) ಈ ಪ್ರಕರಣದ ಉದ್ದೇಶಕ್ಕಾಗಿ "ಕನಿಷ್ಠ ಬೆಲೆ ಯೋಜನೆ" ಎಂದರೆ ಅಧಿಸೂಚಿತ ಕೃಷಿ ಉತ್ಪನ್ನವನ್ನು ರೈತರು ಕಷ್ಟಕಾಲೀನ ಮಾರಾಟ ಮಾಡದಂತೆ ಅವರ ಹಿತಾಸಕ್ತಿಯನ್ನು ಕಾಪಾಡಲು ರಾಜ್ಯ ಸರ್ಕಾರವು ಆದೇಶದ ಮೂಲಕ ರೂಪಿಸಿರುವ ಯೋಜನೆ.

(2) "ಕನಿಷ್ಠ ಬೆಂಬಲ ಬೆಲೆ" ಎಂದರೆ ಮಾರುಕಟ್ಟೆಯಲ್ಲಿ ಬೆಲೆ ಕುಸಿದಿರುವ ಕಾರಣಕ್ಕಾಗಿ ಅಧಿಸೂಚಿತ ಕೃಷಿ ಉತ್ಪನ್ನದ (ಭಾರತ ಸರ್ಕಾರವು ಕನಿಷ್ಠ ಬೆಂಬಲ ಬೆಲೆ ನಿಗದಿಪಡಿಸಿರುವ ವ್ಯಾಪಾರ ಸರಕುಗಳನ್ನು ಹೊರತುಪಡಿಸಿ) ಖರೀದಿಗಾಗಿ ರಾಜ್ಯ ಸರ್ಕಾರವು ನಿಗದಿಪಡಿಸಿರುವ ಕನಿಷ್ಠ ಬೆಂಬಲ ಬೆಲೆ. ಕನಿಷ್ಠ ಬೆಂಬಲ ಬೆಲೆಯನ್ನು ನಿಗದಿಪಡಿಸುವಾಗ ರಾಜ್ಯ ಸರ್ಕಾರವು ಈ ಮುಂದಿನ ಅಂಶಗಳನ್ನು ಪರ್ಯಾಲೋಚನೆಗೆ ತೆಗೆದುಕೊಳ್ಳಬಹುದು, ಎಂದರೆ:–

(ಎ) ಅಧಿಸೂಚಿತ ಕೃಷಿ ಉತ್ಪನ್ನದ ಬೆಲೆ;

(ಬಿ) ಅಂಥ ಅಧಿಸೂಚಿತ ಕೃಷಿ ಉತ್ಪನ್ನದ ಉತ್ಪಾದನಾ ವೆಚ್ಚ;

(ಸಿ) ಈ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ನೇಮಿಸಿರುವ ತಾಂತ್ರಿಕ ಪರಿಣಿತರ ಸಮಿತಿಯೇನಾದರೂ ಇದ್ದಲ್ಲಿ, ಅದರ ಶಿಫಾರಸ್ಸು;

(ಡಿ) ವ್ಯಾಪಾರ ಸರಕಿನ ನ್ಯಾಯೋಚಿತ ಸರಾಸರಿ ಗುಣಮಟ್ಟ;

(ಇ) ಉತ್ಪಾದಕನಿಗೆ ದೊರೆಯಬೇಕಾದ ಸಮಂಜಸ ಲಾಭ;

(ಎಫ್) ಯೋಜನೆಯಲ್ಲಿ ಸರ್ಕಾರವು ಆದೇಶಿಸಬಹುದಾದ ಇತರ ಅಂಶಗಳು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**65. ಮಾರುಕಟ್ಟೆ ಫೀಜುಗಳನ್ನು ವಿಧಿಸುವುದು.**– [2][(1) XXX][2]

1. 1975ರ ಅಧಿನಿಯಮ ಸಂಖ್ಯೆ 24ರ ಮೂಲಕ 19–5–1975ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 19–5–1975ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ ಮತ್ತು 28–9–1978ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ಮಾರುಕಟ್ಟೆ ಪ್ರದೇಶದಲ್ಲಿ ಯಾವನೇ ಖರೀದಿದಾರನು ಕೊಂಡುಕೊಂಡ ಕೃಷಿ ಉತ್ಪನ್ನದ ಸಂಬಂಧದಲ್ಲಿ, ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದರದಲ್ಲಿ ಮತ್ತು ಅವುಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಸಮಯಗಳಲ್ಲಿ ಅವನಿಗೆ ಮಾರುಕಟ್ಟೆ ಫೀಜನ್ನು ವಿಧಿಸತಕ್ಕದ್ದು ಮತ್ತು ಅದನ್ನು ವಸೂಲು ಮಾಡತಕ್ಕದ್ದು; ಮತ್ತು [1][ಅಂಥ ಫೀಜು ಜಾನುವಾರುಗಳ ಸಂಬಂಧದಲ್ಲಿ ಹೊರತು, ಖರೀದಿಸಿದ ಅಂಥ ಉತ್ಪನ್ನದ ಮೌಲ್ಯದ ಪ್ರತಿ ಒಂದು ನೂರು ರೂಪಾಯಿಗೆ ಎರಡು ರೂಪಾಯಿ ಮೀರತಕ್ಕದ್ದಲ್ಲ ಮತ್ತು ಜಾನುವಾರುಗಳ ಸಂಬಂಧದಲ್ಲಿ ಕುರಿ ಅಥವಾ ಮೇಕೆಯ ಹೊರತಾಗಿ [2][ಪ್ರತಿಯೊಂದು ಜಾನುವಾರಿಗೆ ಐದು ರೂಪಾಯಿಗೆ][2] ಮೀರತಕ್ಕದ್ದಲ್ಲ ಮತ್ತು ಕುರಿ ಅಥವಾ ಮೇಕೆಯ ಸಂಬಂಧದಲ್ಲಿ ಅಂಥ ಫೀಜು [2][ಪ್ರತಿಯೊಂದಕ್ಕೆ ಒಂದು ರೂಪಾಯಿ][2] ಗೆ ಮೀರತಕ್ಕದ್ದಲ್ಲ:][1]

1. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 4–11–1981ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1–8–1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಪರಂತು, ಮಾರುಕಟ್ಟೆ ಪ್ರದೇಶದೊಳಗೆ ಕೃಷಿ ಉತ್ಪನ್ನಗಳ ವ್ಯಾಪಾರ ನಡೆಸುವ ಯಾವುದೇ ಸಹಕಾರ ಸಂಘದ ಸಂದರ್ಭದಲ್ಲಿ ಈ ಅಧಿನಿಯಮದ ಮೇರೆಗೆ ಸಂದಾಯ ಮಾಡತಕ್ಕ ಮಾರುಕಟ್ಟೆ ಫೀಜಿನ ಶೇಕಡಾ 80ರಷ್ಟು ದರದಲ್ಲಿ ಮಾರುಕಟ್ಟೆ ಫೀಜನ್ನು ವಿಧಿಸತಕ್ಕದ್ದು ಮತ್ತು ವಸೂಲು ಮಾಡತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1–8–1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

ಮತ್ತೂ ಪರಂತು, ರಾಜ್ಯದೊಳಗಡೆ ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ (2)ನೇ ಉಪಪ್ರಕರಣದ ಮೇರೆಗೆ ಈಗಾಗಲೇ ಯಾವುದೇ ಕೃಷಿ ಉತ್ಪನ್ನದ ಮೇಲೆ ಮಾರುಕಟ್ಟೆ ಶುಲ್ಕವನ್ನು ವಿಧಿಸಲಾಗಿದ್ದರೆ ಮತ್ತು ಸಂಗ್ರಹಿಸಲಾಗಿದ್ದರೆ ಮತ್ತು ಅಂಥ ಕೃಷಿ ಉತ್ಪನ್ನವನ್ನು ರಾಜ್ಯದೊಳಗೆ ಯಾವುದೇ ಇತರ ಮಾರುಕಟ್ಟೆ ಪ್ರದೇಶದಲ್ಲಿ ಸಂಸ್ಕರಿಸಿ ಮಾರಾಟ ಮಾಡಲಾಗಿರುವಲ್ಲಿ ಅಥವಾ ರಾಜ್ಯದೊಳಗೆ ರಫ್ತು ಮಾಡಲಾಗಿರುವಲ್ಲಿ, ಅದಕ್ಕೆ ಮಾರುಕಟ್ಟೆ ಶುಲ್ಕ ವಿಧಿಸುವುದರಿಂದ ವಿನಾಯತಿ ನೀಡತಕ್ಕದ್ದು.

[1][ಮತ್ತೂ ಪರಂತು, ಲೈಸೆನ್ಸುದಾರನು ಸ್ಥಾಪಿಸಿದ ಸ್ಥಳೀಯ ವಿನಿಮಯ ಕೇಂದ್ರದಲ್ಲಿ ಕೊಂಡುಕೊಳ್ಳುವವನ ಅಥವಾ ಅಧಿಸೂಚಿತ ಕೃಷಿ ಉತ್ಪನ್ನದ ನೇರ ಖರೀದಿ ಲೈಸೆನ್ಸುದಾರನ ಅಥವಾ ಕರಾರು ವ್ಯವಸಾಯ ಉತ್ಪಾದಕನಿಂದ ಕೊಂಡುಕೊಳ್ಳುತ್ತಿರುವ ಕರಾರು ವ್ಯವಸಾಯ ಪ್ರಾಯೋಜಕನ ಸಂದರ್ಭದಲ್ಲಿ, ಈ ಅಧಿನಿಯಮದ ಮೇರೆಗೆ ಪಾವತಿ ಮಾಡಬೇಕಾದ ಮಾರುಕಟ್ಟೆ ಶುಲ್ಕದ ಶೇಕಡ ಎಪ್ಪತ್ತರಷ್ಟು ದರದಲ್ಲಿ ಮಾರುಕಟ್ಟೆ ಶುಲ್ಕವನ್ನು ವಿಧಿಸತಕ್ಕದ್ದು ಮತ್ತು ಸಂಗ್ರಹಿಸತಕ್ಕದ್ದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ವಿವರಣೆ:**– ಈ ಪರಂತುಕದಲ್ಲಿರುವುದು ಯಾವುದೂ,–

(i) ರಾಜ್ಯದ ಹೊರಗಡೆಯಿಂದ ಆಮದು ಮಾಡಿಕೊಂಡ ಮತ್ತು ರಾಜ್ಯದೊಳಗೆ ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ ಮಾರಾಟ ಮಾಡಿದ ಯಾವುದೇ ಸಂಸ್ಕರಿತ ಕೃಷಿ ಉತ್ಪನ್ನಕ್ಕೆ ; ಅಥವಾ

(ii) ತನ್ನ ಸ್ವಂತ ಗೃಹಕೃತ್ಯದ ಬಳಕೆಗಾಗಿ ಹೊರತು, ಸಂಸ್ಕರಿಸುವ ಅಥವಾ ತಯಾರಿಸುವ ಉದ್ದೇಶಕ್ಕಾಗಿ ರಾಜ್ಯದೊಳಗಿನ ಯಾವುದೇ ಮಾರುಕಟ್ಟೆ ಪ್ರದೇಶಕ್ಕೆ ರಾಜ್ಯದ ಹೊರಗಡೆಯಿಂದ ಯಾವನೇ ವ್ಯಕ್ತಿಯು ಸ್ವತ: ತಾನೇ ಆಗಲಿ ಅಥವಾ ಬೇರೊಬ್ಬ ವ್ಯಕ್ತಿಗೆ ಏಜೆಂಟನಾಗಿಯಾಗಲೀ ಆಮದು ಮಾಡಿಕೊಂಡ ಅಥವಾ ಆಮದು ಮಾಡಿಕೊಳ್ಳಲು ಕಾರಣನಾದ ಯಾವುದೇ ಕೃಷಿ ಉತ್ಪನ್ನಕ್ಕೆ,

– ಅನ್ವಯಿಸತಕ್ಕದ್ದಲ್ಲ.

[1][(2ಎ) ಈ ಪ್ರಕರಣದ ಮೇರೆಗೆ ಸಂದಾಯವಾಗತಕ್ಕ ಮಾರುಕಟ್ಟೆ ಫೀಜನ್ನು ಈ ಕೆಳಕಂಡಂತೆ ವಸೂಲ್ಮಾಡತಕ್ಕದ್ದು, ಎಂದರೆ:–

(i) ಕಮಿಷನ್ ಏಜೆಂಟಿನ ಮೂಲಕ ಉತ್ಪನ್ನವನ್ನು ಮಾರಾಟ ಮಾಡಿದರೆ, ಕಮೀಷನ್ ಏಜೆಂಟನು ಖರೀದಿದಾರನಿಂದ ಮಾರುಕಟ್ಟೆ ಫೀಜನ್ನು ವಸೂಲು ಮಾಡ [2][ತಕ್ಕದ್ದು][2] ಮತ್ತು ಅದನ್ನು ಮಾರುಕಟ್ಟೆ ಸಮಿತಿಗೆ ಸಂದಾಯ ಮಾಡಲು ಬದ್ಧನಾಗತಕ್ಕದ್ದು;

[3][(iಎ) ಉತ್ಪನ್ನವನ್ನು ಆಮದುದಾರನು ಖರೀದಿದಾರನಿಗೆ ಮಾರಾಟ ಮಾಡಿದರೆ, ಅವನು ಖರೀದಿದಾರನಿಂದ ಮಾರುಕಟ್ಟೆ ಫೀಜನ್ನು ವಸೂಲ್ಮಾಡಲು ಮತ್ತು ಅದನ್ನು ಮಾರುಕಟ್ಟೆ ಸಮಿತಿಗೆ ಸಂದಾಯ ಮಾಡಲು ಬದ್ಧನಾಗತಕ್ಕದ್ದು;][3]

(ii) ವ್ಯಾಪಾರಿಯು ಉತ್ಪನ್ನವನ್ನು ನೇರವಾಗಿ ಉತ್ಪಾದಕರಿಂದ ಖರೀದಿ ಮಾಡಿದರೆ, ಅವನು ಸಮಿತಿಗೆ ಮಾರುಕಟ್ಟೆ ಫೀಜನ್ನು ಸಂದಾಯ ಮಾಡಲು ಬದ್ಧನಾಗತಕ್ಕದ್ದು;

(iii) ವ್ಯಾಪಾರಿಯು ಇನ್ನೊಬ್ಬ ವ್ಯಾಪಾರಿಯಿಂದ ಉತ್ಪನ್ನವನ್ನು ಖರೀದಿಸಿದರೆ ಉತ್ಪನ್ನವನ್ನು ಮಾರುವ ವ್ಯಾಪಾರಿಯು, ಮಾರುಕಟ್ಟೆ ಫೀಜನ್ನು ಖರೀದಿ ಮಾಡುವ ವ್ಯಾಪಾರಿಯಿಂದ ವಸೂಲ್ಮಾಡ[2][ತಕ್ಕದ್ದು][2] ಮತ್ತು ಅದನ್ನು ಸಮಿತಿಗೆ ಸಂದಾಯ ಮಾಡಲು ಬದ್ಧನಾಗತಕ್ಕದ್ದು;

(iv) ಅಂಥ ಉತ್ಪನ್ನದ ಇತರ ಯಾವುದೇ ಮಾರಾಟದ ಸಂದರ್ಭದಲ್ಲಿ ಖರೀದಿದಾರನು ಸಮಿತಿಗೆ ಮಾರುಕಟ್ಟೆ ಫೀಜನ್ನು ಸಂದಾಯ ಮಾಡಲು ಬದ್ಧನಾಗತಕ್ಕದ್ದು.][1]

1. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 19-5-1975ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

3. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(2ಬಿ) (2ಎ) ಉಪಪ್ರಕರಣದ (i), (iಎ), (ii) ಅಥವಾ (iii)ನೇ ಖಂಡಗಳ ಮೇರೆಗೆ ಸಂದಾಯವಾಗತಕ್ಕ ಮಾರುಕಟ್ಟೆ ಫೀಜನ್ನು, ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಮಾರುಕಟ್ಟೆ ಸಮಿತಿಗೆ ಸಂದಾಯ ಮಾಡತಕ್ಕದ್ದು.][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[2][[1][(3)][1]][2] [3][ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಯಾವುದೇ ಕೃಷಿ ಉತ್ಪನ್ನದ ಸಂಬಂಧದಲ್ಲಿ ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ (2)ನೇ ಉಪಪ್ರಕರಣದ ಅಡಿಯಲ್ಲಿ ಯಾವುದೇ ಮಾರುಕಟ್ಟೆ ಶುಲ್ಕವನ್ನು ರಾಜ್ಯದ ಯಾವುದೇ ಮಾರುಕಟ್ಟೆ ಸಮಿತಿಯು ಈಗಾಗಲೇ ವಿಧಿಸಿದ್ದರೆ ಮತ್ತು ಖರೀದಿದಾರನಿಂದ ಸಂಗ್ರಹಿಸಿದ್ದರೆ, ಮಾರುಕಟ್ಟೆ ಶುಲ್ಕವನ್ನು ಸಂಗ್ರಹಿಸಿರುವ ಬಗ್ಗೆ ನಿಯಮಿಸಬಹುದಾದ ಅಂತಹ ರುಜುವಾತನ್ನು ಹಾಜರುಪಡಿಸುವ ಷರತ್ತಿಗೊಳಪಟ್ಟು [4][XXX][4] ರಾಜ್ಯದ ಇತರೆ ಯಾವುದೇ ಮಾರುಕಟ್ಟೆ ಸಮಿತಿಯ ಅಂತಹ ಕೃಷಿ ಉತ್ಪನ್ನದ ಸಂಬಂಧದಲ್ಲಿ ಮಾರುಕಟ್ಟೆ ಶುಲ್ಕವನ್ನು ಪುನಃ ವಿಧಿಸತಕ್ಕದ್ದಲ್ಲ ಮತ್ತು ಸಂಗ್ರಹಿಸತಕ್ಕದ್ದಲ್ಲ.][3]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 19-5-1975ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 2001ರ ಅಧಿನಿಯಮ ಸಂಖ್ಯೆ 10ರ ಮೂಲಕ 7-4-2001ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

4. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(4) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಸರ್ಕಾರಿ ಆದೇಶ ಸಿಐ 319 ಎಸ್‌ಪಿಐ 2005, ದಿನಾಂಕ: 26ನೇ ಆಗಸ್ಟ್ 2006 ರಲ್ಲಿರುವ ಸರ್ಕಾರದ ಕೈಗಾರಿಕಾ ನೀತಿಯ ಅನ್ವಯ ಹೊಸ ಕೃಷಿ ಉತ್ಪನ್ನ ಸಂಸ್ಕರಣ ಕೈಗಾರಿಕೆಗಳು ತಾವು ಕೊಂಡುಕೊಂಡ ಕೃಷಿ ಉತ್ಪನ್ನಗಳಿಗೆ ಸಂಬಂಧಪಟ್ಟಂತೆ ಐದು ವರ್ಷಗಳ ಅವಧಿಯವರೆಗೆ ಯಾವ ಮಾರುಕಟ್ಟೆ ಶುಲ್ಕವನ್ನೂ ಸಂದಾಯ ಮಾಡಬೇಕಾಗಿಲ್ಲ][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**65ಎ. ದಂಡ ವಿಧಿಸಲು ಮಾರುಕಟ್ಟೆ ಸಮಿತಿಯ ಅಧಿಕಾರ.**- ಯಾವನೇ ವ್ಯಕ್ತಿಯು ನಿಗದಿತ ದಿನಾಂಕದಂದು ಅಥವಾ ಅದಕ್ಕಿಂತ ಮುಂಚೆ ಮಾರುಕಟ್ಟೆ ಸಮಿತಿಗೆ 65ನೇ ಪ್ರಕರಣದ (2ಎ) ಉಪಪ್ರಕರಣದ (i), (iಎ), (ii) ಅಥವಾ (iii) ನೇ ಖಂಡಗಳ ಮೇರೆಗೆ ತಾನು ಸಂದಾಯ ಮಾಡಬೇಕಾದ ಮಾರುಕಟ್ಟೆ ಫೀಜನ್ನು ಸಂದಾಯ ಮಾಡಲು ತಪ್ಪಿದಲ್ಲಿ [2][ಮಾರುಕಟ್ಟೆ ಸಮಿತಿಯು,][2] [3][XXX][3] ಸಂದಾಯವಾಗಬೇಕಾದ ಫೀಜಿನ ಜೊತೆಗೆ, ಉಪವಿಧಿಗಳಲ್ಲಿ ಗೊತ್ತುಪಡಿಸಬಹುದಾದಂತೆ ಬಾಕಿ ಇರುವ ಫೀಜಿನ ಶೇಕಡ ಮೂವತ್ತನ್ನು ಮೀರದಂಥ ಆದರೆ ಬಾಕಿ ಇರುವ ಫೀಜಿನ ಶೇಕಡ ಹನ್ನೆರಡಕ್ಕೆ ಕಡಿಮೆಯಿಲ್ಲದಂಥ ದರಗಳಲ್ಲಿ ಅಂಥ ವ್ಯಕ್ತಿಗೆ ದಂಡ ವಿಧಿಸ [2][ತಕ್ಕದ್ದು.][2]][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1987ರ ಅಧಿನಿಯಮ ಸಂಖ್ಯೆ 29ರ ಮೂಲಕ 10-8-1987 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

3. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**66. ಲೆಕ್ಕಗಳನ್ನು ಹಾಜರುಪಡಿಸುವಂತೆ ಆದೇಶಿಸಲು ಅಧಿಕಾರ ಮತ್ತು ಪ್ರವೇಶಿಸಲು, ಪರಿವೀಕ್ಷಿಸಲು ಮತ್ತು ವಶಪಡಿಸಿಕೊಳ್ಳಲು ಅಧಿಕಾರ.**- (1) ಈ ಸಂಬಂಧದಲ್ಲಿ [1][ರಾಜ್ಯ ಸರ್ಕಾರದಿಂದ ಅಧಿಕೃತನಾದ][1] ಯಾವನೇ ಅಧಿಕಾರಿಯ ಅಥವಾ ನೌಕರನು ಈ ಅಧಿನಿಯಮದ ಉದ್ದೇಶಗಳಿಗಾಗಿ ಯಾವುದೇ ಬಗೆಯ ಅಧಿಸೂಚಿತ ಕೃಷಿ ಉತ್ಪನ್ನದ ಸಂಬಂಧದಲ್ಲಿ ಯಾವುದೇ ವ್ಯವಹಾರವನ್ನು ನಡೆಸುತ್ತಿರುವ ಯಾವನೇ ವ್ಯಕ್ತಿಯು, ತನ್ನ ಮುಂದೆ ಲೆಕ್ಕಗಳು ಮತ್ತು ಇತರ ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ಮತ್ತು ಅಂಥ ಕೃಷಿ ಉತ್ಪನ್ನದ ದಾಸ್ತಾನಿಗೆ, ಅಂಥ ವ್ಯಕ್ತಿಯು ಮಾಡಿದ ಅಂಥ ಕೃಷಿ ಉತ್ಪನ್ನದ ಖರೀದಿ, ಮಾರಾಟಗಳು ಮತ್ತು ಬಟವಾಡೆಗಳಿಗೆ ಸಂಬಂಧಪಡುವ ಯಾವುದೇ ಮಾಹಿತಿಯನ್ನು ಮತ್ತು ಅಂಥ ವ್ಯಕ್ತಿಯು ಮಾರುಕಟ್ಟೆ ಫೀಜನ್ನು ಸಂದಾಯ ಮಾಡುವುದಕ್ಕೆ ಸಂಬಂಧಪಡುವ ಯಾವುದೇ ಇತರ ಮಾಹಿತಿಯನ್ನು ಸಹ ಒದಗಿಸುವಂತೆ ಅವನನ್ನು ಅಗತ್ಯಪಡಿಸಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಯಾವುದೇ ಅಧಿಸೂಚಿತ ಕೃಷಿ ಉತ್ಪನ್ನದ ಸಾಮಾನ್ಯ ವ್ಯವಹಾರದಲ್ಲಿ ಯಾವನೇ ವ್ಯಕ್ತಿಯು ನಿರ್ವಹಿಸುವ ಎಲ್ಲಾ ಲೆಕ್ಕಗಳು ಮತ್ತು ರಿಜಿಸ್ಟರುಗಳು ಮತ್ತು ಅವನ ಸ್ವಾಧೀನದಲ್ಲಿರುವ ಅಂತಹ ಕೃಷಿ ಉತ್ಪನ್ನಗಳ ಖರೀದಿ, ಮಾರಾಟ ಮತ್ತು ಬಟವಾಡೆಗಳಿಗೆ ಸಂಬಂಧಪಡುವ ದಸ್ತಾವೇಜುಗಳು ಮತ್ತು ಅಂತಹ ವ್ಯಕ್ತಿಯ ಕಚೇರಿಗಳು, ಕಾರ್ಯಸಂಸ್ಥೆಗಳು, ಗೋದಾಮುಗಳು, ನಾವೆಗಳು ಅಥವಾ ವಾಹನಗಳು, ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ಅಧಿಕೃತಗೊಳಿಸಬಹುದಾದಂಥ [1][XXX][1] ಅಧಿಕಾರಿಗಳ ಮತ್ತು ನೌಕರರ ಪರಿಶೀಲನೆಗೆ ಎಲ್ಲಾ ಸೂಕ್ತ ಸಮಯದಲ್ಲಿ ಮುಕ್ತವಾಗಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(3) ಯಾವನೇ ವ್ಯಕ್ತಿಯು 65ನೇ ಪ್ರಕರಣದ ಮೇರೆಗೆ, ಅವನಿಂದ ಬಾಕಿ ಇರುವ ಯಾವುದೇ ಮಾರುಕಟ್ಟೆ ಫೀಜಿನ ಸಂದಾಯದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆಂದು ಅಥವಾ ಯಾವನೇ ವ್ಯಕ್ತಿಯು ಮಾರುಕಟ್ಟೆ ಪ್ರದೇಶದಲ್ಲಿ ಜಾರಿಯಲ್ಲಿರುವ ಈ ಅಧಿನಿಯಮದ ಅಥವಾ ನಿಯಮಗಳ ಅಥವಾ ಉಪವಿಧಿಗಳ ಯಾವುವೇ ಉಪಬಂಧಗಳನ್ನು ಉಲ್ಲಂಘಿಸಿ ಯಾವುದೇ ಅಧಿಸೂಚಿತ ಕೃಷಿ ಉತ್ಪನ್ನವನ್ನು ಖರೀದಿಸಿದ್ದಾನೆಂದು ಯಾವನೇ ಅಂಥ ಅಧಿಕಾರಿ ಅಥವಾ ನೌಕರನು, ಸಕಾರಣವಾಗಿ ಸಂಶಯಪಟ್ಟರೆ ಅವನು ಕಾರಣಗಳನ್ನು ದಾಖಲ್ಮಾಡಿ ಪರೀಕ್ಷಿಸಲು ಅಥವಾ ಕಾನೂನು ಕ್ರಮ ಜರುಗಿಸಲು ಅವಶ್ಯಕವಾಗಬಹುದಾದಂತಹ ಆ ವ್ಯಕ್ತಿಯ ಅಂಥ ಲೆಕ್ಕಗಳನ್ನು, ರಿಜಿಸ್ಟರುಗಳನ್ನು ಅಥವಾ ದಸ್ತಾವೇಜುಗಳನ್ನು ವಶಪಡಿಸಿಕೊಳ್ಳಬಹುದು.

(4) (2)ನೇ ಉಪಪ್ರಕರಣದ ಅಥವಾ (3)ನೇ ಉಪಪ್ರಕರಣದ ಉದ್ದೇಶಕ್ಕಾಗಿ ಅಂಥ ವ್ಯಕ್ತಿಯು, ತನ್ನ ವ್ಯವಹಾರದ ಯಾವುದೇ ಲೆಕ್ಕಪತ್ರಗಳನ್ನು, ರಿಜಿಸ್ಟರುಗಳನ್ನು ಅಥವಾ ದಸ್ತಾವೇಜುಗಳನ್ನು ಅಥವಾ ಅವನ ವ್ಯವಹಾರಕ್ಕೆ ಸಂಬಂಧಿಸಿದ ಅಧಿಸೂಚಿತ ಕೃಷಿ ಉತ್ಪನ್ನದ ದಾಸ್ತಾನುಗಳನ್ನು ಸಾಮಾನ್ಯವಾಗಿ ಇಡುವನೆಂದು ಅಥವಾ ತತ್ಕಾಲದಲ್ಲಿ ಇಟ್ಟಿರುವನೆಂದು, ಅಂಥ ಅಧಿಕಾರಿಗೆ ಅಥವಾ ನೌಕರನಿಗೆ ನಂಬಲು ಕಾರಣಗಳಿರುವ ವ್ಯವಹಾರದ ಯಾವುದೇ ಸ್ಥಳವನ್ನು, ಉಗ್ರಾಣವನ್ನು, ಕಚೇರಿಯನ್ನು, ಕಾರ್ಯಸಂಸ್ಥೆಯನ್ನು, ಗೋದಾಮನ್ನು, ನಾವೆಯನ್ನು ಅಥವಾ ವಾಹನವನ್ನು ಪ್ರವೇಶಿಸಬಹುದು ಅಥವಾ ಅದನ್ನು ಶೋಧಿಸಬಹುದು.

(5) (4)ನೇ ಉಪಪ್ರಕರಣದ ಮೇರೆಗಿನ ಅಂಥ ಶೋಧನೆಗೆ [1][1973ರ ದಂಡ ಪ್ರಕ್ರಿಯಾ ಸಂಹಿತೆಯ (1974ರ ಕೇಂದ್ರಾಧಿನಿಯಮ 2) 100ನೇ ಪ್ರಕರಣದ][1] ಉಪಬಂಧಗಳು ಸಾಧ್ಯವಾದಷ್ಟು ಮಟ್ಟಿಗೆ ಅನ್ವಯವಾಗತಕ್ಕದ್ದು.

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(6) ಯಾವುದೇ ಅಂಥ ಸ್ಥಳದಿಂದ ಯಾವುವೇ ಲೆಕ್ಕ ಪುಸ್ತಕಗಳನ್ನು ಅಥವಾ ಇತರ ದಸ್ತಾವೇಜುಗಳನ್ನು ಹಾಗೆ ವಶಪಡಿಸಿಕೊಂಡಿರುವಲ್ಲಿ ಮತ್ತು ಅವುಗಳಲ್ಲಿ ಪರಿಮಾಣ, ಕೊಟೇಷನ್‌ಗಳು, ದರಗಳು, ಹಣದ ಸ್ವೀಕೃತಿ ಅಥವಾ ಸಂದಾಯ ಅಥವಾ ಸರಕುಗಳ ಮಾರಾಟ ಅಥವಾ ಖರೀದಿಗೆ ಸಂಬಂಧಿಸಿದ ನಮೂದುಗಳು ಇದ್ದಲ್ಲಿ ಅಂಥ ಲೆಕ್ಕ ಪುಸ್ತಕಗಳು ಅಥವಾ ಇತರ ದಸ್ತಾವೇಜುಗಳನ್ನು ರುಜುವಾತುಪಡಿಸಲು ಸಾಕ್ಷಿದಾರನ ಹಾಜರಾತಿಯ ಅಗತ್ಯವಿಲ್ಲದೆ ಅವುಗಳನ್ನು ಸಾಕ್ಷ್ಯವಾಗಿ ಅಂಗೀಕರಿಸತಕ್ಕದ್ದು ಮತ್ತು ಅಂಥ ನಮೂದುಗಳು, ಅವುಗಳಲ್ಲಿ ದಾಖಲಾಗಿರುವುದಾಗಿ ತಾತ್ಪರ್ಯವಾಗುವ ವಿಷಯಗಳು, ವ್ಯವಹಾರಗಳು ಮತ್ತು ಲೆಕ್ಕಪತ್ರಗಳ ಬಗ್ಗೆ ಮೇಲ್ನೋಟದ ಸಾಕ್ಷ್ಯವಾಗತಕ್ಕದ್ದು.

[1][(7) ಯಾವನೇ ವ್ಯಕ್ತಿಯು, 65ನೇ ಪ್ರಕರಣದ ಮೇರೆಗೆ ತಾನು ಕೊಡಬೇಕಾದ ಮಾರುಕಟ್ಟೆ ಫೀಜನ್ನು ಸಂದಾಯ ಮಾಡಲು ತಪ್ಪಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾನೆಂದು ಅಂಥ ಅಧಿಕಾರಿಯು ಅಥವಾ ನೌಕರನು ಸಂದೇಹಪಡಲು ಕಾರಣವಿದ್ದರೆ, ಅವನು, 3ನೇ ಉಪಪ್ರಕರಣದ ಮೇರೆಗೆ ಲೆಕ್ಕಪತ್ರಗಳನ್ನು, ರಿಜಿಸ್ಟರುಗಳನ್ನು ಅಥವಾ ದಸ್ತಾವೇಜುಗಳನ್ನು ವಶಪಡಿಸಿಕೊಳ್ಳುವಾಗ, ಅಂಥ ವ್ಯಕ್ತಿಯಿಂದ ಬಾಕಿ ಇರುವುದೆಂದು ಕಂಡು ಬಂದ ಫೀಜಿನ ಮೊಬಲಗನ್ನು ಮತ್ತು 65ಎ ಪ್ರಕರಣದ ಮೇರೆಗೆ ವಿಧಿಸಬಹುದಾದ ದಂಡಕ್ಕೆ ಸಮನಾಗುತ್ತದೆಂದು ತಾನು ಅಭಿಪ್ರಾಯಪಡುವಷ್ಟು ಅಧಿಸೂಚಿತ ಕೃಷಿ ಉತ್ಪನ್ನವನ್ನೂ ಸಹ ಅವನು ವಶಪಡಿಸಿಕೊಳ್ಳಬಹುದು. ಮತ್ತು ಅಂಥ ಫೀಜನ್ನು ಮತ್ತು ದಂಡದ ಮೊಬಲಗನ್ನು ಸಂದಾಯ ಮಾಡುವವರೆಗೆ ಅಥವಾ ಹತ್ತು ದಿನಗಳವರೆಗೆ ಇವೆರಡರಲ್ಲಿ ಯಾವುದು ಮುಂಚಿತವೊ ಅಲ್ಲಿಯವರೆಗೆ ಅದನ್ನು ತನ್ನ ಬಳಿ ಇಟ್ಟುಕೊಳ್ಳಬಹುದು. ಹತ್ತು ದಿನಗಳ ಅವಧಿ ಮುಗಿದ ಅನಂತರ ಬಾಕಿ ಇದ್ದ ಫೀಜನ್ನು ಅಥವಾ ಇತರೆ ಮೊತ್ತವನ್ನು ಸಂದಾಯ ಮಾಡಿರದಿದ್ದರೆ, ಆ ಅಧಿಕಾರಿ ಅಥವಾ ನೌಕರನು ಆ ಅಧಿಸೂಚಿತ ಕೃಷಿ ಉತ್ಪನ್ನವನ್ನು ಬಹಿರಂಗ ಹರಾಜಿನಲ್ಲಿ ವಿಲೆ ಮಾಡತಕ್ಕದ್ದು ಮತ್ತು ಮಾರಾಟದ ಉತ್ಪತ್ತಿಯನ್ನು ಬಾಕಿ ಇರುವ ಫೀಜಿನ ಅಥವಾ ಇತರೆ ಮೊತ್ತದ ಲೆಕ್ಕಕ್ಕೆ ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು. ಮಾರಾಟದ ಉತ್ಪತ್ತಿಯು, ಬಾಕಿ ಇದ್ದ ಫೀಜಿಗಿಂತ ಅಥವಾ ಇತರೆ ಮೊತ್ತಕ್ಕಿಂತ ಹೆಚ್ಚಾಗಿದ್ದರೆ, ಮಾರುಕಟ್ಟೆ ಸಮಿತಿಯು ಮಾಡಿದ ಖರ್ಚುಗಳನ್ನು ಮುರಿದುಕೊಂಡ ತರುವಾಯ ಉಳಿದ ಮೊತ್ತವನ್ನು ಗೊತ್ತುಪಡಿಸಿದ ರೀತಿಯಲ್ಲಿ ಮರುಪಾವತಿ ಮಾಡತಕ್ಕದ್ದು:

ಪರಂತು, ಬೇಗನೆ ಕೆಟ್ಟುಹೋಗುವ ಅಧಿಸೂಚಿತ ಕೃಷಿ ಉತ್ಪನ್ನದ ಸಂದರ್ಭದಲ್ಲಿ ಅದನ್ನು ಹತ್ತು ದಿನಗಳ ಅವಧಿಯೊಳಗಾಗಿ ವಿಲೆ ಮಾಡುವುದು ಅವಶ್ಯಕವೆಂದು ಆ ಅಧಿಕಾರಿಯು ಅಥವಾ ನೌಕರನು ಅಭಿಪ್ರಾಯಪಟ್ಟರೆ, ಅವನು ಅಂಥ ಅವಧಿಯೊಳಗಾಗಿ ಹಾಗೆ ವಿಲೆ ಮಾಡಬಹುದು.][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**67. ವಾಹನ ಮುಂತಾದವುಗಳನ್ನು ನಿಲ್ಲಿಸುವುದಕ್ಕೆ ಅಧಿಕಾರ.**– (1) [1][ಈ ಬಗ್ಗೆ ರಾಜ್ಯ ಸರ್ಕಾರದಿಂದ ಅಧಿಕಾರ ಪಡೆದ][1] ಅದರ ಯಾವನೇ ಅಧಿಕಾರಿಯು ಅಥವಾ ನೌಕರನು [1][ಮಾರುಕಟ್ಟೆ ಪ್ರದೇಶದ ಹೊರಗೆ ತೆಗೆದುಕೊಂಡು ಹೋಗುವ ಅಥವಾ ಒಳಗೆ ತೆಗೆದುಕೊಂಡು ಬರುವ][1] ಯಾವುದೇ ವಾಹನ, ನೌಕೆ ಅಥವಾ ಇತರ ಸಾರಿಗೆ ಸಾಧನದ ಪ್ರಭಾರದಲ್ಲಿರುವ ಚಾಲಕನನ್ನು ಅಥವಾ ಯಾವನೇ ಇತರ ವ್ಯಕ್ತಿಯನ್ನು ಸಂದರ್ಭಾನುಸಾರ ಆ ವಾಹನ, ನೌಕೆ ಅಥವಾ ಇತರ ಸಾರಿಗೆ ಸಾಧನವನ್ನು ನಿಲ್ಲಿಸತಕ್ಕದ್ದೆಂದು ಯಾವುದೇ ಸಮಯದಲ್ಲಿ ಅಗತ್ಯಪಡಿಸಿದರೆ ಅವನು ಅದನ್ನು ನಿಲ್ಲಿಸತಕ್ಕದ್ದು ಮತ್ತು ಅವಶ್ಯವಿರುವವರೆಗೆ ಅದನ್ನು ಹಾಗೆ ನಿಲ್ಲಿಸಿಕೊಂಡಿರತಕ್ಕದ್ದು ಮತ್ತು ಆ ವಾಹನ, ನೌಕೆ ಅಥವಾ ಇತರ ಸಾರಿಗೆ ಸಾಧನದ ಒಳಗಿರುವ ವಸ್ತುವನ್ನು ಪರೀಕ್ಷಿಸಲು ಮತ್ತು ಅದರಲ್ಲಿ ಸಾಗಿಸಲಾಗುತ್ತಿರುವ ಅಧಿಸೂಚಿತ ಕೃಷಿ ಉತ್ಪನ್ನಕ್ಕೆ ಸಂಬಂಧಪಡುವ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲು ಅಂಥ ಅಧಿಕಾರಿಗೆ ಅಥವಾ ನೌಕರನಿಗೆ ಅವಕಾಶ ಮಾಡಿಕೊಡತಕ್ಕದ್ದು ಮತ್ತು ತನ್ನ ಹೆಸರು ಮತ್ತು ವಿಳಾಸವನ್ನು ಮತ್ತು ಆ ವಾಹನದ, ನೌಕೆಯ ಅಥವಾ ಇತರ ಸಾರಿಗೆ ಸಾಧನದ ಮಾಲೀಕನ ಮತ್ತು ಅಂಥ ವಾಹನದಲ್ಲಿ, ನೌಕೆಯಲ್ಲಿ ಅಥವಾ ಇತರ ಸಾರಿಗೆ ಸಾಧನದಲ್ಲಿ ಸಾಗಿಸಲಾಗುವ ಅಧಿಸೂಚಿತ ಕೃಷಿ ಉತ್ಪನ್ನದ ಮಾಲೀಕನ ಹೆಸರು ಮತ್ತು ವಿಳಾಸಗಳನ್ನು ನೀಡತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(2) ಯಾವುದೇ ವಾಹನದಲ್ಲಿ, ನೌಕೆಯಲ್ಲಿ ಅಥವಾ ಇತರೆ ಸಾಗಣೆ ವಾಹನದಲ್ಲಿ ಮಾರುಕಟ್ಟೆ ಪ್ರದೇಶದಿಂದ ಹೊರಗೆ ತೆಗೆದುಕೊಂಡು ಹೋದ ಅಥವಾ ಮಾರುಕಟ್ಟೆ ಪ್ರದೇಶದೊಳಕ್ಕೆ ಸಾಗಿಸುತ್ತಿರುವ ಅಧಿಸೂಚಿತ ಕೃಷಿ ಉತ್ಪನ್ನಕ್ಕೆ, ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾಗಿರುವ ಯಾವುದೇ ಫೀಜು ಅಥವಾ ಇತರೆ ಮೊತ್ತವು ಸಂದಾಯವಾಗಿಲ್ಲವೆಂದು ಅಂಥ ಅಧಿಕಾರಿ ಅಥವಾ ನೌಕರನು ಸಂದೇಹಪಡಲು ಕಾರಣವಿದ್ದರೆ ಅವನು, ಕೊಡಬೇಕಾಗಿದ್ದ ಫೀಜು ಮತ್ತು ಇತರೆ ಮೊತ್ತಕ್ಕೆ ಸಮನಾಗುತ್ತದೆಯೆಂದು ತಾನು ಅಭಿಪ್ರಾಯಪಡುವಷ್ಟು ಅಧಿಸೂಚಿತ ಕೃಷಿ ಉತ್ಪನ್ನವನ್ನು ಅವನು ವಶಪಡಿಸಿಕೊಳ್ಳಬಹುದು ಮತ್ತು ಅದನ್ನು ಫೀಜು ಅಥವಾ ಇತರ ಮೊತ್ತವು ಸಂದಾಯವಾಗುವವರೆಗೆ ಅಥವಾ ಹತ್ತು ದಿನಗಳವರೆಗೆ, ಇವುಗಳಲ್ಲಿ ಯಾವುದು ಮುಂಚಿತವೋ ಅಲ್ಲಿಯವರೆಗೆ ತನ್ನ ಬಳಿ ಇಟ್ಟುಕೊಳ್ಳಬಹುದು ಮತ್ತು ಸಂದಾಯವಾಗಬೇಕಾಗಿದ್ದ ಫೀಜು ಅಥವಾ ಇತರ ಮೊತ್ತವು ಸಂದಾಯವಾಗದಿದ್ದರೆ, ಆ ಅಧಿಕಾರಿಯು ಅಥವಾ ನೌಕರನು ಆ ಅಧಿಸೂಚಿತ ಕೃಷಿ ಉತ್ಪನ್ನವನ್ನು ಬಹಿರಂಗ ಹರಾಜಿನಲ್ಲಿ ವಿಲೆ ಮಾಡತಕ್ಕದ್ದು ಮತ್ತು ಮಾರಾಟದ ಉತ್ಪತ್ತಿಯನ್ನು ಸಂದಾಯವಾಗಬೇಕಾಗಿದ್ದ ಫೀಜಿನ ಅಥವಾ ಇತರ ಮೊತ್ತದ ಲೆಕ್ಕಕ್ಕೆ ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು. ಮಾರಾಟದ ಉತ್ಪತ್ತಿಯು, ಸಂದಾಯವಾಗಬೇಕಾಗಿದ್ದ ಫೀಜಿಗಿಂತ ಅಥವಾ ಇತರೆ ಮೊತ್ತಕ್ಕಿಂತ ಹೆಚ್ಚಾಗಿದ್ದರೆ, ಮಾರುಕಟ್ಟೆ ಸಮಿತಿಯು, ಮಾಡಿದ ಖರ್ಚುಗಳನ್ನು ಮುರಿದುಕೊಂಡ ತರುವಾಯ ಉಳಿದ ಮೊತ್ತವನ್ನು ಗೊತ್ತುಪಡಿಸಿದ ರೀತಿಯಲ್ಲಿ ಮರುಪಾವತಿ ಮಾಡತಕ್ಕದ್ದು:

ಪರಂತು, ಬೇಗನೆ ಕೆಟ್ಟುಹೋಗುವ ಅಧಿಸೂಚಿತ ಕೃಷಿ ಉತ್ಪನ್ನದ ಸಂದರ್ಭದಲ್ಲಿ ಅದನ್ನು ಹತ್ತು ದಿನಗಳ ಅವಧಿಯೊಳಗೆ ವಿಲೆ ಮಾಡುವುದು ಅವಶ್ಯವೆಂದು ಆ ಅಧಿಕಾರಿ ಅಥವಾ ನೌಕರನು ಅಭಿಪ್ರಾಯಪಟ್ಟರೆ ಅವನು ಅಂಥ ಅವಧಿಯೊಳಗೆ ಹಾಗೆ ವಿಲೆ ಮಾಡಬಹುದು.][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**68. ಸಾಲ ತೆಗೆದುಕೊಳ್ಳುವ ಅಧಿಕಾರ.**– (1) ಮಾರುಕಟ್ಟೆ ಸಮಿತಿಯು ಅದನ್ನು ಯಾವ ಉದ್ದೇಶಕ್ಕಾಗಿ ಸ್ಥಾಪಿಸಲಾಗಿರುವುದೋ ಆ ಉದ್ದೇಶಗಳನ್ನು ಈಡೇರಿಸಲು ಅಗತ್ಯವಾದ ಹಣವನ್ನು [1][ಕೃಷಿ ಮಾರುಕಟ್ಟೆ ನಿರ್ದೇಶಕನ ಪೂರ್ವ ಮಂಜೂರಾತಿ ಪಡೆದು][1] ತನ್ನಲ್ಲಿ ನಿಹಿತವಾದ ಯಾವುದೇ ಸ್ವತ್ತಿನ ಮತ್ತು ಈ ಅಧಿನಿಯಮದ ಮೇರೆಗೆ ತಾನು ವಿಧಿಸುವಂಥ ಫೀಜಿನ ಭದ್ರತೆಯ ಮೇಲೆ [1][ಮಂಡಲಿಯಿಂದ ಅಥವಾ ಅನುಸೂಚಿತ ಬ್ಯಾಂಕಿನಿಂದ ಅಥವಾ ಯಾವುದೇ ಇತರ ಸಾರ್ವಜನಿಕ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆಯಬಹುದು.][1]

[2][(2)XXX

(3)XXX][2]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**69. ಭೂ ಸ್ವಾಧೀನ.**– (1) 4ನೇ ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಹೊರಡಿಸಿದ ತರುವಾಯ ಯಾವುದೇ ಕಾಲದಲ್ಲಿ, ಮಾರುಕಟ್ಟೆ ಸಮಿತಿಯು [1][ಅಥವಾ ಮಂಡಲಿಯು][1] ಅಥವಾ ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳಿಗಾಗಿ ಯಾವುದೇ ಭೂಮಿ ಅಗತ್ಯವಾಗಿದೆ ಎಂದು ಅಭಿಪ್ರಾಯಪಟ್ಟಲ್ಲಿ, ರಾಜ್ಯ ಸರ್ಕಾರವು, 1894ರ ಭೂ ಸ್ವಾಧೀನ ಅಧಿನಿಯಮದ ಉಪಬಂಧಗಳ ಮೇರೆಗೆ ಅದನ್ನು ಆರ್ಜಿಸಲು ಕ್ರಮ ಕೈಕೊಳ್ಳಬಹುದು:

ಪರಂತು, ಮಾರುಕಟ್ಟೆ ಸಮಿತಿಯು [1][ಅಥವಾ ಮಂಡಲಿಯು][1] ಒಮ್ಮೆ ಪ್ರಸ್ತಾವವನ್ನು ಮಾಡಿದ ತರುವಾಯ ಅದನ್ನು ರಾಜ್ಯ ಸರ್ಕಾರವು ಅನುಮೋದಿಸಬಹುದಾದಂಥ ಕಾರಣಗಳ ನಿಮಿತ್ತ ಹೊರತು ಹಿಂತೆಗೆದುಕೊಳ್ಳತಕ್ಕದ್ದಲ್ಲ:

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][ಮತ್ತೂ ಪರಂತು, ಗ್ರಾಮಗಳಲ್ಲಿ ಸಂತೆಗಳನ್ನು ನಡೆಸುವ ಬಗ್ಗೆ ಮತ್ತು ಅವುಗಳ ಅಭಿವೃದ್ಧಿಯ ಬಗ್ಗೆ ಭೂಮಿಯನ್ನು ಅಥವಾ ಇತರ ಸೌಲಭ್ಯಗಳನ್ನು ಒದಗಿಸಲು ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರಕ್ಕೆ ಸಾಧ್ಯವಾಗದಿದ್ದರೆ ರಾಜ್ಯ ಸರ್ಕಾರವು ಆ ಉದ್ದೇಶಕ್ಕಾಗಿ ಭೂಮಿಯನ್ನು ಆರ್ಜಿಸಬಹುದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಅಂಥ ಭೂಮಿಯು ರಾಜ್ಯ ಸರ್ಕಾರದಲ್ಲಿ ನಿಹಿತವಾದ ಭೂಮಿಯಾಗಿದ್ದರೆ, 1894ರ ಭೂಸ್ವಾಧೀನ ಅಧಿನಿಯಮದ ಮೇರೆಗೆ ನೀಡಲಾಗುವ ನಷ್ಟ ಪರಿಹಾರವನ್ನು ರಾಜ್ಯ ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ಧರಿಸಬಹುದಾದಂಥ ಅವಧಿಯೊಳಗೆ ಮತ್ತು ಅಂಥ ರೀತಿಯಲ್ಲಿ ಮಾರುಕಟ್ಟೆ ಸಮಿತಿಯು [1][ಅಥವಾ ಮಂಡಲಿಯು][1] ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡಿದ ಮೇಲೆ ಆ ಭೂಮಿಯು ಮಾರುಕಟ್ಟೆ ಸಮಿತಿಗೆ [1][ಅಥವಾ ಮಂಡಲಿಗೆ][1] ರಾಜ್ಯ ಸರ್ಕಾರದಿಂದ ವರ್ಗಾವಣೆಯಾಗತಕ್ಕದ್ದು ಮತ್ತು ಅಂಥ ವರ್ಗಾವಣೆಯಾದ ಮೇಲೆ ಆ ಭೂಮಿಯು ಮಾರುಕಟ್ಟೆ ಸಮಿತಿಯಲ್ಲಿ [1][ಅಥವಾ ಮಂಡಲಿ][1] ಯಲ್ಲಿ ನಿಹಿತವಾಗತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**70. ಅಪರಾಧಗಳ ಬಗ್ಗೆ ರಾಜಿ ಮಾಡಿಕೊಳ್ಳುವುದು.**- (1) ಮಾರುಕಟ್ಟೆ ಸಮಿತಿಯು [1][ಅಥವಾ 66ನೇ ಅಥವಾ 67ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ಅಧಿಕೃತಗೊಳಿಸಿದ ಯಾವನೇ ಅಧಿಕಾರಿಯು ಅಥವಾ ನೌಕರನು,][1] ಈ ಅಧಿನಿಯಮದ ಅಥವಾ ನಿಯಮಗಳ ಅಥವಾ ಉಪವಿಧಿಗಳ ವಿರುದ್ಧ (ನಿಯಮಿಸಬಹುದಾದಂಥ ಅಪರಾಧಗಳ ಹೊರತಾಗಿ) ಒಂದು ಅಪರಾಧವನ್ನು ಮಾಡಿರುವ ಅಥವಾ ಅಪರಾಧವನ್ನು ಮಾಡಿರಬಹುದೆಂದು ಸಕಾರಣವಾಗಿ ಸಂಶಯಪಡಬಹುದಾದ ವ್ಯಕ್ತಿಯ ಕಡೆಯಿಂದ,-

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಎ) ಆ ಅಪರಾಧವು ಈ ಅಧಿನಿಯಮದ ಅಥವಾ ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ, ವಸೂಲ್ಮಾಡತಕ್ಕ ಫೀಜಿನ ಅಥವಾ ಇತರ ಮೊಬಲಗಿನ ಸಂದಾಯ ಮಾಡದಿರುವುದನ್ನು ಅಥವಾ ಸಂದಾಯ ತಪ್ಪಿಸಿರುವುದನ್ನು ಒಳಗೊಂಡಿದ್ದಲ್ಲಿ, ಹಾಗೆ ವಸೂಲ್ಮಾಡತಕ್ಕ ಫೀಜಿನ ಅಥವಾ ಇತರ ಮೊಬಲಗಿನ ಜೊತೆಗೆ ಐದುನೂರು ರೂಪಾಯಿ ಮೀರದ ಮೊತ್ತ ಅಥವಾ ಫೀಜಿನ ಅಥವಾ ಇತರ ಮೊಬಲಗಿನ [1][ಮೂರು ಪಟ್ಟಿನಷ್ಟು ಮೊತ್ತ][1] ಇವುಗಳಲ್ಲಿ ಯಾವುದು ಹೆಚ್ಚೋ ಆ ಮೊತ್ತವನ್ನು; ಮತ್ತು

(ಬಿ) ಇತರ ಸಂದರ್ಭಗಳಲ್ಲಿ ಐದುನೂರು ರೂಪಾಯಿಗಳಿಗೆ ಮೀರದ ಮೊತ್ತವನ್ನು

- ಅಂಥ ಅಪರಾಧದ ಬಗ್ಗೆ ರಾಜಿ ಮಾಡಿಕೊಳ್ಳುವ ರೂಪದಲ್ಲಿ ಸ್ವೀಕರಿಸಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) (1)ನೇ ಉಪಪ್ರಕರಣದ ಮೇರೆಗೆ ಯಾವುದೇ ಅಪರಾಧದ ಬಗ್ಗೆ ರಾಜಿ ಮಾಡಿಕೊಂಡ ಮೇಲೆ, ಅಂಥ ಅಪರಾಧಗಳ ಸಂಬಂಧದಲ್ಲಿ ಸಂಬಂಧಪಟ್ಟ ವ್ಯಕ್ತಿಯ ವಿರುದ್ಧ ವ್ಯವಹರಣೆಯನ್ನು ಹೂಡತಕ್ಕದ್ದಲ್ಲ ಅಥವಾ ಮುಂದುವರಿಸತಕ್ಕದ್ದಲ್ಲ ಮತ್ತು ಅವನ ವಿರುದ್ಧ ನ್ಯಾಯಾಲಯದಲ್ಲಿ ಆ ಅಪರಾಧದ ಸಂಬಂಧದಲ್ಲಿ ಈ ಮೊದಲೇ ಹೂಡಲಾಗಿರುವ ಯಾವುದೇ ವ್ಯವಹರಣೆಯು ಇದ್ದರೂ ಸಹ ಆ ರಾಜಿಯ ಪರಿಣಾಮವಾಗಿ ಅವನು ದೋಷಮುಕ್ತನಾಗತಕ್ಕದ್ದು.

[1][**71. ವಸೂಲು ಮಾಡಲಾಗದ ಮೊಬಲಗನ್ನು ಮನ್ನಾ ಮಾಡುವ ಅಧಿಕಾರ:**- ಕರಾರು ಮೂಲಕ ಅಥವಾ ಅನ್ಯಥಾ ಮಾರುಕಟ್ಟೆ ಸಮಿತಿಗೆ ಬರಬೇಕಾದ (ಮಾರುಕಟ್ಟೆ ಫೀಜನ್ನು ಹೊರತುಪಡಿಸಿ ಯಾವುದೇ ಇತರ ಮೊಬಲಗು) ಯಾವುದೇ ಬಗೆಯ ಮೊಬಲಗು ಅಥವಾ ಆ ಸಂಬಂಧದಲ್ಲಿ ಸಂದಾಯವಾಗತಕ್ಕ ಇತರ ಮೊಬಲಗು ಸಮಿತಿಯ ಅಭಿಪ್ರಾಯದಲ್ಲಿ ವಸೂಲಾಗದ ಮೊಬಲಗು ಆಗಿದ್ದರೆ ಆ ಮೊಬಲಗನ್ನು ಮನ್ನಾ ಮಾಡಬಹುದು:

ಪರಂತು, ಮಾರುಕಟ್ಟೆ ಸಮಿತಿಯು ಯಾವುದೇ ಅಂಥ ಮೊಬಲಗನ್ನು ಮನ್ನಾ ಮಾಡುವ ಮೊದಲು,-

(i) ಆ ಮೊಬಲಗು ಐದು ನೂರು ರೂಪಾಯಿಗಳನ್ನು ಮೀರಿದ್ದರೆ, ಆದರೆ ಐದು ಸಾವಿರ ರೂಪಾಯಿಗಳನ್ನು ಮೀರದಿದ್ದರೆ, ಕೃಷಿ ಮಾರುಕಟ್ಟೆ ನಿರ್ದೇಶಕನ ಮಂಜೂರಾತಿಯನ್ನು;

(ii) ಅಂಥ ಮೊಬಲಗು ಐದು ಸಾವಿರ ರೂಪಾಯಿಗಳನ್ನು ಮೀರಿದರೆ, ರಾಜ್ಯ ಸರ್ಕಾರದ ಮಂಜೂರಾತಿಯನ್ನು

- ಪಡೆಯತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ–VII
## ವ್ಯಾಪಾರದ ವಿನಿಯಮ

**72. ಲೈಸನ್ಸ್‌ಗಳ ನೀಡಿಕೆ.–** (1) ಈ ಅಧಿನಿಯಮದ ಮತ್ತು ಈ ಸಂಬಂಧದಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಿಗೊಳಪಟ್ಟು, ಮಾರುಕಟ್ಟೆ ಸಮಿತಿಯು [1][ಯಾವನೇ ವ್ಯಕ್ತಿಯು ಗೊತ್ತುಪಡಿಸಬಹುದಾದ ನಮೂನೆಯಲ್ಲಿ ಸಲ್ಲಿಸಿದ ಅರ್ಜಿಯ ಮೇಲೆ ಮತ್ತು][1] ಅದು ಸೂಕ್ತವೆಂದು ಭಾವಿಸುವಂಥ ವಿಚಾರಣೆ ನಡೆಸಿದ ಅನಂತರ ಅಧಿಸೂಚಿತ ಕೃಷಿ ಉತ್ಪನ್ನವನ್ನು ಮಾರಾಟ ಮಾಡಲು ಅಥವಾ ಮಾರುಕಟ್ಟೆಯಲ್ಲಿ ವ್ಯಾಪಾರಿ, ಕಮೀಷನ್ ಏಜೆಂಟ್, ದಲ್ಲಾಳಿ, ಸಂಸ್ಕರಣಕಾರ, ತೂಕಕಾರ, ಅಳತೆಕಾರ, ಸರ್ವೇಯರ್, ಉಗ್ರಾಣಕಾರ ಅಥವಾ ಕೃಷಿ ಉತ್ಪನ್ನದ ಮಾರುಕಟ್ಟೆ ವ್ಯವಹಾರಕ್ಕೆ ಸಂಬಂಧಿಸಿದ ಯಾವನೇ ಇತರ ಮಾರುಕಟ್ಟೆ ಕಾರ್ಯನಿರ್ವಾಹಕನಾಗಿ ವ್ಯವಹರಿಸಲು ಮಾರುಕಟ್ಟೆ ಪ್ರದೇಶದಲ್ಲಿ ಯಾವುದೇ ಸ್ಥಳದ ಉಪಯೋಗಕ್ಕೆ ಲೈಸನ್ಸ್ ನೀಡಬಹುದು ಅಥವಾ ಅದನ್ನು ನವೀಕರಿಸಬಹುದು ಅಥವಾ ಅಂಥ ಯಾವುದೇ ಲೈಸನ್ಸ್ ನೀಡಿಕೆ ಅಥವಾ ನವೀಕರಣವನ್ನು ನಿರಾಕರಿಸುವ ಬಗ್ಗೆ ತನ್ನ ಕಾರಣಗಳನ್ನು ದಾಖಲು ಮಾಡಿ ಹಾಗೆ ನಿರಾಕರಿಸಬಹುದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-4-1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) (1)ನೇ ಉಪಪ್ರಕರಣದ ಮೇರೆಗೆ ನೀಡಬಹುದಾದ ಲೈಸನ್ಸುಗಳನ್ನು ಗೊತ್ತುಪಡಿಸಬಹುದಾದಂಥ ನಮೂನೆಗಳಲ್ಲಿ, ಅಂಥ ಅವಧಿಗೆ, ಅಂಥ ನಿಬಂಧನೆಗಳು ಮತ್ತು ಷರತ್ತುಗಳು ಮತ್ತು ನಿರ್ಬಂಧಗಳ ಮೇಲೆ ಮತ್ತು ಗೊತ್ತುಪಡಿಸಬಹುದಾದಂಥ ಗರಿಷ್ಠ ಮಿತಿಯನ್ನು ಮೀರದ ಫೀಜುಗಳ ಸಂದಾಯ ಮಾಡಿದ ಮೇಲೆ ನೀಡಬಹುದು ಮತ್ತು ಅಂಥ ನಿರ್ಬಂಧಗಳಲ್ಲಿ ಯಾವುದೇ ವ್ಯವಹಾರದಲ್ಲಿ ಖರೀದಿದಾರನಾಗಿ ಅಥವಾ ಮಾರಾಟಗಾರನಾಗಿ ಅಥವಾ ಖರೀದಿದಾರ ಅಥವಾ ಮಾರಾಟಗಾರ ಇವರಿಬ್ಬರ ಪರವಾಗಿ ಕಾರ್ಯ ಮಾಡದಂತೆ ದಲ್ಲಾಳಿಗಳನ್ನು ಮತ್ತು ಕಮೀಷನ್ ಏಜೆಂಟರನ್ನು ನಿಷೇಧಿಸುವ ಉಪಬಂಧ [1][XXX][1] ಮತ್ತು ಯಾವುದೇ ವ್ಯವಹಾರದಲ್ಲಿ ದಲ್ಲಾಳಿಗಳು ಕಾರ್ಯ ನಿರ್ವಹಿಸದಂತೆ ಅವರನ್ನು ನಿಷೇಧಿಸುವ ಉಪಬಂಧ ಮತ್ತು ಲೈಸನ್ಸ್ ದಾರರ ಅರ್ಹತೆಗಳು ಮತ್ತು ಅನರ್ಹತೆಗಳನ್ನು ಮತ್ತು ಲೈಸನ್ಸುಗಳನ್ನು ಯಾವ ಸಂದರ್ಭದಲ್ಲಿ ನಿರಾಕರಿಸಬಹುದು, ಅಮಾನತುಗೊಳಿಸಬಹುದು ಎಂಬುದನ್ನು ಗೊತ್ತುಪಡಿಸುವ ಉಪಬಂಧ ಮತ್ತು ಕೃಷಿ ಉತ್ಪನ್ನದ ಹರಾಜುಗಳನ್ನು ಯಾವ ರೀತಿಯಲ್ಲಿ ಮತ್ತು ಯಾವ ಸ್ಥಳಗಳಲ್ಲಿ ನಡೆಸತಕ್ಕದ್ದೆಂಬುದನ್ನು ಮತ್ತು ಯಾವುದೇ ಮಾರುಕಟ್ಟೆಯಲ್ಲಿ ಅಥವಾ ಮಾರುಕಟ್ಟೆ ಪ್ರದೇಶದಲ್ಲಿ ಕೃಷಿ ಉತ್ಪನ್ನಗಳನ್ನು ಯಾವ ರೀತಿಯಲ್ಲಿ ಮತ್ತು ಯಾವ ಸ್ಥಳಗಳಲ್ಲಿ ಒಪ್ಪಿಸತಕ್ಕದ್ದು ಎಂಬುದನ್ನು ಗೊತ್ತುಪಡಿಸುವ ಉಪಬಂಧ–ಇವುಗಳು ಒಳಗೊಂಡಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(3) ಮಾರುಕಟ್ಟೆ ಸಮಿತಿಯ ಅಥವಾ ಸಮಿತಿಯು ಹಾಗೆ ಅಧಿಕಾರ ನೀಡಿದರೆ ಅದರ ಅಧ್ಯಕ್ಷನು, ಮಾರುಕಟ್ಟೆ ಪ್ರದೇಶದಲ್ಲಿ ಸಾಮಾನ್ಯವಾಗಿ ವಾಸಿಸದ ಯಾವನೇ ವ್ಯಾಪಾರಿಯು ಕೃಷಿ ಉತ್ಪನ್ನದ ಬೆಲೆಯನ್ನು ನಗದಾಗಿ ಸಂದಾಯ ಮಾಡಿದ ಹೊರತು ಯಾವುದೇ ಅಂಥ ಕೃಷಿ ಉತ್ಪನ್ನವನ್ನು ಖರೀದಿಸತಕ್ಕದ್ದಲ್ಲವೆಂಬ ಷರತ್ತಿಗೆ ಒಳಪಟ್ಟು ಸಮಿತಿಯು ನಿಗದಿಪಡಿಸಬಹುದಾದಂಥ ಫೀಜನ್ನು ಸಂದಾಯ ಮಾಡಿದ ಮೇಲೆ ಮಾರುಕಟ್ಟೆ ಪ್ರಾಂಗಣ ಅಥವಾ ಉಪಪ್ರಾಂಗಣದಲ್ಲಿ ವ್ಯವಹಾರ ನಡೆಸಲು ಅವನಿಗೆ ಒಂದು ತಿಂಗಳಿಗಿಂತ ಹೆಚ್ಚಿಲ್ಲದ ಅವಧಿಯ ತಾತ್ಕಾಲಿಕ ಲೈಸನ್ಸನ್ನು ನೀಡಬಹುದು.

[1][**72ಎ. ಖಾಸಗಿ ಮಾರುಕಟ್ಟೆ ಪ್ರಾಂಗಣಗಳ ಸ್ಥಾಪನೆ ಹಾಗೂ ಕೃಷಿಕರಿಂದ ಅಥವಾ ಉತ್ಪಾದಕರಿಂದ ನೇರ ಖರೀದಿ.–** (1) ಯಾರೇ ವ್ಯಕ್ತಿಯು ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ ಮೇರೆಗೆ ಸಿಂಧುವಾದ ಲೈಸನ್ಸನ್ನು ಹೊಂದಿದ್ದ ಹೊರತು,–

(ಎ) ಖಾಸಗಿ ಮಾರುಕಟ್ಟೆ ಪ್ರಾಂಗಣವನ್ನು ಸ್ಥಾಪಿಸತಕ್ಕದ್ದಲ್ಲ; ಅಥವಾ

(ಬಿ) ಕೃಷಿಕನಿಂದ ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ನೇರವಾಗಿ ಖರೀದಿಸತಕ್ಕದ್ದಲ್ಲ; ಅಥವಾ

(ಸಿ) ರೈತ–ಗ್ರಾಹಕ ಮಾರುಕಟ್ಟೆಯನ್ನು ಸ್ಥಾಪಿಸತಕ್ಕದ್ದಲ್ಲ.

(2) ನಿಯಮಿಸಬಹುದಾದಂಥ ಷರತ್ತುಗಳಿಗೆ ಮತ್ತು ಅಂಥ ಫೀಜಿಗೆ ಒಳಪಟ್ಟು, ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಆತನಿಂದ ಅಧಿಕೃತನಾದ ಯಾರೇ ಅಧಿಕಾರಿಯು,–

(ಎ) ಅಧಿಸೂಚಿತ ಕೃಷಿ ಉತ್ಪನ್ನದ ಸಂಸ್ಕರಣದ;

(ಬಿ) ಲೈಸನ್ಸಿನಲ್ಲಿ ನಮೂದಿಸಿದಂಥ ವಿವರಣೆಯುಳ್ಳ ಅಧಿಸೂಚಿತ ಕೃಷಿ ಉತ್ಪನ್ನದ ವ್ಯಾಪಾರದ;

(ಸಿ) ಅಧಿಸೂಚಿತ ಕೃಷಿ ಉತ್ಪನ್ನದ ರಫ್ತಿನ;

(ಡಿ) ಅಧಿಸೂಚಿತ ಕೃಷಿ ಉತ್ಪನ್ನವನ್ನು ಶ್ರೇಣೀಕರಿಸುವ, ಪ್ಯಾಕ್ ಮಾಡುವ ಮತ್ತು ಮೌಲ್ಯ ಹೆಚ್ಚಾಗುವಂತೆ ಮಾಡಿ ಇತರ ರೀತಿಯಲ್ಲಿ ವ್ಯವಹರಿಸುವ

– ಉದ್ದೇಶಕ್ಕಾಗಿ ಖಾಸಗಿ ಮಾರುಕಟ್ಟೆ ಪ್ರಾಂಗಣಗಳನ್ನು ಸ್ಥಾಪಿಸಿ ಅಧಿಸೂಚಿತ ಕೃಷಿ ಉತ್ಪನ್ನಗಳ ಖರೀದಿಗಾಗಿ ಅಥವಾ ಮಾರಾಟಕ್ಕಾಗಿ ಅಥವಾ ಅಧಿಸೂಚಿತ ಕೃಷಿ ಉತ್ಪನ್ನವನ್ನು ಒಂದು ಅಥವಾ ಹೆಚ್ಚು ಮಾರುಕಟ್ಟೆ ಪ್ರದೇಶದಲ್ಲಿ ಕೃಷಿಕನಿಂದ ನೇರವಾಗಿ ಖರೀದಿಸಲು ಲೈಸೆನ್ಸನ್ನು ಮಂಜೂರು ಮಾಡಬಹುದು.

**72ಬಿ. ಉತ್ಪಾದಕರಿಂದ ನೇರ ಮಾರಾಟಕ್ಕಾಗಿ ರೈತ–ಗ್ರಾಹಕ ಮಾರುಕಟ್ಟೆಗಳ ಸ್ಥಾಪನೆ.–** (1) ನಿಯಮಿಸಬಹುದಾದಂಥ ಷರತ್ತುಗಳಿಗೆ ಮತ್ತು ಅಂಥ ಫೀಜಿಗೆ ಒಳಪಟ್ಟು, ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಆತನಿಂದ ಅಧಿಕೃತನಾದ ಯಾರೇ ಇತರ ಅಧಿಕಾರಿಯು, ಮಾರುಕಟ್ಟೆ ಪ್ರದೇಶದಲ್ಲಿ ರೈತ–ಗ್ರಾಹಕ ಮಾರುಕಟ್ಟೆಯನ್ನು ಸ್ಥಾಪಿಸಲು ಲೈಸನ್ಸನ್ನು ಮಂಜೂರು ಮಾಡಬಹುದು.

(2) ಮಾರುಕಟ್ಟೆ ಪ್ರದೇಶದ ಯಾವುದೇ ಸ್ಥಳದಲ್ಲಿ ಯಾರೇ ವ್ಯಕ್ತಿಯು ಗೊತ್ತುಪಡಿಸಬಹುದಾದಂಥ ಮೂಲ ಸೌಲಭ್ಯಗಳನ್ನು ಅಭಿವೃದ್ಧಿಪಡಿಸಿ, ರೈತ–ಗ್ರಾಹಕ ಮಾರುಕಟ್ಟೆಯನ್ನು ಸ್ಥಾಪಿಸಬಹುದು. ಅಂಥ ಸ್ಥಳದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನಗಳ ಉತ್ಪಾದಕರು ತಮ್ಮ ಉತ್ಪನ್ನಗಳನ್ನು ನೇರವಾಗಿ ಗ್ರಾಹಕರಿಗೆ ಮಾರಾಟ ಮಾಡಬಹುದು:

ಪರಂತು, ಕೃಷಿ ಮಾರುಕಟ್ಟೆ ನಿರ್ದೇಶಕನು, ಕಾಲಕಾಲಕ್ಕೆ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಪ್ರಮಾಣವನ್ನು ಮೀರಿ ಗ್ರಾಹಕನು ಒಂದು ಬಾರಿಗೆ ಅಧಿಸೂಚಿತ ಕೃಷಿ ಉತ್ಪನ್ನವನ್ನು ರೈತ–ಗ್ರಾಹಕ ಮಾರುಕಟ್ಟೆಯಲ್ಲಿ ಖರೀದಿಸತಕ್ಕದ್ದಲ್ಲ.

(3) ಕೃಷಿ ಮಾರುಕಟ್ಟೆ ನಿರ್ದೇಶಕನು ಕಾಲಕಾಲಕ್ಕೆ ಹೊರಡಿಸುವ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸೇವಾ ಶುಲ್ಕಗಳನ್ನು ರೈತ–ಗ್ರಾಹಕ ಮಾರುಕಟ್ಟೆಯನ್ನು ಸ್ಥಾಪಿಸಿದ ವ್ಯಕ್ತಿಯು ಸಂಗ್ರಹಿಸಬಹುದು.

**72ಸಿ. ಖಾಸಗಿ ಮಾರುಕಟ್ಟೆ ಪ್ರಾಂಗಣದ ಮತ್ತು ರೈತ–ಗ್ರಾಹಕ ಮಾರುಕಟ್ಟೆಯ ಲೈಸೆನ್ಸನ್ನು ಮಂಜೂರು ಮಾಡುವುದು/ ನವೀಕರಿಸುವುದು.–** (1) ಯಾರೇ ವ್ಯಕ್ತಿಯು,–

(ಎ) 72ಎ ಪ್ರಕರಣದ ಮೇರೆಗೆ ಅಧಿಸೂಚಿತ ಕೃಷಿ ಉತ್ಪನ್ನವನ್ನು ಕೃಷಿಕನಿಂದ ನೇರವಾಗಿ ಖರೀದಿಸಲು ಬಯಸಿದಲ್ಲಿ ಅಥವಾ ಖಾಸಗಿ ಮಾರುಕಟ್ಟೆ ಪ್ರಾಂಗಣವನ್ನು ಸ್ಥಾಪಿಸಲು ಇಚ್ಛಿಸಿದಲ್ಲಿ; ಅಥವಾ

(ಬಿ) 72ಬಿ ಪ್ರಕರಣದ ಮೇರೆಗೆ ಒಂದು ಅಥವಾ ಹೆಚ್ಚು ಮಾರುಕಟ್ಟೆ ಪ್ರದೇಶದಲ್ಲಿ ರೈತ–ಗ್ರಾಹಕ ಮಾರುಕಟ್ಟೆಯನ್ನು ಸ್ಥಾಪಿಸಲು ಬಯಸಿದಲ್ಲಿ

– ಕೃಷಿ ಮಾರುಕಟ್ಟೆ ನಿರ್ದೇಶಕರಿಗೆ ಅಥವಾ ಅಧಿಕೃತ ಅಧಿಕಾರಿಗೆ, ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅವಧಿಗಾಗಿ, ಲೈಸೆನ್ಸನ್ನು ಮಂಜೂರು ಮಾಡುವುದಕ್ಕಾಗಿ ಅಥವಾ ಸಂದರ್ಭಾನುಸಾರ, ನವೀಕರಣಕ್ಕಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

(2) ಲೈಸೆನ್ಸಿಗಾಗಿ ಸಲ್ಲಿಸಿದಂಥ ಪ್ರತಿಯೊಂದು ಅರ್ಜಿಯೊಂದಿಗೆ, ನಿಯಮಿಸಲಾದ ಶುಲ್ಕವನ್ನು ಠೇವಣಿ ಇಡತಕ್ಕದ್ದು.

(3) (1)ನೇ ಉಪಪ್ರಕರಣದ ಮೇರೆಗೆ ಲೈಸೆನ್ಸಿನ ಮಂಜೂರಾತಿಗಾಗಿ ಅಥವಾ ನವೀಕರಣಕ್ಕಾಗಿ ಸ್ವೀಕೃತವಾದ ಅರ್ಜಿಯನ್ನು, ಸಂಬಂಧಪಟ್ಟ ಪ್ರಾಧಿಕಾರವು, ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಿ ಅಂಗೀಕರಿಸಬಹುದು ಅಥವಾ ಸಂದರ್ಭಾನುಸಾರ ತಿರಸ್ಕರಿಸಬಹುದು. ಯಾವುದೇ ಲೈಸೆನ್ಸನ್ನು,–

(i) ಅರ್ಜಿದಾರನಿಂದ ಮಾರುಕಟ್ಟೆ ಸಮಿತಿಗೆ ಯಾವುದೇ ಬಾಕಿಯಿದ್ದಲ್ಲಿ;

(ii) ಅರ್ಜಿದಾರನು ಅಪ್ರಾಪ್ತ ವಯಸ್ಕ ಅಥವಾ ಅಪ್ರಾಮಾಣಿಕನಾಗಿದ್ದಲ್ಲಿ;

(iii) ಅರ್ಜಿದಾರನು ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಲಾದ ನಿಯಮಗಳ ಹಾಗೂ ಉಪವಿಧಿಗಳ ಮೇರೆಗೆ ಸುಸ್ತಿದಾರನೆಂದು ಘೋಷಿತನಾಗಿದ್ದಲ್ಲಿ;

(iv) ಅರ್ಜಿದಾರನು ಯಾವುದೇ ಕ್ರಿಮಿನಲ್ ಪ್ರಕರಣದಲ್ಲಿ ತಪ್ಪಿತಸ್ಥನೆಂದು ಘೋಷಿತನಾಗಿದ್ದಲ್ಲಿ ಮತ್ತು ಕಾರಾವಾಸ ಶಿಕ್ಷೆಯಿಂದ ನಿರ್ಣೀತ ಅಪರಾಧಿಯಾಗಿದ್ದಲ್ಲಿ;

(v) ಅರ್ಜಿದಾರನು ಮೂಲ ಸೌಲಭ್ಯ ಪುರಾವೆ ಪತ್ರಗಳನ್ನು, ಅನುಭವವನ್ನು ಅಥವಾ ತೊಡಗಿಸುವುದಕ್ಕಾಗಿ ಸಾಕಷ್ಟು ಬಂಡವಾಳವನ್ನು ಅಥವಾ ಮಾರುಕಟ್ಟೆ ಪ್ರಾಂಗಣದ ಅಥವಾ ರೈತ–ಗ್ರಾಹಕ ಮಾರುಕಟ್ಟೆಯ ಸ್ಥಾಪನೆಗಾಗಿ ಗೊತ್ತುಪಡಿಸಲಾದ ಇತರ ಯಾವುವೇ ಅಗತ್ಯತೆಗಳನ್ನು ಹೊಂದಿಲ್ಲವೆಂದು ಸಂಬಂಧಪಟ್ಟ ಪ್ರಾಧಿಕಾರಕ್ಕೆ ಮನವರಿಕೆಯಾಗಿದ್ದಲ್ಲಿ; ಅಥವಾ

(vi) ಲೈಸೆನ್ಸ್ ನೀಡಿಕೆ ಪ್ರಾಧಿಕಾರವು ಯುಕ್ತವೆಂದು ಭಾವಿಸುವ ಇತರ ಯಾವುವೇ ಕಾರಣಗಳಿದ್ದಲ್ಲಿ

– ಅರ್ಜಿದಾರನಿಗೆ ಮಂಜೂರು ಮಾಡತಕ್ಕದ್ದಲ್ಲ.

(4) ಈ ಪ್ರಕರಣದ ಮೇರೆಗೆ ಮಂಜೂರು ಮಾಡಿದ ಅಥವಾ ನವೀಕರಿಸಿದ ಎಲ್ಲಾ ಲೈಸೆನ್ಸುಗಳು ಈ ಅಧಿನಿಯಮದ ಉಪಬಂಧಗಳಿಗೆ ಅಥವಾ ಅದರ ಮೇರೆಗೆ ರಚಿತವಾದ ನಿಯಮಗಳಿಗೆ ಒಳಪಟ್ಟಿರತಕ್ಕದ್ದು.

**72ಡಿ. ಲೈಸೆನ್ಸನ್ನು ರದ್ದುಮಾಡಲು ಅಥವಾ ಅಮಾನತ್ತಿನಲ್ಲಿಡಲು ಅಧಿಕಾರ.–** (1) ಲೈಸೆನ್ಸು ದಾರನು,–

(ಎ) ಉದ್ದೇಶಪೂರ್ವಕವಾಗಿ ತಪ್ಪು ನಿರೂಪಣೆ ಮಾಡಿ ಅಥವಾ ಮೋಸದಿಂದ ಲೈಸೆನ್ಸನ್ನು ಪಡೆದಿದ್ದರೆ; ಅಥವಾ

(ಬಿ) ಲೈಸೆನ್ಸುದಾರನು ಅಥವಾ ಆತನ (ಲೈಸೆನ್ಸುದಾರನ) ಸ್ಪಷ್ಟ ಅಥವಾ ಇಂಗಿತ ಅನುಮತಿ ಯೊಂದಿಗೆ ಅವನ ಪರವಾಗಿ ಕಾರ್ಯನಿರ್ವಹಿಸುವ ಯಾರೇ ಸೇವಕನು ಅಥವಾ ಯಾರೇ ವ್ಯಕ್ತಿಯು, ಲೈಸೆನ್ಸಿನ ಯಾವುವೇ ನಿಬಂಧನೆಗಳನ್ನು ಅಥವಾ ಷರತ್ತುಗಳನ್ನು ಉಲ್ಲಂಘನೆ ಮಾಡಿದ್ದರೆ;

(ಸಿ) ಲೈಸೆನ್ಸುದಾರನು ತಾನಾಗಿಯೇ ಆಗಲಿ ಅಥವಾ ಇತರ ಲೈಸೆನ್ಸುದಾರನ ಜೊತೆಗೂಡಿ ಖಾಸಗಿ ಮಾರುಕಟ್ಟೆ ಪ್ರಾಂಗಣದಲ್ಲಿ/ ಉಪ ಮಾರುಕಟ್ಟೆ ಪ್ರಾಂಗಣದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನಗಳ ಮಾರಾಟಕ್ಕೆ ಉದ್ದೇಶಪೂರ್ವಕವಾಗಿ ಅಡ್ಡಿಯುಂಟುಮಾಡುವ, ಮಾರಾಟವನ್ನು ಅಮಾನತುಗೊಳಿಸುವ ಅಥವಾ ನಿಲ್ಲಿಸುವ ಉದ್ದೇಶದಿಂದ, ಯಾವುದೇ ಕಾರ್ಯವನ್ನು ಮಾಡಿದಲ್ಲಿ ಅಥವಾ ಮಾರುಕಟ್ಟೆ ಪ್ರದೇಶದಲ್ಲಿ ತನ್ನ ಸಾಮಾನ್ಯ ವ್ಯವಹಾರವನ್ನು ನಡೆಸುವುದನ್ನು ನಿಲ್ಲಿಸಿಬಿಟ್ಟರೆ ಮತ್ತು ತತ್ಪರಿಣಾಮವಾಗಿ ಯಾವುದೇ ಅಧಿಸೂಚಿತ ಕೃಷಿ ಉತ್ಪನ್ನದ ಮಾರಾಟಕ್ಕೆ ಅಡ್ಡಿಯುಂಟಾಗಿದ್ದರೆ, ಮಾರಾಟವು ಅಮಾನತುಗೊಂಡಿದ್ದರೆ ಅಥವಾ ನಿಂತುಹೋಗಿದ್ದರೆ;

(ಡಿ) ಲೈಸೆನ್ಸುದಾರನು ದಿವಾಳಿಯಾಗಿದ್ದರೆ;

(ಇ) ಲೈಸೆನ್ಸುದಾರನು, ಗೊತ್ತುಪಡಿಸಬಹುದಾದ ಯಾವುದೇ ಅನರ್ಹತೆಗೆ ಒಳಗಾಗಿದ್ದರೆ; ಅಥವಾ

(ಎಫ್) ಲೈಸೆನ್ಸುದಾರನು ಈ ಅಧಿನಿಯಮದ ಮೇರೆಗಿನ ಯಾವುದೇ ಅಪರಾಧದ ನಿರ್ಣೀತ ಅಪರಾಧಿಯಾಗಿದ್ದರೆ, ಆಗ ಮೊದಲ ಬಾರಿ ಅಪರಾಧ ನಿರ್ಣಯವಾಗಿದ್ದಾಗ ಒಂದು ವರ್ಷದೊಳಗೆ ಮತ್ತು ತರುವಾಯದಲ್ಲಿ ಅಪರಾಧ ನಿರ್ಣಯವಾಗಿದ್ದಾಗ ಮೂರು ವರ್ಷದೊಳಗೆ

– ಲೈಸೆನ್ಸನ್ನು, ಕಾರಣಗಳನ್ನು ಲೈಸೆನ್ಸುದಾರನಿಗೆ ಲಿಖಿತದಲ್ಲಿ ತಿಳಿಸಿ (3)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, 72ಸಿ ಪ್ರಕರಣದ ಮೇರೆಗೆ ಲೈಸೆನ್ಸನ್ನು ನೀಡಿದ ಕೃಷಿ ಮಾರುಕಟ್ಟೆ ನಿರ್ದೇಶಕರು ಅಥವಾ ಸಂದರ್ಭಾನುಸಾರ ಅಧಿಕೃತ ಅಧಿಕಾರಿಯು ಅಮಾನತುಗೊಳಿಸಬಹುದು ಅಥವಾ ರದ್ದುಗೊಳಿಸಬಹುದು.

(2) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಆದರೆ (3)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಕೃಷಿ ಮಾರುಕಟ್ಟೆ ನಿರ್ದೇಶಕನು ಲೈಸೆನ್ಸುದಾರನಿಗೆ ಲಿಖಿತದಲ್ಲಿ ಕಾರಣಗಳನ್ನು ತಿಳಿಸಿ, ಅಧಿಕೃತ ಅಧಿಕಾರಿಯು ಆತನಿಗೆ/ ಅದಕ್ಕೆ ಮಂಜೂರು ಮಾಡಿದ್ದ ಅಥವಾ ನವೀಕರಿಸಿದ್ದ ಲೈಸೆನ್ಸನ್ನು ಆದೇಶದ ಮೂಲಕ ಅಮಾನತುಗೊಳಿಸಬಹುದು ಅಥವಾ ರದ್ದುಗೊಳಿಸಬಹುದು:

ಪರಂತು, ಈ ಉಪಪ್ರಕರಣದ ಮೇರೆಗಿನ ಆದೇಶವನ್ನು ಅಧಿಕೃತ ಅಧಿಕಾರಿಗೆ ತಿಳಿಸದೆಯೇ ಹೊರಡಿಸತಕ್ಕದ್ದಲ್ಲ.

(3) ಲೈಸೆನ್ಸು ದಾರನಿಗೆ ಅಂಥ ಅಮಾನತ್ತಿನ ಅಥವಾ ರದ್ದತಿಯ ವಿರುದ್ಧ ಕಾರಣವನ್ನು ತೋರಿಸಲು ಸೂಕ್ತ ಅವಕಾಶವನ್ನು ನೀಡಿದ ಹೊರತು ಯಾವ ಲೈಸೆನ್ಸನ್ನೂ ಈ ಪ್ರಕರಣದ ಮೇರೆಗೆ ಅಮಾನತುಗೊಳಿಸತಕ್ಕದ್ದಲ್ಲ ಅಥವಾ ರದ್ದುಗೊಳಿಸತಕ್ಕದ್ದಲ್ಲ.

**72ಇ. ಅಪೀಲು.–** (1) ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಅಧಿಕೃತ ಅಧಿಕಾರಿಯು 72ಸಿ ಮತ್ತು ಸಂದರ್ಭಾನುಸಾರ 72ಡಿ ಪ್ರಕರಣಗಳ ಮೇರೆಗೆ ಹೊರಡಿಸಿದ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು,–

(ಎ) ಅಂಥ ಆದೇಶವನ್ನು ಅಧಿಕೃತ ಅಧಿಕಾರಿಯು ಹೊರಡಿಸಿದ್ದರೆ, ಆ ಆದೇಶವನ್ನು ಸ್ವೀಕರಿಸಿದ ಮೂವತ್ತು ದಿನಗಳೊಳಗೆ ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ; ಮತ್ತು

(ಬಿ) ಅಂಥ ಆದೇಶವನ್ನು ಕೃಷಿ ಮಾರುಕಟ್ಟೆ ನಿರ್ದೇಶಕನು ಹೊರಡಿಸಿದ್ದರೆ, ಆ ಆದೇಶವನ್ನು ಸ್ವೀಕರಿಸಿದ ಮೂವತ್ತು ದಿನಗಳೊಳಗೆ ಕರ್ನಾಟಕ ಅಪೀಲು ನ್ಯಾಯಾಧಿಕರಣಕ್ಕೆ

– ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಅಪೀಲು ಸಲ್ಲಿಸಬಹುದು.

(2) ಯಾವ ಆದೇಶದ ವಿರುದ್ಧ ಅಪೀಲನ್ನು ಸಲ್ಲಿಸಲಾಗಿದೆಯೋ ಆ ಆದೇಶಕ್ಕೆ ಸೂಕ್ತವೆಂದು ಭಾವಿಸಬಹುದಾದಷ್ಟು ಅವಧಿಗೆ ತಡೆಯಾಜ್ಞೆ ನೀಡುವುದು ಅವಶ್ಯಕವೆಂದು ಅಪೀಲು ನ್ಯಾಯಾಧಿಕರಣವು ಭಾವಿಸಿದರೆ, ಅದು ಹಾಗೆ ಮಾಡಬಹುದು.

(3) ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಅಧಿಕೃತ ಅಧಿಕಾರಿಯು ಹೊರಡಿಸಿದ ಆದೇಶವು ಈ ಪ್ರಕರಣದ ಮೇರೆಗಿನ ಅಪೀಲಿನಲ್ಲಿನ ಆದೇಶಕ್ಕೆ ಒಳಪಟ್ಟು ಅಂತಿಮವಾಗಿರತಕ್ಕದ್ದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**73. ಲೈಸನ್ಸನ್ನು ರದ್ದುಮಾಡುವ ಅಥವಾ ಅಮಾನತುಗೊಳಿಸುವ ಅಧಿಕಾರ.–** (1) (4)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, ಮಾರುಕಟ್ಟೆ ಸಮಿತಿಯು ಕೆಳಕಂಡ ಸಂದರ್ಭಗಳಲ್ಲಿ, ಎಂದರೆ:–

(ಎ) ಲೈಸನ್ಸನ್ನು ಉದ್ದೇಶಪೂರ್ವಕ ತಪ್ಪು ನಿರೂಪಣೆಯಿಂದ ಅಥವಾ ಮೋಸದಿಂದ ಪಡೆಯಲಾಗಿದ್ದರೆ;

(ಬಿ) ಲೈಸನ್ಸುದಾರನು ಅಥವಾ ಅವನ ವ್ಯಕ್ತ ಅಥವಾ ಇಂಗಿತ ಅನುಮತಿಯಿಂದ ಅವನ ಪರವಾಗಿ ಕಾರ್ಯ ಮಾಡುತ್ತಿರುವ ಯಾವನೇ ನೌಕರನು ಅಥವಾ ವ್ಯಕ್ತಿಯು ಲೈಸನ್ಸ್‌ನ ಯಾವುವೇ ನಿಯಮಗಳು ಮತ್ತು ಷರತ್ತುಗಳನ್ನು ಉಲ್ಲಂಘನೆ ಮಾಡಿದರೆ;

(ಸಿ) ಲೈಸನ್ಸುದಾರನು ಇತರ ಲೈಸನ್ಸುದಾರರೊಂದಿಗೆ ಸೇರಿ ಮಾರುಕಟ್ಟೆ ಪ್ರದೇಶದಲ್ಲಿ ಕೃಷಿ ಉತ್ಪನ್ನದ ಮಾರುಕಟ್ಟೆ ವ್ಯವಹಾರವನ್ನು ಉದ್ದೇಶಪೂರ್ವಕವಾಗಿ ಅಡ್ಡಿ ಪಡಿಸುವ, ಅಮಾನತುಗೊಳಿಸುವ ಅಥವಾ ನಿಲ್ಲಿಸುವ ಇರಾದೆಯಿಂದ ಯಾವುದೇ ಕಾರ್ಯವನ್ನು ಮಾಡುವ ಅಥವಾ ಮಾರುಕಟ್ಟೆಯಲ್ಲಿ ತನ್ನ ಮಾಮೂಲು ವ್ಯವಹಾರವನ್ನು ನಡೆಸದಿರುವ

ಪರಿಣಾಮವಾಗಿ, ಯಾವುದೇ ಕೃಷಿ ಉತ್ಪನ್ನದ ಮಾರುಕಟ್ಟೆ ವ್ಯವಹಾರಕ್ಕೆ ಅಡ್ಡಿಯಾದರೆ, ವ್ಯವಹಾರವು ಅಮಾನತುಗೊಂಡರೆ ಅಥವಾ ನಿಲ್ಲಿಸಲ್ಪಟ್ಟರೆ;

(ಡಿ) ಲೈಸನ್ಸುದಾರನು ದಿವಾಳಿಯಾದರೆ;

[1][(ಡಿಡಿ) ಲೈಸನ್ಸುದಾರನು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದಂತೆ ಬಾಕಿ ಇರುವ ಮಾರುಕಟ್ಟೆ ಫೀಜನ್ನು ದಂಡ ಸಹಿತ ಸಂದಾಯ ಮಾಡಲು ತಪ್ಪಿದರೆ;][1]

1. 1987ರ ಅಧಿನಿಯಮ ಸಂಖ್ಯೆ 29ರ ಮೂಲಕ 10-8-1987 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(ಡಿಇ) ಲೈಸನ್ಸುದಾರನು, ಉತ್ಪಾದಕ-ಮಾರಾಟಗಾರನಿಗೆ ಮಾರಾಟವಾದ ಕೂಡಲೆ ಮಾರಾಟದ ಮೊತ್ತವನ್ನು ಸಂದಾಯ ಮಾಡಲು ತಪ್ಪಿದರೆ;][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಇ) ಲೈಸನ್ಸುದಾರನು, ಗೊತ್ತುಪಡಿಸಬಹುದಾದಂಥ ಯಾವುದೇ ಅನರ್ಹತೆಗೆ ಗುರಿಯಾದರೆ;

(ಎಫ್) ಲೈಸನ್ಸುದಾರನು, ಈ ಅಧಿನಿಯಮದ ಮೇರೆಗಿನ ಯಾವುದೇ ಅಪರಾಧದ ಬಗ್ಗೆ ಅಪರಾಧಿ ಎಂದು ನಿರ್ಣೀತನಾದರೆ

– ಕಾರಣಗಳನ್ನು ದಾಖಲು ಮಾಡಿ ಲೈಸನ್ಸನ್ನು ಅಮಾನತುಗೊಳಿಸಬಹುದು ಅಥವಾ ರದ್ದುಪಡಿಸಬಹುದು.

(2) (ಎ) (4)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಮಾರುಕಟ್ಟೆ ಸಮಿತಿಯ ಅಧ್ಯಕ್ಷನು ಕಾರಣಗಳನ್ನು ದಾಖಲು ಮಾಡಿ, (1)ನೇ ಉಪಪ್ರಕರಣದ ಮೇರೆಗೆ ಮಾರುಕಟ್ಟೆ ಸಮಿತಿಯು ಲೈಸನ್ಸನ್ನು ಅಮಾನತುಗೊಳಿಸಬಹುದಾದಂಥ ಯಾವುದೇ ಕಾರಣಕ್ಕಾಗಿ ಅದನ್ನು ಒಂದು ತಿಂಗಳಿಗಿಂತ ಹೆಚ್ಚಿಲ್ಲದ ಅವಧಿಗೆ ಅಮಾನತುಗೊಳಿಸಬಹುದು.

(ಬಿ) (4)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯು, ಕಾರಣಗಳನ್ನು ದಾಖಲು ಮಾಡಿ, (1)ನೇ ಉಪಪ್ರಕರಣದ ಮೇರೆಗೆ ಮಾರುಕಟ್ಟೆ ಸಮಿತಿಯು ಲೈಸನ್ಸನ್ನು ಅಮಾನತುಗೊಳಿಸಬಹುದಾದಂಥ ಯಾವುದೇ ಕಾರಣಕ್ಕಾಗಿ ಅದನ್ನು ಒಂದು ವಾರಕ್ಕಿಂತ ಹೆಚ್ಚಲ್ಲದ ಅವಧಿಗೆ ಅಮಾನತುಗೊಳಿಸಬಹುದು.

(3) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, (4)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, [1][ಕೃಷಿ ಮಾರುಕಟ್ಟೆ ನಿರ್ದೇಶಕನು,][1] ಕಾರಣಗಳನ್ನು ದಾಖಲು ಮಾಡಿ ಈ ಅಧ್ಯಾಯದ ಮೇರೆಗೆ ನೀಡಲಾದ ಅಥವಾ ನವೀಕರಿಸಲಾದ ಯಾವುದೇ ಲೈಸನ್ಸನ್ನು ಆದೇಶದ ಮೂಲಕ ಅಮಾನತುಗೊಳಿಸಬಹುದು ಅಥವಾ ರದ್ದುಪಡಿಸಬಹುದು:

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಮಾರುಕಟ್ಟೆ ಸಮಿತಿಯ [1][ಅಥವಾ ಸಂದರ್ಭಾನುಸಾರ ಬಾಧಿತನಾಗಬಹುದಾದ ಯಾರೇ ಇತರ ವ್ಯಕ್ತಿಯ][1] ಗಮನಕ್ಕೆ ತರದೇ ಈ ಉಪಪ್ರಕರಣದ ಮೇರೆಗೆ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) ಈ ಪ್ರಕರಣದ ಮೇರೆಗೆ, ಲೈಸನ್ಸನ್ನು ಅಮಾನತುಗೊಳಿಸುವ ಅಥವಾ ರದ್ದುಪಡಿಸುವ ಮುಂಚೆ ಅದರ ವಿರುದ್ಧ ಕಾರಣ ತೋರಿಸಲು ಸಂಬಂಧಪಟ್ಟ ಲೈಸನ್ಸುದಾರನಿಗೆ ಸೂಕ್ತ ಅವಕಾಶ ಕೊಟ್ಟ ಹೊರತು ಆ ಲೈಸನ್ಸನ್ನು ಅಮಾನತುಗೊಳಿಸತಕ್ಕದ್ದಲ್ಲ ಅಥವಾ ರದ್ದುಪಡಿಸತಕ್ಕದ್ದಲ್ಲ.

**74. ಅಪೀಲು.**– (1) ಯಾವನೇ ವ್ಯಕ್ತಿಯು,–

(ಎ) ಯಾವುದೇ ಲೈಸನ್ಸನ್ನು ನೀಡಲು ಅಥವಾ ನವೀಕರಿಸಲು ನಿರಾಕರಿಸುವ ಅಥವಾ ಅದನ್ನು ರದ್ದುಪಡಿಸುವ ಅಥವಾ ಅಮಾನತುಗೊಳಿಸುವ ಮಾರುಕಟ್ಟೆ ಸಮಿತಿಯ ಉದ್ದೇಶದಿಂದ ಬಾಧಿತನಾದರೆ, ಅದನ್ನು ಅವನಿಗೆ ತಿಳಿಸಿದ ದಿನಾಂಕದಿಂದ ಮೂವತ್ತು ದಿವಸಗಳೊಳಗೆ [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನಿಗೆ ಅವನು ಅದರ ವಿರುದ್ಧ ಅಪೀಲು ಸಲ್ಲಿಸಬಹುದು;

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) ಯಾವುದೇ ಲೈಸನ್ಸನ್ನು ಅಮಾನತುಗೊಳಿಸುವ ಅಧ್ಯಕ್ಷನ [1][XXX][1] ಆದೇಶದಿಂದ ಬಾಧಿತನಾದರೆ, ಅದನ್ನು ಅವನಿಗೆ ತಿಳಿಸಿದ ದಿನಾಂಕದಿಂದ ಏಳು ದಿವಸಗಳೊಳಗೆ ಅವನು ಅದರ ವಿರುದ್ಧ ಮಾರುಕಟ್ಟೆ ಸಮಿತಿಗೆ ಅಪೀಲು ಸಲ್ಲಿಸಬಹುದು;

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(ಬಿಬಿ)ಯಾವುದೇ ಲೈಸನ್ಸನ್ನು ಅಮಾನತುಗೊಳಿಸುವ ಕಾರ್ಯದರ್ಶಿಯ ಆದೇಶದ ವಿರುದ್ಧ ತನಗೆ ಆ ಆದೇಶವು ತಲುಪಿದ ದಿನಾಂಕದಿಂದ ಏಳು ದಿನಗಳೊಳಗಾಗಿ ಅಧ್ಯಕ್ಷನಿಗೆ ಅಪೀಲು ಸಲ್ಲಿಸಬಹುದು;][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಸಿ) ಲೈಸನ್ಸನ್ನು ರದ್ದುಮಾಡುವ ಅಥವಾ ಅಮಾನತುಗೊಳಿಸುವ, [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನ ಆದೇಶದಿಂದ ಬಾಧಿತನಾದರೆ ಅದನ್ನು ಅವನಿಗೆ ತಿಳಿಸಿದ ದಿನಾಂಕದಿಂದ ಮೂವತ್ತು ದಿವಸಗಳೊಳಗೆ ಅವನು ಅದರ ವಿರುದ್ಧ [1][ಕರ್ನಾಟಕ ಅಪೀಲು ನ್ಯಾಯಾಧಿಕರಣ][1] ಕ್ಕೆ ಅಪೀಲು ಸಲ್ಲಿಸಬಹುದು;

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ಡಿ) 9 ಮತ್ತು 61ನೇ ಪ್ರಕರಣದ ಮೇರೆಗೆ [2][ಕೃಷಿ ಮಾರುಕಟ್ಟೆ ನಿರ್ದೇಶಕ][2] ನು ಮಾಡಿದ ಆದೇಶದಿಂದ ಬಾಧಿತನಾದರೆ, ಅದನ್ನು ಅವನಿಗೆ ತಿಳಿಸಿದ ದಿನಾಂಕದಿಂದ ಅರವತ್ತು ದಿನಗಳೊಳಗೆ ಅವನು ಅದರ ವಿರುದ್ಧ [3][ಕರ್ನಾಟಕ ಅಪೀಲು ನ್ಯಾಯಾಧಿಕರಣ][3] ಕ್ಕೆ ಅಪೀಲು ಸಲ್ಲಿಸಬಹುದು.][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

3. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(1ಎ) ಕಾರ್ಯದರ್ಶಿಯ ಆದೇಶದ ವಿರುದ್ಧ (1)ನೇ ಉಪಪ್ರಕರಣದ ಮೇರೆಗೆ ಸರ್ಕಾರದ ಅಥವಾ ಮಾರುಕಟ್ಟೆ ಸಮಿತಿಯ ಮುಂದೆ ಇತ್ಯರ್ಥಕ್ಕಾಗಿ ಸಲ್ಲಿಸಲಾದ ಯಾವುದೇ ಅಪೀಲು, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 1991 ಪ್ರಾರಂಭವಾದ ದಿನಾಂಕದಿಂದ ಕ್ರಮವಾಗಿ ಕರ್ನಾಟಕ ಅಪೀಲು ನ್ಯಾಯಾಧಿಕರಣಕ್ಕೆ ಮತ್ತು ಅಧ್ಯಕ್ಷನಿಗೆ ವರ್ಗಾಯಿಸಲ್ಪಟ್ಟಿರತಕ್ಕದ್ದು ಮತ್ತು ಅಂಥ ಅಪೀಲನ್ನು ಸರ್ಕಾರದ ಅಥವಾ ಸಮಿತಿಯ ಮುಂದೆ ಸಲ್ಲಿಸಲಾಗಿದ್ದರೆ ಹೇಗೋ ಹಾಗೆ ಸರ್ಕಾರವು ಅಥವಾ ಸಮಿತಿಯು ತೀರ್ಮಾನಿಸತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಸಂದರ್ಭಾನುಸಾರ, [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನು, ಮಾರುಕಟ್ಟೆ ಸಮಿತಿಯು ಅಥವಾ [2][ಕರ್ನಾಟಕ ಅಪೀಲು ನ್ಯಾಯಾಧಿಕರಣವು [3][ಅಥವಾ ಅಧ್ಯಕ್ಷನು][3]][2] ಅಂಥ ಅಪೀಲಿನ ಮೇಲೆ, ತಾನು ಅಥವಾ ಅದು, ನ್ಯಾಯೋಚಿತ ಮತ್ತು ಯುಕ್ತವೆಂದು ಭಾವಿಸುವಂಥ ಆದೇಶವನ್ನು ಮಾಡತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

3. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**[1][75. ಬೆಲೆ ಸಂದಾಯ.–** (1) ಈ ಅಧಿನಿಯಮಕ್ಕೆ ಅಥವಾ ನಿಯಮಗಳಿಗೆ ಅಥವಾ ಉಪವಿಧಿಗಳಿಗೆ ಅನುಸಾರವಾಗಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೇರೆಗೆ,–

(i) ಫೀಜುಗಳ;

(ii) ಮಾರುಕಟ್ಟೆ ಚಾರ್ಜುಗಳ;

(iii) ತೆರಿಗೆಗಳ; ಮತ್ತು

(iv) ಸರಕುಗಳ ಮೇಲೆ ನೀಡಿದ ಮತ್ತು ಅಧಿಕೃತ ಓಚರುಗಳ ಮೂಲಕ ದೃಢೀಕೃತವಾದ ಮುಂಗಡಗಳೇನಾದರೂ ಇದ್ದರೆ, ಆ ಮುಂಗಡಗಳ ಮೇಲೆ ಅನುಸೂಚಿತ ಬ್ಯಾಂಕುಗಳು ವಿಧಿಸುವ ದರವನ್ನು ಮೀರದ ದರದ ಬಡ್ಡಿಯೂ ಸೇರಿದಂತೆ ಮುಂಗಡಗಳ

– ರೂಪದಲ್ಲಿ ಅಧಿಕೃತವಾಗಿ ಮಾಡಬೇಕಾದಂಥ ಕಡಿತಗಳೇನಾದರೂ ಇದ್ದಲ್ಲಿ, ಅವುಗಳಿಗೆ ಒಳಪಟ್ಟು ಮಾರುಕಟ್ಟೆ ಪ್ರದೇಶದಲ್ಲಿರುವ ಮಾರುಕಟ್ಟೆ ಪ್ರಾಂಗಣದಲ್ಲಿ, ಮಾರುಕಟ್ಟೆಯ ಹೊರಗೆ ಅಥವಾ ಉಪ ಮಾರುಕಟ್ಟೆಯಲ್ಲಿ ಮಾರಾಟ ಮಾಡಿದ ಸರಕುಗಳ ಬೆಲೆಯನ್ನು ಕಮೀಷನ್ ಏಜೆಂಟನು, ಸಾಲದ ಮೇಲೆ ಉಪವಿಧಿಗಳಲ್ಲಿ ಆ ಸಾಲಕ್ಕೆ ಗೊತ್ತುಪಡಿಸಬಹುದಾದಂಥ ಗರಿಷ್ಠ ಅವಧಿಯನ್ನು ಯಾವ ಸಂದರ್ಭದಲ್ಲೂ ಮೀರದ ಅವಧಿಯ ಸಾಲದ ಮೇಲೆ ಕೊಂಡುಕೊಳ್ಳುವವನಿಗೆ ಸರಕುಗಳನ್ನು ತಲುಪಿಸಲು, ಉಪವಿಧಿಗಳಲ್ಲಿ ಗೊತ್ತುಪಡಿಸಬಹುದಾದಂಥ ನಮೂನೆಯಲ್ಲಿ ಲಿಖಿತದಲ್ಲಿ ಒಪ್ಪಿಕೊಂಡಿದ್ದ ಸಂದರ್ಭದಲ್ಲಿ ಹೊರತು, ಆ ಬೆಲೆಯನ್ನು ಮಾರಾಟವಾದೊಡನೆಯೇ ಕೊಂಡುಕೊಂಡಿದ್ದವನು ಮಾರಾಟಗಾರನಿಗೆ ನಗದು ರೂಪದಲ್ಲಿ ಅಥವಾ ಚೆಕ್ ರೂಪದಲ್ಲಿ ಸಂದಾಯ ಮಾಡತಕ್ಕದ್ದು.

(2) ಒಂದು ವೇಳೆ ಕೊಂಡುಕೊಂಡಿದ್ದವನು (1)ನೇ ಉಪಪ್ರಕರಣದ ಮೇರೆಗೆ ಸಂದಾಯ ಮಾಡದಿದ್ದಲ್ಲಿ, ಅಧಿಸೂಚಿತ ಕೃಷಿ ಉತ್ಪನ್ನಕ್ಕೆ ಮಾರಾಟಗಾರನಿಗೆ ಸಂದಾಯ ಮಾಡಬೇಕಾದ ಒಟ್ಟು ಬೆಲೆಯ ಶೇಕಡಾ ಒಂದರ ದರದಲ್ಲಿ ಪ್ರತಿದಿನ ಹೆಚ್ಚುವರಿ ಸಂದಾಯವನ್ನು ಅವನು ಐದು ದಿನಗಳೊಳಗೆ ಮಾಡಲು ಹೊಣೆಗಾರನಾಗಿರತಕ್ಕದ್ದು.

(3) ಮೇಲಿನ (1) ಮತ್ತು (2)ನೇ ಉಪಪ್ರಕರಣಗಳ ಮೇರೆಗೆ ಕೊಂಡುಕೊಳ್ಳುವವನು ಅಂಥ ಖರೀದಿಯ ದಿನದಿಂದ ಐದು ದಿನಗಳೊಳಗೆ ಮಾರಾಟಗಾರನಿಗೆ ಹೆಚ್ಚುವರಿ ಸಂದಾಯವನ್ನು ಮಾಡದಿದ್ದ ಸಂದರ್ಭದಲ್ಲಿ ಆರನೇ ದಿನದಂದು ಸಂದರ್ಭಾನುಸಾರ ಅವನ ಲೈಸೆನ್ಸ್ ಅಥವಾ ನೋಂದಣಿಯನ್ನು ರದ್ದುಪಡಿಸಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಅಂಥ ರದ್ದತಿಯ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಈ ಅಧಿನಿಯಮದ ಮೇರೆಗೆ ಅವನನ್ನು

ನೋಂದಾಯಿಸಿಕೊಳ್ಳತಕ್ಕದ್ದಲ್ಲ ಅಥವಾ ಯಾವುದೇ ಲೈಸೆನ್ಸನ್ನು ಮಂಜೂರು ಮಾಡತಕ್ಕದ್ದಲ್ಲ ಅಥವಾ ರಾಜ್ಯದೊಳಗಿನ ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ ಕಾರ್ಯನಿರ್ವಹಿಸಲು ಅನುಮತಿಸತಕ್ಕದ್ದಲ್ಲ][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**76. ಕೃಷಿ ಉತ್ಪನ್ನದ ಮಾರಾಟ.–** ಮಾರುಕಟ್ಟೆ ಪ್ರದೇಶದಲ್ಲಿ ಮಾರಾಟ ಮಾಡಲಾಗುವ ಅಧಿಸೂಚಿತ ಕೃಷಿ ಉತ್ಪನ್ನದ ಮಾರಾಟ ಬೆಲೆಯನ್ನು ಟೆಂಡರ್ ಪದ್ಧತಿ ಅಥವಾ ಸಾರ್ವಜನಿಕ ಹರಾಜು ಅಥವಾ ಬಹಿರಂಗ ಒಪ್ಪಂದ ಅಥವಾ ಮಾದರಿ ಅಥವಾ ಗೊತ್ತಾದ ಗುಣಮಟ್ಟದ ಆಧಾರ – ಇವುಗಳ ಮೂಲಕ, ಅಥವಾ ಮಾರುಕಟ್ಟೆ ಸಮಿತಿಯು [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನ ಪೂರ್ವಾನುಮೋದನೆ ಪಡೆದು ಕಾಲಕಾಲಕ್ಕೆ ನಿರ್ದೇಶಿಸಬಹುದಾದಂಥ ಯಾವುದೇ ಇತರ ರೀತಿಯಲ್ಲಿ ನಿರ್ಧರಿಸತಕ್ಕದ್ದು:

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17–6–1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಪರಂತು, ಯಾವುದೇ ಖಾಸಗಿ ಮಾರುಕಟ್ಟೆ ಪ್ರಾಂಗಣದ ಸಂಬಂಧದಲ್ಲಿ ಅಥವಾ 72ಸಿ ಪ್ರಕರಣದ ಮೇರೆಗೆ "ಲೈಸೆನ್ಸುದಾರನು ಅಧಿಸೂಚಿತ ಕೃಷಿ ಉತ್ಪನ್ನವನ್ನು ನೇರವಾಗಿ ಖರೀದಿಸಿದ ಸಂದರ್ಭದಲ್ಲಿ, ಕಾಲಕಾಲಕ್ಕೆ ಕೃಷಿ ಮಾರುಕಟ್ಟೆ ನಿರ್ದೇಶಕನು ನಿರ್ದೇಶಿಸಬಹುದಾದಂಥ ರೀತಿಯಲ್ಲಿ ಬೆಲೆ ನಿರ್ಧರಣೆಯನ್ನು ಮಾಡತಕ್ಕದ್ದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**77. ಮಾರಾಟ ಒಪ್ಪಂದ.–** ಅಧಿಸೂಚಿತ ಕೃಷಿ ಉತ್ಪನ್ನವನ್ನು ಖರೀದಿಸುವ ಲೈಸನ್ಸು ಹೊಂದಿರುವ ಪ್ರತಿಯೊಬ್ಬ ವ್ಯಾಪಾರಿಯು, ಅಂಥ ಖರೀದಿಯ ಸಮಯದಲ್ಲಿ ಉಪವಿಧಿಗಳ ಮೂಲಕ ಗೊತ್ತುಪಡಿಸಬಹುದಾದಂಥ ನಮೂನೆಯಲ್ಲಿ ಮಾರಾಟಗಾರನೊಂದಿಗೆ ಲಿಖಿತ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು. ಒಪ್ಪಂದವನ್ನು ತ್ರಿಪ್ರತಿಯಲ್ಲಿ ಮಾಡಿಕೊಳ್ಳತಕ್ಕದ್ದು. ಆ ಪೈಕಿ ಒಂದು ಪ್ರತಿಯನ್ನು ಖರೀದಿದಾರನು ಇಟ್ಟುಕೊಳ್ಳತಕ್ಕದ್ದು. ಎರಡನೆಯ ಪ್ರತಿಯನ್ನು ಮಾರಾಟಗಾರನು ಇಟ್ಟುಕೊಳ್ಳತಕ್ಕದ್ದು ಮತ್ತು ಮೂರನೇ ಪ್ರತಿಯನ್ನು ಮಾರುಕಟ್ಟೆ ಸಮಿತಿಗೆ ದಾಖಲೆಗಾಗಿ ಸಲ್ಲಿಸತಕ್ಕದ್ದು.

***77ಎ.**

*10ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿ ನೋಡಿ.

**[1][**78. ಕಮಿಷನ್ ಏಜೆಂಟರ ಕಮಿಷನ್ ಮತ್ತು ಹೊಣೆಗಾರಿಕೆ.–** (1) ಕಮಿಷನ್ ಏಜೆಂಟನು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅಧಿಸೂಚಿತ ಕೃಷಿ ಉತ್ಪನ್ನವನ್ನು ಮಾರಾಟ ಮಾಡಿರುವ ಬೆಲೆಯ ಶೇಕಡಾ ಎರಡರಷ್ಟು ಮೀರದ ದರದಲ್ಲಿ ಮಾರುಕಟ್ಟೆ ಸಮಿತಿಯ ಮೂಲಕ ತನ್ನ ಖರೀದಿದಾರನ ಕಡೆಯಿಂದ ಮಾತ್ರ ತನ್ನ ಕಮಿಷನ್‌ನ್ನು ಪಡೆಯತಕ್ಕದ್ದು:

ಪರಂತು, ಹಣ್ಣುಗಳು, ತರಕಾರಿಗಳು ಮತ್ತು ಹೂಗಳಂಥ ಅಧಿಸೂಚಿತ ಕೃಷಿ ಉತ್ಪನ್ನದ ಸಂದರ್ಭದಲ್ಲಿ, ಕಮಿಷನ್ ಏಜೆಂಟನು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅಂಥ ಅಧಿಸೂಚಿತ ಕೃಷಿ ಉತ್ಪನ್ನದ ಬೆಲೆಯ ಶೇಕಡಾ ಐದರಷ್ಟನ್ನು ಮೀರದಂಥ ದರಗಳಲ್ಲಿ ಕಮಿಷನನ್ನು ವಿಧಿಸಬಹುದು.

(2) ಕಮಿಷನ್ ಏಜೆಂಟನು,–

(ಎ) ಮಾರಾಟಗಾರನ ಸರಕುಗಳನ್ನು ದಾಸ್ತಾನಿಡುವುದಕ್ಕೆ ವ್ಯವಸ್ಥೆ ಮಾಡತಕ್ಕದ್ದು;

(ಬಿ) ಮಾರಾಟಗಾರನ ಸರಕುಗಳನ್ನು ಸುರಕ್ಷಿತ ಅಭಿರಕ್ಷೆಯಲ್ಲಿಡತಕ್ಕದ್ದು ಮತ್ತು ಅವುಗಳನ್ನು ಬೆಂಕಿ, ಕಳ್ಳತನ ಅಥವಾ ಪ್ರವಾಹ, ಮಳೆ ಅಥವಾ ಇತರ ಯಾವುದೇ ನೈಸರ್ಗಿಕ ವಿಪತ್ತುಗಳಿಂದ ರಕ್ಷಿಸಲು ಸಾಕಷ್ಟು ವಿಮೆ ಮಾಡಿಸತಕ್ಕದ್ದು; ಮತ್ತು

(ಸಿ) ಅಂಥ ಸರಕುಗಳು ಮಾರಾಟವಾದ ಕೂಡಲೇ ಸರಕುಗಳ ಬೆಲೆಯನ್ನು ನಗದು ರೂಪದಲ್ಲಿ ಮಾರಾಟಗಾರನಿಗೆ ಸಂದಾಯ ಮಾಡತಕ್ಕದ್ದು][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17–6–1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**61ನೇ ಪ್ರಕರಣದ ಕೆಳಗಿರುವ *ಚುಕ್ಕಿ ಗುರುತಿನ ಟಿಪ್ಪಣಿಯನ್ನು ಮತ್ತು *10ನೇ ಪ್ರಕರಣದ ಕೆಳಗಿರುವ *ಚುಕ್ಕಿ ಗುರುತಿನ ಟಿಪ್ಪಣಿಯನ್ನು ನೋಡಿ.

[1][**78ಎ. ಕಮೀಷನ್ ಏಜೆಂಟನು ಸಂದಾಯ ಮಾಡಲು ತಪ್ಪಿದಲ್ಲಿ ಆತನು ಹೆಚ್ಚುವರಿ ಸಂದಾಯ ಮಾಡುವುದು, ಇತ್ಯಾದಿ.–** 78ನೇ ಪ್ರಕರಣದ (2)ನೇ ಉಪಪ್ರಕರಣದ (ಸಿ) ಖಂಡದ ಮೇರೆಗೆ ಕಮೀಷನ್ ಏಜೆಂಟನು ಸಂದಾಯ ಮಾಡದಿದ್ದ ಸಂದರ್ಭದಲ್ಲಿ, ಮಾರಾಟಗಾರನಿಗೆ ಸಂದಾಯ ಮಾಡಬೇಕಾದ ಅಧಿಸೂಚಿತ ಕೃಷಿ ಉತ್ಪನ್ನದ ಒಟ್ಟು ಬೆಲೆಯ ಸಂಬಂಧದಲ್ಲಿ ದಿನ ಒಂದಕ್ಕೆ ಶೇಕಡಾ ಒಂದರ ದರದಲ್ಲಿ ಐದು ದಿನಗಳೊಳಗೆ ಹೆಚ್ಚುವರಿ ಸಂದಾಯ ಮಾಡಲು ಅವನು ಹೊಣೆಗಾರನಾಗಿರತಕ್ಕದ್ದು, ಅದಕ್ಕೆ ತಪ್ಪಿದಲ್ಲಿ, ಆರನೇ ದಿನದಂದು, ಸಂದರ್ಭಾನುಸಾರ, ಅವನ ಲೈಸೆನ್ಸ್ ಅಥವಾ ನೋಂದಣಿಯು ರದ್ದುಪಡಿಸುವುದಕ್ಕೆ ಗುರಿಯಾಗತಕ್ಕದ್ದು ಮತ್ತು ಅಂಥ ರದ್ದತಿಯ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ, ಈ ಅಧಿನಿಯಮದ ಮೇರೆಗೆ ಅವನನ್ನು ನೋಂದಾಯಿಸಿಕೊಳ್ಳತಕ್ಕದ್ದಲ್ಲ ಅಥವಾ ಯಾವುದೇ ಲೈಸೆನ್ಸನ್ನು ಮಂಜೂರು ಮಾಡತಕ್ಕದ್ದಲ್ಲ ಅಥವಾ ರಾಜ್ಯದೊಳಗಿನ ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ ಕಾರ್ಯನಿರ್ವಹಿಸಲು ಅನುಮತಿಸತಕ್ಕದ್ದಲ್ಲ][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**79. ಕೆಲವು ಸಂಗ್ರಹಣೆಗಳ ನಿಷೇಧ.–** (1) ಮಾರುಕಟ್ಟೆಯ ಯಾವನೇ ಕಾರ್ಯನಿರ್ವಾಹಕನು, ನಿಯಮಗಳಲ್ಲಿ ಅಥವಾ ಉಪವಿಧಿಗಳಲ್ಲಿ ನಿಯಮಿಸಿರುವಂತೆ ಹೊರತು, ಕಮೀಷನ್‌ನ, ಫೀಜುಗಳ, ಚಾರ್ಜುಗಳ ರೂಪದಲ್ಲಿ ಅಥವಾ ಯಾವುದೇ ಇತರ ರೂಪದಲ್ಲಿ ತನ್ನ ಸೇವೆಗಳಿಗಾಗಿ ಪರಿಶ್ರಮಧನವನ್ನು ಕೇಳತಕ್ಕದ್ದಲ್ಲ ಅಥವಾ ಸ್ವೀಕರಿಸತಕ್ಕದ್ದಲ್ಲ.

(2) ಕಮಿಷನ್ ಏಜೆಂಟನು ಮತ್ತು ಇತರ ಮಾರುಕಟ್ಟೆ ಕಾರ್ಯ ನಿರ್ವಾಹಕನು, ಈ ಅಧಿನಿಯಮ ಅಥವಾ ನಿಯಮಗಳು ಅಥವಾ ಉಪವಿಧಿಗಳು ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೇರೆಗೆ ಅನುಮತಿಸಬಹುದಾದಂಥ ಮಾರುಕಟ್ಟೆ ಚಾರ್ಜುಗಳು ಅಥವಾ ಫೀಜುಗಳು ಅಥವಾ ತೆರಿಗೆಗಳನ್ನು ಹೊರತುಪಡಿಸಿ ಇತರ ಚಾರ್ಜುಗಳು ಅಥವಾ ಫೀಜುಗಳು ಅಥವಾ ತೆರಿಗೆಗಳ ಬಗ್ಗೆ ಯಾವನೇ ವ್ಯಕ್ತಿಯನ್ನೂ ಕೇಳತಕ್ಕದ್ದಲ್ಲ ಅಥವಾ ಅವುಗಳನ್ನು ಅವನಿಂದ ಸ್ವೀಕರಿಸತಕ್ಕದ್ದಲ್ಲ ಅಥವಾ ವಸೂಲು ಮಾಡತಕ್ಕದ್ದಲ್ಲ ಅಥವಾ ಸಂಗ್ರಹಿಸತಕ್ಕದ್ದಲ್ಲ.

(3) ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನು ಯಾವ ಉತ್ಪಾದಕನೊಡನೆ ಅಥವಾ ಮಾರಾಟಗಾರನೊಡನೆ ತಾನು ಮಾರುಕಟ್ಟೆ ಕಾರ್ಯ ನಿರ್ವಾಹಕನಾಗಿ ವ್ಯವಹರಿಸುವನೋ ಅವನ ಕಡೆಯಿಂದ ಯಾವುದೇ ಸಮಾರಂಭದ ಬಗ್ಗೆ ಅಥವಾ ಯಾವುದೇ ಧಾರ್ಮಿಕ, ಶೈಕ್ಷಣಿಕ ಅಥವಾ ಧರ್ಮಾರ್ಥ ಉದ್ದೇಶಕ್ಕಾಗಿ ನಗದಾಗಿ ಅಥವಾ ವಸ್ತು ರೂಪದಲ್ಲಿ ಯಾವುದೇ ವಂತಿಗೆಯನ್ನು ಕೇಳತಕ್ಕದ್ದಲ್ಲ, ಸ್ವೀಕರಿಸತಕ್ಕದ್ದಲ್ಲ, ವಸೂಲಿ ಮಾಡತಕ್ಕದ್ದಲ್ಲ ಅಥವಾ ಸಂಗ್ರಹಿಸತಕ್ಕದ್ದಲ್ಲ.

[1][**79ಎ. ಮಾರುಕಟ್ಟೆ ಚಾರ್ಜುಗಳನ್ನು ಯಾರು ಸಂದಾಯ ಮಾಡಬೇಕು.–** ಕೃಷಿ ಉತ್ಪನ್ನದ ಮಾರಾಟದ ತರುವಾಯ ಸಂದಾಯವಾಗತಕ್ಕ ಎಲ್ಲ ಮಾರುಕಟ್ಟೆ ಚಾರ್ಜುಗಳನ್ನು ಖರೀದಿದಾರನ ಕಡೆಯಿಂದ ವಸೂಲ್ಮಾಡತಕ್ಕದ್ದು.][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**80. ನಿರ್ದಿಷ್ಟಪಡಿಸಲಾದ ಕಡಿತಗಳ ಹೊರತಾಗಿ, ತೂಕ ಅಥವಾ ಸಂದಾಯದಲ್ಲಿ ಕಡಿತವನ್ನು ಮಾಡದಿರುವುದು.–** (1) ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನು ಮತ್ತು ಯಾವನೇ ಇತರ ವ್ಯಕ್ತಿಯು, ಈ ಅಧಿನಿಯಮದಲ್ಲಿ, ನಿಯಮಗಳಲ್ಲಿ ಅಥವಾ ಉಪವಿಧಿಗಳಲ್ಲಿ ಉಪಬಂಧಿತವಾದ ಕಡಿತಗಳ ಅಥವಾ ರಿಯಾಯಿತಿಗಳ ಹೊರತಾಗಿ ಅಧಿಸೂಚಿತ ಕೃಷಿ ಉತ್ಪನ್ನಕ್ಕೆ ಸಂಬಂಧಪಡುವ ಯಾವುದೇ ವ್ಯವಹಾರದ ಸಂಬಂಧದಲ್ಲಿ, ತೂಕ ಅಥವಾ ಸಂದಾಯದಲ್ಲಿ ಯಾವುದೇ ಕಡಿತವನ್ನು ಮಾಡತಕ್ಕದ್ದಲ್ಲ ಅಥವಾ ಅನುಮತಿಸತಕ್ಕದ್ದಲ್ಲ ಅಥವಾ ಯಾವುದೇ ಇತರ ರಿಯಾಯಿತಿಗಳನ್ನು ನೀಡತಕ್ಕದ್ದಲ್ಲ, ಅನುಮತಿಸತಕ್ಕದ್ದಲ್ಲ, ಸ್ವೀಕರಿಸತಕ್ಕದ್ದಲ್ಲ ಅಥವಾ ವಸೂಲು ಮಾಡತಕ್ಕದ್ದಲ್ಲ ಮತ್ತು ಅಂಥ ವ್ಯವಹಾರದ ಸಂಬಂಧದಲ್ಲಿ ಉದ್ಭವಿಸುವ ಯಾವುದೇ ದಾವೆ ಅಥವಾ ವ್ಯವಹರಣೆಯಲ್ಲಿ ಯಾವುದೇ ಸಿವಿಲ್ ನ್ಯಾಯಾಲಯವು ಹಾಗೆ ಉಪಬಂಧಿಸಿರದ ಯಾವುದೇ ಕಡಿತ ಅಥವಾ ರಿಯಾಯಿತಿಯ ಬಗ್ಗೆ ಯಾವುದೇ ಕ್ಲೇಮನ್ನು ಸ್ವೀಕರಿಸತಕ್ಕದ್ದಲ್ಲ ಅಥವಾ ಅನುಮತಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಉದ್ದೇಶಕ್ಕಾಗಿ, ಈ ಕೆಳಕಂಡ ಕಡಿತಗಳು ಅನುಮತಿಸಬಹುದಾದ ಕಡಿತಗಳೆಂದು ಭಾವಿಸತಕ್ಕದ್ದು, ಎಂದರೆ:-

(i) ಮಾರುಕಟ್ಟೆ ಸಮಿತಿಯ ಉಪವಿಧಿಗಳು ಅಥವಾ ಸ್ಥಾಯಿ ಆದೇಶಗಳಿಗನುಸಾರ ನಿಗದಿಪಡಿಸಿದ ಬೆಲೆಯು ಧಾರಕದಲ್ಲಿರುವ ಸರಕುಗಳಿಗೆ ಮಾತ್ರ ಸಂಬಂಧಪಟ್ಟಿರುವ ಮತ್ತು ಮಾರುಕಟ್ಟೆ ಸಮಿತಿಯ ಉಪವಿಧಿಗಳು ಅಥವಾ ಸ್ಥಾಯಿ ಆದೇಶಗಳ ಅನುಸಾರ ಧಾರಕಕ್ಕಾಗಿ ಪ್ರತ್ಯೇಕ ಬೆಲೆಯನ್ನು ನಿಗದಿಪಡಿಸಬೇಕಾದಲ್ಲಿ ಅಥವಾ ಮಾರಾಟಗಾರನು ಆ ಧಾರಕವನ್ನು ತಾನೇ ಇಟ್ಟುಕೊಳ್ಳಬೇಕಾಗಿರುವಲ್ಲಿ ಅಥವಾ ಉಪೇಕ್ಷಿಸಬಹುದಾದ ಮೌಲ್ಯದ ವಸ್ತುವಿನಿಂದ ಧಾರಕವನ್ನು ಮಾಡಲಾಗಿದ್ದು ಯಾವುದೇ ಬೆಲೆಯ ಸಂದಾಯವಿಲ್ಲದೆ ಖರೀದಿದಾರನಿಗೆ ಅದನ್ನು ಕೊಡಲು ಅನುಮತಿಸಬಹುದಾಗಿರುವಂತಹದಾಗಿರುವಲ್ಲಿ ಧಾರಕದ ತೂಕವನ್ನು ಕಡಿತ ಮಾಡುವುದು;

(ii) ಮಾರುಕಟ್ಟೆ ಸಮಿತಿಯ ಉಪವಿಧಿಗಳು ಅಥವಾ ಸ್ಥಾಯಿ ಆದೇಶಗಳಿಗನುಸಾರ ಕಚ್ಚಾ ಉತ್ಪತ್ತಿಯನ್ನು ತೂಕ ಮಾಡಬೇಕಾಗಿದ್ದು ಅಂಥ ಉತ್ಪತ್ತಿಯನ್ನು ಕಮಿಷನ್ ಏಜೆಂಟನಿಗೆ ಮಾರಾಟಕ್ಕಾಗಿ ವಹಿಸಿಕೊಟ್ಟ ಕೂಡಲೇ ಅದರ ತೂಕವನ್ನು ದಾಖಲು ಮಾಡಬೇಕಾಗಿರುವಲ್ಲಿ ಮತ್ತು ಅದನ್ನು ಹಾಗೆ ವಹಿಸಿಕೊಟ್ಟ ದಿನದಂದೇ ಆ ಉತ್ಪತ್ತಿಯನ್ನು ಮಾರಾಟ ಮಾಡುವ ಸಂಭವ ಇಲ್ಲದಿರುವಲ್ಲಿ, ಆ ಕಚ್ಚಾ ಉತ್ಪತ್ತಿಯ ಒಣಗುವಿಕೆಯಿಂದಾಗಿ ಆ ಉಪವಿಧಿಗಳು ಅಥವಾ ಸ್ಥಾಯಿ ಆದೇಶಗಳ ಮೂಲಕ ನಿಗದಿಪಡಿಸಲಾಗುವಂತೆ ಆ ಉತ್ಪತ್ತಿಯ ತೂಕದಲ್ಲಿ ಕಡಿತ ಮಾಡುವುದು;

(iii) ವಸ್ತುವಿನ ಖರೀದಿಯನ್ನು ಮಾದರಿ ಅಥವಾ ಗೊತ್ತಾದ ಗುಣಮಟ್ಟದ ಆಧಾರದ ಮೇಲೆ ಮಾಡಲಾಗಿರುವಲ್ಲಿ, ಆ ಮಾದರಿ ಅಥವಾ ಗೊತ್ತಾದ ಗುಣಮಟ್ಟದಲ್ಲಿನ ವ್ಯತ್ಯಾಸದ ನಿಮಿತ್ತ, ಈ ಅಧಿನಿಯಮದ ಮೇರೆಗೆ ವಿವಾದಗಳನ್ನು ಇತ್ಯರ್ಥಕ್ಕಾಗಿ ವಹಿಸಿಕೊಡಲಾಗಿರುವ ಪ್ರಾಧಿಕಾರದ ತೀರ್ಮಾನಕ್ಕೆ ಅನುಸಾರ ಅದರ ತೂಕ ಅಥವಾ ಬೆಲೆಯಲ್ಲಿ ಕಡಿತವನ್ನು ಮಾಡುವುದು;

(iv) ರೂಢಿಗತ ಪರೀಕ್ಷೆಯಿಂದ ಕೂಡಲೇ ಪತ್ತೆ ಮಾಡಲಾಗದಂತಹ ಕಲಬೆರಕೆಯನ್ನು ಪತ್ತೆ ಹಚ್ಚುವ ನಿಮಿತ್ತ, ಈ ಅಧಿನಿಯಮದ ಮೇರೆಗೆ ವಿವಾದಗಳ ಇತ್ಯರ್ಥಕ್ಕಾಗಿ ವಹಿಸಿಕೊಡಲಾಗಿರುವ ಪ್ರಾಧಿಕಾರದ ತೀರ್ಮಾನಕ್ಕನುಸಾರ ಆ ವಸ್ತುವಿನ ತೂಕ ಅಥವಾ ಬೆಲೆಯಲ್ಲಿ ಕಡಿತವನ್ನು ಮಾಡುವುದು.

(3) (2)ನೇ ಉಪಪ್ರಕರಣದ (i)ನೇ ಖಂಡದ ಮೇರೆಗಿನ ಕಡಿತಗಳು, ಒಂದೇ ಬಗೆಯ ಧಾರಕಗಳ ಸಂಬಂಧದಲ್ಲಿ ರಾಜ್ಯದಲ್ಲಿನ ಎಲ್ಲಾ ಮಾರುಕಟ್ಟೆ ಪ್ರದೇಶಗಳಲ್ಲಿ ಏಕರೂಪದಲ್ಲಿವೆ ಎಂಬುದನ್ನು ಮತ್ತು (2)ನೇ ಉಪಪ್ರಕರಣದ (ii)ನೇ ಖಂಡದ ಮೇರೆಗಿನ ಕಡಿತಗಳು, ಒಂದೇ ಬಗೆಯ ಹವಾಮಾನ ಇರುವ ಪ್ರದೇಶಗಳಲ್ಲಿನ ಮಾರುಕಟ್ಟೆಗಳಲ್ಲಿ ಗಣನೀಯವಾಗಿ ವ್ಯತ್ಯಾಸವಾಗಿಲ್ಲ ಎಂಬುದನ್ನು [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನು ಖಚಿತಪಡಿಸಿಕೊಳ್ಳತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**81. ಮಾರುಕಟ್ಟೆ ಕಾರ್ಯನಿರ್ವಾಹಕರು ವರದಿಗಳನ್ನು ಸಲ್ಲಿಸುವುದು.–** (1) [1][ಖಾಸಗಿ ಮಾರುಕಟ್ಟೆ ಮತ್ತು ರೈತ–ಗ್ರಾಹಕ ಮಾರುಕಟ್ಟೆಗಳ ಲೈಸೆನ್ಸುದಾರರನ್ನು ಹೊರತುಪಡಿಸಿ][1] ಮಾರುಕಟ್ಟೆ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿರುವ ಲೈಸನ್ಸನ್ನು ಪಡೆದ ಪ್ರತಿಯೊಬ್ಬ ವ್ಯಾಪಾರಿ, ಕಮಿಷನ್ ಏಜೆಂಟನು, ಜಿನ್ನರ್, ಪ್ರೆಸ್ಸರ್, ಸಂಸ್ಕರಣಕಾರ, ಉಗ್ರಾಣಕಾರ, ಆಮದುದಾರ, ರಫ್ತುದಾರ, ದಾಸ್ತಾನುದಾರ ಮತ್ತು ಯಾವನೇ ಇತರ ಮಾರುಕಟ್ಟೆ ಕಾರ್ಯನಿರ್ವಾಹಕನು ನಿಯಮಗಳು ಅಥವಾ ಉಪವಿಧಿಗಳ ಮೂಲಕ ಗೊತ್ತುಪಡಿಸಬಹುದಾದಂಥ ಅಥವಾ ಮಾರುಕಟ್ಟೆ ಸಮಿತಿಯು ಸ್ಥಾಯಿ ಆದೇಶಗಳ ಮೂಲಕ ಕಾಲಕಾಲಕ್ಕೆ ನಿರ್ದೇಶಿಸಬಹುದಾದಂಥ ರೀತಿಯಲ್ಲಿ ಲೆಕ್ಕಪತ್ರಗಳನ್ನು ನಿರ್ವಹಿಸತಕ್ಕದ್ದು ಮತ್ತು ಅವರು ಅಂಥ ನಿಯತಕಾಲಿಕ ವರದಿಗಳನ್ನು ಮತ್ತು ವಿವರಪಟ್ಟಿಕೆಗಳನ್ನು ಅಂಥ ಕಾಲಗಳಲ್ಲಿ ಮತ್ತು ಅಂಥ ನಮೂನೆಗಳಲ್ಲಿ ಮಾರುಕಟ್ಟೆ ಸಮಿತಿಗೆ ಅಥವಾ ಈ ಬಗ್ಗೆ ಆ ಸಮಿತಿಯು ನಿರ್ದಿಷ್ಟಪಡಿಸಿದ ಅಧಿಕಾರಿಗೆ ಸಲ್ಲಿಸತಕ್ಕದ್ದು:

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][ಪರಂತು, ನಿರ್ದಿಷ್ಟಪಡಿಸಿದ ಅವಧಿಯೊಳಗೆ ಮಾರುಕಟ್ಟೆ ಕಾರ್ಯನಿರ್ವಾಹಕರು ವಿವರ ಪಟ್ಟಿಕೆಗಳನ್ನು ಸಲ್ಲಿಸಲು ತಪ್ಪಿದಲ್ಲಿ, ಮಾರುಕಟ್ಟೆ ಸಮಿತಿಯು ಒಂದು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಐದು ಸಾವಿರ ರೂಪಾಯಿಗಳಿಗೆ ಮೀರದ ದಂಡವನ್ನು ವಿಧಿಸತಕ್ಕದ್ದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1]**[81ಎ. ಖಾಸಗಿ ಮಾರುಕಟ್ಟೆ ಲೈಸೆನ್ಸುದಾರನಿಂದ, ರೈತ–ಗ್ರಾಹಕ ಮಾರುಕಟ್ಟೆ ಲೈಸೆನ್ಸುದಾರನಿಂದ ವರದಿಗಳು.–** ಪ್ರತಿಯೊಬ್ಬ ಖಾಸಗಿ ಮಾರುಕಟ್ಟೆ ಲೈಸೆನ್ಸುದಾರನು, ನೇರ ಖರೀದಿ ಲೈಸೆನ್ಸುದಾರನು ಹಾಗೂ ರೈತ–ಗ್ರಾಹಕ ಮಾರುಕಟ್ಟೆ ಲೈಸೆನ್ಸುದಾರನು ಕೃಷಿ ಮಾರುಕಟ್ಟೆ ನಿರ್ದೇಶಕನು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ಲೆಕ್ಕಪತ್ರವನ್ನು ನಿರ್ವಹಿಸತಕ್ಕದ್ದು ಮತ್ತು ನಿರ್ದಿಷ್ಟಪಡಿಸಬಹುದಾದಂಥ ನಮೂನೆಗಳಲ್ಲಿ ನಿಯತಕಾಲಿಕ ವರದಿಗಳನ್ನು ಹಾಗೂ ವಿವರಪಟ್ಟಿಕೆಗಳನ್ನು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅಥವಾ ಆ ಸಂಬಂಧದಲ್ಲಿ ಆತನು ಅಧಿಕೃತಗೊಳಿಸಿದ ಅಧಿಕಾರಿಗೆ ಸಲ್ಲಿಸತಕ್ಕದ್ದು:

ಪರಂತು, ಮೇಲೆ ನಿರ್ದಿಷ್ಟಪಡಿಸಿದ ಲೈಸೆನ್ಸುದಾರನು ನಿಯಮಿಸಲಾದ ಸಮಯದೊಳಗೆ ವಿವರ ಪಟ್ಟಿಕೆಯನ್ನು ಸಲ್ಲಿಸಲು ವಿಫಲನಾದರೆ, ಕೃಷಿ ಮಾರುಕಟ್ಟೆ ನಿರ್ದೇಶಕನು ಒಂದು ಸಾವಿರ ರೂಪಾಯಿಗಳಿಗೆ ಕಡಿಮೆಯಿಲ್ಲದಂತೆ, ಆದರೆ, ಐದು ಸಾವಿರ ರೂಪಾಯಿಗಳಿಗೆ ಮೀರದಂತೆ ದಂಡವನ್ನು ವಿಧಿಸತಕ್ಕದ್ದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**82. ಮಾರುಕಟ್ಟೆ ಕಾರ್ಯನಿರ್ವಾಹಕರು ನೆರವು ನೀಡುವುದು.–** ಪ್ರತಿಯೊಬ್ಬ ಮಾರುಕಟ್ಟೆ ಕಾರ್ಯನಿರ್ವಾಹಕನು, ಈ ಅಧಿನಿಯಮದ, ನಿಯಮಗಳ ಮತ್ತು ಉಪವಿಧಿಗಳ ಮೇರೆಗೆ ಬಾಕಿ ಇರುವ ಫೀಜುಗಳು ಅಥವಾ ಇತರ ಮೊಬಲಗುಗಳನ್ನು ಸಂಗ್ರಹಿಸುವಲ್ಲಿ ಮತ್ತು ಅವುಗಳ ಸಂದಾಯದ ತಪ್ಪಿಸುವಿಕೆಯನ್ನು ತಡೆಯುವಲ್ಲಿ ಮತ್ತು ಈ ಅಧಿನಿಯಮದ, ನಿಯಮಗಳ ಮತ್ತು ಉಪವಿಧಿಗಳ, ಉಪಬಂಧಗಳ ಉಲ್ಲಂಘನೆಯನ್ನು ತಡೆಯುವಲ್ಲಿ ಮಾರುಕಟ್ಟೆ ಸಮಿತಿಯು ಅಗತ್ಯಪಡಿಸಬಹುದಾದಂಥ ನೆರವನ್ನು ನೀಡತಕ್ಕದ್ದು.

[1]**[82ಎ. ಮುಷ್ಕರ ಮುಂತಾದವುಗಳಲ್ಲಿ ಮಾರುಕಟ್ಟೆ ಕಾರ್ಯನಿರ್ವಾಹಕನು ಭಾಗವಹಿಸದಿರುವುದು.–** ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನು ಮಾರುಕಟ್ಟೆ ಸಮಿತಿಗೆ ಏಳು ದಿನಗಳಿಗೆ ಕಡಿಮೆಯಲ್ಲದ ನೋಟೀಸನ್ನು ಕೊಡದೆ ಯಾವುದೇ ಪ್ರದರ್ಶನ ಅಥವಾ ಮುಷ್ಕರದಲ್ಲಿ ಭಾಗವಹಿಸತಕ್ಕದ್ದಲ್ಲ.][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**83. ಮಾರುಕಟ್ಟೆ ಕಾರ್ಯನಿರ್ವಾಹಕರು ಲೆಕ್ಕಪುಸ್ತಕಗಳು ಮುಂತಾದವುಗಳನ್ನು ಹಾಜರುಪಡಿಸುವುದು.–** (1) ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನು, 81ನೇ ಪ್ರಕರಣದ ಉಪಬಂಧಗಳಿಗನುಸಾರ ಯಾವುದೇ ವರದಿಯನ್ನು ಅಥವಾ ವಿವರ ಪಟ್ಟಿಕೆಯನ್ನು ಕಳುಹಿಸಲು ತಪ್ಪಿದರೆ ಅಥವಾ ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನ ವ್ಯವಹಾರಕ್ಕೆ ಸಂಬಂಧಿಸಿದಂತೆ ಅವನು ಸಲ್ಲಿಸಿದ ಯಾವುದೇ ವರದಿಯ ಅಥವಾ ವಿವರಪಟ್ಟಿಕೆಯ ಯಥಾರ್ಥತೆಯನ್ನು ಮನವರಿಕೆ ಮಾಡಿಕೊಳ್ಳುವುದಕ್ಕಾಗಿ ಅಥವಾ ಯಾವುವೇ ಇತರ ಸಾಕಷ್ಟು ಕಾರಣಗಳಿಗಾಗಿ ಅವನ ಲೆಕ್ಕದ ಪುಸ್ತಕಗಳನ್ನು ಪರೀಕ್ಷಿಸುವುದು ಸಮಿತಿಯು ಅವಶ್ಯವೆಂದು

ಪರಿಗಣಿಸಿದರೆ ಮಾರುಕಟ್ಟೆ ಸಮಿತಿಯ ಮುಂದೆ ಅಥವಾ ಈ ಸಂಬಂಧದಲ್ಲಿ ಅದು ನಿರ್ದಿಷ್ಟಪಡಿಸಿದ ಯಾವನೇ ಅಧಿಕಾರಿಯ ಮುಂದೆ, ಲೆಕ್ಕಪುಸ್ತಕಗಳನ್ನು ಮತ್ತು ಇತರ ಸಂಬಂಧಪಟ್ಟ ಪುಸ್ತಕಗಳನ್ನು ಮತ್ತು ದಸ್ತಾವೇಜುಗಳನ್ನು, ಪರಿಶೀಲನೆಗಾಗಿ ಹಾಜರುಪಡಿಸುವಂತೆ ಮತ್ತು ಅದರ ಒಳಾಂಶಗಳನ್ನು ವಿವರಿಸುವಂತೆ ಅಂತಹ ಕಾರ್ಯನಿರ್ವಾಹಕನಿಗೆ ಸಮಿತಿಯು ನಿರ್ದೇಶಿಸಬಹುದು.

(2) ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನು, (1)ನೇ ಉಪಪ್ರಕರಣದ ಮೇರೆಗೆ ನೀಡಿದ ಮಾರುಕಟ್ಟೆ ಸಮಿತಿಯ ನಿರ್ದೇಶನಗಳನ್ನು ಸಾಕಷ್ಟು ಕಾರಣಗಳಿಲ್ಲದೆ ಪಾಲಿಸಲು ತಪ್ಪಿದರೆ ನಿಯಮಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ತರುವಾಯ ಮಾರುಕಟ್ಟೆ ಸಮಿತಿಯು ಅಂಥ ಕಾರ್ಯನಿರ್ವಾಹಕನ ವಿರುದ್ಧ ಕೈಕೊಳ್ಳಬಹುದಾದ ಯಾವುದೇ ಇತರ ಕ್ರಮಕ್ಕೆ ಪ್ರತಿಕೂಲವಾಗದಂತೆ, ಉಪವಿಧಿಗಳ ಮೂಲಕ ನಿಯಮಿಸಬಹುದಾದಂಥ ಮೊಬಲಗನ್ನು ದಂಡದ ರೂಪದಲ್ಲಿ ಸಮಿತಿಗೆ ಸಂದಾಯ ಮಾಡುವಂತೆ ಅವನಿಗೆ ನಿರ್ದೇಶಿಸಬಹುದು.

[1][**83ಎ. ಮಾರುಕಟ್ಟೆ ಫೀಜನ್ನು ವಿವೇಚನಾನುಸಾರ ನಿರ್ಧರಿಸುವುದು.**– (1) ಮಾರುಕಟ್ಟೆ ಕಾರ್ಯನಿರ್ವಾಹಕನು 81ನೇ ಪ್ರಕರಣದ ಮೇರೆಗೆ ವರದಿಗಳನ್ನು ಮತ್ತು ವಿವರಪಟ್ಟಿಕೆಗಳನ್ನು ಸಲ್ಲಿಸಲು ತಪ್ಪಿದರೆ ಮತ್ತು ಮಾರುಕಟ್ಟೆ ಸಮಿತಿಯ ಯಾವುದೇ ನೋಟೀಸನ್ನು ಪಾಲಿಸಲು ತಪ್ಪಿದರೆ, ಮಾರುಕಟ್ಟೆ ಸಮಿತಿಯು ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆ ನಡೆಸಿದ ತರುವಾಯ, ಅಂಥ ಕಾರ್ಯನಿರ್ವಾಹಕನ ವಿರುದ್ಧ ಕೈಕೊಳ್ಳಬಹುದಾದ ಯಾವುದೇ ಇತರ ಕ್ರಮಕ್ಕೆ ಪ್ರತಿಕೂಲವಾಗದಂತೆ ಸಂಬಂಧಪಟ್ಟ ಅವಧಿಯಲ್ಲಿ ಅಂಥ ಮಾರುಕಟ್ಟೆ ಕಾರ್ಯನಿರ್ವಾಹಕನು ಸಂದಾಯ ಮಾಡತಕ್ಕ ಮಾರುಕಟ್ಟೆ ಫೀಜನ್ನು ತನ್ನ ವಿವೇಚನಾನುಸಾರ ನಿರ್ಧರಿಸಬಹುದು ಮತ್ತು ಅಂಥ ಫೀಜನ್ನು ಹಾಗೆ ನಿರ್ಧರಿಸಿದ ಮಾರುಕಟ್ಟೆ ಫೀಜಿನ ಮೂರರಷ್ಟನ್ನು ಮೀರದಂಥ ದಂಡದೊಂದಿಗೆ ಸಂದಾಯ ಮಾಡುವಂತೆ ಅವನಿಗೆ ನಿರ್ದೇಶಿಸಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ಮಾರುಕಟ್ಟೆ ಸಮಿತಿಯು ಮಾಡಿದ ಆದೇಶದಿಂದ ಬಾಧಿತನಾದ ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನು ಅಂಥ ಆದೇಶವನ್ನು ಅವನಿಗೆ ತಿಳಿಯಪಡಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ, ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅಥವಾ ಈ ಸಂಬಂಧವಾಗಿ ಅವನಿಂದ ಅಧಿಕಾರ ಪಡೆದ ಅಧಿಕಾರಿಗೆ ಅಪೀಲು ಸಲ್ಲಿಸಬಹುದು ಮತ್ತು ಆ ಸಂಬಂಧದಲ್ಲಿ ಅವನ ತೀರ್ಮಾನವು ಅಂತಿಮವಾಗಿರತಕ್ಕದ್ದು.][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(3) (2)ನೇ ಉಪಪ್ರಕರಣದ ಮೇರೆಗೆ ಸಲ್ಲಿಸಲಾಗುವ ಯಾವುದೇ ಅಪೀಲಿಗೆ ಸಂಬಂಧಪಟ್ಟ ಮಾರುಕಟ್ಟೆ ಸಮಿತಿಯಲ್ಲಿ ವಿವಾದಾಸ್ಪದ ಮೊಬಲಗನ್ನು ಠೇವಣಿ ಇಟ್ಟಿರುವ ಬಗ್ಗೆ ತೃಪ್ತಿಕರವಾದ ರುಜುವಾತುಗಳನ್ನು ಲಗತ್ತಿಸಿದ್ದ ಹೊರತು ಆ ಅಪೀಲನ್ನು ಕೃಷಿ ಮಾರುಕಟ್ಟೆ ನಿರ್ದೇಶಕನು ಅಂಗೀಕರಿಸತಕ್ಕದ್ದಲ್ಲ.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**84. ವಿವಾದಗಳ ಇತ್ಯರ್ಥಕ್ಕಾಗಿ ಏರ್ಪಾಟು.**– (1) ಯಾವುದೇ ಕೃಷಿ ಉತ್ಪನ್ನದ ಗುಣಮಟ್ಟ ಅಥವಾ ತೂಕ ಅಥವಾ ಆ ಬಗ್ಗೆ ಮಾಡಲಾಗುವ ಹಣ ಸಂದಾಯ ಇವುಗಳಿಗೆ ಸಂಬಂಧಿಸಿದ ಯಾವುದೇ ವಿವಾದವು ಸೇರಿ ಉತ್ಪಾದಕರು, ಖರೀದಿದಾರರು ಮತ್ತು ಮಾರಾಟಗಾರರು ಅಥವಾ ಅವರ ಏಜೆಂಟರು, ಇವರ ನಡುವಿನ ವಿವಾದಗಳನ್ನು ಅಥವಾ [1][ಮಾರುಕಟ್ಟೆ ಪ್ರಾಂಗಣದಲ್ಲಿ, ಮಾರುಕಟ್ಟೆ ಉಪಪ್ರಾಂಗಣದಲ್ಲಿ ಅಥವಾ ಸಂದರ್ಭಾನುಸಾರ, ಉಪ ಮಾರುಕಟ್ಟೆ ಪ್ರಾಂಗಣದಲ್ಲಿ][1] ಮಾರುಕಟ್ಟೆ ವ್ಯವಹಾರದ ನಿಯಂತ್ರಣಕ್ಕೆ ಸಂಬಂಧಪಟ್ಟ ಯಾವುದೇ ವಿಷಯವನ್ನು ಇತ್ಯರ್ಥಪಡಿಸುವ ಉದ್ದೇಶಕ್ಕಾಗಿ ಆ ಪ್ರದೇಶದ ಮಾರುಕಟ್ಟೆ ಸಮಿತಿಯು, ಕೃಷಿಕರು, ವ್ಯಾಪಾರಿಗಳು ಮತ್ತು ಕಮಿಷನ್ ಏಜೆಂಟರು, ಇವರನ್ನೊಳಗೊಂಡ ಮಧ್ಯಸ್ಥಗಾರರ ಸಮಿತಿಯನ್ನು ಆಯಾ ಅವಧಿಗೆ ನೇಮಕ ಮಾಡತಕ್ಕದ್ದು ಮತ್ತು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಆ ಸಮಿತಿಯ ಸದಸ್ಯರಲ್ಲಿ ಕೆಲವರನ್ನೊಳಗೊಂಡ ಒಂದು ವಿವಾದ ಸಮಿತಿಯನ್ನು ರಚಿಸತಕ್ಕದ್ದು.

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ವಿವಾದಗಳ ಇತ್ಯರ್ಥದ ಕಾರ್ಯವಿಧಾನ, ವಿವಾದಗಳ ಇತ್ಯರ್ಥಕ್ಕಾಗಿ ಪ್ರಾಧಿಕಾರ ಅಥವಾ ಪ್ರಾಧಿಕಾರಗಳು, ಮತ್ತು ಅಂಥ ಪ್ರಾಧಿಕಾರಗಳ ತೀರ್ಮಾನದ ವಿರುದ್ಧ ಸಲ್ಲಿಸಲಾಗುವ ಅಪೀಲುಗಳು, ಮಧ್ಯಸ್ಥಗಾರ ಅಥವಾ ಮಧ್ಯಸ್ಥಗಾರರಿಂದ ಆದ ವಿವಾದಗಳ ಇತ್ಯರ್ಥದ ಬಗ್ಗೆ ಪಕ್ಷಕಾರರಿಂದ ಫೀಜುಗಳ ಸಂದಾಯ ಮತ್ತು ಮಧ್ಯಸ್ಥಗಾರಿಕೆ ಅಧಿನಿಯಮ, 1940 ಇದರ ಉಪಬಂಧಗಳು ಈ ಪ್ರಕರಣದ ಮೇರೆಗಿನ ಮಧ್ಯಸ್ಥಗಾರಿಕೆಗಳಿಗೆ ಎಷ್ಟರಮಟ್ಟಿಗೆ ಅನ್ವಯವಾಗತಕ್ಕದ್ದೆಂಬ ವಿಷಯವು ಸೇರಿ ಅಂಥ ಇತ್ಯರ್ಥಕ್ಕೆ ಸಂಬಂಧಿಸಿದ ಇತರ ಎಲ್ಲ ವಿಷಯಗಳು – ಇವುಗಳ ಬಗ್ಗೆ ನಿಯಮಗಳನ್ನು ರಚಿಸತಕ್ಕದ್ದು.

(3) (2)ನೇ ಉಪಪ್ರಕರಣದ ಮೇರೆಗೆ ರಚಿಸಲಾದ ನಿಯಮಗಳಿಗೊಳಪಟ್ಟು, ಮಾರುಕಟ್ಟೆ ಸಮಿತಿಯು, ಮಾರುಕಟ್ಟೆ ಪ್ರದೇಶದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನದ ವ್ಯವಹಾರಕ್ಕೆ ಸಂಬಂಧಿಸಿದ ವಿವಾದಗಳ ಇತ್ಯರ್ಥಕ್ಕೆ ಸಂಬಂಧಪಟ್ಟ ವಿವರಗಳನ್ನು ವಿನಿಯಮಗೊಳಿಸಲು ಉಪವಿಧಿಗಳನ್ನು ರಚಿಸಬಹುದು.

(4) ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಮಾರುಕಟ್ಟೆ ಸಮಿತಿಯ ಪೂರ್ವ ಮಂಜೂರಾತಿ ಇಲ್ಲದೆ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿರುವ ವಿವಾದಗಳ ಸಂಬಂಧದಲ್ಲಿ ಯಾವುದೇ ನ್ಯಾಯಾಲಯವು ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ವಿಚಾರಣೆಗಾಗಿ ಸ್ವೀಕರಿಸತಕ್ಕದ್ದಲ್ಲ.

[1][**84ಎ. ಉತ್ಪಾದಕ, ಕೊಂಡುಕೊಳ್ಳುವವ, ಮಾರಾಟಗಾರ, ಖಾಸಗಿ ಮಾರುಕಟ್ಟೆ ಲೈಸೆನ್ಸುದಾರ, ನೇರ ಖರೀದಿ ಲೈಸೆನ್ಸುದಾರ ಅಥವಾ ರೈತ–ಗ್ರಾಹಕ ಮಾರುಕಟ್ಟೆ ಲೈಸೆನ್ಸುದಾರ ಇವರುಗಳ ನಡುವಿನ ವಿವಾದಗಳ ಇತ್ಯರ್ಥಕ್ಕಾಗಿ ಉಪಬಂಧ.–** (1) ಉತ್ಪಾದಕ, ಕೊಂಡುಕೊಳ್ಳುವ, ಮಾರಾಟಗಾರವ, ಮತ್ತು ಖಾಸಗಿ ಮಾರುಕಟ್ಟೆ ಲೈಸೆನ್ಸುದಾರ, ನೇರ ಖರೀದಿ ಲೈಸೆನ್ಸುದಾರ, ರೈತ–ಗ್ರಾಹಕ ಮಾರುಕಟ್ಟೆ ಲೈಸೆನ್ಸುದಾರ ಇವರುಗಳ ನಡುವಿನ ಯಾವುದೇ ವಿವಾದವನ್ನು, ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅಥವಾ ಈ ಸಂಬಂಧದಲ್ಲಿ ಆತನು ಅಧಿಕೃತಗೊಳಿಸಿದ ಯಾರೇ ಅಧೀನ ಅಧಿಕಾರಿಗೆ ಒಪ್ಪಿಸತಕ್ಕದ್ದು. ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಆತನಿಂದ ಅಧಿಕೃತನಾದ ಅಧಿಕಾರಿಯು, ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಉಭಯ ಪಕ್ಷಕಾರರಿಗೆ ತಮ್ಮ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡಿದ ತರುವಾಯ ವಿವಾದವನ್ನು ತೀರ್ಮಾನಿಸತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಅಂಥ ಅಧಿಕಾರಿಗಳ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು, ಆ ಆದೇಶ ತಲುಪಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಕರ್ನಾಟಕ ಅಪೀಲು ನ್ಯಾಯಾಧಿಕರಣಕ್ಕೆ ಅಪೀಲು ಸಲ್ಲಿಸಬಹುದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

*[1][**85. ವ್ಯಾಪಾರಿಗಳು ಒದಗಿಸಬೇಕಾದ ಭದ್ರತೆ:–** ಯಾವನೇ ವ್ಯಾಪಾರಿಯು ಒಂದು ಸಾವಿರ ರೂಪಾಯಿಗೆ ಕಡಿಮೆ ಇಲ್ಲದಂತೆ ಮಾರುಕಟ್ಟೆ ಸಮಿತಿಯಲ್ಲಿ ಠೇವಣಿ ಇಟ್ಟ ಹೊರತು ಅಥವಾ ಮಾರುಕಟ್ಟೆ ಸಮಿತಿಗೆ ನಗದು ಭದ್ರತೆ ಅಥವಾ ಬ್ಯಾಂಕ್ ಖಾತರಿಯನ್ನು ಒದಗಿಸಿದ ಹೊರತು, ಆತನು ಸಾಲವಾಗಿ ಯಾವನೇ ಕಮಿಷನ್ ಏಜೆಂಟನಿಂದ ಯಾವುದೇ ಸರಕುಗಳನ್ನು ಕೊಂಡುಕೊಳ್ಳತಕ್ಕದ್ದಲ್ಲ ಅಥವಾ ವಶಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ ಮತ್ತು ಕಮಿಷನ್ ಏಜೆಂಟನಿಂದ ಸಾಲವಾಗಿ ಸರಕುಗಳನ್ನು ಕೊಳ್ಳಲಿಚ್ಛಿಸುವ ಅಥವಾ ವಶಕ್ಕೆ ತೆಗೆದುಕೊಳ್ಳಲಿಚ್ಛಿಸುವ ಯಾವನೇ ವ್ಯಕ್ತಿಗೆ ಯಾವುದೇ ವ್ಯಾಪಾರದ ಲೈಸೆನ್ಸನ್ನು ನೀಡತಕ್ಕದ್ದಲ್ಲ.

(2) ಲೈಸೆನ್ಸ್ ಪಡೆದ ಯಾವನೇ ವ್ಯಾಪಾರಿಯು, ಸರಕುಗಳನ್ನು ಖರೀದಿಸಿದ ಕಾರಣದಿಂದ ತಾನು ಠೇವಣಿಯಿಟ್ಟ ಅಥವಾ ಒದಗಿಸಿದ ಭದ್ರತೆ ಅಥವಾ ಖಾತರಿಯು, ಉಪವಿಧಿಗಳಲ್ಲಿ ಉಪಬಂಧಿಸಲಾದಂಥ ಶೇಕಡಾವಾರಿಗಿಂತ ಕಡಿಮೆ ಬೀಳುವಷ್ಟರ ಮಟ್ಟಿಗೆ ಅಂಥ ಲೈಸೆನ್ಸ್ ಪಡೆದ ಕಮಿಷನ್ ಏಜೆಂಟನಿಗೆ ಸಾಲಗಾರನಾಗುವ ಹಾಗೆ, ಮಾರುಕಟ್ಟೆ ಪ್ರಾಂಗಣದಲ್ಲಿ ಅವರಿಂದ ಸರಕುಗಳನ್ನು ಖರೀದಿಸತಕ್ಕದ್ದಲ್ಲ ಅಥವಾ ವಶಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ ಮತ್ತು ಈ ಶೇಕಡಾವಾರು ಅಂಥ ಸಾಲ ಖರೀದಿಗಳಿಂದ ಉಂಟಾಗುವ ಸಾಲದ ಒಟ್ಟು ಮೊತ್ತದ ಶೇಕಡ ಒಂದಕ್ಕಿಂತ ಕಡಿಮೆಯಾಗಿರತಕ್ಕದ್ದಲ್ಲ.][1]

1. 1987ರ ಅಧಿನಿಯಮ ಸಂಖ್ಯೆ 29ರ ಮೂಲಕ 10–8–1987ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

* 61ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿ ನೋಡಿ.

***86. ಕಮಿಷನ್ ಏಜೆಂಟರು ನೀಡಬೇಕಾದ ಭದ್ರತೆ.–** ಯಾವನೇ ವ್ಯಕ್ತಿಯು, ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಒಂದು ಸಾವಿರ ರೂಪಾಯಿಗೆ ಕಡಿಮೆ ಇಲ್ಲದ ಆದರೆ ಐದು ಸಾವಿರ ರೂಪಾಯಿಗಳನ್ನು ಮೀರದಂತೆ, ಮಾರುಕಟ್ಟೆ ಸಮಿತಿಯಲ್ಲಿ ಠೇವಣಿಯಿಟ್ಟ ಹೊರತು, ಅಥವಾ ಮಾರುಕಟ್ಟೆ ಸಮಿತಿಗೆ ನಗದು ಭದ್ರತೆ ಅಥವಾ ಬ್ಯಾಂಕ್ ಖಾತರಿಯನ್ನು ಒದಗಿಸಿದ ಹೊರತು, ಕಮಿಷನ್ ಏಜೆಂಟನಾಗಿ ಕಾರ್ಯನಿರ್ವಹಿಸತಕ್ಕದ್ದಲ್ಲ. ಅಥವಾ ಯಾವನೇ ವ್ಯಕ್ತಿಗೆ ಕಮಿಷನ್ ಏಜೆಂಟ್ ಲೈಸೆನ್ಸನ್ನು ನೀಡತಕ್ಕದ್ದಲ್ಲ.

* 61ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿ ನೋಡಿ.

[1][(2)XXX][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17–6–1986 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**87. ಬ್ಯಾಂಕಿನಲ್ಲಿ ನಗದು ಭದ್ರತೆಯ ಠೇವಣಿ.–** ವ್ಯಾಪಾರಿಯು ಅಥವಾ ಕಮಿಷನ್ ಏಜೆಂಟನು ಠೇವಣಿ ಇಟ್ಟ ನಗದು ಭದ್ರತೆಯು ಮಾರುಕಟ್ಟೆ ನಿಧಿಯ ಭಾಗವಾಗತಕ್ಕದ್ದಲ್ಲ. ಆದರೆ, ವ್ಯಾಪಾರಿ ಅಥವಾ ಕಮಿಷನ್ ಏಜೆಂಟನು ನಿರ್ದಿಷ್ಟಪಡಿಸಬಹುದಾದಂತೆ, ಮಾರುಕಟ್ಟೆ ಸಮಿತಿಯ ಕಚೇರಿಯು ಇರುವಂಥ ಸ್ಥಳದಲ್ಲಿರುವ ಬ್ಯಾಂಕಿನಲ್ಲಿ ಮಾರುಕಟ್ಟೆ ಸಮಿತಿಯು ಅದನ್ನು ಠೇವಣಿ ಇಡತಕ್ಕದ್ದು. ಭದ್ರತೆಯಾಗಿ ಇಡಲಾದ ಠೇವಣಿಯ ಮೊಬಲಗಿನ ಸಂಬಂಧದಲ್ಲಿ ಬ್ಯಾಂಕು ಜಮೆ ಮಾಡುವಂಥ ಬಡ್ಡಿಯಷ್ಟರ ಮಟ್ಟಿಗೆ ಆ ನಗದು ಭದ್ರತೆಯು ಹೆಚ್ಚಾಗಿದೆಯೆಂದು ಪರಿಗಣಿಸತಕ್ಕದ್ದು.

**88. ಭದ್ರತೆಯ ಮೇಲೆ ಋಣಭಾರ ಮತ್ತು ಭದ್ರತಾ ಠೇವಣಿ ಮರುಪಾವತಿ.–** (1) 85ನೇ ಅಥವಾ 86ನೇ ಪ್ರಕರಣದ ಮೇರೆಗೆ ಲೈಸೆನ್ಸ್‌ದಾರನು ಠೇವಣಿ ಇಟ್ಟ ಭದ್ರತೆಯನ್ನು ಅಥವಾ ಒದಗಿಸಿದ ಬ್ಯಾಂಕ್ ಖಾತರಿಯನ್ನು ಮಾರುಕಟ್ಟೆ ಸಮಿತಿ ಅಥವಾ ಈ ಅಧಿನಿಯಮದ ಅಥವಾ ನಿಯಮಗಳ ಅಥವಾ ಅದರ ಮೇರೆಗೆ ರಚಿಸಲಾಗುವ ಉಪವಿಧಿಗಳ ಮೇರೆಗೆ ಲೈಸೆನ್ಸ್‌ದಾರನು ಮಾರುಕಟ್ಟೆ ಸಮಿತಿಗೆ [1][ಅಥವಾ ಉತ್ಪಾದಕನಿಗೆ, ಮಾರಾಟಗಾರನಿಗೆ][1] ಅಥವಾ ಇತರ ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ, ಯಾವುದೇ ಹಣವನ್ನು ಸಂದಾಯ ಮಾಡುವಲ್ಲಿ ಅವನು ಮಾಡಿದ ಯಾವುದೇ ತಪ್ಪಿಗೆ ಮುಟ್ಟುಗೋಲು ಹಾಕಿಕೊಳ್ಳಲು ಮಾರುಕಟ್ಟೆ ಸಮಿತಿಗೆ ಅವಕಾಶವಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17–6–1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) 85ನೇ ಅಥವಾ 86ನೇ ಪ್ರಕರಣದ ಮೇರೆಗೆ ಲೈಸೆನ್ಸ್‌ದಾರನು ಠೇವಣಿ ಇಟ್ಟ ಭದ್ರತೆಯನ್ನು ಅಥವಾ ಒದಗಿಸಿದ ಬ್ಯಾಂಕ್ ಖಾತರಿಯು ಲೈಸೆನ್ಸ್‌ದಾರನಿಂದ ಸಮಿತಿಗೆ ಬಾಕಿ ಇರುವ ಎಲ್ಲಾ ಮೊತ್ತಗಳ ಬಗ್ಗೆ ಮಾರುಕಟ್ಟೆ ಸಮಿತಿಯ ಪರವಾಗಿ ಮೊದಲನೆಯ ಋಣ ಭಾರಕ್ಕೆ ಒಳಪಟ್ಟಿರತಕ್ಕದ್ದು.

(3) (ಎ) ವ್ಯಾಪಾರಿಯು ಠೇವಣಿ ಇಟ್ಟ ಭದ್ರತೆಯು ಅಥವಾ ಒದಗಿಸಿದ ಬ್ಯಾಂಕ್ ಖಾತರಿಯು, ಆ ವ್ಯಾಪಾರಿಯು ಯಾವ ಕಮಿಷನ್ ಏಜೆಂಟರಿಗೆ ಸಾಲ ಖರೀದಿಗಳ ಸಂಬಂಧದಲ್ಲಿ ಋಣಿಯಾಗಿರುವನೋ ಅಂಥ ಋಣದ ಒಟ್ಟು ಮೊತ್ತದ ಬಗ್ಗೆ ಅವರ ಪರವಾಗಿ ಎರಡನೆಯ ಋಣಭಾರಕ್ಕೆ ಒಳಪಟ್ಟಿರತಕ್ಕದ್ದು.

(ಬಿ) ಕಮಿಷನ್ ಏಜೆಂಟನು ಠೇವಣಿ ಇಟ್ಟ ಭದ್ರತೆಯು ಅಥವಾ ಒದಗಿಸಿದ ಬ್ಯಾಂಕ್ ಖಾತರಿಯು, ಆ ಕಮಿಷನ್ ಏಜೆಂಟನು ಯಾವ ಪ್ರಧಾನರಿಗೆ ಅವರ ಸರಕುಗಳ ಮಾರಾಟದ ಸಂಬಂಧದಲ್ಲಿ ಋಣಿಯಾಗಿರುವನೋ ಅಂತಹ ಋಣದ ಒಟ್ಟು ಮೊತ್ತದ ಬಗ್ಗೆ ಆ ಪ್ರಧಾನರ ಪರವಾಗಿ ಎರಡನೆಯ ಋಣಭಾರಕ್ಕೆ ಒಳಪಟ್ಟಿರತಕ್ಕದ್ದು.

(4) ಲೈಸೆನ್ಸ್‌ದಾರನು 85 ಅಥವಾ 86ನೇ ಪ್ರಕರಣದ ಮೇರೆಗೆ ಒದಗಿಸಿದ ಬ್ಯಾಂಕ್ ಖಾತರಿಯು ಬೇಷರತ್ತಾಗಿರತಕ್ಕದ್ದು ಮತ್ತು ಬ್ಯಾಂಕ್ ಖಾತರಿ ನೀಡಿದ ಮೊಬಲಗು ಅಥವಾ ಅದರ ಭಾಗವು ಮಾರುಕಟ್ಟೆ ಸಮಿತಿಯು ತಗಾದೆ ಮಾಡಿದಾಗ ಅದಕ್ಕೆ ಸಂದಾಯವಾಗತಕ್ಕದ್ದು. ಮಾರುಕಟ್ಟೆ ಸಮಿತಿಯು 85ನೇ ಮತ್ತು 86ನೇ ಪ್ರಕರಣಗಳ ಮೇರೆಗೆ ಯಾವುದೇ ಇತರ ಬಗೆಯ ಬ್ಯಾಂಕ್ ಖಾತರಿಯನ್ನು ಸ್ವೀಕರಿಸತಕ್ಕದ್ದಲ್ಲ.

(5) ಈ ಅಧಿನಿಯಮದ ಮತ್ತು ನಿಯಮಗಳ ಮತ್ತು ಉಪವಿಧಿಗಳ ಉಪಬಂಧಗಳಿಗೊಳಪಟ್ಟು ಮಾರುಕಟ್ಟೆ ಸಮಿತಿಯಲ್ಲಿ ನಗದು ಭದ್ರತೆಯನ್ನು ಠೇವಣಿ ಇಟ್ಟಿರುವ ಯಾವನೇ ವ್ಯಾಪಾರಿಯು ಅಥವಾ ಕಮೀಷನ್ ಏಜೆಂಟನು ಮಾರುಕಟ್ಟೆ ಸಮಿತಿ ಅಥವಾ ಆ ಭದ್ರತೆಯನ್ನು ಠೇವಣಿ ಇಟ್ಟ ವ್ಯವಹಾರದ ಸಂಬಂಧದಲ್ಲಿ ಅಂಥ ಠೇವಣಿಯ ಮೇಲೆ ಎರಡನೆಯ ಋಣಭಾರ ಇರುವಂಥ ಯಾವನೇ ಸಾಲಿಗನಿಗೆ ಸಂದಾಯ ಮಾಡಬೇಕಾದ ಯಾವುವೇ ಹೊಣೆಗಳು ಬಾಕಿ ಇಲ್ಲವೆಂದು ಮಾರುಕಟ್ಟೆ ಸಮಿತಿಗೆ ಮನವರಿಕೆಯಾದರೆ ಆ ಠೇವಣಿದಾರನು ಲೈಸನ್ಸ್‌ದಾರನಾಗಿರುವುದು ನಿಂತುಹೋಗುವ ದಿನಾಂಕದಿಂದ ಹನ್ನೆರಡು ತಿಂಗಳೊಳಗಾಗಿ ಅವನಿಗೆ ಆ ಠೇವಣಿಯು ಮರುಪಾವತಿಯಾಗತಕ್ಕದ್ದು.

(6) ಯಾವ ಉದ್ದೇಶಗಳಿಗಾಗಿ ಭದ್ರತಾ ಮೊಬಲಗನ್ನು ಠೇವಣಿ ಇಡಲಾಗಿದೆಯೋ ಅಥವಾ ಬ್ಯಾಂಕ್ ಖಾತರಿಯನ್ನು ಒದಗಿಸಲಾಗಿದೆಯೋ ಆ ಉದ್ದೇಶಗಳಿಗಾಗಿ ಆ ಮೊಬಲಗನ್ನು ಅಥವಾ ಖಾತರಿಯನ್ನು ನ್ಯಾಸದಲ್ಲಿ ಇಡಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಅದನ್ನು ಮಾರುಕಟ್ಟೆ ಸಮಿತಿಯ ಯಾವುವೇ ಉದ್ದೇಶಗಳಿಗಾಗಿ ಬಳಸತಕ್ಕದ್ದಲ್ಲ ಅಥವಾ ಉಪಯೋಗಿಸತಕ್ಕದ್ದಲ್ಲ ಮತ್ತು ಯಾವುದೇ ಇತರ ಉದ್ದೇಶಕ್ಕಾಗಿ ಯಾವುದೇ ನ್ಯಾಯಾಲಯದ ಅಥವಾ ಇತರ ಪ್ರಾಧಿಕಾರಿಯ ಜಪ್ತಿ ಅಥವಾ ಅಮಲ್ಜಾರಿಯ ಕ್ರಮಕ್ಕೆ ಗುರಿಯಾಗತಕ್ಕದ್ದಲ್ಲ.

(7) ಮಾರುಕಟ್ಟೆ ಸಮಿತಿಯು (1), (2), (3), (4) ಮತ್ತು (5)ನೇ ಉಪಪ್ರಕರಣಗಳ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಉಪವಿಧಿಗಳನ್ನು ರಚಿಸಬಹುದು.

**89. ದಂಡಗಳನ್ನು ವಿಧಿಸಲು ಸಮಿತಿಯ ಮತ್ತು ಅಧ್ಯಕ್ಷನ ಅಧಿಕಾರಗಳು.–** (1) ಮಾರುಕಟ್ಟೆ ಸಮಿತಿಯು ಮತ್ತು ಅದರ ಅಧ್ಯಕ್ಷನು, ಯಾವುದೇ ಉಪವಿಧಿಯನ್ನು ಉಲ್ಲಂಘಿಸುವ ಯಾವನೇ ಮಾರುಕಟ್ಟೆ ನಿರ್ವಾಹಕನಿಗೆ ಅಥವಾ [1][ಮಾರಾಟಗಾರ][1] ನಿಗೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ನಂತರ ಆದೇಶಗಳ ಮೂಲಕ ವಾಗ್ದಂಡನೆಯನ್ನು ಮತ್ತು ಜುಲ್ಮಾನೆಯನ್ನು ವಿಧಿಸಲು ಅಧಿಕಾರವನ್ನು ಹೊಂದಿರತಕ್ಕದ್ದು:

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಮಾರುಕಟ್ಟೆ ಸಮಿತಿಯು [1][ಒಂದು ನೂರು][1] ರೂಪಾಯಿಗಳನ್ನು ಮೀರುವ ಜುಲ್ಮಾನೆಯನ್ನು ವಿಧಿಸಲು ಸಕ್ಷಮವಾಗಿರತಕ್ಕದ್ದಲ್ಲ ಮತ್ತು ಅಧ್ಯಕ್ಷನು [1][ಇಪ್ಪತ್ತೈದು][1] ರೂಪಾಯಿಗಳನ್ನು ಮೀರುವ ಜುಲ್ಮಾನೆಯನ್ನು ವಿಧಿಸಲು ಸಕ್ಷಮವಾಗಿರತಕ್ಕದ್ದಲ್ಲ.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) (1)ನೇ ಉಪಪ್ರಕರಣದ ಮೇರೆಗಿನ ಆದೇಶದ ವಿರುದ್ಧ ಸಲ್ಲಿಸಬಹುದಾದ ಅಪೀಲನ್ನು [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನಿಗೆ ಅಥವಾ ಅವನು ನಿರ್ದಿಷ್ಟಪಡಿಸಬಹುದಾದಂಥ ಅವನ ಅಧೀನ ಅಧಿಕಾರಿಗೆ ಗೊತ್ತುಪಡಿಸಬಹುದಾದಂಥ ಅವಧಿಯೊಳಗೆ ಸಲ್ಲಿಸಲು ಅವಕಾಶವಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ-VIII
## ಮಾರುಕಟ್ಟೆ ನಿಧಿ

**90. ಮಾರುಕಟ್ಟೆ ನಿಧಿ, ಅದರ ಅಭಿರಕ್ಷೆ ಮತ್ತು ಹೂಡಿಕೆ.–** (1) (2)ನೇ ಉಪಪ್ರಕರಣದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಉಳಿದು ಮಾರುಕಟ್ಟೆ ಸಮಿತಿಯು, ಮಾರುಕಟ್ಟೆ ಫೀಜುಗಳು, ಲೈಸನ್ಸ್ ಫೀಜುಗಳು ಅಥವಾ ಇತರ ಫೀಜುಗಳು ಅಥವಾ ಚಾರ್ಜುಗಳ ರೂಪದಲ್ಲಿ ಸ್ವೀಕರಿಸಿದ ಎಲ್ಲ ಹಣ ಮತ್ತು ದಂಡನೆಗಳ ರೂಪದಲ್ಲಿ ವಸೂಲ್ಮಾಡಿದ ಎಲ್ಲಾ

ಹಣ ಮತ್ತು ಸಮಿತಿಯು ಎತ್ತಿದ ಎಲ್ಲ ಸಾಲಗಳು ಮತ್ತು ರಾಜ್ಯ ಸರ್ಕಾರವು ಸಮಿತಿಗೆ ನೀಡಿದ ಎಲ್ಲ ಅನುದಾನಗಳು, ಸಾಲಗಳು ಅಥವಾ ವಂತಿಗೆಗಳು ಮಾರುಕಟ್ಟೆ ನಿಧಿ ಎಂದು ಕರೆಯಲಾಗುವ ನಿಧಿಯ ಭಾಗವಾಗಿರತಕ್ಕದ್ದು.

(2) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಉಳಿದು, ವಿವಾದಗಳಿಗೆ ಸಂಬಂಧಿಸಿದ ಮಧ್ಯಸ್ಥಗಾರಿಕೆ ವ್ಯವಹರಣೆಗಳ ಮಧ್ಯಸ್ಥಗಾರಿಕೆ ಫೀಜುಗಳ ರೂಪದಲ್ಲಿ ಅಥವಾ ವೆಚ್ಚಗಳ ಭದ್ರತೆಯಾಗಿ ಸಮಿತಿಯು ಸ್ವೀಕರಿಸಿದ ಯಾವುದೇ ಹಣ ಅಥವಾ ಭದ್ರತೆಯಾಗಿ ಅಥವಾ ಭವಿಷ್ಯನಿಧಿಯ ವಂತಿಗೆಯಾಗಿ ಮತ್ತು ಸಮಿತಿಯು ಸ್ವೀಕರಿಸಿದ ಯಾವುದೇ ಹಣ ಮತ್ತು ನಿಯಮಗಳಲ್ಲಿ ಅಥವಾ ಉಪವಿಧಿಗಳಲ್ಲಿ ಉಪಬಂಧಿಸಬಹುದಾದಂತೆ ಸಮಿತಿಯು ಸ್ವೀಕರಿಸಿದ ಯಾವುದೇ ಇತರ ಹಣ – ಇವೆಲ್ಲ ಮಾರುಕಟ್ಟೆ ನಿಧಿಯ ಭಾಗವಾಗತಕ್ಕದ್ದಲ್ಲ ಮತ್ತು ಅವುಗಳನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಇಡತಕ್ಕದ್ದು.

*(3) ಈ ಅಧಿನಿಯಮದಲ್ಲಿ ಉಪಬಂಧಿಸಿರುವುದನ್ನು ಉಳಿದು, ಮಾರುಕಟ್ಟೆ ನಿಧಿಗೆ ಜಮೆಯಾದ ಮೊಬಲಗನ್ನು ಮತ್ತು ಮಾರುಕಟ್ಟೆ ಸಮಿತಿಯು ಸ್ವೀಕರಿಸಿದ ಎಲ್ಲಾ ಇತರ ಹಣವನ್ನು,-

*61ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿ ನೋಡಿ.

(ಎ) ಸಹಕಾರಿ ಸಂಘಗಳ ರಿಜಿಸ್ಟ್ರಾರರು ಅನುಮೋದಿಸಿದ ಸಹಕಾರಿ ಜಿಲ್ಲಾ ಕೇಂದ್ರ ಬ್ಯಾಂಕ್‌ನಲ್ಲಿ; ಅಥವಾ

(ಬಿ) ಸರ್ಕಾರಿ ಉಳಿತಾಯ ಬ್ಯಾಂಕ್‌ನಲ್ಲಿ; ಅಥವಾ

[1][(ಸಿ) [2][ಕೃಷಿ ಮಾರುಕಟ್ಟೆ ನಿರ್ದೇಶಕ][2] ನ ಪೂರ್ವಾನುಮೋದನೆಯೊಂದಿಗೆ ಅನುಸೂಚಿತ ಬ್ಯಾಂಕ್‌ನಲ್ಲಿ; ಅಥವಾ][1]

1. 1973ರ ಅಧಿನಿಯಮ ಸಂಖ್ಯೆ 20ರ ಮೂಲಕ 23-10-1973ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಡಿ) [1][ಕೃಷಿಮಾರುಕಟ್ಟೆ ನಿರ್ದೇಶಕ][1] ನ ಪೂರ್ವಾನುಮೋದನೆಯೊಂದಿಗೆ ಯಾವುದೇ ಕೇಂದ್ರ ಅಥವಾ ರಾಜ್ಯ ಸರ್ಕಾರದ ಭದ್ರತೆಗಳಲ್ಲಿ

– ಇಡತಕ್ಕದ್ದು ಅಥವಾ ಹೂಡತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**91. ರಾಜ್ಯದ ಸಂಚಿತ ನಿಧಿಗೆ ವಂತಿಗೆ.**– (1) [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನು ಪ್ರತಿ ವರ್ಷ [1][ಮಾರ್ಚ್][1] ತಿಂಗಳು ಕೊನೆಗೊಳ್ಳುವ ಮುಂಚೆ, ಮುಂಬರುವ ಆರ್ಥಿಕ ವರ್ಷದಲ್ಲಿ ಈ ಕೆಳಕಂಡವುಗಳ ಬಗ್ಗೆ ರಾಜ್ಯ ಸರ್ಕಾರವು ವಹಿಸಬೇಕಾದ ಸಂಭಾವ್ಯ ವೆಚ್ಚವನ್ನು ಅಂದಾಜು ಮಾಡತಕ್ಕದ್ದು,-

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(i) ರಾಜ್ಯದಲ್ಲಿನ ಎಲ್ಲಾ ಮಾರುಕಟ್ಟೆ ಸಮಿತಿಗಳ ಸಂಬಂಧದಲ್ಲಿ 58ನೇ ಪ್ರಕರಣದ [1][ಅಥವಾ 59ನೇ ಪ್ರಕರಣ][1] ದ ಮೇರೆಗೆ, ಅಧಿಕಾರಿಗಳಾಗಿ ಮತ್ತು ನೌಕರರಾಗಿ ನೇಮಕಗೊಂಡಿರುವ ಅಥವಾ ನೇಮಕಗೊಳ್ಳಲಿರುವ ಸರ್ಕಾರಿ ನೌಕರರ ಸೇವೆಗಳ ಸಂಬಂಧದಲ್ಲಿ ಸಂಬಳ ಮತ್ತು ಇತರ ಭತ್ಯಗಳು ಮತ್ತು ರಜಾ ಸಂಬಳ ಮತ್ತು ನಿವೃತ್ತಿ ವಂತಿಗೆಗಳು; ಮತ್ತು

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ii) ರಾಜ್ಯದಲ್ಲಿನ ಮಾರುಕಟ್ಟೆ ಸಮಿತಿಗಳ ಸದಸ್ಯರ ಆಯ್ಕೆಗೆ ನಡೆಯುವ ಸಾರ್ವತ್ರಿಕ ಚುನಾವಣೆಗಳು ಮತ್ತು ಉಪಚುನಾವಣೆಗಳು.

ಇದಲ್ಲದೆ ಅವನು ಹಿಂದಿನ ವರ್ಷದ ಜಮೆಗಳ ಆಧಾರದ ಮೇಲೆ, ಸದರಿ ಆರ್ಥಿಕ ವರ್ಷದಲ್ಲಿ ಅಂಥ ವೆಚ್ಚವನ್ನು ಭರಿಸುವುದಕ್ಕಾಗಿ ಮುಂಬರುವ ಆರ್ಥಿಕ ವರ್ಷದಲ್ಲಿ ರಾಜ್ಯದ ಎಲ್ಲ ಮಾರುಕಟ್ಟೆ ಸಮಿತಿಗಳ ಮಾರುಕಟ್ಟೆ ಫೀಜು ಮತ್ತು ಲೈಸನ್ಸ್ ಫೀಜುಗಳ ರೂಪದಲ್ಲಿ ಬರಬಹುದಾದ ಒಟ್ಟು ಮೊಬಲಗಿನ ಅಂದಾಜು ಮಾಡತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಮಾಡಲಾದ ಅಂದಾಜನ್ನು ಪರಿಗಣಿಸಿ, [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನು, ಪ್ರತಿಯೊಂದು ಮಾರುಕಟ್ಟೆ ಸಮಿತಿಯು (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿರುವ ವೆಚ್ಚಗಳನ್ನು ಭರಿಸುವುದಕ್ಕಾಗಿ ಮುಂಬರುವ ಆರ್ಥಿಕ ವರ್ಷದಲ್ಲಿ ರಾಜ್ಯದ ಸಂಚಿತ ನಿಧಿಗೆ ಒಟ್ಟು ಜಮೆಗಳ [2][XXX][2] ಎಷ್ಟು ಶೇಕಡಾವಾರನ್ನು ವಂತಿಕೆಯಾಗಿ ಕೊಡತಕ್ಕದ್ದೆಂಬುದನ್ನು ಆದೇಶದ ಮೂಲಕ ನಿರ್ಧರಿಸತಕ್ಕದ್ದು ಮತ್ತು ಆ ಆದೇಶದ ಪ್ರತಿಯನ್ನು ಪ್ರತಿಯೊಂದು ಮಾರುಕಟ್ಟೆ ಸಮಿತಿಗೆ ಕಳುಹಿಸತಕ್ಕದ್ದು:

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][ಪರಂತು, [2][ಕೃಷಿ ಮಾರುಕಟ್ಟೆ ನಿರ್ದೇಶಕ][2] ನು, ಕಾರಣಗಳನ್ನು ದಾಖಲ್ಮಾಡಿ, ಯಾವ ವರ್ಷದಲ್ಲಿ ವಂತಿಗೆಯನ್ನು ಸಂದಾಯ ಮಾಡಬೇಕಾಗಿದೆಯೋ ಆ ವರ್ಷವು ಕೊನೆಗೊಳ್ಳುವ ಮುಂಚೆ ಯಾವುದೇ ಕಾಲದಲ್ಲಿ, ಸದರಿ ಶೇಕಡಾವಾರನ್ನು ವ್ಯತ್ಯಾಸ ಮಾಡಬಹುದು.][1]

1. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 1-5-1968ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ರಾಜ್ಯದಲ್ಲಿನ ಪ್ರತಿಯೊಂದು ಮಾರುಕಟ್ಟೆ ಸಮಿತಿಯು ಮಾರುಕಟ್ಟೆ ಫೀಜು ಮತ್ತು ಲೈಸನ್ಸ್ ಫೀಜಿನ ರೂಪದಲ್ಲಿ ಆ ಹಿಂದಿನ ತಿಂಗಳಲ್ಲಿ ಸ್ವೀಕರಿಸಿದ ಒಟ್ಟು ಜಮೆಗಳ ಸಂಬಂಧದಲ್ಲಿ (2)ನೆಯ ಉಪ-ಪ್ರಕರಣದ ಮೇರೆಗೆ [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನು ಅಧಿಸೂಚಿಸುವಂಥ ಶೇಕಡಾವಾರನ್ನು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ 1ನೆಯ ಏಪ್ರಿಲ್‌ನಿಂದ ಪ್ರಾರಂಭವಾಗುವ ಆರ್ಥಿಕ ವರ್ಷದಲ್ಲಿ ಪ್ರತಿ ತಿಂಗಳ ಹದಿನೈದನೆಯ ದಿನಾಂಕಕ್ಕೆ ಮೊದಲು ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**ವಿವರಣೆ:–** ಈ ಪ್ರಕರಣದ ಮತ್ತು 92ನೇ ಪ್ರಕರಣದ ಉದ್ದೇಶಗಳಿಗಾಗಿ, ಮಾರುಕಟ್ಟೆ ಫೀಜಿನ ಸಂಬಂಧದಲ್ಲಿ ಸ್ವೀಕರಿಸಲಾದ ಒಟ್ಟು ಜಮೆ 97ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಮಾರುಕಟ್ಟೆ ಸಮಿತಿಗೆ ಸಂದಾಯ ಮಾಡಲಾದ ಮೊತ್ತವನ್ನು ಒಳಗೊಂಡಿರತಕ್ಕದ್ದು ಮತ್ತು ಲೈಸನ್ಸ್ ಫೀಜಿನ ಸಂಬಂಧದಲ್ಲಿ ಸ್ವೀಕರಿಸಲಾದ ಒಟ್ಟು ಜಮೆಗಳಲ್ಲಿ 98ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಮಂಡಲ ಪಂಚಾಯತಿಗಳಿಗೆ ಸಂದಾಯ ಮಾಡಿದ ಮೊತ್ತವು ಸೇರಿರತಕ್ಕದ್ದಲ್ಲ.

**92. ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಗೆ ವಂತಿಗೆ.–** ರಾಜ್ಯದಲ್ಲಿನ ಪ್ರತಿಯೊಂದು ಮಾರುಕಟ್ಟೆ ಸಮಿತಿಯ, ಮಾರುಕಟ್ಟೆ ಫೀಜು ಮತ್ತು ಲೈಸನ್ಸ್ ಫೀಜಿನ ರೂಪದಲ್ಲಿ ಹಿಂದಿನ ಕ್ಯಾಲೆಂಡರ್ ತಿಂಗಳಲ್ಲಿ ಸ್ವೀಕರಿಸಿದ ಒಟ್ಟು ಜಮೆಗಳ ಶೇಕಡಾ ಐದರಷ್ಟು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಪ್ರತಿ ತಿಂಗಳ ಹದಿನೈದನೇ ದಿನಾಂಕದ ಮೊದಲು ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಗೆ ಸಂದಾಯ ಮಾಡತಕ್ಕದ್ದು.

**93. ಯಾವ ಉದ್ದೇಶಕ್ಕಾಗಿ ಮಾರುಕಟ್ಟೆ ನಿಧಿಯನ್ನು ವೆಚ್ಚ ಮಾಡಬಹುದು.–** ಈ ಅಧಿನಿಯಮದ 91ನೇ ಮತ್ತು 92ನೇ ಪ್ರಕರಣಗಳ ಉಪಬಂಧಗಳಿಗೆ ಮತ್ತು ಇತರ ಉಪಬಂಧಗಳಿಗೆ, ನಿಯಮಗಳಿಗೆ ಮತ್ತು ಉಪವಿಧಿಗಳಿಗೆ ಒಳಪಟ್ಟು ಮಾರುಕಟ್ಟೆ ಸಮಿತಿಯ ನಿಧಿಯನ್ನು ಈ ಕೆಳಕಂಡ ವೆಚ್ಚಗಳನ್ನು ಭರಿಸುವುದಕ್ಕಾಗಿ ವೆಚ್ಚ ಮಾಡತಕ್ಕದ್ದು,-

(i) ಈ ಅಧಿನಿಯಮದ ಮೇರೆಗೆ ಮಾರುಕಟ್ಟೆ ಸಮಿತಿಯು ಕಡ್ಡಾಯವಾಗಿ ಮತ್ತು ವಿವೇಚನಾತ್ಮಕವಾಗಿ ನಿರ್ವಹಿಸತಕ್ಕ ಕರ್ತವ್ಯಗಳು ಮತ್ತು ಪ್ರಕಾರ್ಯಗಳು;

(ii) ಮಾರುಕಟ್ಟೆ ಸಮಿತಿಯು ನಿಯೋಜಿಸಿಕೊಂಡ ಅದರ ಅಧಿಕಾರಿಗಳ ಮತ್ತು ನೌಕರರ ವೇತನ, ರಜಾ ಭತ್ಯಗಳು, ನಿವೃತ್ತಿವೇತನ, ಉಪದಾನಗಳು ಮತ್ತು ಭವಿಷ್ಯನಿಧಿ;

(iii) ಮಾರುಕಟ್ಟೆ ಸಮಿತಿಯು ಎತ್ತಿದ ಸಾಲಗಳೇನಾದರೂ ಇದ್ದರೆ ಅವುಗಳ ಮೇಲೆ ಬಡ್ಡಿ ಸಂದಾಯ ಮತ್ತು ಅಂಥ ಸಾಲಗಳ ಸಂಬಂಧದಲ್ಲಿ ಋಣತೀರಿಕೆ ನಿಧಿಗಳ ಏರ್ಪಾಡು;

(iv) ಮಾರುಕಟ್ಟೆ ಸಮಿತಿಯ ಅಧ್ಯಕ್ಷನ, ಉಪಾಧ್ಯಕ್ಷನ ಮತ್ತು ಇತರ ಸದಸ್ಯರ ಗೌರವಧನ, ಭತ್ಯಗಳು ಮತ್ತು ಪ್ರಯಾಣ ಭತ್ಯಗಳ ಸಂದಾಯ;

(v) 84ನೇ ಪ್ರಕರಣದ ಮೇರೆಗೆ ನೇಮಕರಾದ ಮಧ್ಯಸ್ಥಗಾರರ [1][ಮತ್ತು 42ನೇ ಪ್ರಕರಣದ ಮೇರೆಗೆ ನೇಮಕವಾದ ಸಲಹಾ ಸಮಿತಿಯ ಸದಸ್ಯರ][1] ಫೀಜುಗಳ ಮತ್ತು ಪ್ರಯಾಣ ಭತ್ಯಗಳ ಸಂದಾಯ; ಮತ್ತು

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(vi) ಉಪವಿಧಿಗಳಲ್ಲಿ ಗೊತ್ತುಪಡಿಸಬಹುದಾದಂತೆ ಈ ಅಧಿನಿಯಮದ ವ್ಯಾಪ್ತಿಯೊಳಗಿನ ಯಾವುದೇ ಇತರ ಉದ್ದೇಶ.

**94. ಅಧ್ಯಕ್ಷನಿಗೆ [1][ಮತ್ತು ಉಪಾಧ್ಯಕ್ಷನಿಗೆ ಗೌರವಧನ][1] ಮತ್ತು ಪ್ರವಾಸ ಭತ್ಯಗಳು:–** [2][(1) ಮಾರುಕಟ್ಟೆ ಸಮಿತಿಯು, ಮಾರುಕಟ್ಟೆ ಸಮಿತಿಯ ಅಧ್ಯಕ್ಷನಿಗೆ [1][ಮತ್ತು ಉಪಾಧ್ಯಕ್ಷನಿಗೆ][1] ಗೊತ್ತುಪಡಿಸಬಹುದಾದಂಥ ಗೌರವ ಧನವನ್ನು ಸಂದಾಯ ಮಾಡತಕ್ಕದ್ದು.][2]

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 16.8.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಮಾರುಕಟ್ಟೆ ಸಮಿತಿಯ ಅಧ್ಯಕ್ಷನು [2][ಮತ್ತು ಉಪಾಧ್ಯಕ್ಷನು][2] ಉಪವಿಧಿಗಳ ಮೂಲಕ ಗೊತ್ತುಪಡಿಸಬಹುದಾದಂಥ ಪ್ರವಾಸ ಭತ್ಯಗಳಿಗೆ ಅರ್ಹನಾಗಿರತಕ್ಕದ್ದು.

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][ಪರಂತುಕಗಳು XXXX][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(3) ಅಧ್ಯಕ್ಷರು, ಮಾರುಕಟ್ಟೆ ಸಮಿತಿಯ ವ್ಯವಹಾರಗಳಿಗೆ ಸಂಬಂಧಿಸಿರದ ಉದ್ದೇಶಗಳಿಗಾಗಿ ಮಾರುಕಟ್ಟೆ ಸಮಿತಿಯ ಅನುಮತಿ ಪಡೆದು ಮಾರುಕಟ್ಟೆ ಪ್ರದೇಶದಿಂದ ಗೈರು ಹಾಜರಾದರೆ, ಅವನು ಅಂತಹ ಗೈರುಹಾಜರಿಯ ಅವಧಿಗಾಗಿ

ಗೌರವಧನಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ ಮತ್ತು ಅಂತಹ ರಜೆಯ ಅವಧಿಯಲ್ಲಿ ಅಧ್ಯಕ್ಷನ ಕಾರ್ಯಗಳನ್ನು ನಿರ್ವಹಿಸುವ ಉಪಾಧ್ಯಕ್ಷನು ಅಥವಾ ಯಾವನೇ ಇತರ ಸದಸ್ಯನು ಅಂತಹ ಅವಧಿಗೆ ಗೌರವಧನವನ್ನು ಪಡೆಯಲು ಹಕ್ಕುಳ್ಳವನಾಗತಕ್ಕದ್ದು.

**95. ಬಜೆಟ್ ಮುಂತಾದವುಗಳನ್ನು ತಯಾರಿಸುವ ವಿಧಾನ.–** ಮಾರುಕಟ್ಟೆ ನಿಧಿಯಿಂದ ಯಾವುದೇ ಸಂದಾಯವನ್ನು ಮಾಡತಕ್ಕ ವಿಧಾನ, ಅದರ ಲೆಕ್ಕಗಳನ್ನು ಇಡತಕ್ಕ ಮತ್ತು ಪರಿಶೋಧಿಸತಕ್ಕ ಹಾಗೂ ಮರುಪರಿಶೋಧಿಸತಕ್ಕ ವಿಧಾನ (ಆ ಬಗ್ಗೆ ಲೆಕ್ಕ ಪರಿಶೋಧಕನು ಚಲಾಯಿಸತಕ್ಕ ಅಧಿಕಾರಗಳು ಸೇರಿದಂತೆ), ಅದರ ಆದಾಯ ಮತ್ತು ವೆಚ್ಚದ ವಾರ್ಷಿಕ, ಪರಿಷ್ಕೃತ ಅಥವಾ ಪೂರಕ ಬಜೆಟ್ ಅಂದಾಜುಗಳನ್ನು ತಯಾರಿಸತಕ್ಕ ವಿಧಾನ, (ಅಂತಹ ಬಜೆಟನ್ನು ಮಾರ್ಪಾಟುಗೊಳಿಸುವ, ಶೂನ್ಯಗೊಳಿಸುವ ಅಥವಾ ರದ್ದುಗೊಳಿಸುವ ಉಪಬಂಧಗಳು ಸೇರಿದಂತೆ) ಮತ್ತು ಅದರ ವಾರ್ಷಿಕ ಆಡಳಿತ ವರದಿಯನ್ನು ತಯಾರಿಸತಕ್ಕ ವಿಧಾನ, ಇವುಗಳೆಲ್ಲವು ಈ ಸಂಬಂಧದಲ್ಲಿ ರಚಿಸಲಾಗುವ ನಿಯಮಗಳಿಗನುಸಾರ ಇರತಕ್ಕದ್ದು.

## ಅಧ್ಯಾಯ–IX

## ವಿಶೇಷ ವ್ಯಾಪಾರ ಸರಕು ಮಾರುಕಟ್ಟೆಗಳು

**96. ವಿಶೇಷ ವ್ಯಾಪಾರ ಸರಕುಗಳಿಗಾಗಿ ಸ್ವತಂತ್ರ ಮಾರುಕಟ್ಟೆಗಳ ಮತ್ತು ಮಾರುಕಟ್ಟೆ ಸಮಿತಿಗಳ ಸ್ಥಾಪನೆ.–** (1) ಯಾವುದೇ ಪ್ರದೇಶದಲ್ಲಿ ಜಾನುವಾರು, ಕುರಿ, ಮೀನು, ಹಣ್ಣುಗಳು ಅಥವಾ ರಾಜ್ಯ ಸರ್ಕಾರವು ಅಧಿಸೂಚಿಸಿದ ಯಾವುವೇ ಇತರ ವಿಶೇಷ ವ್ಯಾಪಾರ ಸರಕುಗಳ ಅನಿಯಂತ್ರಿತ ಮಾರುಕಟ್ಟೆಯ ಸಮೀಕ್ಷೆಯನ್ನು ನಡೆಸಿದ ತರುವಾಯ ರಾಜ್ಯ ಸರ್ಕಾರವು –
66

(i) ಅಂಥ ವ್ಯಾಪಾರ ಸರಕುಗಳನ್ನು ಸೇರಿಸಿಡುವ ಅಥವಾ ದಾಸ್ತಾನು ಮಾಡುವ ವಿಧಾನದ ಕಾರಣ;

(ii) ಅಂಥ ವ್ಯಾಪಾರ ಸರಕುಗಳ ಮಾರುಕಟ್ಟೆ ವ್ಯವಹಾರದ ಸಮಸ್ಯೆಯ ಕಾರಣ;

(iii) ಅಂಥ ವ್ಯಾಪಾರ ಸರಕುಗಳ ವ್ಯಾಪಾರದ ತಂತ್ರ ಮತ್ತು ವಿಶೇಷ ಲಕ್ಷಣಗಳ ಕಾರಣ; ಮತ್ತು

(iv) ಇತರ ಕೃಷಿ ಉತ್ಪನ್ನಗಳ ವ್ಯಾಪಾರ ನಿಯಂತ್ರಣಕ್ಕೆ ಮತ್ತು ಅಂಥ ವ್ಯಾಪಾರ ಸರಕುಗಳ ವ್ಯಾಪಾರ ನಿಯಂತ್ರಣಕ್ಕೂ ಹೊಂದಿಕೆಯಾಗದಿರುವ ಕಾರಣ,–

ಅಂಥ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಾರುಕಟ್ಟೆ ಸಮಿತಿಯು ಅಥವಾ ಸಮಿತಿಗಳು ಅಂತಹ ವ್ಯಾಪಾರ ಸರಕಿನ ನಿಯಂತ್ರಿತ ವ್ಯಾಪಾರಕ್ಕೆ ಸೌಕರ್ಯಗಳನ್ನು ಒದಗಿಸಲು ಶಕ್ತವಾಗಿಲ್ಲವೆಂದು, ಮತ್ತು,–

(ಎ) ಅಂಥ ಪ್ರದೇಶದಲ್ಲಿ ಅಂಥ ವ್ಯಾಪಾರ ಸರಕುಗಳ ಸಂಘಟಿತ ವ್ಯಾಪಾರಕ್ಕೆ ಸೌಕರ್ಯಗಳಿರುವುವೆಂದು;

(ಬಿ) ಅಂಥ ಪ್ರದೇಶದಲ್ಲಿ ಅಂಥ ವ್ಯಾಪಾರ ಸರಕುಗಳ ವ್ಯಾಪಾರವು ಸಾಕಷ್ಟು ಹೆಚ್ಚಿನ ಪ್ರಮಾಣದಲ್ಲಿರುವುದೆಂದು;

(ಸಿ) ಕೇವಲ ಆ ವ್ಯಾಪಾರ ಸರಕಿನ ವ್ಯಾಪಾರವನ್ನು ಪ್ರತ್ಯೇಕವಾಗಿ ನಿಯಂತ್ರಿಸುವ ಮೂಲಕ ಉತ್ಪಾದಕರಿಗೆ ಒದಗುವ ಪ್ರಯೋಜನಗಳು ಮತ್ತು ಮಾರುಕಟ್ಟೆ ಸಮಿತಿಗೆ ದೊರೆಯಬಹುದಾದ ಆದಾಯ–ಇವುಗಳು ಅಂಥ ನಿಯಂತ್ರಣದಲ್ಲಿ ಒಳಗೊಂಡಿರುವ ಪ್ರಯತ್ನಗಳಿಗೆ ಅನುಗುಣವಾಗಿವೆಯೆಂದು ಮತ್ತು ಅಂಥ ನಿಯಂತ್ರಣವನ್ನು ಜಾರಿಗೊಳಿಸುವಲ್ಲಿ ಅಗತ್ಯವಾದ ಕಾರ್ಯನಿರ್ವಹಣೆಗೆ ಸಾಕಷ್ಟಾಗುವುದೆಂದು; ಮತ್ತು

(ಡಿ) ಸ್ವತಂತ್ರ ಮಾರುಕಟ್ಟೆಯನ್ನು ಮತ್ತು ಪ್ರತ್ಯೇಕ ಮಾರುಕಟ್ಟೆ ಸಮಿತಿಯನ್ನು ಸ್ಥಾಪಿಸಿದರೆ ಮಾತ್ರ ಅಂಥ ಪ್ರದೇಶದಲ್ಲಿ ಅಂಥ ವ್ಯಾಪಾರದ ಸರಕಿನ ವ್ಯಾಪಾರವನ್ನು ದಕ್ಷ ರೀತಿಯಲ್ಲಿ ನಿಯಂತ್ರಿಸಬಹುದೆಂದು ಮನವರಿಕೆ ಮಾಡಿಕೊಂಡರೆ, ಅದು ಅಂಥ ಪ್ರದೇಶವು ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಮತ್ತು ಯಾವುದೇ ಇತರ ವ್ಯಾಪಾರ ಸರಕು ಅಥವಾ ವ್ಯಾಪಾರ ಸರಕುಗಳ ವ್ಯಾಪಾರ ನಿಯಂತ್ರಣವನ್ನು ಚಲಾಯಿಸುತ್ತಿರುವ ಯಾವುದೇ ಮಾರುಕಟ್ಟೆ ಸಮಿತಿಯ ಅಥವಾ ಸಮಿತಿಗಳ ಅಧಿಕಾರ ವ್ಯಾಪ್ತಿಯೊಳಗೆ ಬರುವಂಥ ಪ್ರದೇಶವಾಗಿದ್ದರೂ ಈ ಅಧಿನಿಯಮದಲ್ಲಿ ಉಪಬಂಧಿತವಾದ ರೀತಿಯಲ್ಲಿ ಸ್ವತಂತ್ರ ಮಾರುಕಟ್ಟೆ ಮತ್ತು ಮಾರುಕಟ್ಟೆ ಸಮಿತಿಯ ಸ್ಥಾಪನೆಗಾಗಿ [1][ಮಂಡಲಿಯೊಂದಿಗೆ ಸಮಾಲೋಚಿಸಿ][1] ಅವಶ್ಯ ಕ್ರಮವನ್ನು ತೆಗೆದುಕೊಳ್ಳಬಹುದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಈ ಅಧ್ಯಾಯದ ಮೇರೆಗೆ ಪ್ರತ್ಯೇಕ ಮಾರುಕಟ್ಟೆಯನ್ನು ಸ್ಥಾಪಿಸಿದಾಗ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಅಧಿನಿಯಮದ ಉಪಬಂಧಗಳು, ಅಂಥ ಮಾರುಕಟ್ಟೆ ಸಂಬಂಧದಲ್ಲಿ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಮಾರ್ಪಾಟುಗಳೊಂದಿಗೆ ಅನ್ವಯವಾಗತಕ್ಕದ್ದೆಂದು ಘೋಷಿಸಬಹುದು.

(3) (2)ನೇ ಉಪಪ್ರಕರಣದ ಮೇರೆಗೆ ಅಧಿಸೂಚಿತವಾದ ಯಾವುವೇ ಮಾರ್ಪಾಟುಗಳಿಗೊಳಪಟ್ಟು, ಈ ಅಧಿನಿಯಮದ ಉಪಬಂಧಗಳು, ಈ ಅಧ್ಯಾಯದ ಉಪಬಂಧಗಳ ಅನುಸಾರ ಸ್ಥಾಪಿತವಾದ ಮಾರುಕಟ್ಟೆ ಪ್ರದೇಶಗಳಿಗೆ ಮತ್ತು ಮಾರುಕಟ್ಟೆ ಸಮಿತಿಗಳಿಗೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

## ಅಧ್ಯಾಯ–X

## [1][ಮಂಡಲ ಪಂಚಾಯಿತಿಗಳು][1] ಮಾರುಕಟ್ಟೆ ಸಮಿತಿಗಳ ಏಜೆಂಟುಗಳಾಗಿ ಕಾರ್ಯನಿರ್ವಹಿಸುವುದು

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**97. [1][ಮಂಡಲ ಪಂಚಾಯತಿಗಳು][1] ಮಾರುಕಟ್ಟೆ ಸಮಿತಿಗಳ ಏಜೆಂಟುಗಳಾಗಿ ಕಾರ್ಯನಿರ್ವಹಿಸುವುದು.–** (1) ಗೊತ್ತುಪಡಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ಮಾರುಕಟ್ಟೆ ಸಮಿತಿಯು, ಮಾರುಕಟ್ಟೆ ಪ್ರದೇಶದೊಳಗೆ ಅಧಿಕಾರ

ವ್ಯಾಪ್ತಿಯನ್ನು ಹೊಂದಿರುವ ಯಾವುದೇ [1][ಮಂಡಲ ಪಂಚಾಯತಿ][1]ಯ ಸಮ್ಮತಿ ಪಡೆದು ಅಂಥ [1][ಮಂಡಲ ಪಂಚಾಯತಿ][1]ಯನ್ನು ಅಂಥ [1][ಮಂಡಲ ಪಂಚಾಯತಿ][1]ಯ ಪ್ರದೇಶದಲ್ಲಿರುವ ಮಾರುಕಟ್ಟೆ ಸಮಿತಿಯು ಉಪ ಮಾರುಕಟ್ಟೆಗಳಿಗೆ ಮತ್ತು ಉಪ ಮಾರುಕಟ್ಟೆ ಪ್ರಾಂಗಣಗಳಿಗೆ ಸಂಬಂಧಿಸಿ ಹೊಂದಿರುವ ಯಾವುವೇ ಅಧಿಕಾರಗಳು ಮತ್ತು ಕರ್ತವ್ಯಗಳು ಸೇರಿ ಉಪವಿಧಿಗಳ ಮೂಲಕ ಗೊತ್ತುಪಡಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸಲು ಮತ್ತು ಅಂಥ ಕರ್ತವ್ಯಗಳನ್ನು ನೆರವೇರಿಸಲು ಮಾರುಕಟ್ಟೆ ಸಮಿತಿಯ ಏಜೆಂಟಾಗಿ ನೇಮಕ ಮಾಡಬಹುದು ಮತ್ತು ಅಂಥ ಅಧಿಕಾರಗಳ ಚಲಾವಣೆಯು ಮತ್ತು ಕರ್ತವ್ಯಗಳ ನೆರವೇರಿಕೆಯು ಏಜೆನ್ಸಿಯ ರೂಪದಲ್ಲಿ ಹಾಗೆ ವಹಿಸಿಕೊಡಲಾದ ಅಧಿಕಾರಗಳು ಮತ್ತು ಕರ್ತವ್ಯಗಳು ಮಾರುಕಟ್ಟೆ ಸಮಿತಿಯ ಮತ್ತು ಆ ಬಗ್ಗೆ ಸಮಿತಿಯು ಸಾಮಾನ್ಯವಾಗಿ ಅಥವಾ ವಿಶೇಷವಾಗಿ ಅಧಿಕೃತಗೊಳಿಸಿದ ಅಧಿಕಾರಿಯ ಅಥವಾ ಅಧಿಕಾರಿಗಳ ನಿಯಂತ್ರಣ ಮತ್ತು ಮೇಲ್ವಿಚಾರಣೆಗಳಿಗೆ ಒಳಪಟ್ಟಿರತಕ್ಕುದೆಂಬ ಷರತ್ತು ಸೇರಿ ಉಪವಿಧಿಗಳ ಮೂಲಕ ಗೊತ್ತುಪಡಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) (1)ನೇ ಉಪಪ್ರಕರಣದ ಮೇರೆಗೆ [1][ಮಂಡಲ ಪಂಚಾಯತಿ][1] ಗೆ ವಹಿಸಿಕೊಟ್ಟಿರುವ ಅಧಿಕಾರವು, 65ನೇ ಪ್ರಕರಣದ ಮೇರೆಗೆ ಮಾರುಕಟ್ಟೆ ಫೀಜುಗಳನ್ನು ವಿಧಿಸುವ ಮತ್ತು ವಸೂಲು ಮಾಡುವ ಅಧಿಕಾರವನ್ನು ಒಳಗೊಂಡಿರತಕ್ಕದ್ದು ಮತ್ತು ಯಾವ ಸರಕುಗಳ ಸಂಬಂಧದಲ್ಲಿ ಅಂಥ ಫೀಜುಗಳು ಸಂದಾಯವಾಗತಕ್ಕದ್ದೋ ಆ ಫೀಜುಗಳು [1][ಮಂಡಲ ಪಂಚಾಯತಿಗೆ][1] ಸಂದಾಯವಾದ ಹೊರತಾಗಿ ಆ ಸರಕುಗಳನ್ನು ಮಾರಾಟದ ಸ್ಥಳದಿಂದ ಸಾಗಿಸತಕ್ಕದ್ದಲ್ಲ.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) [1][ಮಂಡಲ ಪಂಚಾಯತಿ][1] ಯು ವಸೂಲು ಮಾಡಿದ ಫೀಜುಗಳ ಸಂಬಂಧದಲ್ಲಿ ಆ [1][ಮಂಡಲ ಪಂಚಾಯತಿ][1] ಗೆ ವಹಿಸಿರುವ ಅಧಿಕಾರಗಳು ಮತ್ತು ಕರ್ತವ್ಯಗಳ ವ್ಯಾಪ್ತಿಯನ್ನು ಪರಿಗಣನೆಗೆ ತೆಗೆದುಕೊಂಡು ಮಾರುಕಟ್ಟೆ ಸಮಿತಿಯು ನಿರ್ಧರಿಸಬಹುದಾದಂತೆ ಫೀಜುಗಳ ಸಂಗ್ರಹಣೆಯ ಶೇಕಡಾ [2][ಐವತ್ತು][2] ನ್ನು ಮೀರದ ಮೊತ್ತವನ್ನು [1][ಮಂಡಲ ಪಂಚಾಯತಿ][1] ಯು ತನ್ನಲ್ಲಿ ಇಟ್ಟುಕೊಳ್ಳತಕ್ಕದ್ದು ಮತ್ತು [1][ಮಂಡಲ ಪಂಚಾಯತಿ][1] ನಿಧಿಗೆ ಜಮೆ ಮಾಡತಕ್ಕದ್ದು ಮತ್ತು ಉಳಿದ ಮೊತ್ತವು ಮಾರುಕಟ್ಟೆ ಸಮಿತಿಗೆ ಸಂದಾಯವಾಗತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**98. [1][ಮಂಡಲ ಪಂಚಾಯತಿ][1] ಗಳಿಗೆ ಅನುದಾನಗಳು ಮತ್ತು ಸಾಲಗಳು.–** (1) 97ನೇ ಪ್ರಕರಣದ ಮೇರೆಗೆ ಅಧಿಕಾರಗಳು ಮತ್ತು ಕರ್ತವ್ಯಗಳನ್ನು ಯಾವ [1][ಮಂಡಲ ಪಂಚಾಯತಿ][1]ಗೆ ವಹಿಸಿಕೊಡಲಾಗಿದೆಯೋ ಅಂಥ ಪ್ರತಿಯೊಂದು ಮಂಡಲ ಪಂಚಾಯಿತಿಗೆ ಮಾರುಕಟ್ಟೆ ಸಮಿತಿಯು, ಅಂಥ [1][ಮಂಡಲ ಪಂಚಾಯತಿ][1]ಯ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶದಲ್ಲಿ ಅನನ್ಯವಾಗಿ ಕಾರ್ಯನಿರ್ವಹಿಸುತ್ತಿರುವ ಮಾರುಕಟ್ಟೆ ಕಾರ್ಯನಿರ್ವಾಹಕರಿಂದ ವಸೂಲು ಮಾಡಿದ ಲೈಸನ್ಸ್ ಫೀಜಿನ ಶೇಕಡಾ ಎಪ್ಪತ್ತೈದಕ್ಕೆ ಸಮಾನವಾದ ಮೊತ್ತವನ್ನು ವಾರ್ಷಿಕವಾಗಿ ಸಂದಾಯ ಮಾಡತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) 97ನೆಯ ಪ್ರಕರಣದ ಮೇರೆಗೆ ಯಾವ [1][ಮಂಡಲ ಪಂಚಾಯತಿ][1]ಗೆ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ವಹಿಸಿಕೊಡಲಾಗಿದೆಯೋ ಆ ಮಂಡಲ ಪಂಚಾಯತಿಗೆ ಮಾರುಕಟ್ಟೆ ಸಮಿತಿಯು ಬಡ್ಡಿ ಇಲ್ಲದೆ ಸಾಲದ ರೂಪದಲ್ಲಿ ಪ್ರಾರಂಭಿಕ ಹಣಕಾಸಿನ ಸಹಾಯವನ್ನು ನೀಡಬಹುದು ಮತ್ತು ಆ ಮೊತ್ತವು ಮಾರುಕಟ್ಟೆ ಸಮಿತಿ ಮತ್ತು [1][ಮಂಡಲ ಪಂಚಾಯತಿ][1]ಯು ಪರಸ್ಪರ ಒಪ್ಪಿಕೊಳ್ಳಬಹುದಾದಂಥ ಸಮಯಗಳಲ್ಲಿ ಮತ್ತು ಕಂತುಗಳಲ್ಲಿ ಮರುಸಂದಾಯವಾಗತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**99. [1][ಮಂಡಲ ಪಂಚಾಯತಿಗಳಿಗೆ][1] ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ವಹಿಸಿಕೊಡುವುದರ ಪರಿಣಾಮಗಳು.–** [1][ಕರ್ನಾಟಕ ಜಿಲ್ಲಾ ಪರಿಷತ್ತುಗಳು, ತಾಲ್ಲೂಕು ಪಂಚಾಯತ್ ಸಮಿತಿಗಳು, ಮಂಡಲ ಪಂಚಾಯತಿಗಳು ಮತ್ತು ನ್ಯಾಯ ಪಂಚಾಯತಿಗಳ ಅಧಿನಿಯಮ, 1983ರಲ್ಲಿ][1] ಏನೇ ಒಳಗೊಂಡಿದ್ದರೂ, [1][ಮಂಡಲ ಪಂಚಾಯತಿಯು][1] 97ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಅದಕ್ಕೆ ವಹಿಸಿಕೊಟ್ಟಿರುವ ಅಧಿಕಾರಗಳನ್ನು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಚಲಾಯಿಸಲು ಮತ್ತು ಕರ್ತವ್ಯಗಳನ್ನು ನಿರ್ವಹಿಸಲು ಸಕ್ಷಮವಾಗಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ-XI

## ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿ

**100. ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿ.–** (1) ರಾಜ್ಯ ಸರ್ಕಾರವು [1][ಕರ್ನಾಟಕ][1] ರಾಜ್ಯದಲ್ಲಿ, [1][ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿ][1] ಎಂಬ ಹೆಸರಿನ ಮಂಡಲಿಯೊಂದನ್ನು ಈ ಸಂಬಂಧದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ ಸ್ಥಾಪಿಸತಕ್ಕದ್ದು.

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(2) ಮಂಡಲಿಯು, ಶಾಶ್ವತ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಅಥವಾ ಯಾವುದೇ ಇತರ ಅಧಿನಿಯಮಿತಿಯ ಮೂಲಕ ಅಥವಾ ಮೇರೆಗೆ ವಿಧಿಸಲಾಗುವಂಥ ನಿರ್ಬಂಧಗಳಿಗೊಳಪಟ್ಟು, ಮಂಡಲಿಯನ್ನು ಯಾವ ಉದ್ದೇಶಕ್ಕಾಗಿ ರಚಿಸಲಾಗಿದೆಯೋ ಆ ಉದ್ದೇಶಕ್ಕಾಗಿ ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನೂ ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೆ ಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರವು ಅದರಲ್ಲಿ ನಿಹಿತವಾಗಿರತಕ್ಕದ್ದು, ಮತ್ತು ಅದು ಸದರಿ ನಿಗಮಿತದ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

**101. ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯ ರಚನೆ:–** (1) ಮಂಡಲಿಯು, ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕೃಷಿ ಉತ್ಪನ್ನ ಮಾರುಕಟ್ಟೆ ಖಾತೆಯ ರಾಜ್ಯಮಂತ್ರಿಯವರು ಮಂಡಲಿಯ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು;

(ii) ರಾಜ್ಯದ ಪ್ರತಿಯೊಂದು ರೆವಿನ್ಯೂ ಜಿಲ್ಲೆಯಿಂದ, ಆ ಜಿಲ್ಲೆಯಲ್ಲಿರುವ ಎಲ್ಲ ಮಾರುಕಟ್ಟೆ ಸಮಿತಿಗಳ ಅಧ್ಯಕ್ಷರಿಂದ ಕೂಡಿದ ಚುನಾಯಿತ ಗಣವು ಗೊತ್ತುಪಡಿಸಿದ ರೀತಿಯಲ್ಲಿ ಆಯ್ಕೆ ಮಾಡಿದ, ಜಿಲ್ಲೆಯ ಒಂದು ಮಾರುಕಟ್ಟೆ ಸಮಿತಿಯ ಅಧ್ಯಕ್ಷನೂ ಆಗಿರುವ ಒಬ್ಬ ವ್ಯಕ್ತಿ;

[1][(iii) ಸರ್ಕಾರದ ಕಾರ್ಯದರ್ಶಿ, ಸಹಕಾರ ಇಲಾಖೆ ಅಥವಾ ಅವರು ನಾಮನಿರ್ದೇಶನ ಮಾಡಿದ ವ್ಯಕ್ತಿ, ಪದನಿಮಿತ್ತ;

(iv) ಸರ್ಕಾರದ ಕಾರ್ಯದರ್ಶಿ, ಕೃಷಿ ಇಲಾಖೆ ಅಥವಾ ಅವರು ನಾಮನಿರ್ದೇಶನ ಮಾಡಿದ ವ್ಯಕ್ತಿ, ಪದನಿಮಿತ್ತ;

(v) ಕೃಷಿ ಮಾರುಕಟ್ಟೆ ನಿರ್ದೇಶಕರು][1]:

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-3-1992 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

ಪರಂತು, ಯಾವುದೇ ರೆವಿನ್ಯೂ ಜಿಲ್ಲೆಯಲ್ಲಿ ಕೇವಲ ಎರಡು ಮಾರುಕಟ್ಟೆ ಸಮಿತಿಗಳು ಇದ್ದರೆ, ಮತ್ತು ಆ ಸಮಿತಿಗಳ ಇಬ್ಬರೂ ಅಧ್ಯಕ್ಷರು ಅಂಥ ಜಿಲ್ಲೆಯಿಂದ ಚುನಾವಣೆಗಾಗಿ ಅಭ್ಯರ್ಥಿಗಳಾಗಿ ಸ್ಪರ್ಧಿಸಿದ್ದರೆ ಆ ಮಂಡಲಿಯಲ್ಲಿ ಆ ಮಾರುಕಟ್ಟೆ ಸಮಿತಿಗಳನ್ನು ಪ್ರತಿನಿಧಿಸಬೇಕಾದ ವ್ಯಕ್ತಿಯನ್ನು ಚುನಾವಣಾ ಅಧಿಕಾರಿಯು ಚೀಟಿ ಎತ್ತುವ ಮೂಲಕ ನಿರ್ಧರಿಸತಕ್ಕದ್ದು:

ಮತ್ತೂ ಪರಂತು, ಯಾವುದೇ ರೆವಿನ್ಯೂ ಜಿಲ್ಲೆಯಲ್ಲಿ ಒಂದೇ ಒಂದು ಮಾರುಕಟ್ಟೆ ಸಮಿತಿ ಇರುವಲ್ಲಿ ಅಂಥ ಸಮಿತಿಯ ಅಧ್ಯಕ್ಷನು ಆ ಮಂಡಲಿಯ ಸದಸ್ಯನಾಗತಕ್ಕದ್ದು.

(2) ಮಂಡಲಿಯು, ಚುನಾಯಿತ ಸದಸ್ಯರ ಪೈಕಿ ಒಬ್ಬನನ್ನು ಉಪಾಧ್ಯಕ್ಷರೆಂದು ಚುನಾಯಿಸತಕ್ಕದ್ದು.

(3) [1][ಕೃಷಿ ಮಾರುಕಟ್ಟೆ ನಿರ್ದೇಶಕ][1]ನು ಮಂಡಲಿಯ ಪದನಿಮಿತ್ತ [2][ವ್ಯವಸ್ಥಾಪಕ ನಿರ್ದೇಶಕ][2] ನಾಗಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-3-1992ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**102. ಮಂಡಲಿಯ ಚುನಾಯಿತ ಸದಸ್ಯರ ಹೆಸರುಗಳ ಪ್ರಕಟಣೆ.–** [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ರು, 101ನೇ ಪ್ರಕರಣದ (1)ನೇ ಉಪಪ್ರಕರಣದ (ii)ನೇ ಖಂಡದ ಮೇರೆಗೆ ಚುನಾಯಿತ ಸದಸ್ಯರ ಹೆಸರುಗಳನ್ನು ಗೊತ್ತುಪಡಿಸಲಾದ ರೀತಿಯಲ್ಲಿ ಪ್ರಕಟಿಸತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**103. ಚುನಾವಣೆಯ ಸಿಂಧುತ್ವದ ನಿರ್ಧರಣೆ.–** 20ರಿಂದ 25ನೇ ಪ್ರಕರಣಗಳ (ಎರಡೂ ಸೇರಿ) ಉಪಬಂಧಗಳು 101ನೇ ಪ್ರಕರಣದ (1)ನೇ ಉಪಪ್ರಕರಣದ (ii)ನೇ ಖಂಡದ ಮೇರೆಗೆ ನಡೆಸಲಾದ ಚುನಾವಣೆಯ ಸಿಂಧುತ್ವದ ನಿರ್ಧರಣೆಯ ಸಂಬಂಧದಲ್ಲಿ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು; ಆದರೆ ಅಂಥ ಅನ್ವಯವು ಆ ಸಂಬಂಧದಲ್ಲಿನ ವಿವಾದ ನಿರ್ಧರಣೆಗಾಗಿ ಅಧಿಕೃತನಾದ ನ್ಯಾಯಿಕ ಅಧಿಕಾರಿಯು, ಸಂಬಂಧಪಟ್ಟ ಜಿಲ್ಲೆಯ ಮೇಲೆ ಅಧಿಕಾರ ವ್ಯಾಪ್ತಿ ಹೊಂದಿರುವ ಜಿಲ್ಲಾ ನ್ಯಾಯಾಧೀಶನಾಗಿರತಕ್ಕದ್ದೆಂಬ ಮಾರ್ಪಾಟಿಗೆ ಒಳಪಟ್ಟಿರತಕ್ಕದ್ದು.

**104. ಮಂಡಲಿಯ ಚುನಾಯಿತ ಸದಸ್ಯರ ಸದಸ್ಯತ್ವ ನಿಂತು ಹೋಗುವುದು.–** 101ನೇ ಪ್ರಕರಣದ (1)ನೇ ಉಪಪ್ರಕರಣದ (ii)ನೇ ಖಂಡದ ಮೇರೆಗೆ ಚುನಾಯಿತನಾದ ಸದಸ್ಯನು, ಸಂಬಂಧಪಟ್ಟ ಮಾರುಕಟ್ಟೆ ಸಮಿತಿಗಳ ಅಧ್ಯಕ್ಷರ ಚುನಾಯಿತ ಗಣದ ಸದಸ್ಯನಾಗಿರುವುದು ನಿಂತುಹೋದರೆ ಅವನು ಆ ಮಂಡಲಿಯ ಸದಸ್ಯನಾಗಿರುವುದು ನಿಂತು ಹೋಗತಕ್ಕದ್ದು.

**105. ಉಪಚುನಾವಣೆ.–** ಯಾವನೇ ಚುನಾಯಿತ ಸದಸ್ಯನ ಸ್ಥಾನವು ರಾಜೀನಾಮೆ ಅಥವಾ ಮರಣದಿಂದಾಗಿ ಅಥವಾ 104ನೇ ಪ್ರಕರಣದ ಮೇರೆಗೆ ಸದಸ್ಯತ್ವವು ನಿಂತುಹೋದ ಕಾರಣದಿಂದಾಗಿ ತೆರವಾದರೆ ಹಾಗೆ ಸ್ಥಾನವು ಖಾಲಿಯಾದ ತರುವಾಯ ಮತ್ತೊಬ್ಬ ವ್ಯಕ್ತಿಯನ್ನು ಆ ಸ್ಥಾನಕ್ಕೆ ಚುನಾಯಿಸುವ ಮೂಲಕ ಅದನ್ನು ಭರ್ತಿ ಮಾಡತಕ್ಕದ್ದು.

*[**106. ಮಂಡಲಿಯ ಸದಸ್ಯರ ಹುದ್ದೆಯ ಅವಧಿ.–** ಮಂಡಲಿಯ ಚುನಾಯಿತ ಸದಸ್ಯ ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿದ್ದ ಹೊರತು, [1][ಐದು ವರ್ಷಗಳ][1] ಅವಧಿಯವರೆಗೆ ಹುದ್ದೆಯಲ್ಲಿರತಕ್ಕದ್ದು.

* 61ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿ ನೋಡಿ.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

*106ಎ.

* 61ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿ ನೋಡಿ.

[1][**107. ಮಂಡಲಿಯ ಅಧ್ಯಕ್ಷನ ಮತ್ತು ಉಪಾಧ್ಯಕ್ಷನ ಅಧಿಕಾರಗಳು ಮತ್ತು ಕರ್ತವ್ಯಗಳು:**– ಮಂಡಲಿಯ ಅಧ್ಯಕ್ಷನ ಹಾಗೂ ಉಪಾಧ್ಯಕ್ಷನ ಅಧಿಕಾರಗಳು ಮತ್ತು ಕರ್ತವ್ಯಗಳು ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಲಾಗಿರುವಂತೆ ಇರತಕ್ಕದ್ದು:

ಪರಂತು, ಈ ಪ್ರಕರಣದ ಮೇರೆಗೆ ವಿನಿಯಮಗಳನ್ನು ರಚಿಸುವವರೆಗೆ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತಿದ್ದುಪಡಿ) ಅಧಿನಿಯಮ, 1986ರ ಪ್ರಾರಂಭಕ್ಕೆ ಮುಂಚೆ, ಮಂಡಲಿಯ ಅಧ್ಯಕ್ಷ ಹಾಗೂ ಉಪಾಧ್ಯಕ್ಷರಿಗೆ ಇದ್ದ ಅಧಿಕಾರಗಳು ಮತ್ತು ಕರ್ತವ್ಯಗಳಿಗೆ ಸಂಬಂಧಪಟ್ಟ ಉಪಬಂಧಗಳು ಅನ್ವಯವಾಗತಕ್ಕದ್ದು.][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**108. ಮಂಡಲಿಯ ವ್ಯವಹಾರದ ನಿರ್ವಹಣೆ:**– ಮಂಡಲಿಯು ತನ್ನ ವ್ಯವಹಾರವನ್ನು ನಿರ್ವಹಿಸುವ ಸಂಬಂಧವಾಗಿ ಈ ಅಧಿನಿಯಮಕ್ಕೆ ಅಥವಾ ಅದರ ಮೇರೆಗೆ ರಚಿಸಲಾದ ಯಾವುದೇ ನಿಯಮಗಳಿಗೆ ಅಸಂಗತವಾಗಿರದಂಥ ವಿನಿಯಮಗಳನ್ನು ರಚಿಸತಕ್ಕದ್ದು:

ಪರಂತು, ಈ ಪ್ರಕರಣದ ಮೇರೆಗೆ ವಿನಿಯಮಗಳನ್ನು ರಚಿಸುವವರೆಗೆ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತಿದ್ದುಪಡಿ) ಅಧಿನಿಯಮ, 1986ರ ಪ್ರಾರಂಭಕ್ಕೆ ಮುಂಚೆ ಮಂಡಲಿಯ ವ್ಯವಹಾರವನ್ನು ನಡೆಸುವುದಕ್ಕೆ ಸಂಬಂಧಪಟ್ಟಂತೆ ಇದ್ದ ಉಪಬಂಧಗಳು ಅನ್ವಯವಾಗತಕ್ಕದ್ದು.][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**109. ರಾಜ್ಯ ಸರ್ಕಾರದಿಂದ ಅನುದಾನಗಳು.**– ರಾಜ್ಯ ಸರ್ಕಾರವು, ಪ್ರತಿ ಆರ್ಥಿಕ ವರ್ಷಕ್ಕಾಗಿ ಆ ವರ್ಷದಲ್ಲಿ, ಮಾರುಕಟ್ಟೆ ಫೀಜು ಮತ್ತು ಲೈಸನ್ಸ್ ಫೀಜಿನ ರೂಪದಲ್ಲಿ ಮಾರುಕಟ್ಟೆ ಸಮಿತಿಗಳು ಸ್ವೀಕರಿಸಿದ ಒಟ್ಟು ಜಮೆಗಳ ಶೇಕಡಾ ಒಂದರಷ್ಟಕ್ಕೆ ಸಮನಾದ ಮೊಬಲಗನ್ನು ಮಂಡಲಿಗೆ ಅನುದಾನವಾಗಿ ನೀಡತಕ್ಕದ್ದು.][1]

1. 1976ರ ಅಧಿನಿಯಮ ಸಂಖ್ಯೆ 14ರ ಮೂಲಕ 24-1-1976ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

*109ಎ.

*61ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿಯನ್ನು ನೋಡಿ.

**110. ಮಾರುಕಟ್ಟೆ ಅಭಿವೃದ್ಧಿ ನಿಧಿ:**– (1) 92ನೇ ಮತ್ತು 109ನೇ ಪ್ರಕರಣಗಳ ಮೇರೆಗೆ ಸಂದಾಯ ಮಾಡಿದ ಮೊತ್ತಗಳನ್ನು ಮತ್ತು [1][ಎತ್ತಿದ ಸಾಲಗಳೂ ಸೇರಿದಂತೆ][1] ಮಂಡಲಿಯ ಎಲ್ಲಾ ಇತರ ಜಮೆಗಳನ್ನು, ಮಾರುಕಟ್ಟೆ ಅಭಿವೃದ್ಧಿ ನಿಧಿ ಎಂದು ಕರೆಯಲಾಗುವ ನಿಧಿಗೆ ಜಮೆ ಮಾಡತಕ್ಕದ್ದು.

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಮಂಡಲಿಯು ವಹಿಸಿದ ಎಲ್ಲಾ ವೆಚ್ಚವನ್ನು ಸದರಿ ನಿಧಿಯಿಂದ ಭರಿಸತಕ್ಕದ್ದು.

[1][**110ಎ. ಸಾಲ ಪಡೆಯುವ ಅಧಿಕಾರ.**– ಮಂಡಲಿಯು ಸರ್ಕಾರದ ಪೂರ್ವ ಮಂಜೂರಾತಿ ಪಡೆದು ಮತ್ತು ಗೊತ್ತುಪಡಿಸಬಹುದಾದಂತ ಷರತ್ತುಗಳಿಗೆ ಒಳಪಟ್ಟು ಕಾಲಕಾಲಕ್ಕೆ ಈ ಅಧಿನಿಯಮದ ಉದ್ದೇಶಕ್ಕಾಗಿ ಅಗತ್ಯವಾದ ಯಾವುದೇ ಮೊಬಲಗನ್ನು ಸಾಲವಾಗಿ ಪಡೆದುಕೊಳ್ಳಬಹುದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**111. ಮಾರುಕಟ್ಟೆ ಅಭಿವೃದ್ಧಿ ನಿಧಿಯನ್ನು ವೆಚ್ಚ ಮಾಡತಕ್ಕ ಉದ್ದೇಶಗಳು.**– ಮಂಡಲಿಯು ಮಾರುಕಟ್ಟೆ ಅಭಿವೃದ್ಧಿ ನಿಧಿಯನ್ನು ಈ ಕೆಳಕಂಡ ಉದ್ದೇಶಗಳಿಗಾಗಿ ಉಪಯೋಗಿಸತಕ್ಕದ್ದು, ಎಂದರೆ:–

(i) ಕೃಷಿ ಉತ್ಪನ್ನಗಳ ಶ್ರೇಣೀಕರಣ ಮತ್ತು ಪ್ರಮಾಣ ನಿಷ್ಕರ್ಷೆ;

(ii) ರಾಜ್ಯದಲ್ಲಿ ಮಾರುಕಟ್ಟೆ ವ್ಯವಹಾರ ನಿಯಂತ್ರಣದ ಸಾಮಾನ್ಯ ಸುಧಾರಣೆ;

(iii) ಆರ್ಥಿಕವಾಗಿ ದುರ್ಬಲವಾದ [1][ಅಥವಾ ಅಗತ್ಯವಿರುವ][1] ಮಾರುಕಟ್ಟೆ ಸಮಿತಿಗಳಿಗೆ ಸಾಲಗಳು ಮತ್ತು ಅನುದಾನಗಳ ರೂಪದಲ್ಲಿ ನೆರವು ನೀಡಿಕೆ;

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(iv) ಮಂಡಲಿಯ ಕರ್ತವ್ಯಗಳ ನಿರ್ವಹಣೆಗಾಗಿ ಕಟ್ಟಡಗಳ ಸ್ವಾಧೀನ ಅಥವಾ ನಿರ್ಮಾಣ;

(v) ಮಂಡಲಿಯು ನಿಯೋಜಿಸಿದ ಅಧಿಕಾರಿಗಳ ಮತ್ತು ನೌಕರರ ವೇತನ, ನಿವೃತ್ತಿ ವೇತನಗಳು, ರಜಾ ಭತ್ಯಗಳು, ಉಪದಾನಗಳು, ಅಪಘಾತಗಳಿಂದುಂಟಾದ ಗಾಯಗಳ ಸಂಬಂಧದಲ್ಲಿ ನಷ್ಟ ಪರಿಹಾರ, ಅನುಕಂಪ ಭತ್ಯೆಗಳು, ರಜಾ ಭತ್ಯೆಗಳು, ನಿವೃತ್ತಿ ವೇತನಗಳು ಅಥವಾ ಭವಿಷ್ಯನಿಧಿ – ಇವುಗಳ ಬಗ್ಗೆ ವಂತಿಗೆ ಸಂದಾಯ;

(vi) ಮಂಡಲಿಯ ಸದಸ್ಯರಿಗೆ ಪ್ರಯಾಣ ಮತ್ತು ಇತರ ಭತ್ಯೆಗಳು;

(vii) ಕೃಷಿ ಉತ್ಪನ್ನದ ನಿಯಂತ್ರಿತ ಮಾರುಕಟ್ಟೆ ವ್ಯವಹಾರಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಪ್ರಸಾರ ಮತ್ತು ಪ್ರಚಾರ;

(viii) ಮಂಡಲಿಯು ವಹಿಸಿದ ಯಾವುದೇ ಕಾನೂನು ಸಮ್ಮತ ವೆಚ್ಚಗಳನ್ನು ಭರಿಸುವುದು;

(ix) ಕೃಷಿ ಉತ್ಪನ್ನದ ನಿಯಂತ್ರಿತ ಮಾರುಕಟ್ಟೆ ಬಗ್ಗೆ ಶಿಕ್ಷಣವನ್ನು ನೀಡುವುದು;

[1][(ixಎ) ಮಾರುಕಟ್ಟೆ ಪ್ರಾಂಗಣ, ಮಾರುಕಟ್ಟೆ ಉಪಪ್ರಾಂಗಣ ಅಥವಾ ಉಪಮಾರುಕಟ್ಟೆ ಪ್ರಾಂಗಣಕ್ಕೆ ಅಧಿಸೂಚಿತ ಕೃಷಿ ಉತ್ಪನ್ನಗಳ ಸಾಗಾಣಿಕೆಗಾಗಿ ಮತ್ತು ಅವುಗಳ ಮಾರಾಟ ವ್ಯವಸ್ಥೆಗಾಗಿ ಸೌಲಭ್ಯಗಳನ್ನು ಒದಗಿಸುವಲ್ಲಿ ಸಾಮಾನ್ಯ ಸುಧಾರಣೆಗಳು;][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(x) ರಾಜ್ಯದಲ್ಲಿರುವ ಮಾರುಕಟ್ಟೆ ಸಮಿತಿಗಳ ಅಧಿಕಾರಿಗಳಿಗೆ ಮತ್ತು ಸಿಬ್ಬಂದಿಗಳಿಗೆ ತರಬೇತಿ ನೀಡುವುದು;

[1][(xಎ) ಮಾರುಕಟ್ಟೆ ಸಮಿತಿಗಳಿಗೆ ಕಾಮಗಾರಿಗಳ ನಿರ್ವಹಣೆಯೂ ಸೇರಿದಂತೆ, ತಾಂತ್ರಿಕ ಮತ್ತು ಆಡಳಿತಾತ್ಮಕ ನೆರವನ್ನು ಒದಗಿಸುವುದು;][1]

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(xi) ಕೃಷಿ ಉತ್ಪನ್ನದ ನಿಯಂತ್ರಿತ ಮಾರುಕಟ್ಟೆ ಹಿತಾಸಕ್ತಿಗೆ ಸಂಬಂಧಿಸಿದ ಯಾವುದೇ ಇತರ ಉದ್ದೇಶ.

[1][**112. ಮಂಡಲಿಯ ಪ್ರಕಾರ್ಯಗಳು.**- (1) ಮಂಡಳಿಯು ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಲಾದ ನಿಯಮಗಳ ಮತ್ತು ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು, ಈ ಕೆಳಕಂಡ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ತನ್ನ ಪ್ರಕಾರ್ಯಗಳನ್ನು ಕಾರ್ಯಗತಗೊಳಿಸಲು ಅವಶ್ಯ ಮತ್ತು ವಿಹಿತವಾಗಬಹುದಾದಂಥ ಎಲ್ಲ ಕೆಲಸ ಕಾರ್ಯಗಳನ್ನು ಮಾಡಲು ಅಧಿಕಾರ ಹೊಂದಿರತಕ್ಕದ್ದು, ಎಂದರೆ:-

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-4-1996ರಿಂದ ಜಾರಿಗೆ ಬರುವಂತೆ ಅಧಿಸೂಚನೆಯ ಮೂಲಕ ಪ್ರತಿಯೋಜಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

(ಎ) ರಾಜ್ಯ ಸರ್ಕಾರವು ತನಗೆ ಒಪ್ಪಿಸಿದ ವಿಷಯಗಳ ಬಗ್ಗೆ ಸಲಹೆ ಕೊಡುವುದು;

(ಬಿ) ಮಾರುಕಟ್ಟೆ ಸಮಿತಿಗೆ ಕಾನೂನು ನೆರವು ನೀಡುವುದು;

(ಸಿ) ಮಾರುಕಟ್ಟೆಗಳ ಅಭಿವೃದ್ಧಿಗಾಗಿ ಮಾರುಕಟ್ಟೆ ಸಮಿತಿಗಳು ಕೈಕೊಂಡ ಕಾರ್ಯಕ್ರಮಗಳು ಸೇರಿದಂತೆ ಮಾರುಕಟ್ಟೆ ಸಮಿತಿಯ ಕಾರ್ಯನಿರ್ವಹಣೆಯ ಸಂಬಂಧದಲ್ಲಿ ನೆರವಾಗುವುದು;

(ಡಿ) ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಹಾರದ ಅಭಿವೃದ್ಧಿಗಾಗಿ ರಾಜ್ಯ ಮಟ್ಟದಲ್ಲಿ ಯೋಜನೆಗಳನ್ನು ಕೈಗೊಳ್ಳುವುದು;

(ಇ) ಮಾರುಕಟ್ಟೆ ಸಮಿತಿಗಳ ಕಾರ್ಯನಿರ್ವಹಣೆಯಲ್ಲಿನ ಸುಧಾರಣೆಯ ಬಗ್ಗೆ ಖಚಿತಪಡಿಸಿಕೊಳ್ಳುವ ದೃಷ್ಟಿಯಿಂದ ಯಾವುದೇ ಮಾರುಕಟ್ಟೆ ಸಮಿತಿಗಳಿಗೆ ಸಾಮಾನ್ಯವಾಗಿ ಅಥವಾ ಯಾವುದೇ ಮಾರುಕಟ್ಟೆ ಸಮಿತಿಗೆ ವಿಶೇಷವಾಗಿ ಸಲಹೆ ಕೊಡುವುದು;

(ಎಫ್) ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಾರುಕಟ್ಟೆ-ಇವೆರಡರಿಂದ ಪಡೆದ ಮಾಹಿತಿಯ ಸಹಾಯದಿಂದ ಎಲ್ಲಾ ಮಾರುಕಟ್ಟೆ ಸಮಿತಿಗಳ ಕಾರ್ಯ ನಿರ್ವಹಣೆಯನ್ನು ಸಮನ್ವಯಗೊಳಿಸುವುದು;

(ಜಿ) ರೈತರಿಗೆ ಸುರಕ್ಷಾ ಜೀವವಿಮೆಯ ವ್ಯವಸ್ಥೆ ಮಾಡುವುದು ಮತ್ತು ಅವಶ್ಯಕವಾದರೆ ರಾಜ್ಯದ ಎಲ್ಲಾ ಕೃಷಿಕರಿಗೆ ಸಂಬಂಧಿಸಿದಂತೆ ಸಂದಾಯವಾಗತಕ್ಕ ವಿಮಾಕಂತುಗಳಿಗೆ ಹಣ ಒದಗಿಸುವುದು;

(ಹೆಚ್) ಮಾರುಕಟ್ಟೆ ಪ್ರಾಂಗಣದ ಅಭಿವೃದ್ಧಿಗಾಗಿ ನಿವೇಶನಗಳ ನಕ್ಷೆಗಳನ್ನು ಮತ್ತು ನಿರ್ಮಾಣದ ಅಂದಾಜುಗಳನ್ನು ತಯಾರಿಸುವಲ್ಲಿ ಮಾರುಕಟ್ಟೆ ಸಮಿತಿಗಳಿಗೆ ನೆರವಾಗುವುದು;

(ಐ) ಕೃಷಿ ಮಾರುಕಟ್ಟೆ ವ್ಯವಹಾರಗಳಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ವಿಚಾರ ಸಂಕಿರಣಗಳನ್ನು ಮತ್ತು ಕಮ್ಮಟಗಳನ್ನು ಅಥವಾ ವಸ್ತು ಪ್ರದರ್ಶನಗಳನ್ನು ಏರ್ಪಡಿಸುವುದು ಅಥವಾ ವ್ಯವಸ್ಥೆಗೊಳಿಸುವುದು;

[1][(ಜೆ) ರಾಜ್ಯದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನಗಳ ಶ್ರೇಣೀಕರಣ, ಮಾನಕಗಳ ನಿಗದಿ ಮತ್ತು ಗುಣಮಟ್ಟ ಪ್ರಮಾಣೀಕರಣವನ್ನು ಉತ್ತೇಜಿಸುವ ಉದ್ದೇಶಕ್ಕಾಗಿ ಕೃಷಿ ಉತ್ಪನ್ನ ಮಾರುಕಟ್ಟೆ ಮಾನಕಗಳ ಸಂಸ್ಥೆಯನ್ನು (ಬ್ಯೂರೋವನ್ನು) ಸ್ಥಾಪಿಸುವುದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[2][(ಕೆ)][2] ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸುವುದು.][1]

*[1][(2) ರಾಜ್ಯ ಸರ್ಕಾರವು ತನಗೆ ಉಲ್ಲೇಖಿಸುವ ಯಾವುದೇ ವಿಷಯದ ಬಗ್ಗೆ ಸಲಹೆ ಕೊಡುವುದು ಮಂಡಲಿಯ ಕರ್ತವ್ಯವಾಗಿರತಕ್ಕದ್ದು][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಮರುಸಂಖ್ಯೆ ನೀಡಲಾಗಿದೆ.

*61ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿ ನೋಡಿ.

**113. ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳು ಮಂಡಲಿಗೆ ಅನ್ವಯವಾಗುವುದು.–** ಈ ಅಧ್ಯಾಯದಲ್ಲಿ ಉಪಬಂಧಿಸಿದುದನ್ನುಳಿದು, ಮಾರುಕಟ್ಟೆ ಸಮಿತಿಗೆ ಅನ್ವಯವಾಗುವ ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಮಂಡಲಿಗೆ ಅನ್ವಯವಾಗತಕ್ಕದ್ದು.

## ಅಧ್ಯಾಯ–XII

## ದಂಡಗಳು

**114. ಫೀಜು ಮುಂತಾದವುಗಳ ಸಂದಾಯದ ತಪ್ಪಿತಕ್ಕಾಗಿ ದಂಡಗಳು.–** ಈ ಅಧಿನಿಯಮದ ಅಥವಾ ನಿಯಮಗಳ ಅಥವಾ ವಿನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ತನ್ನಿಂದ ಬಾಕಿ ಇರುವ ಯಾವುದೇ ಫೀಜು ಅಥವಾ ಇತರ ಮೊಬಲಗನ್ನು ಸಂದಾಯ ಮಾಡದೇ ತಪ್ಪಿಸಿಕೊಳ್ಳುವ [1][ಯಾವನೇ ವ್ಯಕ್ತಿಯು][1] ಅಪರಾಧ ನಿರ್ಣಯವಾದ ಮೇಲೆ [2][ಬಾಕಿ ಇರುವ ಫೀಜಿನ ಮೊಬಲಗು ಅಥವಾ ಇತರ ಮೊಬಲಗಿನ ಮೂರು ಪಟ್ಟಿಗೆ ಸಮನಾದ ಮೊಬಲಗು [1][ಅಥವಾ ಮೂರು ಸಾವಿರ ರೂಪಾಯಿಗಳು – ಇವುಗಳಲ್ಲಿ ಯಾವುದು ಹೆಚ್ಚೋ ಆ ಮೊಬಲಗಿನಷ್ಟು][2] ಜುಲ್ಮಾನೆಯಿಂದ ಮತ್ತು ಅಂಥ ತಪ್ಪಿತವು ಮುಂದುವರಿದ ಸಂದರ್ಭದಲ್ಲಿ, ಆ ತಪ್ಪಿತದ ಬಗ್ಗೆ ಅಪರಾಧ ನಿರ್ಣಯದ ತರುವಾಯ ಅದು ಮುಂದುವರಿದ ಪ್ರತಿದಿನಕ್ಕೂ [1][ಎರಡುನೂರು][1] ರೂಪಾಯಿಗಳವರೆಗೆ ವಿಸ್ತರಿಸಬಹುದಾದಂತಹ ಇನ್ನೂ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 9–5–1980ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17–6–1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1]**[115. ಫೀಜು, ಉಪಕರ ಅಥವಾ ಇತರೆ ಮೊಬಲಗನ್ನು ಸಂದಾಯ ಮಾಡಲು ಆಪಾದಿತನು ಹೊಣೆಯಾಗಿರುವುದು.–** 114ನೇ ಪ್ರಕರಣದ ಮೇರೆಗಿನ ಅಪರಾಧಕ್ಕಾಗಿ ಯಾವ ವ್ಯಕ್ತಿಯ ಮೇಲೆ ಕ್ರಮವನ್ನು ಜರುಗಿಸಲಾಗಿದೆಯೋ ಆ ವ್ಯಕ್ತಿಯು ಈ ಅಧಿನಿಯಮದ ಅಥವಾ ನಿಯಮಗಳ ಅಥವಾ ವಿನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಮಾರುಕಟ್ಟೆ ಸಮಿತಿಗೆ ತನ್ನಿಂದ ಬಾಕಿ ಇರುವ ಫೀಜನ್ನು ಅಥವಾ ಇತರೆ ಮೊಬಲಗನ್ನು ಸಂದಾಯ ಮಾಡುವ ತನ್ನ ಬಾಧ್ಯತೆಯಿಂದ ವಿಮುಕ್ತನಾಗತಕ್ಕದ್ದಲ್ಲ][1].

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17–6–1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**116. ಫೀಜು ಅಥವಾ ಇತರ ಮೊಬಲಗನ್ನು ಕ್ಷಿಪ್ರವಾಗಿ ವಸೂಲ್ಮಾಡಲು ಮ್ಯಾಜಿಸ್ಟ್ರೇಟನ ಅಧಿಕಾರ.–** ಯಾವನೇ ವ್ಯಕ್ತಿಯು, ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ ಅಥವಾ ವಿನಿಯಮಗಳ ಅಥವಾ ಉಪವಿಧಿಗಳ ಮೇರೆಗಿನ ಅಪರಾಧದ ಬಗ್ಗೆ ಅಪರಾಧ ನಿರ್ಣೀತನಾದಾಗಲೆಲ್ಲ ಮ್ಯಾಜಿಸ್ಟ್ರೇಟನು ಆ ವ್ಯಕ್ತಿಯ ಮೇಲೆ ವಿಧಿಸಬಹುದಾದ ಯಾವುದೇ ಜುಲ್ಮಾನೆಯು ಸೇರಿ ಈ ಅಧಿನಿಯಮದ ಅಥವಾ ನಿಯಮಗಳ ಅಥವಾ ವಿನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಅವನಿಂದ ಬಾಕಿ ಇರುವ ಫೀಜಿನ ಮೊತ್ತ ಅಥವಾ ಇತರ ಮೊತ್ತವನ್ನು ಕ್ಷಿಪ್ರವಾಗಿ ವಸೂಲ್ಮಾಡತಕ್ಕದ್ದು ಮತ್ತು ಅದನ್ನು ಸಂದರ್ಭಾನುಸಾರ, ಮಾರುಕಟ್ಟೆ ಸಮಿತಿಗೆ ಅಥವಾ ಮಂಡಲಿಗೆ ಸಂದಾಯ ಮಾಡತಕ್ಕದ್ದು ಮತ್ತು ಪ್ರಾಸಿಕ್ಯೂಷನ್ ವೆಚ್ಚಗಳೆಂದು ಅವನು ನಿಗದಿ ಮಾಡಬಹುದಾದಂಥ ಮೊಬಲಗು ಯಾವುದಾದರೂ ಇದ್ದರೆ ಅದನ್ನು ಸಹ ತನ್ನ ವಿವೇಚನಾನುಸಾರ ಕ್ಷಿಪ್ರವಾಗಿ ವಸೂಲ್ಮಾಡಬಹುದು ಮತ್ತು ಮಾರುಕಟ್ಟೆ ಸಮಿತಿಗೆ ಅಥವಾ ಮಂಡಲಿಗೆ ಅದನ್ನು ಸಂದಾಯ ಮಾಡಬಹುದು.

**117. 8ನೇ ಪ್ರಕರಣದ ಉಲ್ಲಂಘನೆಗಾಗಿ ದಂಡ.–** 8ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದ ಉಪಬಂಧಗಳನ್ನು ಉಲ್ಲಂಘಿಸಿ, ಯಾವುದೇ ಕೃಷಿ ಉತ್ಪನ್ನವನ್ನು ಮಾರಾಟ ಮಾಡುವುದಕ್ಕಾಗಿ ಮಾರುಕಟ್ಟೆ ಪ್ರದೇಶದಲ್ಲಿನ ಯಾವುದೇ ಸ್ಥಳವನ್ನು ಉಪಯೋಗಿಸುವ ಅಥವಾ ಸಿಂಧುವಾದ ಲೈಸೆನ್ಸ್ ಇಲ್ಲದೆ ವ್ಯಾಪಾರಿಯಾಗಿ, ದಳ್ಳಾಳಿಯಾಗಿ, ಬ್ರೋಕರ್‌ನಾಗಿ, ಸಂಸ್ಕರಣಗಾರನಾಗಿ, ದಾಸ್ತಾನುಗಾರನಾಗಿ ಅಥವಾ ಯಾವುದೇ ಇತರ ಸಾಮರ್ಥ್ಯದಲ್ಲಿ ಕಾರ್ಯನಿರ್ವಹಿಸುವ ಯಾವನೇ ವ್ಯಕ್ತಿಯು [1][ಅಥವಾ 8ನೇ ಪ್ರಕರಣದ (2)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಯಾವುದೇ ಸ್ಥಳವನ್ನು ಅಧಿಸೂಚಿತ ಕೃಷಿ ಉತ್ಪನ್ನದ ಖರೀದಿಗಾಗಿ, ಅಥವಾ ಮಾರಾಟಕ್ಕಾಗಿ ಬಳಸುವ ಯಾವನೇ ವ್ಯಕ್ತಿಯು][1] ಅಪರಾಧ ನಿರ್ಣೀತನಾದ ಮೇಲೆ ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ [2][ಮತ್ತು [3][ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಆದರೆ ಐದುನೂರು ರೂಪಾಯಿಗಳಿಗೆ ಕಡಿಮೆಯಲ್ಲದ][2]][3] ಜುಲ್ಮಾನೆಯಿಂದ ಮತ್ತು ಉಲ್ಲಂಘನೆಯು ಮುಂದುವರಿದ ಸಂದರ್ಭದಲ್ಲಿ ಮೊದಲನೆಯ ಅಪರಾಧ ನಿರ್ಣಯದ ಅನಂತರ ಉಲ್ಲಂಘನೆಯು ಮುಂದುವರಿದ ಅವಧಿಯ [2][ಪ್ರತಿದಿನಕ್ಕೆ ಎರಡು ನೂರು ರೂಪಾಯಿಗಳ][2] ವರೆಗೆ ವಿಸ್ತರಿಸಬಹುದಾದ ಇನ್ನೂ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 9–5–1980 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 9–5–1980 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

3. 1987ರ ಅಧಿನಿಯಮ ಸಂಖ್ಯೆ 29ರ ಮೂಲಕ 10–8–1987ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**117ಎ. 66ನೇ ಪ್ರಕರಣದ ಉಲ್ಲಂಘನೆಗಾಗಿ ದಂಡ.–** ಅಧಿಸೂಚಿತ ಕೃಷಿ ಉತ್ಪನ್ನಗಳ ವ್ಯವಹಾರ ಮಾಡುವ ಯಾವನೇ ವ್ಯಕ್ತಿಯು, ಯಾವುದೇ ಯುಕ್ತ ಕಾರಣವಿಲ್ಲದೆ,–

(i) 66ನೇ ಪ್ರಕರಣದ ಮೇರೆಗೆ ಅವನು ಹಾಜರುಪಡಿಸಬೇಕಾದ ಲೆಕ್ಕಪತ್ರಗಳನ್ನು ಮತ್ತು ದಾಸ್ತಾವೇಜುಗಳನ್ನು ಹಾಜರುಪಡಿಸಲು ಅಥವಾ ಹಾಜರುಪಡಿಸುವಂತೆ ಮಾಡಲು ತಪ್ಪಿದರೆ; ಅಥವಾ

(ii) ಸಂದರ್ಭಾನುಸಾರ, ಅವನು ಒದಗಿಸಬೇಕಾದ ಮಾಹಿತಿಯನ್ನು ಒದಗಿಸಲು ಅಥವಾ ಒದಗಿಸುವಂತೆ ಮಾಡಲು ತಪ್ಪಿದರೆ, ಅಪರಾಧ ನಿರ್ಣಯವಾದ ತರುವಾಯ, ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.][1]

1. 1987ರ ಅಧಿನಿಯಮ ಸಂಖ್ಯೆ 29ರ ಮೂಲಕ 10-8-1987ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**117ಬಿ. 75ನೇ ಪ್ರಕರಣದ ಉಲ್ಲಂಘನೆಗಾಗಿ ದಂಡನೆ.–** (1) ಮಾರುಕಟ್ಟೆ ಪ್ರಾಂಗಣದಲ್ಲಿ, ಖಾಸಗಿ ಮಾರುಕಟ್ಟೆಯಲ್ಲಿ, ಸ್ಥಳೀಯ ವಿನಿಮಯ ಕೇಂದ್ರದಲ್ಲಿ ಅಥವಾ ರೈತ– ಗ್ರಾಹಕ ಮಾರುಕಟ್ಟೆಯಲ್ಲಿ ಕೃಷಿ ಉತ್ಪನ್ನ ವ್ಯವಹಾರ ನಡೆಸುತ್ತಿರುವ ಯಾರೇ ವ್ಯಕ್ತಿಯು ಯಾವುದೇ ಯುಕ್ತ ಕಾರಣವಿಲ್ಲದೆ, ಮಾರಾಟಗಾರನಿಗೆ ಬೆಲೆ ಸಂದಾಯ ಮಾಡಲು ವಿಫಲನಾದಲ್ಲಿ, ಅಪರಾಧ ನಿರ್ಣಯವಾದ ಮೇಲೆ, ಅವನು ಆರು ತಿಂಗಳಿಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸ ಶಿಕ್ಷೆಯಿಂದ ಮತ್ತು ಸಂದಾಯ ಮಾಡಬೇಕಾಗಿದ್ದ ಬೆಲೆಯ ಮೊತ್ತದ ಎರಡುಪಟ್ಟರಷ್ಟಕ್ಕೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಮೊದಲನೇ ಅಪರಾಧ ನಿರ್ಣಯದ ತರುವಾಯವೂ ಉಲ್ಲಂಘನೆಯು ಮುಂದುವರೆದ ಸಂದರ್ಭದಲ್ಲಿ, ಆ ಉಲ್ಲಂಘನೆಯ ಕಾಲದಲ್ಲಿ ಒಂದು ದಿನಕ್ಕೆ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಪ್ರಾಸಿಕ್ಯೂಟ್ ಮಾಡಲಾದ ಯಾರೇ ವ್ಯಕ್ತಿಯು, ಮಾರಾಟಗಾರನಿಗೆ ಬೆಲೆ ಸಂದಾಯಮಾಡುವ ಹೊಣೆಗಾರಿಕೆಯಿಂದ ಅಥವಾ ಈ ಅಧಿನಿಯಮದ, ನಿಯಮಗಳ, ಉಪವಿಧಿಗಳ ಅಥವಾ ವಿನಿಯಮನಗಳ ಮೇರೆಗೆ ಅವನಿಂದ ಬಾಕಿಯಿರುವ ಯಾವುದೇ ಇತರೆ ಮೊಬಲಗನ್ನು ಸಂದಾಯಮಾಡುವ ಹೊಣೆಗಾರಿಕೆಯಿಂದ ವಿಮುಕ್ತನಾಗತಕ್ಕದ್ದಲ್ಲ][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**118. [2][72ಎ, 72ಬಿ][2], 79 ಮತ್ತು 80ನೇ ಪ್ರಕರಣಗಳ ಉಲ್ಲಂಘನೆಗಾಗಿ ದಂಡ.–** [2][72ಎ, 72ಬಿ][2], 79 ಮತ್ತು 80ನೇ ಪ್ರಕರಣಗಳ ಉಪಬಂಧಗಳನ್ನು ಉಲ್ಲಂಘಿಸುವ ಯಾವನೇ ವ್ಯಕ್ತಿಯು ಅಪರಾಧ ನಿರ್ಣಯದ ತರುವಾಯ ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಎರಡರಿಂದಲೂ ದಂಡನೀಯನಾಗತಕ್ಕದ್ದು:

ಪರಂತು,–

(i) ಮೊದಲನೆಯ ಅಪರಾಧದ ಸಂಬಂಧದಲ್ಲಿ, ನ್ಯಾಯಾಲಯವು ಕಾರಣಗಳನ್ನು ದಾಖಲು ಮಾಡಿ, ಜುಲ್ಮಾನೆಯ ಶಿಕ್ಷೆಯನ್ನು ಮಾತ್ರ ವಿಧಿಸಬಹುದು;

(ii) ಎರಡನೆಯ ಅಥವಾ ಅನಂತರದ ಅಪರಾಧದ ಸಂಬಂಧದಲ್ಲಿ ನ್ಯಾಯಾಲಯವು, ಒಂದು ತಿಂಗಳಿಗೆ ಕಡಿಮೆಯಲ್ಲದಷ್ಟು ಅವಧಿಯ ಕಾರಾವಾಸ ಶಿಕ್ಷೆಯನ್ನು ವಿಧಿಸತಕ್ಕದ್ದು.][1]

1. 1987ರ ಅಧಿನಿಯಮ ಸಂಖ್ಯೆ 29ರ ಮೂಲಕ 10-8-1987 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**118ಎ. 78ನೇ ಪ್ರಕರಣದ ಉಲ್ಲಂಘನೆಗಾಗಿ ದಂಡನೆ.–** (1) ಮಾರುಕಟ್ಟೆ ಪ್ರಾಂಗಣದಲ್ಲಿ ಅಥವಾ ಖಾಸಗಿ ಮಾರುಕಟ್ಟೆಯಲ್ಲಿ ಕಮೀಷನ್ ಏಜೆಂಟನಾಗಿ ಅಧಿಸೂಚಿತ ಕೃಷಿ ಉತ್ಪನ್ನಗಳ ವ್ಯವಹಾರವನ್ನು ನಡೆಸುತ್ತಿರುವ ಯಾರೇ ವ್ಯಕ್ತಿಯು, 78ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಮತ್ತು (ಬಿ) ಖಂಡಗಳ ಮೇರೆಗೆ ನಿರ್ದಿಷ್ಟಪಡಿಸಿದ ತನ್ನ ಕರ್ತವ್ಯವನ್ನು ಯಾವುದೇ ಯುಕ್ತ ಕಾರಣವಿಲ್ಲದೆ ಪಾಲಿಸಲು ವಿಫಲನಾದರೆ, ಅವನು ಅಪರಾಧ ನಿರ್ಣಯವಾದ ಮೇಲೆ ಐದು ಸಾವಿರ ರೂಪಾಯಿಗಳಿಗೆ ಮೀರದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) ಮಾರುಕಟ್ಟೆ ಪ್ರಾಂಗಣದಲ್ಲಿ ಅಥವಾ ಖಾಸಗಿ ಮಾರುಕಟ್ಟೆಯಲ್ಲಿ ಕಮೀಷನ್ ಏಜೆಂಟನಾಗಿ ಅಧಿಸೂಚಿತ ಕೃಷಿ ಉತ್ಪನ್ನದ ವ್ಯವಹಾರವನ್ನು ನಡೆಸುತ್ತಿರುವ ಯಾರೇ ವ್ಯಕ್ತಿಯು, 78ನೇ ಪ್ರಕರಣದ (2)ನೇ ಉಪಪ್ರಕರಣದ (ಸಿ) ಖಂಡದ ಮೇರೆಗೆ, ಮಾರಾಟಗಾರನಿಗೆ ಬೆಲೆ ಸಂದಾಯಮಾಡುವ ಜವಾಬ್ದಾರಿಯನ್ನು ಯುಕ್ತ ಕಾರಣವಿಲ್ಲದೆ ಪಾಲಿಸಲು ವಿಫಲನಾದಲ್ಲಿ, ಅಪರಾಧ ನಿರ್ಣಯವಾದ ಮೇಲೆ, ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸ ಶಿಕ್ಷೆಯಿಂದ ಮತ್ತು ಸಂದಾಯ ಮಾಡಬೇಕಾದ ಬೆಲೆಯ ಮೊತ್ತದ ಎರಡು ಪಟ್ಟುಗಳಷ್ಟು ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು ಮತ್ತು ಮೊದಲನೇ ಅಪರಾಧ ನಿರ್ಣಯದ ತರುವಾಯ ಉಲ್ಲಂಘನೆಯು ಮುಂದುವರೆದಲ್ಲಿ, ಆ ಉಲ್ಲಂಘನೆಯ ಕಾಲದಲ್ಲಿ ಒಂದು ದಿನಕ್ಕೆ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**119. 123ನೇ ಪ್ರಕರಣದ ಮೇರೆಗಿನ ಆದೇಶವನ್ನು ಪಾಲಿಸಲು ತಪ್ಪಿದಲ್ಲಿ ದಂಡ.–** ಮಾರುಕಟ್ಟೆ ಸಮಿತಿಯ ವ್ಯವಹಾರಗಳ ಲೆಕ್ಕಗಳ ಪರಿಶೀಲನೆಯನ್ನು ನಡೆಸುತ್ತಿರುವ ಅಥವಾ ವ್ಯವಹಾರಗಳ ವಿಚಾರಣೆಯನ್ನು ನಡೆಸುತ್ತಿರುವ ಯಾವನೇ ಅಧಿಕಾರಿಗೆ ಅಡ್ಡಿಯನ್ನುಂಟು ಮಾಡುವ ಅಥವಾ 123ನೇ ಪ್ರಕರಣದ (ಎ), (ಸಿ), (ಡಿ) ಅಥವಾ (ಇ) ಖಂಡಗಳ ಮೇರೆಗೆ ಮಾಡಲಾದ ಯಾವುದೇ ಆದೇಶವನ್ನು ಪಾಲಿಸಲು ತಪ್ಪುವ ಯಾವನೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಅಪರಾಧವು ಮುಂದುವರಿದ ಅವಧಿಯ ಪ್ರತಿದಿನಕ್ಕೆ ಎರಡು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂತಹ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**120. 123ನೇ ಅಥವಾ 124ನೇ ಪ್ರಕರಣದ ಉಪಬಂಧಗಳ ಉಲ್ಲಂಘನೆಗಾಗಿ ದಂಡ.–** ಮಾರುಕಟ್ಟೆ ಸಮಿತಿಯ ಯಾವನೇ ಅಧಿಕಾರಿಯನ್ನು, ನೌಕರರನ್ನು ಅಥವಾ ಸದಸ್ಯನನ್ನು, 123 ಅಥವಾ 124ನೇ ಪ್ರಕರಣದ ಮೇರೆಗೆ ಮಾರುಕಟ್ಟೆ ಸಮಿತಿಯ ವ್ಯವಹಾರಗಳು ಅಥವಾ ವ್ಯವಹರಣೆಗೆ ಸಂಬಂಧಪಡುವ ಮಾಹಿತಿಯನ್ನು ಒದಗಿಸುವಂತೆ ಅಗತ್ಯಪಡಿಸಿದಾಗ,–

(ಎ) ಅವನು ಯಾವುದೇ ಮಾಹಿತಿಯನ್ನು ಒದಗಿಸಲು [1][XXX][1] ಅಲಕ್ಷಿಸಿದರೆ ಅಥವಾ ನಿರಾಕರಿಸಿದರೆ; ಅಥವಾ

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಬಿ) [1][XXX][1] ಸುಳ್ಳು ಮಾಹಿತಿಯನ್ನು ಒದಗಿಸಿದರೆ – ಅಪರಾಧ ನಿರ್ಣಯವಾದ ಮೇಲೆ, ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**121. 125ನೇ ಪ್ರಕರಣದ ಉಲ್ಲಂಘನೆಗಾಗಿ ದಂಡ.–** ಮಾರುಕಟ್ಟೆ ಸಮಿತಿಯ ಯಾವುವೇ ಪುಸ್ತಕಗಳನ್ನು, ದಾಖಲೆಗಳನ್ನು, ನಿಧಿಗಳನ್ನು ಮತ್ತು ಸ್ವತ್ತನ್ನು ಅಭಿಗ್ರಹಪಡಿಸುವ ಅಥವಾ ಸ್ವಾಧೀನಪಡಿಸಿಕೊಳ್ಳುವ ಯಾವನೇ ವ್ಯಕ್ತಿಯನ್ನು 125ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಅಡ್ಡಿಪಡಿಸುವ ಅಥವಾ ಅಂಥ ವ್ಯಕ್ತಿಗೆ ಅವುಗಳನ್ನು ಒಪ್ಪಿಸಲು ತಪ್ಪುವ ಯಾವನೇ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, [1][ಒಂದು ವರ್ಷ][1] ದವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ [1][ಮತ್ತು ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ][1] ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**122. ಅಪರಾಧಗಳ ಬಗ್ಗೆ ದಂಡನೆಗಾಗಿ ಸಾಮಾನ್ಯ ಉಪಬಂಧಗಳು.–** ಈ ಅಧಿನಿಯಮದ ಅಥವಾ ಅದರ ಮೇರೆಗಿನ ಯಾವುದೇ ನಿಯಮದ ಅಥವಾ ವಿನಿಯಮದ ಯಾವುವೇ ಉಪಬಂಧಗಳನ್ನು ಉಲ್ಲಂಘಿಸಿದ ಅಪರಾಧಕ್ಕಾಗಿ ಇತರ ಯಾವುದೇ ದಂಡವನ್ನು ಉಪಬಂಧಿಸಿಲ್ಲದಿರುವಲ್ಲಿ, ಅಂಥ ಅಪರಾಧಿಯು ಎರಡು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

## ಅಧ್ಯಾಯ–XIII
## ನಿಯಂತ್ರಣ

**123. ಪರಿಶೀಲನೆ, ವಿಚಾರಣೆ ಮತ್ತು ವಿವರಣಾ ಪಟ್ಟಿ ಮುಂತಾದವುಗಳನ್ನು ಸಲ್ಲಿಸುವುದು.–** [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] ಅಥವಾ ಈ ಸಂಬಂಧದಲ್ಲಿ ಅವನು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಅಧಿಕೃತಗೊಳಿಸಿದ ಯಾವನೇ ಅಧಿಕಾರಿಯು,–

(ಎ) ಮಾರುಕಟ್ಟೆ ಸಮಿತಿಯ ಲೆಕ್ಕಪತ್ರಗಳು ಮತ್ತು ಕಛೇರಿಗಳನ್ನು ಪರಿಶೀಲಿಸಬಹುದು ಅಥವಾ ಪರಿಶೀಲಿಸುವಂತೆ ಮಾಡಬಹುದು;

(ಬಿ) ಮಾರುಕಟ್ಟೆ ಸಮಿತಿಯ ವ್ಯವಹಾರಗಳ ಬಗ್ಗೆ ವಿಚಾರಣೆ ನಡೆಸಬಹುದು;

(ಸಿ) ಒದಗಿಸಬೇಕೆಂದು ಅಂಥ ಸಮಿತಿಯನ್ನು ಅಗತ್ಯಪಡಿಸಲು ತಾನು ಸೂಕ್ತವೆಂದು ಯೋಚಿಸಬಹುದಾದಂಥ ಯಾವುದೇ ವಿವರಪಟ್ಟಿಕೆ, ವಿವರಣಾ ಪಟ್ಟಿ, ಲೆಕ್ಕಪತ್ರಗಳು ಅಥವಾ ವರದಿಯನ್ನು ತರಿಸಿಕೊಳ್ಳಬಹುದು;

(ಡಿ) ಈ ಕೆಳಕಂಡ ಸಂಗತಿಗಳನ್ನು, ಎಂದರೆ,–

(i) ಅಂಥ ಸಮಿತಿಯ ಮೂಲಕ ಅಥವಾ ಅದರ ಪರವಾಗಿ ಮಾಡಲಾಗಿರುವ ಅಥವಾ ಮಾಡಲಿರುವ ಅಥವಾ ಮಾಡಲಾಗುತ್ತಿರುವ ಯಾವುದೇ ಕಾರ್ಯದ ವಿಷಯದಲ್ಲಿ ಇರುವುದಾಗಿ ತನಗೆ ಕಂಡುಬರುವಂಥ ಕಾನೂನು ಬಾಹಿರತೆ ಅಥವಾ ಅವಿಹಿತತೆ ಅಥವಾ ಅನುಚಿತತೆಯ ಆಧಾರದ ಮೇಲೆ ಇರುವ ಯಾವುದೇ ಆಕ್ಷೇಪಣೆಯನ್ನು; ಅಥವಾ

(ii) ಅಂಥ ಸಮಿತಿಯು ಯಾವುದೇ ನಿರ್ದಿಷ್ಟ ಕಾರ್ಯ ಮಾಡುವುದನ್ನು ಮತ್ತು ಅಗತ್ಯಪಡಿಸುವುದೆಂದು ತನಗೆ ಕಂಡುಬರುವಂಥ ಮತ್ತು ತಾನು ಒದಗಿಸಲು ಸಮರ್ಥನಾಗಿರುವಂಥ

ಯಾವುದೇ ಮಾಹಿತಿಯನ್ನು ಪರ್ಯಾಲೋಚಿಸಬೇಕೆಂದು ಮತ್ತು ಅಂಥ ಕಾರ್ಯವನ್ನು ಮಾಡಲು ಅಥವಾ ಮಾಡದೇ ಇರಲು ತನ್ನ ಕಾರಣಗಳನ್ನು ತಿಳಿಸಿ ಸೂಕ್ತ ಕಾಲದೊಳಗೆ ತನಗೆ ಲಿಖಿತ ಉತ್ತರವನ್ನು ಕೊಡುವಂತೆ ಸಮಿತಿಯನ್ನು ಅಗತ್ಯಪಡಿಸಬಹುದು;

(ಇ) ಉತ್ತರವು ಪರ್ಯಾಲೋಚನೆಯಲ್ಲಿರುವಾಗ ಮಾಡಲಿರುವ ಅಥವಾ ಮಾಡಲಾಗುತ್ತಿರುವ ಯಾವುದೇ ಕೆಲಸವನ್ನು ಮಾಡಕೂಡದೆಂದು ಮತ್ತು ಮಾಡಬೇಕಾಗಿರುವ ಕಾರ್ಯವನ್ನು ಮಾಡದಿರುವಾಗ ಅದನ್ನು ತಾನು ನಿರ್ದೇಶಿಸಬಹುದಾದಂಥ ಕಾಲದೊಳಗೆ ಮಾಡಬೇಕೆಂದು ನಿರ್ದೇಶಿಸಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**124. [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನಿಗೆ, ಪ್ರಾಧಿಕೃತ ಅಧಿಕಾರಿಗಳಿಗೆ ಮತ್ತು ರಾಜ್ಯ ಸರ್ಕಾರಕ್ಕೆ ಮಾಹಿತಿಯನ್ನು ಒದಗಿಸಲು ಅಧಿಕಾರಿಗಳ ಮತ್ತು ಸದಸ್ಯರ ಕರ್ತವ್ಯ.–** (1) 123ನೇ ಪ್ರಕರಣದ ಮೇರೆಗೆ ಮಾರುಕಟ್ಟೆ ಸಮಿತಿಯ ವ್ಯವಹಾರಗಳನ್ನು ತನಿಖೆ ನಡೆಸುವಾಗ ಅಥವಾ 126ನೇ ಪ್ರಕರಣದ ಮೇರೆಗೆ ಅಂಥ ಸಮಿತಿಯ ವ್ಯವಹಾರಗಳನ್ನು ಪರೀಕ್ಷಿಸಿದಾಗ ಅಂಥ ಸಮಿತಿಯ ಎಲ್ಲಾ ಅಧಿಕಾರಿಗಳು, ನೌಕರರು ಮತ್ತು ಸದಸ್ಯರು, ಸಮಿತಿಯ ವ್ಯವಹರಣೆಯ ವ್ಯವಹಾರಗಳ ಸಂಬಂಧದಲ್ಲಿ ತಮ್ಮ ಸ್ವಾಧೀನದಲ್ಲಿರುವ ಮಾಹಿತಿಯ ಪೈಕಿ ಸಂದರ್ಭಾನುಸಾರ [1][ಕೃಷಿ ಮಾರುಕಟ್ಟೆ ನಿರ್ದೇಶಕನು,][1] ಪ್ರಾಧಿಕೃತ ಅಧಿಕಾರಿಯು ಅಥವಾ ರಾಜ್ಯ ಸರ್ಕಾರವು ಅಗತ್ಯಪಡಿಸಬಹುದಾದಂತಹ ಮಾಹಿತಿಯನ್ನು ಅವರಿಗೆ ಒದಗಿಸತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) 123ನೇ ಪ್ರಕರಣದ ಮೇರೆಗೆ ಮಾರುಕಟ್ಟೆ ಸಮಿತಿಯ ವ್ಯವಹಾರದ ಬಗ್ಗೆ ತನಿಖೆ ನಡೆಸುವ ಅಧಿಕಾರಿಯು ಅಥವಾ 126ನೇ ಪ್ರಕರಣದ ಮೇರೆಗೆ ಅಂಥ ಸಮಿತಿಯ ವ್ಯವಹರಣೆಗಳನ್ನು ಪರೀಕ್ಷಿಸುವ ರಾಜ್ಯ ಸರ್ಕಾರವು, 1908ರ ಸಿವಿಲ್ ಪ್ರಕ್ರಿಯಾ ಸಂಹಿತೆಯ ಮೂಲಕ ಸಿವಿಲ್ ನ್ಯಾಯಾಲಯದ ಸಂದರ್ಭದಲ್ಲಿ ಉಪಬಂಧಿಸಲಾದ ಸಾಧನೆಗಳ ಮೂಲಕ ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಅಂತಹದೇ ರೀತಿಯಲ್ಲಿ ಮಾರುಕಟ್ಟೆ ಸಮಿತಿಯ ಅಧಿಕಾರಿಗಳನ್ನು ಅಥವಾ ಸದಸ್ಯರನ್ನು ಸಮನು ಮಾಡುವ ಮತ್ತು ಹಾಜರಾತಿಯನ್ನು ಒತ್ತಾಯಪಡಿಸುವ ಹಾಗೂ ಅವರು ಸಾಕ್ಷ್ಯವನ್ನು ನೀಡುವಂತೆ ಮತ್ತು ಆ ಬಗ್ಗೆ ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ಒತ್ತಾಯಿಸುವ ಅಧಿಕಾರವನ್ನು ಹೊಂದಿರತಕ್ಕದ್ದು.

**125. ಲೆಕ್ಕಪುಸ್ತಕಗಳ ಮತ್ತು ಇತರ ದಸ್ತಾವೇಜುಗಳ ಅಭಿಗ್ರಹಣ.–** ಮಾರುಕಟ್ಟೆ ಸಮಿತಿಯ ಪುಸ್ತಕಗಳನ್ನು ಮತ್ತು ದಾಖಲೆಗಳನ್ನು ಅಕ್ರಮವಾಗಿ ತಿದ್ದುವ ಅಥವಾ ನಾಶಪಡಿಸುವ ಸಂಭವವಿದೆ ಎಂದು ಅಥವಾ ಮಾರುಕಟ್ಟೆ ಸಮಿತಿ ನಿಧಿಗಳನ್ನು ಮತ್ತು ಸ್ವತ್ತನ್ನು ದುರುಪಯೋಗಪಡಿಸುವ ಅಥವಾ ದುರ್ವಿನಿಯೋಗ ಮಾಡುವ ಸಂಭವವಿದೆಯೆಂದು [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನಿಗೆ ನಂಬಲು ಕಾರಣವಿರುವಲ್ಲಿ, [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] ತನ್ನಿಂದ ಲಿಖಿತದಲ್ಲಿ ಯುಕ್ತವಾಗಿ ಅಧಿಕಾರ ಪಡೆದ ವ್ಯಕ್ತಿಯು, ಮಾರುಕಟ್ಟೆ ಸಮಿತಿಯ ಅಂಥ ಪುಸ್ತಕಗಳನ್ನು ಮತ್ತು ದಾಖಲೆಗಳನ್ನು, ನಿಧಿಗಳನ್ನು ಮತ್ತು ಸ್ವತ್ತನ್ನು ಅಭಿಗ್ರಹಿಸುವಂತೆ ಮತ್ತು ಸ್ವಾಧೀನಪಡಿಸಿಕೊಳ್ಳುವಂತೆ ನಿರ್ದೇಶಿಸಿ ಆದೇಶವನ್ನು ಹೊರಡಿಸಬಹುದು ಮತ್ತು ಅಂಥ ಪುಸ್ತಕಗಳ, ದಾಖಲೆಗಳ, ನಿಧಿಗಳ ಮತ್ತು ಸ್ವತ್ತಿನ ಅಭಿರಕ್ಷೆಗೆ ಜವಾಬ್ದಾರನಾಗಿರುವ ಮಾರುಕಟ್ಟೆ ಸಮಿತಿಯ ಅಧಿಕಾರಿಯು ಅಥವಾ ಅಧಿಕಾರಿಗಳು, ಹಾಗೆ ಅಧಿಕಾರ ಪಡೆದಿರುವ ವ್ಯಕ್ತಿಗೆ ಅವುಗಳನ್ನು ಒಪ್ಪಿಸಲು ಹೊಣೆಗಾರರಾಗಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**126. ಮಾರುಕಟ್ಟೆ ಸಮಿತಿಯ ವ್ಯವಹರಣೆಗಳ ವರದಿಯನ್ನು ತರಿಸಿಕೊಳ್ಳಲು ಮತ್ತು ಅದರ ಮೇಲೆ ಆದೇಶವನ್ನು ಹೊರಡಿಸಲು ರಾಜ್ಯ ಸರ್ಕಾರದ ಅಧಿಕಾರ.–** ರಾಜ್ಯ ಸರ್ಕಾರವು, [1][ಅದರ ಅಧೀನದಲ್ಲಿರುವ ಯಾವನೇ ಅಧಿಕಾರಿಯು ಅಥವಾ ಸಂದರ್ಭಾನುಸಾರ ಮಾರುಕಟ್ಟೆ ಸಮಿತಿಯು][1] ನಡೆಸಿದ ವ್ಯವಹರಣೆಯ ಅಥವಾ ಕೈಗೊಂಡ ನಿರ್ಣಯದ ಅಥವಾ ಹೊರಡಿಸಿದ ಆದೇಶದ ಕಾನೂನು ಬದ್ಧತೆಯನ್ನು ಅಥವಾ ಔಚಿತ್ಯವನ್ನು ಖಚಿತಪಡಿಸಿಕೊಳ್ಳುವ ಉದ್ದೇಶಕ್ಕಾಗಿ [1][ಆ ಯಾವನೇ ಅಧಿಕಾರಿಯು ಅಥವಾ ಆ ಮಾರುಕಟ್ಟೆ ಸಮಿತಿಯು][1] ನಡೆಸಿದ ವ್ಯವಹರಣೆಗಳ ವರದಿಯನ್ನು ಯಾವುದೇ ಕಾಲದಲ್ಲಿ ತರಿಸಿಕೊಳ್ಳಬಹುದು ಮತ್ತು ಪರೀಕ್ಷಿಸಬಹುದು. ಕೈಗೊಂಡ ಯಾವುದೇ ನಿರ್ಣಯ ಅಥವಾ ಹೊರಡಿಸಿದ ಯಾವುದೇ ಆದೇಶ ಅಥವಾ ನಡೆಸಿದ ವ್ಯವಹರಣೆಗಳನ್ನು, ಮಾರ್ಪಾಡು ಮಾಡಬೇಕೆಂದು, ರದ್ದುಗೊಳಿಸಬೇಕೆಂದು ಅಥವಾ ಹಾಗೆಯೇ ವಾಪಸು ಕಳಿಸಬೇಕೆಂದು ರಾಜ್ಯ ಸರ್ಕಾರಕ್ಕೆ ಯಾವುದೇ ಸಂದರ್ಭದಲ್ಲಿ ಕಂಡುಬಂದರೆ, ಆ ಬಗ್ಗೆ ರಾಜ್ಯ ಸರ್ಕಾರವು ಸೂಕ್ತವೆಂದು ಭಾವಿಸುವಂಥ ಆದೇಶವನ್ನು ಹೊರಡಿಸಬಹುದು:

ಪರಂತು, ರಾಜ್ಯ ಸರ್ಕಾರವು, ಮಾರುಕಟ್ಟೆ ಸಮಿತಿಗೆ ಮತ್ತು ಬಾಧಿತರಾದ ಪಕ್ಷಕಾರರಿಗೆ ಅಹವಾಲನ್ನು ಹೇಳಿಕೊಳ್ಳುವ ಸೂಕ್ತ ಅವಕಾಶವನ್ನು ಕೊಡದೆ ಯಾವುದೇ ಅಂಥ ಆದೇಶವನ್ನು ಹೊರಡಿಸತಕ್ಕದ್ದಲ್ಲ:

[2][ಮತ್ತೂ ಪರಂತು, ಆದೇಶದಲ್ಲಿರುವ ಲಿಪಿಕ ಅಥವಾ ಗಣಿತ ದೋಷಗಳನ್ನು ಅಥವಾ ಅದರಲ್ಲಿ ಯಾವುದೇ ಆಕಸ್ಮಿಕ ಕೈತಪ್ಪು ಅಥವಾ ಲೋಪದಿಂದ ಉಂಟಾಗುವ ತಪ್ಪುಗಳನ್ನು ರಾಜ್ಯ ಸರ್ಕಾರವು, ತನ್ನ ಸ್ವಇಚ್ಛೆಯ ಮೇರೆಗೆ ಅಥವಾ ಯಾವೊಬ್ಬ ಪಕ್ಷಕಾರನ ಅರ್ಜಿಯ ಮೇಲೆ ಯಾವುದೇ ಕಾಲದಲ್ಲಿ ತಿದ್ದುಪಡಿ ಮಾಡಬಹುದು.][2]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**126ಎ. ಮಾರುಕಟ್ಟೆ ಸಮಿತಿಗೆ, ಖಾಸಗಿ ಮಾರುಕಟ್ಟೆ ಲೈಸೆನ್ಸುದಾರನಿಗೆ ಮತ್ತು ರೈತ–ಗ್ರಾಹಕ ಲೈಸೆನ್ಸುದಾರನಿಗೆ ನಿರ್ದೇಶನ ನೀಡಲು ಸರ್ಕಾರದ ಅಧಿಕಾರ.**– ರಾಜ್ಯ ಸರ್ಕಾರವು ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಅವಶ್ಯವೆಂದು ಅಥವಾ ಯುಕ್ತವೆಂದು ತಾನು ಅಭಿಪ್ರಾಯ ಪಡುವಂಥ ನಿರ್ದೇಶನಗಳನ್ನು ಮಾರುಕಟ್ಟೆ ಸಮಿತಿಗೆ, ಖಾಸಗಿ ಮಾರುಕಟ್ಟೆ ಲೈಸೆನ್ಸುದಾರನಿಗೆ ಮತ್ತು ರೈತ–ಗ್ರಾಹಕ ಮಾರುಕಟ್ಟೆ ಲೈಸೆನ್ಸುದಾರನಿಗೆ ನೀಡಬಹುದು ಮತ್ತು ಅಂಥ ನಿರ್ದೇಶನಗಳನ್ನು ಪಾಲಿಸುವುದು ಮಾರುಕಟ್ಟೆ ಸಮಿತಿಯ, ಸಂದರ್ಭಾನುಸಾರ ಖಾಸಗಿ ಮಾರುಕಟ್ಟೆ ಲೈಸೆನ್ಸುದಾರನ ಮತ್ತು ರೈತ–ಗ್ರಾಹಕ ಮಾರುಕಟ್ಟೆ ಲೈಸೆನ್ಸುದಾರನ ಕರ್ತವ್ಯವಾಗಿರತಕ್ಕದ್ದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**127. ಮಾರುಕಟ್ಟೆ ಸಮಿತಿಯ ರದ್ದಿಯಾತಿ.**– (1) ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ, ಮಾರುಕಟ್ಟೆ ಸಮಿತಿಗೆ ವಿಧಿಸಲಾದ ಕರ್ತವ್ಯಗಳನ್ನು ನಿರ್ವಹಿಸಲು ಅದು ಸಕ್ಷಮವಾಗಿಲ್ಲವೆಂದು ಅಥವಾ ನಿರ್ವಹಿಸುವಲ್ಲಿ ನಿರಂತರವಾಗಿ ತಪ್ಪುಗಳನ್ನು ಮಾಡುತ್ತಿದೆಯೆಂದು, ಅಥವಾ ತನ್ನ ಅಧಿಕಾರಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿದೆಯೆಂದು ಅಥವಾ ಮಾರುಕಟ್ಟೆ ಸಮಿತಿಯ ಲೆಕ್ಕಪರಿಶೋಧನೆಯ ಅಥವಾ ಮಾರುಕಟ್ಟೆ ಕಚೇರಿಯ ಮತ್ತು ಅದರ ಕಾರ್ಯನಿರ್ವಹಣೆಯ ತಪಾಸಣೆಯ ಸಂಬಂಧದಲ್ಲಿ [1][ರಾಜ್ಯ ಸರ್ಕಾರ][1] ವು ಅಥವಾ ಅದು ಸೂಕ್ತವಾಗಿ [1][ಅಧಿಕೃತಗೊಳಿಸಿದ][1] ಯಾವನೇ ಅಧಿಕಾರಿಯು ಹೊರಡಿಸಿದ ಯಾವುವೇ ಆದೇಶಗಳನ್ನು ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಲಾಗಿದೆ ಎಂದು [1][ರಾಜ್ಯ ಸರ್ಕಾರವು][1] ಅಭಿಪ್ರಾಯಪಟ್ಟರೆ, [1][ರಾಜ್ಯ ಸರ್ಕಾರವು][1] ಸಮಿತಿಗೆ ವಿವರಣೆಯನ್ನು ನೀಡುವುದಕ್ಕೆ ಸೂಕ್ತ ಅವಕಾಶವನ್ನು ಕೊಟ್ಟ ಅನಂತರ ಅಧಿಸೂಚನೆಯನ್ನು ಹೊರಡಿಸಿ ಅದರಲ್ಲಿ ಕಾರಣಗಳನ್ನು ನಮೂದಿಸಿ ಆ ನಿರ್ದಿಷ್ಟಪಡಿಸಬಹುದಾದಂಥ ಅವಧಿಯವರೆಗೆ ಅಂಥ ಮಾರುಕಟ್ಟೆ ಸಮಿತಿಯನ್ನು ರದ್ದುಗೊಳಿಸಬಹುದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) (1)ನೇ ಉಪಪ್ರಕರಣದ ಮೇರೆಗಿನ ಅಧಿಸೂಚನೆಯ ಮೂಲಕ ಮಾರುಕಟ್ಟೆ ಸಮಿತಿಯನ್ನು ರದ್ದುಗೊಳಿಸಿದಾಗ ಈ ಕೆಳಕಂಡ ಪರಿಣಾಮಗಳು ಉಂಟಾಗುತ್ತವೆ:–

(i) ಮಾರುಕಟ್ಟೆ ಸಮಿತಿಯ ಎಲ್ಲಾ ಸದಸ್ಯರು, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ದಿನಾಂಕದಿಂದ ತಮ್ಮ ಸ್ಥಾನಗಳನ್ನು ತೆರವು ಮಾಡಿದ್ದಾರೆಂದು ಭಾವಿಸತಕ್ಕದ್ದು;

(ii) ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಮೇರೆಗೆ ಮಾರುಕಟ್ಟೆ ಸಮಿತಿಗೆ ವಹಿಸಲಾದ ಮತ್ತು ವಿಧಿಸಲಾದ ಎಲ್ಲಾ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು, ಮಾರುಕಟ್ಟೆ ಸಮಿತಿಯನ್ನು ರದ್ದುಪಡಿಸಿರುವ ಅವಧಿಯಲ್ಲಿ ಆ ಸಂಬಂಧದಲ್ಲಿ [1][ರಾಜ್ಯ ಸರ್ಕಾರ][1] ದಿಂದ ಕಾಲಕಾಲಕ್ಕೆ ನೇಮಕಗೊಳ್ಳಬಹುದಾದ ಅಧಿಕಾರಿಯು ಚಲಾಯಿಸತಕ್ಕದ್ದು ಅಥವಾ ನಿರ್ವಹಿಸತಕ್ಕದ್ದು;

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(iii) ಮಾರುಕಟ್ಟೆ ಸಮಿತಿಯಲ್ಲಿ ನಿಹಿತವಾಗಿರುವ ಎಲ್ಲಾ ಸ್ವತ್ತುಗಳು, ಅದು ಪುನರ್‌ರಚಿತವಾಗುವವರೆಗೆ [1][ರಾಜ್ಯ ಸರ್ಕಾರ][1] ದಲ್ಲಿ ನಿಹಿತವಾಗಿರತಕ್ಕದ್ದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ವಿಚಾರಣೆಯನ್ನು ನಡೆಸಿದ ತರುವಾಯ, ರದ್ದುಗೊಳಿಸಲಾದ ಮಾರುಕಟ್ಟೆ ಸಮಿತಿಯ ಸದಸ್ಯರ ಪದಾವಧಿಯು ಎಷ್ಟೇ ಇದ್ದರೂ, ಮೇಲೆ ಹೇಳಲಾಗಿರುವ ಎಲ್ಲಾ ಪರಿಣಾಮಗಳ ಸಹಿತ ಆ ರದ್ದಿಯಾತಿಯ ಅವಧಿಯನ್ನು ಕಾಲಕಾಲಕ್ಕೆ [1][ರಾಜ್ಯ ಸರ್ಕಾರವು][1] ಮಾರುಕಟ್ಟೆ ಸಮಿತಿಯ ಪುನರ್ ರಚನೆಗಾಗಿ [1][ರಾಜ್ಯ ಸರ್ಕಾರವು][1] ನಿಗದಿಪಡಿಸಬಹುದಾದಂಥ ದಿನಾಂಕದವರೆಗೆ ವಿಸ್ತರಿಸತಕ್ಕದ್ದೆಂದು ಅಧಿಸೂಚನೆಯ ಮೂಲಕ ನಿರ್ದೇಶಿಸಿದರೆ, ಆ ಅವಧಿಯು ಹಾಗೆ ವಿಸ್ತೃತವಾಗತಕ್ಕದ್ದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(4) XXX][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**128. ನಷ್ಟ, ದುರ್ವ್ಯಯ, ದುರ್ವಿನಿಯೋಗ ಮುಂತಾದವುಗಳಿಗಾಗಿ ಮಾರುಕಟ್ಟೆ ಸಮಿತಿಯ ಸದಸ್ಯರ, ಅಧಿಕಾರಿಗಳ ಮತ್ತು ನೌಕರರ ಹೊಣೆಗಾರಿಕೆ.**– (1) 123ನೇ ಪ್ರಕರಣದ ಮೇರೆಗಿನ ವಿಚಾರಣೆಯ ಅಥವಾ ಪರಿಶೀಲನೆಯ ಕ್ರಮದಲ್ಲಿ ಅಥವಾ ನಿಯಮಗಳ ಮೇರೆಗಿನ ಲೆಕ್ಕಪರಿಶೋಧನೆಯ ಕ್ರಮದಲ್ಲಿ, ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ಸದಸ್ಯನಾಗಿರುವ ಅಥವಾ ಆಗಿದ್ದ ಅಥವಾ ಯಾವುದೇ ಸಮಯದಲ್ಲಿ ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ಅಧಿಕಾರಿಯಾಗಿರುವ ಅಥವಾ ನೌಕರನಾಗಿರುವ ಅಥವಾ ಅಧಿಕಾರಿಯಾಗಿದ್ದ ಅಥವಾ ನೌಕರನಾಗಿದ್ದ ಯಾವನೇ ವ್ಯಕ್ತಿಯು, ಈ ಅಧಿನಿಯಮದ, ನಿಯಮಗಳ, ವಿನಿಯಮಗಳ ಅಥವಾ ಉಪವಿಧಿಗಳ ವಿರುದ್ಧವಾಗಿ ಯಾವುದೇ ಸಂದಾಯ ಮಾಡಿದ್ದಾನೆಂದು ಅಥವಾ ನಂಬಿಕೆ ದ್ರೋಹ ಅಥವಾ ಉದ್ದೇಶಪೂರ್ವಕ ಉಪೇಕ್ಷೆಯಿಂದ ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ಆಸ್ತಿಗಳಿಗೆ ಯಾವುದೇ

ಹಾನಿ ಉಂಟು ಮಾಡಿದ್ದಾನೆಂದು ಅಥವಾ ಸದರಿ ಮಾರುಕಟ್ಟೆ ಸಮಿತಿಗೆ ಅಥವಾ ಮಂಡಲಿಗೆ ಸೇರಿರುವ ಯಾವುದೇ ಹಣ ಅಥವಾ ಇತರ ಸ್ವತ್ತನ್ನು ದುರ್ವಿನಿಯೋಗ ಮಾಡಿದ್ದಾನೆಂದು ಅಥವಾ ಮೋಸದಿಂದ ತನ್ನ ಬಳಿ ಇಟ್ಟುಕೊಂಡಿದ್ದಾನೆಂದು ಕಂಡುಬಂದರೆ, [1][ಕೃಷಿ ಮಾರುಕಟ್ಟೆ ನಿರ್ದೇಶಕನು,][1] ಅಂಥ ವ್ಯಕ್ತಿಯ ನಡತೆಯ ಬಗ್ಗೆ ಸ್ವತಃ ವಿಚಾರಣೆ ಮಾಡಬಹುದು ಅಥವಾ ಈ ಸಂಬಂಧದಲ್ಲಿ ಲಿಖಿತ ಆದೇಶದ ಮೂಲಕ ತಾನು ಅಧಿಕೃತಗೊಳಿಸಿದ ಯಾವನೇ ಅಧೀನ ಅಧಿಕಾರಿಯು ಆ ವಿಚಾರಣೆ ನಡೆಸುವಂತೆ ನಿರ್ದೇಶಿಸಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) (1)ನೇ ಉಪಪ್ರಕರಣದ ಮೇರೆಗೆ ವಿಚಾರಣೆಯನ್ನು ನಡೆಸಿರುವಲ್ಲಿ [1][ಕೃಷಿ ಮಾರುಕಟ್ಟೆ ನಿರ್ದೇಶಕನು,][1] ಸಂಬಂಧಪಟ್ಟ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ಅನಂತರ, [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] ನ್ಯಾಯೋಚಿತ ಮತ್ತು ನ್ಯಾಯಸಮ್ಮತವೆಂದು ಪರ್ಯಾಲೋಚಿಸಬಹುದಾದಂಥ ಬಡ್ಡಿ ದರದಲ್ಲಿ ಮತ್ತು ಆ ಹಣವನ್ನು ಮಾರುಪಾವತಿ ಮಾಡಲು ಅಥವಾ ಆ ಸ್ವತ್ತನ್ನು ಅಥವಾ ಅದರ ಯಾವುದೇ ಭಾಗವನ್ನು ಪೂರ್ವಸ್ಥಿತಿಗೆ ತರಲು ಅಥವಾ ಹಾಗೆ ಅವನು ಪರ್ಯಾಲೋಚಿಸಬಹುದಾದಷ್ಟು ಮಟ್ಟಿಗೆ ವಂತಿಗೆ ಮತ್ತು ವೆಚ್ಚಗಳನ್ನು ಅಥವಾ ನಷ್ಟ ಪರಿಹಾರವನ್ನು ಸಂದಾಯ ಮಾಡಲು ಅವನನ್ನು ಅಗತ್ಯಪಡಿಸಿ ಆದೇಶವನ್ನು ನೀಡಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] (2)ನೇ ಉಪಪ್ರಕರಣದ ಮೇರೆಗೆ ಹೊರಡಿಸಿದ ಆದೇಶದಿಂದ ಬಾಧಿತನಾದ ಯಾವನೇ ವ್ಯಕ್ತಿಯು, ಸದರಿ ಆದೇಶವನ್ನು ಆತನಿಗೆ ತಿಳಿಸಿದ ದಿನಾಂಕದಿಂದ ಅರವತ್ತು ದಿವಸಗಳೊಳಗೆ [1][ಕರ್ನಾಟಕ ಅಪೀಲು ನ್ಯಾಯಾಧಿಕರಣಕ್ಕೆ][1] ಅಪೀಲು ಸಲ್ಲಿಸಬಹುದು ಮತ್ತು ಅಂಥ ಅಪೀಲಿನ ಬಗ್ಗೆ [1][ಕರ್ನಾಟಕ ಅಪೀಲು ನ್ಯಾಯಾಧಿಕರಣದ][1] ನಿರ್ಣಯವು ಅಂತಿಮವಾಗಿರತಕ್ಕದ್ದು ಮತ್ತು ಅದನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದ್ದಲ್ಲ.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) ಈ ಪ್ರಕರಣದ ಮೇರೆಗೆ ಕೈಕೊಂಡ ಯಾವುದೇ ಕ್ರಮವು ಯಾವುದೇ ಅಪರಾಧದ ಸಂಬಂಧದಲ್ಲಿ ಸಂಬಂಧಪಟ್ಟ ವ್ಯಕ್ತಿಯನ್ನು ಪ್ರಾಸಿಕ್ಯೂಷನ್‌ಗೆ ಗುರಿಪಡಿಸಲು ಬಾಧಕವಾಗತಕ್ಕದ್ದಲ್ಲ.

**129. ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಸದಸ್ಯರು ಪದಚ್ಯುತಿಗೆ ಗುರಿಯಾಗುವುದು.-** ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ತನ್ನ ಕರ್ತವ್ಯ ನಿರ್ವಹಣೆಯಲ್ಲಿ ದುರ್ವರ್ತಿಸಿದ ಬಗ್ಗೆ ಅಥವಾ ತನ್ನ ಕರ್ತವ್ಯ ನಿರ್ವಹಿಸಲು ಉಪೇಕ್ಷಿಸಿರುವ ಅಥವಾ ಅಸಮರ್ಥನಾಗಿರುವ ಬಗ್ಗೆ ಅಥವಾ ಅವನ ಕರ್ತವ್ಯಗಳ ನಿರ್ವಹಣೆಯಲ್ಲಿ ನಿರಂತರವಾಗಿ ಅಜಾಗರೂಕನಾಗಿರುವ ಬಗ್ಗೆ ಆ ಪ್ರತಿಯೊಬ್ಬ ಅಧ್ಯಕ್ಷನಿಗೆ ಅಥವಾ ಉಪಾಧ್ಯಕ್ಷನಿಗೆ [1][ರಾಜ್ಯ ಸರ್ಕಾರವು][1] ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ ಆ ಪ್ರತಿಯೊಬ್ಬ ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ತನ್ನ ಪದಚ್ಯುತಿಗೆ ಗುರಿಯಾಗತಕ್ಕದ್ದು ಮತ್ತು ಹಾಗೆ ಪದಚ್ಯುತನಾದ ಅಧ್ಯಕ್ಷನು ಅಥವಾ ಉಪಾಧ್ಯಕ್ಷನು, (2)ನೇ ಉಪಪ್ರಕರಣದ (ಬಿ) ಖಂಡದ ಮೇರೆಗೆ ಸದಸ್ಯನಾಗಿರುವುದು ನಿಂತುಹೋಗದಿದ್ದರೆ ಅವನು ಮಾರುಕಟ್ಟೆ ಸಮಿತಿಯ ಸದಸ್ಯರಾಗಿರುವ ಪದಾವಧಿಯ ಉಳಿದ ಅವಧಿಯಲ್ಲಿ ಅಧ್ಯಕ್ಷನಾಗಿ ಅಥವಾ ಉಪಾಧ್ಯಕ್ಷನಾಗಿ ಮರುಚುನಾಯಿತನಾಗಲು ಅರ್ಹನಾಗತಕ್ಕದ್ದಲ್ಲ.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

75

[1][**ವಿವರಣೆ:** ಈ ಪ್ರಕರಣದ ಉದ್ದೇಶಕ್ಕಾಗಿ 'ದುರ್ನಡತೆ' ಎಂಬುದು ಅವನ ಪದಕ್ಕೆ ಸಂಬಂಧಿಸಿದಂತೆ ಅಪರಾಧಿಕ ಅಲಕ್ಷ್ಯವಾಗುವಂಥ ಯಾವುದೇ ದುರ್ನಡತೆಯನ್ನು ಒಳಗೊಳ್ಳತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) (ಎ) [1][ರಾಜ್ಯಸರ್ಕಾರವು,][1] [2][ತಾನಾಗಿಯೇ ಅಥವಾ][2] ಮಾರುಕಟ್ಟೆ ಸಮಿತಿಯ ಶಿಫಾರಸಿನ ಮೇಲೆ [1][ತಾನು ಸೂಕ್ತವೆಂದು ಭಾವಿಸುವಂತೆ,][1] ಮಾರುಕಟ್ಟೆ ಸಮಿತಿಯ ಯಾವನೇ ಸದಸ್ಯನು, ತನ್ನ ಕರ್ತವ್ಯಗಳ ನಿರ್ವಹಣೆಯಲ್ಲಿ ದುರ್ನಡತೆಯ ಅಥವಾ ಯಾವುದೇ ಅಸಭ್ಯ ನಡತೆಯ ತಪ್ಪಿತಸ್ಥನಾಗಿರುವನೆಂದು ಅಥವಾ ಸದಸ್ಯನಾಗಿ ತನ್ನ ಕರ್ತವ್ಯಗಳ ನಿರ್ವಹಣೆಯಲ್ಲಿ ಅಸಮರ್ಥನಾಗಿದ್ದಾನೆಂದು ಅಥವಾ ಮಾರುಕಟ್ಟೆ ಸಮಿತಿಯ ಹಿತಾಸಕ್ತಿಯ ವಿರುದ್ಧ ಯಾವುದೇ ಕಾರ್ಯ ಮಾಡಿದ್ದಾನೆಂದು [1][ರಾಜ್ಯ ಸರ್ಕಾರವು][1] ಅಭಿಪ್ರಾಯಪಟ್ಟರೆ, ಅದು ಅಂಥ ಸದಸ್ಯನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ಅನಂತರ ಮತ್ತು ತಾನು ಅವಶ್ಯವೆಂದು [1][ಭಾವಿಸುವಂಥ][1] ವಿಚಾರಣೆಯ ಅನಂತರ ಅಂಥ ಸದಸ್ಯನನ್ನು ಪದಚ್ಯುತಗೊಳಿಸಬಹುದು;

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1987ರ ಅಧಿನಿಯಮ ಸಂಖ್ಯೆ 29ರ ಮೂಲಕ 10-8-1987ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) ಕರ್ತವ್ಯಗಳ ನಿರ್ವಹಣೆಯಲ್ಲಿ ಅಧ್ಯಕ್ಷನಾಗಿರುವ ಅಥವಾ ಉಪಾಧ್ಯಕ್ಷನಾಗಿರುವ ಯಾವನೇ ವ್ಯಕ್ತಿಯನ್ನು ದುರ್ನಡತೆಗಾಗಿ (1)ನೇ ಉಪಪ್ರಕರಣದ ಮೇರೆಗೆ ಪದಚ್ಯುತಿಗೊಳಿಸಿದಾಗ ಅವನು ಹಾಗೆ ಪದಚ್ಯುತನಾದ ದಿನಾಂಕದಿಂದ,

ಮಾರುಕಟ್ಟೆ ಸಮಿತಿಯ ಸದಸ್ಯನಾಗಿರುವುದು ನಿಂತುಹೋಗತಕ್ಕದ್ದು ಮತ್ತು ಈ ಉಪಪ್ರಕರಣದ ಮೇರೆಗೆ ಅವನನ್ನು ಮಾರುಕಟ್ಟೆ ಸಮಿತಿಯ ಸದಸ್ಯತ್ವದಿಂದ ತೆಗೆದುಹಾಕಲಾಗಿದೆ ಎಂದು ಭಾವಿಸತಕ್ಕದ್ದು.

[1][(3) XXX][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**130. ಕಾನೂನುಬದ್ಧವಾಗಿ ರಚಿತವಾಗಿಲ್ಲದ ಅಥವಾ ಕಾರ್ಯನಿರ್ವಹಣೆಯಲ್ಲಿ ಬಿಕ್ಕಟ್ಟು ಉಂಟಾಗಿರುವಂತಹ ಮಾರುಕಟ್ಟೆ ಸಮಿತಿಗಳ ಸಂಬಂಧದಲ್ಲಿ ಆಡಳಿತಾಧಿಕಾರಿಯು ಅಧಿಕಾರಗಳನ್ನು ಚಲಾಯಿಸುವುದು ಮತ್ತು ಕರ್ತವ್ಯಗಳನ್ನು ನಿರ್ವಹಿಸುವುದು.–** (1) ಈ ಅಧಿನಿಯಮದಲ್ಲಿ ಅಥವಾ ನಿಯಮಗಳಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಮಾರುಕಟ್ಟೆ ಸಮಿತಿಯು ಈ ಅಧಿನಿಯಮದ ಮೇರೆಗೆ ಕಾನೂನುಬದ್ಧವಾಗಿ ರಚಿತವಾಗಿಲ್ಲವೆಂಬ ಸಕ್ಷಮ ನ್ಯಾಯಾಲಯದ ತೀರ್ಮಾನದ ಅಥವಾ ಆದೇಶದ ಕಾರಣಕ್ಕಾಗಿ ಅಥವಾ 39ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಚುನಾವಣೆಯ ಮೂಲಕ ಭರ್ತಿ ಮಾಡಬೇಕಾಗಿರುವಷ್ಟು ಸ್ಥಾನಗಳನ್ನು ಭರ್ತಿ ಮಾಡಿಲ್ಲವೆಂಬ [1][XXX][1] ಕಾರಣಕ್ಕಾಗಿ ಮಾರುಕಟ್ಟೆ ಸಮಿತಿಯು ತನ್ನ ಕಾರ್ಯ ನಿರ್ವಹಿಸಲು ಅಸಮರ್ಥವಾಗಿದೆ ಎಂದು ರಾಜ್ಯ ಸರ್ಕಾರಕ್ಕೆ ಯಾವುದೇ ಕಾಲದಲ್ಲಿ ಕಂಡುಬಂದಲ್ಲಿ, ಸರ್ಕಾರವು ಅಧಿಸೂಚನೆಯ ಮೂಲಕ ಮಾರುಕಟ್ಟೆ ಸಮಿತಿಯ ಮತ್ತು ಅದರ ಅಧ್ಯಕ್ಷರ, ಎಲ್ಲಾ ಅಥವಾ ಯಾವುವೇ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು, ಅಧಿಸೂಚನೆಯಲ್ಲಿ ನಿರ್ದೇಶಿಸಬಹುದಾದಂಥ ಅಧಿಕಾರಿಯು ಅಂಥ ಷರತ್ತುಗಳಿಗೆ ಒಳಪಟ್ಟು, ಅಂಥ ರೀತಿಯಲ್ಲಿ [2][ಒಂದು ವರ್ಷಕ್ಕೆ ಮೀರದ ಅವಧಿಯವರೆಗೆ][2] ಚಲಾಯಿಸುವಂತೆ ಮತ್ತು ನಿರ್ವಹಿಸುವಂತೆ ವ್ಯವಸ್ಥೆ ಮಾಡಬಹುದು.

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಅಂಥ ಮಾರುಕಟ್ಟೆ ಸಮಿತಿಯಲ್ಲಿ ಇರತಕ್ಕ ವ್ಯಕ್ತಿಗಳು (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿರುವ ಅಧಿಸೂಚನೆಯ ದಿನಾಂಕದವರೆಗೆ ವಾಸ್ತವವಾಗಿ ಚಲಾಯಿಸಿದ ಮತ್ತು ನಿರ್ವಹಿಸಿದ ಮಾರುಕಟ್ಟೆ ಸಮಿತಿಯ ಎಲ್ಲಾ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ಸದರಿ ವ್ಯಕ್ತಿಗಳು ಕಾನೂನುಬದ್ಧವಾಗಿ ಚಲಾಯಿಸಿದ್ದಾರೆಂದು ಮತ್ತು ನಿರ್ವಹಿಸಿದ್ದಾರೆಂದು ಭಾವಿಸತಕ್ಕದ್ದು ಮತ್ತು ಸದರಿ ವ್ಯಕ್ತಿಗಳು ಮಾಡಿದ ಯಾವುದೇ ಕಾರ್ಯವು ಅವರು ಕಾನೂನುಬದ್ಧವಾಗಿ ರಚಿತವಾದ ಮಾರುಕಟ್ಟೆ ಸಮಿತಿಯ ಸದಸ್ಯರಾಗಿರಲಿಲ್ಲವೆಂಬ ಕಾರಣ ಮಾತ್ರದಿಂದ, ಆ ಕಾರ್ಯವು ಅಸಿಂಧುವಾಗಿದೆ ಎಂದು ಭಾವಿಸತಕ್ಕದ್ದಲ್ಲ ಅಥವಾ ಅದನ್ನು ಪ್ರಶ್ನಿಸತಕ್ಕದ್ದಲ್ಲ.

**131. ಮಾರುಕಟ್ಟೆ ಸಮಿತಿಯಿಂದ ಅಥವಾ ಮಂಡಲಿಯಿಂದ ಸರ್ಕಾರಕ್ಕೆ ಬರತಕ್ಕ ಮೊಬಲಗುಗಳ ವಸೂಲಿ.–** ಮಾರುಕಟ್ಟೆ ಸಮಿತಿಯಿಂದ ಅಥವಾ ಮಂಡಲಿಯಿಂದ ರಾಜ್ಯ ಸರ್ಕಾರಕ್ಕೆ ಬರತಕ್ಕ ಪ್ರತಿಯೊಂದು ಮೊಬಲಗನ್ನು, [1][ಕೃಷಿ ಮಾರುಕಟ್ಟೆ ನಿರ್ದೇಶಕ][1] ನಿಂದ ಅಥವಾ ರಾಜ್ಯ ಸರ್ಕಾರದಿಂದ ಆ ಬಗ್ಗೆ ಕೋರಿಕೆ ಬಂದ ಮೇಲೆ ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ನಿಧಿಯ ಪ್ರಭಾರ ಹೊಂದಿರುವ ವ್ಯಕ್ತಿಯು ಸಂದಾಯ ಮಾಡತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## [1][ಅಧ್ಯಾಯ-XIIIಎ

## ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆ

1. 2000ದ ಅಧಿನಿಯಮ ಸಂಖ್ಯೆ 31ರ ಮೂಲಕ 16-6-2000 ದಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**131ಎ. ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆ ಸ್ಥಾಪನೆ, ಇತ್ಯಾದಿ.–** (1) ಈ ಅಧಿನಿಯಮದಲ್ಲಿ ಅಥವಾ ಪ್ರಸ್ತುತ ಜಾರಿಯಲ್ಲಿರುವ ಇತರೆ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದಾಗ್ಯೂ, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅಂಥ ದಿನಾಂಕದಿಂದ ಜಾರಿಗೆ ಬರುವಂತೆ, ರಾಜ್ಯದ ಯಾವುದೇ ಭಾಗ ಅಥವಾ ಭಾಗಗಳ ಸಂಬಂಧದಲ್ಲಿ ಹಣ್ಣುಗಳು ಮತ್ತು ತರಕಾರಿಗಳ ಕ್ರಯವಿಕ್ರಯಕ್ಕಾಗಿ ರಾಷ್ಟ್ರೀಯ ಡೈರಿ ಅಭಿವೃದ್ಧಿ ಮಂಡಲಿ ಅಧಿನಿಯಮ, 1987ರ (1987ರ ಕೇಂದ್ರ ಅಧಿನಿಯಮ 37) (ಇಲ್ಲಿ ಇನ್ನು ಮುಂದೆ ಎನ್‌ಡಿಡಿಬಿ ಎಂದು ಉಲ್ಲೇಖಿಸಲಾಗಿದೆ) ಅಡಿಯಲ್ಲಿ ನಿಗಮಿತವಾದ ರಾಷ್ಟ್ರೀಯ ಡೈರಿ ಅಭಿವೃದ್ಧಿ ಮಂಡಲಿಯು ನೇರವಾಗಿ ಅಥವಾ ಅದು ಸ್ಥಾಪಿಸಿದ ಯಾವುದೇ ಸಂಸ್ಥೆಗಳ ಮೂಲಕ ಅಥವಾ ಕೃಷಿಕರ ಸಂಘಗಳ ಸಹಯೋಗದೊಂದಿಗೆ ಒಂದು ಸ್ವಾಯತ್ತ ಸಂಸ್ಥೆಯಾಗಿ ಸ್ವಾಮ್ಯವನ್ನು ಹೊಂದಿರುವ ಮತ್ತು ವ್ಯವಸ್ಥಾಪಿಸಲಾಗಿರುವ ಒಂದು ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆ ಸಂಸ್ಥೆಯನ್ನು ಸ್ಥಾಪಿಸತಕ್ಕದ್ದೆಂದು ಘೋಷಿಸಬಹುದು ಮತ್ತು ಆ ತರುವಾಯ, ಎನ್‌ಡಿಡಿಬಿಯು,–

(i) ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ಪ್ರದೇಶ ಅಥವಾ ಪ್ರದೇಶಗಳ ಸಂಬಂಧದಲ್ಲಿ, ಹಣ್ಣುಗಳು ಮತ್ತು ತರಕಾರಿಗಳ ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆಯನ್ನು ಸ್ಥಾಪಿಸಬಹುದು;

(ii) ರಾಜ್ಯದ ವಿವಿಧ ಸ್ಥಳಗಳಲ್ಲಿ ಮೇಲೆ ಹೇಳಿದ ಪ್ರದೇಶದ ಒಳಗಾಗಲೀ ಅಥವಾ ಹೊರಗಾಗಲೀ, ಹಣ್ಣುಗಳನ್ನು ಮತ್ತು ತರಕಾರಿಗಳನ್ನು ಸಂಗ್ರಹಿಸಲು, ಒಟ್ಟುಗೂಡಿಸಲು, ವಿಂಗಡಿಸಲು, ವರ್ಗೀಕರಿಸಲು, ಸಂಸ್ಕರಿಸಲು, ಪ್ಯಾಕ್ ಮಾಡಲು, ದಾಸ್ತಾನು ಮಾಡಲು ಅಥವಾ ಸಾಗಣೆ ಮಾಡಲು ಹಾಗೂ ಮಾರುಕಟ್ಟೆ ಮಾಹಿತಿಯನ್ನು ಒದಗಿಸಲು ಮತ್ತು ರಾಷ್ಟ್ರೀಯ ಸಮಗ್ರ

ಮಾರುಕಟ್ಟೆಯನ್ನು ಉಪಯೋಗಿಸಿಕೊಂಡು ಉತ್ಪನ್ನದ ಕ್ರಯವಿಕ್ರಯ ಮಾಡಲು ಸಮರ್ಥಗೊಳಿಸಬಹುದಾದ ಅಂಥ ಇತರ ಕಾರ್ಯಚಟುವಟಿಕೆಗಳನ್ನು ನಡೆಸಲು ಅಥವಾ ಅದಕ್ಕೆ ಸಂಬಂಧಿಸಿದಂತೆ ಅನುಕೂಲಕರವಾದ ಅಥವಾ ಆನುಷಂಗಿಕವಾದ ಯಾವುವೇ ಕಾರ್ಯಗಳನ್ನು ಮಾಡಲು ಯಾವುದೇ ಹೆಸರಿನಿಂದ ಕರೆಯಲಾಗುವ, ಸಂಗ್ರಹಣಾ ಕೇಂದ್ರಗಳನ್ನು ಸ್ವತಃ ಸ್ಥಾಪಿಸಬಹುದು ಅಥವಾ ಕೃಷಿಕರಿಗೆ ಮತ್ತು ಕೃಷಿಕ ಸಂಘಗಳಿಗೆ ಅವುಗಳನ್ನು ಸ್ಥಾಪಿಸಲು ಹಣಕಾಸು ಒದಗಿಸಬಹುದು, ನೆರವು ನೀಡಬಹುದು ಅಥವಾ ಬೆಂಬಲ ನೀಡಬಹುದು.

(iii) ಮೇಲೆ ಹೇಳಿದ ಪ್ರದೇಶದ ಒಳಗಾಗಲೀ ಅಥವಾ ಹೊರಗಾಗಲೀ ರಾಜ್ಯದ ವಿವಿಧ ಸ್ಥಳಗಳಲ್ಲಿ ವಿತರಣಾ ಚಾನಲ್‌ಗಳು ಮತ್ತು ಸಂಸ್ಥೆಗಳನ್ನು ಸ್ಥಾಪಿಸಬಹುದು ಅಥವಾ ಅವುಗಳನ್ನು ಸ್ಥಾಪಿಸಲು ಬೆಂಬಲ ನೀಡಬಹುದು ಅಥವಾ ಇತರ ರೀತಿಯಲ್ಲಿ ಸಹಾಯ ನೀಡಬಹುದು.

(iv) ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆಯನ್ನು ಬಳಸುವವರನ್ನು ನೋಂದಾಯಿಸಿಕೊಳ್ಳಬಹುದು ಮತ್ತು ನೋಂದಣಿ ಶುಲ್ಕವನ್ನು, ಭದ್ರತಾ ಠೇವಣಿ ಮತ್ತು ಮುಂಗಡಗಳನ್ನು ವಿಧಿಸಬಹುದು ಮತ್ತು ಸಂಗ್ರಹಿಸಬಹುದು ಮತ್ತು ಕೃಷಿಕರಿಗೆ, ಕೃಷಿಕರ ಸಂಸ್ಥೆಗಳಿಗೆ, ಕೃಷಿಕರ ಸಹಕಾರ ಸಂಘಗಳಿಗೆ, ಖರೀದಿದಾರರಿಗೆ ಮತ್ತು ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆಯಲ್ಲಿ ನೋಂದಾಯಿತವಾದ ಅಥವಾ ಅದನ್ನು ಬಳಸುವ ಇತರ ಎಲ್ಲಾ ಕಾರ್ಯಕರ್ತರಿಗೆ/ ಕಾರ್ಯಸಂಸ್ಥೆಗಳಿಗೆ ಸಲ್ಲಿಸಿದ ಸೇವೆಗಳಿಗೆ ಮತ್ತು ಒದಗಿಸಿದ ಸೌಲಭ್ಯಗಳಿಗೆ ಇತರ ಶುಲ್ಕಗಳನ್ನು ವಿಧಿಸಬಹುದು ಮತ್ತು ಸಂಗ್ರಹಿಸಬಹುದು:

ಪರಂತು, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅಂಥ ದಿನಾಂಕದಿಂದ, ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆಯಲ್ಲಿ ಹೂಗಳನ್ನು ಕ್ರಯವಿಕ್ರಯ ಮಾಡುವುದು ಸಹ ಈ ಅಧ್ಯಾಯದ ಉಪಬಂಧಗಳ ವ್ಯಾಪ್ತಿಗೆ ಒಳಪಡತಕ್ಕದ್ದೆಂದು ಮತ್ತು ಆ ತರುವಾಯ ಈ ಅಧ್ಯಾಯದ ಎಲ್ಲ ಉಪಬಂಧಗಳು, ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆಯಲ್ಲಿ ಹೂಗಳ ಕ್ರಯವಿಕ್ರಯಕ್ಕೆ ಮತ್ತು ಇತರ ಸಂಬಂಧಪಟ್ಟ ಚಟುವಟಿಕೆಗಳಿಗೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸಬಹುದು.

(2) ಎನ್‌ಡಿಡಿಬಿಯು, ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆಯ ಸಂಬಂಧದಲ್ಲಿ ಮಾಲೀಕತ್ವ, ವ್ಯವಸ್ಥಾಪನೆ, ಕ್ರಯವಿಕ್ರಯ, ವ್ಯಾಪಾರ ಮತ್ತು ಇತರ ಚಟುವಟಿಕೆಗಳಿಗಾಗಿ ಮತ್ತು ಅವುಗಳ ಜಾರಿಗಾಗಿ ಈ ಉಪಪ್ರಕರಣದ ಅಡಿಯಲ್ಲಿ ವಿನಿಯಮಗಳನ್ನು ರಚಿಸಬಹುದು.

(3) ಈ ಅಧ್ಯಾಯದ ಉಪಬಂಧಗಳನ್ನು ಹೊರತುಪಡಿಸಿ, ಈ ಅಧಿನಿಯಮದಲ್ಲಿ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳು, ವಿನಿಯಮಗಳು ಅಥವಾ ಉಪವಿಧಿಗಳಲ್ಲಿ ಒಳಗೊಂಡಿರುವುದು ಯಾವುದೂ,-

(ಎ) ಈ ಪ್ರಕರಣದ ಅಡಿಯಲ್ಲಿ ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆಯ ಸ್ಥಾಪನೆ ಮತ್ತು ವ್ಯವಸ್ಥಾಪನೆಗೆ ಸಂಬಂಧಿಸಿದಂತೆ ಕೈಗೊಂಡ ಯಾವುದೇ ಕಾರ್ಯ ಅಥವಾ ಯಾವುದೇ ಕ್ರಮಕ್ಕೆ ಅಥವಾ ಅದಕ್ಕನುಸಾರವಾಗಿ ಕೈಗೊಂಡ ಯಾವುದೇ ಕಾರ್ಯಕ್ಕೆ ; ಅಥವಾ

(ಬಿ) ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆಯ ಸಂಬಂಧದಲ್ಲಿ; ವ್ಯವಹಾರ ನಿರ್ವಹಣೆಗಳ ಮೂಲಕ ಅಥವಾ ಅನ್ಯಥಾ ಪರಸ್ಪರ ಕಾರ್ಯನಿರ್ವಹಿಸುವ ಯಾವೊಬ್ಬ ವ್ಯಕ್ತಿ, ಏಜೆನ್ಸಿ ಅಥವಾ ಸಂಸ್ಥೆಗೆ

- ಅನ್ವಯಿಸತಕ್ಕದ್ದಲ್ಲ.

**131ಬಿ. ತೊಂದರೆಗಳ ನಿವಾರಣೆ.-** ರಾಷ್ಟ್ರೀಯ ಸಮಗ್ರ ಉತ್ಪನ್ನ ಮಾರುಕಟ್ಟೆಯ ಸ್ಥಾಪನೆಯು ಒಳಗೊಂಡಂತೆ ಈ ಅಧ್ಯಾಯದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉಂಟಾದಲ್ಲಿ, ರಾಜ್ಯ ಸರ್ಕಾರವು, ತೊಂದರೆಗಳನ್ನು ನಿವಾರಿಸುವ ಉದ್ದೇಶಕ್ಕಾಗಿ, ಮೇಲೆ ಹೇಳಿದ ಉಪಬಂಧಗಳಿಗೆ ಅಸಂಗತವಲ್ಲದ ಯಾವುದೇ ಕಾರ್ಯವನ್ನು, ಆದೇಶದ ಮೂಲಕ ಮಾಡಬಹುದು:

ಪರಂತು, ಈ ಅಧ್ಯಾಯದ ಉಪಬಂಧಗಳ ಪ್ರಾರಂಭದ ದಿನಾಂಕದಿಂದ ಐದು ವರ್ಷಗಳ ಅವಧಿಯ ನಂತರ ಅಂಥ ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ.][1]

**[1][ಅಧ್ಯಾಯ – XIII- ಬಿ**

**ಕರಾರು ವ್ಯವಸಾಯ**

**131ಸಿ. ಕರಾರು ವ್ಯವಸಾಯ ಒಪ್ಪಂದದ ಪ್ರಕ್ರಿಯೆ ಮತ್ತು ನಮೂನೆ.-** ಇಲ್ಲಿ ಇನ್ನು ಮುಂದೆ, ಹೇಳಲಾದ ರೀತಿಯಲ್ಲಿ ಕರಾರು ವ್ಯವಸಾಯ ಒಪ್ಪಂದಗಳು ನಿಯಂತ್ರಿತವಾಗತಕ್ಕದ್ದು,-

(1) ಕರಾರು ವ್ಯವಸಾಯ ಪ್ರಾಯೋಜಕನು ನಿಯಮಿಸಬಹುದಾದಂಥ ರೀತಿಯಲ್ಲಿ ಮಾರುಕಟ್ಟೆ ಸಮಿತಿಯಲ್ಲಿ ಅಥವಾ ಅಂಥ ಅಧಿಕಾರಿಯ ಬಳಿ ತನ್ನನ್ನು ನೋಂದಾಯಿಸಿಕೊಳ್ಳತಕ್ಕದ್ದು.

(2) ಕರಾರು ವ್ಯವಸಾಯ ಪ್ರಾಯೋಜಕನು ಈ ಸಂಬಂಧದಲ್ಲಿ ನಿಯಮಿಸಬಹುದಾದಂಥ ಅಧಿಕಾರಿಯ ಬಳಿ ಕರಾರು ವ್ಯವಸಾಯ ಒಪ್ಪಂದವನ್ನು ನೋಂದಾಯಿಸಿಕೊಳ್ಳತಕ್ಕದ್ದು. ಕರಾರು ವ್ಯವಸಾಯ ಒಪ್ಪಂದವು ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳನ್ನು (ಅಂತ ವಿವರಗಳನ್ನು) ಒಳಗೊಂಡಂಥ ನಮೂನೆಯಲ್ಲಿರತಕ್ಕದ್ದು.

(3) ಕರಾರು ವ್ಯವಸಾಯ ಒಪ್ಪಂದದಲ್ಲಿ ಏನೇ ಒಳಗೊಂಡಿದ್ದರೂ, ಕರಾರು ವ್ಯವಸಾಯದ ಪರಿಣಾಮವಾಗಿ ಉದ್ಭವಿಸುವ ಯಾವುದೇ ಹಕ್ಕುಸ್ವಾಮ್ಯವನ್ನು, ಹಕ್ಕುಗಳನ್ನು, ಮಾಲೀಕತ್ವವನ್ನು ಅಥವಾ ಸ್ವಾಧೀನತೆಯನ್ನು ಕರಾರು ವ್ಯವಸಾಯ ಪ್ರಾಯೋಜಕನಿಗೆ ಅಥವಾ ಅವನ ಉತ್ತರಾಧಿಕಾರಿಗೆ ಅಥವಾ ಅವನ ಏಜೆಂಟನಿಗೆ ವರ್ಗಾಯಿಸತಕ್ಕದ್ದಲ್ಲ ಅಥವಾ ಅವುಗಳನ್ನು ದುರ್ಬಲಗೊಳಿಸತಕ್ಕದ್ದಲ್ಲ ಅಥವಾ ಅವರಲ್ಲಿ ನಿಹಿತಗೊಳಿಸತಕ್ಕದ್ದಲ್ಲ.

(4) ಕರಾರು ವ್ಯವಸಾಯ ಒಪ್ಪಂದದಿಂದ ಉದ್ಭವಿಸಿದ ಯಾವುವೇ ವಿವಾದಗಳನ್ನು, ಈ ಅಧಿನಿಯಮದ 84ನೇ ಪ್ರಕರಣದ ಮೇರೆಗೆ ರಚಿಸಿದ ವಿವಾದಗಳ ಸಮಿತಿಗೆ ಒಪ್ಪಿಸತಕ್ಕದ್ದು. ವಿವಾದಗಳ ಸಮಿತಿಯು, ನಿಯಮಿಸಬಹುದಾದಂಥ ರೀತಿಯಲ್ಲಿ, ಪಕ್ಷಕಾರರಿಗೆ ತಮ್ಮ ಅಹವಾಲುಗಳನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡಿದ ತರುವಾಯ ಆ ವಿವಾದವನ್ನು, ತನಗೆ ಕಳುಹಿಸಿಕೊಟ್ಟ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಕ್ಷಿಪ್ರ ರೀತಿಯಲ್ಲಿ ನಿರ್ಣಯಿಸತಕ್ಕದ್ದು.

(5) (4)ನೇ ಉಪಪ್ರಕರಣದ ಮೇರೆಗೆ ವಿವಾದಗಳ ಸಮಿತಿಯ ತೀರ್ಮಾನದಿಂದ ಬಾಧಿತನಾದ ಪಕ್ಷಕಾರನು ನಿರ್ಣಯದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ, ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅಪೀಲನ್ನು ಸಲ್ಲಿಸಬಹುದು. ಕೃಷಿ ಮಾರುಕಟ್ಟೆ ನಿರ್ದೇಶಕನು ಪಕ್ಷಕಾರರಿಗೆ ತಮ್ಮ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶ ನೀಡಿದ ತರುವಾಯ, ಮೂವತ್ತು ದಿನಗಳೊಳಗಾಗಿ ಅಪೀಲನ್ನು ವಿಲೆ ಮಾಡತಕ್ಕದ್ದು ಮತ್ತು ಕೃಷಿ ಮಾರುಕಟ್ಟೆ ನಿರ್ದೇಶಕನ ತೀರ್ಮಾನವು ಅಂತಿಮವಾಗಿರತಕ್ಕದ್ದು.

(6) (4)ನೇ ಉಪಪ್ರಕರಣದ ಮೇರೆಗಿನ ಪ್ರಾಧಿಕಾರದ ತೀರ್ಮಾನವು ಹಾಗೂ (5)ನೇ ಉಪಪ್ರಕರಣದ ಮೇರೆಗಿನ ಅಪೀಲಿನಲ್ಲಿನ ತೀರ್ಮಾನವು ಸಿವಿಲ್ ನ್ಯಾಯಾಲಯದ ಡಿಕ್ರಿಯ ಪರಿಣಾಮವನ್ನೇ ಹೊಂದಿರತಕ್ಕದ್ದು ಮತ್ತು ಅದನ್ನು ಆ ರೀತಿಯಲ್ಲಿಯೇ ಜಾರಿಗೊಳಿಸತಕ್ಕದ್ದು ಹಾಗೂ ಡಿಕ್ರಿ ಮೊಬಲಗನ್ನು ಭೂಕಂದಾಯ ಬಾಕಿಗಳಂತೆ ವಸೂಲಿ ಮಾಡತಕ್ಕದ್ದು.

## ಅಧ್ಯಾಯ – XIII ಸಿ

## ವಿದ್ಯುನ್ಮಾನ ವ್ಯಾಪಾರ

**131ಡಿ. ಸ್ಥಳೀಯ ವಿನಿಮಯ ಕೇಂದ್ರದ ಸ್ಥಾಪನೆ.–** (1) ಈ ಪ್ರಕರಣದ ಮೇರೆಗೆ ಲೈಸೆನ್ಸನ್ನು ಪಡೆಯದೆ ಯಾರೇ ವ್ಯಕ್ತಿಯೂ ಅಧಿಸೂಚಿತ ಕೃಷಿ ಉತ್ಪನ್ನದ ಸ್ಥಳೀಯ ವಿನಿಮಯ ವ್ಯಾಪಾರ ಕೇಂದ್ರವನ್ನು ಸ್ಥಾಪಿಸತಕ್ಕದ್ದಲ್ಲ ಮತ್ತು ಅದನ್ನು ನಡೆಸತಕ್ಕದ್ದಲ್ಲ.

(2) ನಿಯಮಿಸಲಾದಂಥ ಷರತ್ತುಗಳಿಗೆ ಮತ್ತು ಶುಲ್ಕಗಳಿಗೆ ಹಾಗೂ ಭದ್ರತೆಗೊಳಪಟ್ಟು, ಕೃಷಿ ಉತ್ಪನ್ನ ಮಾರುಕಟ್ಟೆಯ ನಿರ್ದೇಶಕನು, ಅಧಿಸೂಚಿತ ಕೃಷಿ ಉತ್ಪನ್ನಗಳಿಗೆ ವ್ಯಾಪಾರ ಸೌಲಭ್ಯಗಳನ್ನು ಒದಗಿಸುವುದಕ್ಕಾಗಿ ಸ್ಥಳೀಯ ವಿನಿಮಯ ಕೇಂದ್ರವನ್ನು ಸ್ಥಾಪಿಸಲು ಲೈಸೆನ್ಸನ್ನು ಮಂಜೂರು ಮಾಡಬಹುದು.

(3) ಸ್ಥಳೀಯ ವಿನಿಮಯ ಕೇಂದ್ರವನ್ನು ಸ್ಥಾಪಿಸಲು ಇಚ್ಛಿಸುವ ಯಾರೇ ವ್ಯಕ್ತಿಯು, ನಿಯಮಿಸಬಹುದಾದಂಥ ರೀತಿಯಲ್ಲಿ, ಅಂಥ ಶುಲ್ಕ ಹಾಗೂ ಭದ್ರತೆಯೊಡನೆ ಕೃಷಿ ಉತ್ಪನ್ನ ಮಾರುಕಟ್ಟೆ ನಿರ್ದೇಶಕನಿಗೆ ಅರ್ಜಿ ಸಲ್ಲಿಸಬಹುದು.

(4) ಸ್ಥಳೀಯ ವಿನಿಮಯ ಕೇಂದ್ರವು,–

(i) ರಾಷ್ಟ್ರವ್ಯಾಪಿಯಾದ ಆನ್‌ಲೈನ್ ವ್ಯಾಪಾರ ಮತ್ತು ತೀರುವೆ ವ್ಯವಸ್ಥೆಯನ್ನು ಹೊಂದಿರತಕ್ಕದ್ದು;

(ii) ದಕ್ಷ ತೀರುವೆ, ಇತ್ಯರ್ಥ ಮತ್ತು ಖಾತರಿ ವ್ಯವಸ್ಥೆ ಇರುವಂತೆ ಖಚಿತಪಡಿಸಿಕೊಳ್ಳತಕ್ಕದ್ದು;

(iii) ಕಾರ್ಯಾಚರಣೆಗಳಲ್ಲಿ ಮತ್ತು ಸಮಗ್ರ ಕಾರ್ಯಾಚರಣೆಗಳ ಸಂಬಂಧಿತ ನಿರ್ಧಾರ ಕೈಗೊಳ್ಳುವಲ್ಲಿ ಪಾರದರ್ಶಕತೆಯನ್ನು ಖಚಿತಪಡಿಸಿಕೊಳ್ಳತಕ್ಕದ್ದು;

(iv) ಉಗ್ರಾಣ ರಸೀದಿ ಪದ್ಧತಿ ಆಧಾರಿತ ಸರಕುಗಳ ವಶಾವಣೆಗೆ ಅವಕಾಶ ಒದಗಿಸತಕ್ಕದ್ದು;

(v) ಮುಂದಿನ ಸೇವೆಗಳನ್ನು ಒದಗಿಸತಕ್ಕದ್ದು:–

(ಎ) ಅಧಿಸೂಚಿತ ಕೃಷಿ ಉತ್ಪನ್ನಕ್ಕೆ ವಿದ್ಯುನ್ಮಾನ ಸ್ಥಳೀಯ– ವ್ಯಾಪಾರ ಸೌಲಭ್ಯ;

(ಬಿ) ಸರಕುಗಳ ಶ್ರೇಣೀಕರಣ, ಗುಣಮಟ್ಟ ಪ್ರಮಾಣೀಕರಣ ಮತ್ತು ಮಾನಕ ನಿಗದಿ;

(ಸಿ) ಉಗ್ರಾಣ ರಸೀದಿಗಳ ಮೇಲೆ ಆ ಪಾರ್ಶ್ವಿಕ ಹಣಕಾಸನ್ನು ಒದಗಿಸುವುದು ಮತ್ತು ಸಾಲ ತೆಗೆದುಕೊಳ್ಳುವುದಕ್ಕೆ ಅನುಕೂಲ ಕಲ್ಪಿಸುವುದು;

(ಡಿ) ದಾಸ್ತಾನಿಗೆ, ಸಾಗಣೆಗೆ, ವಹನ ತಂತ್ರಕ್ಕೆ, ನಿರ್ವಹಣೆಗೆ ಮತ್ತು ಹಡಗಿಗೆ ಸರಕು ತುಂಬುವುದಕ್ಕೆ ಸಂಬಂಧಿಸಿದ ರೂಢಿಗತ ಸೇವೆ;

(ಇ) ಆನ್‌ಲೈನ್ ವ್ಯಾಪಾರ ವ್ಯವಸ್ಥೆಯ ಮೂಲಕ ಸರಕುಗಳನ್ನು ದೊರಕಿಸಿಕೊಳ್ಳುವುದು ಮತ್ತು ವಿಲೇವಾರಿ;

(ಎಫ್) ಮಾರುಕಟ್ಟೆ ಗುಪ್ತವಾರ್ತಾ ವರದಿಗಳು.

(5) ಸ್ಥಳೀಯ ವಿನಿಮಯ ಕೇಂದ್ರವು ಸದಸ್ಯರಿಂದ, ಸದಸ್ಯತ್ವ, ವಿ.ಎಸ್.ಎ.ಟಿ, ವಾರ್ಷಿಕ ಚಂದಾ ಮುಂತಾದವುಗಳಿಗೆ ಸಂಬಂಧಿಸಿದ ಶುಲ್ಕವನ್ನು ಸಂಗ್ರಹಿಸಬಹುದು.

(6) ನಿಯಮಿಸಬಹುದಾದಂಥ ನಿಬಂಧನೆಗಳ ಮತ್ತು ಷರತ್ತುಗಳ ಮೇಲೆ ವ್ಯಾಪಾರ, ವಶಾವಣೆ, ತೀರುವೆ ಮತ್ತು ಇತ್ಯರ್ಥ ನಡೆಯತಕ್ಕದ್ದು.

(7) ಸ್ಥಳೀಯ ವಿನಿಮಯ ಕೇಂದ್ರದ ವೇದಿಕೆಯ ಮೇಲೆ ಬರೆದುಕೊಡಲಾದ ಎಲ್ಲಾ ಕರಾರುಗಳನ್ನು ಪಾಲಿಸುವ ಖಾತರಿಯನ್ನು ಸ್ಥಳೀಯ ವಿನಿಮಯ ಕೇಂದ್ರವು ನೀಡತಕ್ಕದ್ದು. ಈ ಉದ್ದೇಶಕ್ಕಾಗಿ, ಇತ್ಯರ್ಥ ಖಾತರಿ ನಿಧಿಯನ್ನು ನಿರ್ವಹಿಸತಕ್ಕದ್ದು. ಯಾರೇ ಸದಸ್ಯನು ಯಾವುದೇ ಸಂದಾಯ ಮಾಡಲು ತಪ್ಪಿದಾಗ್ಯೂ ಸ್ಥಳೀಯ ವಿನಿಮಯ ಕೇಂದ್ರದ ಲೈಸೆನ್ಸುದಾರನು, ಮಾರಾಟಗಾರನಿಗೆ ಬೆಲೆ ವಸೂಲಿ ಮಾಡಿ ಸಂದಾಯಮಾಡಲು ಹೊಣೆಗಾರನಾಗಿರತಕ್ಕದ್ದು, ಸಂದಾಯವನ್ನು ನಿಗದಿತ ವೇಳಾಪಟ್ಟಿಯಂತೆ ಮಾಡತಕ್ಕದ್ದು.

**131ಇ. ಸ್ಥಳೀಯ ವಿನಿಮಯ ಕೇಂದ್ರದ ಲೈಸೆನ್ಸುದಾರನು ಸಲ್ಲಿಸಬೇಕಾಗಿರುವ ವರದಿಗಳು.–** ಲೈಸೆನ್ಸುದಾರನು ವಿದ್ಯುನ್ಮಾನ ವೇದಿಕೆಯ ಮೇಲೆ ನಡೆಸಿದ ಎಲ್ಲಾ ವ್ಯವಹಾರಗಳ ಲೆಕ್ಕಪತ್ರವನ್ನು ನಿರ್ವಹಿಸತಕ್ಕದ್ದು ಮತ್ತು ಅಂಥ ನಿಯತಕಾಲಿಕ ವರದಿಗಳನ್ನು ಮತ್ತು ವಿವರಪಟ್ಟಿಕೆಗಳನ್ನು ಕೃಷಿ ಮಾರುಕಟ್ಟೆ ನಿರ್ದೇಶಕನು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಕಾಲಗಳಲ್ಲಿ ಮತ್ತು ನಮೂನೆಗಳಲ್ಲಿ, ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅಥವಾ ಈ ಬಗ್ಗೆ ಕೃಷಿ ಮಾರುಕಟ್ಟೆ ನಿರ್ದೇಶಕನು ಅಧಿಕೃತಗೊಳಿಸಿದ ಯಾರೇ ಅಧಿಕಾರಿಗೆ ಸಲ್ಲಿಸತಕ್ಕದ್ದು.

**131ಎಫ್. ಸ್ಥಳೀಯ ವಿನಿಮಯ ಕೇಂದ್ರ ಲೈಸೆನ್ಸುಗಳನ್ನು ರದ್ದುಪಡಿಸುವ ಅಥವಾ ಅಮಾನತ್ತಿನಲ್ಲಿಡುವ ಅಧಿಕಾರ.–** ಕೃಷಿ ಮಾರುಕಟ್ಟೆ ನಿರ್ದೇಶಕನು ಕಾರಣಗಳನ್ನು ಲಿಖಿತದಲ್ಲಿ ದಾಖಲು ಮಾಡಿ, ತಾನು ನೀಡಿದ ಸ್ಥಳೀಯ ವಿನಿಮಯ ಕೇಂದ್ರದ ಲೈಸೆನ್ಸನ್ನು ಅಮಾನತು ಮಾಡಬಹುದು ಅಥವಾ ರದ್ದುಪಡಿಸಬಹುದು:

ಪರಂತು, ಲೈಸೆನ್ಸುದಾರನಿಗೆ ನೋಟೀಸನ್ನು ಕೊಡದೆ ಯಾವ ಆದೇಶವನ್ನೂ ಮಾಡತಕ್ಕದ್ದಲ್ಲ.

**131ಜಿ. ವಿವಾದಗಳ ಪರಿಹಾರ.–** (1) ಆಡಳಿತಾತ್ಮಕ ವಿಧಾನದ ಮೂಲಕ ಅಥವಾ ಸಂಧಾನ ಮತ್ತು ಮಧ್ಯಸ್ಥಿಕೆಯ ವಿಧಾನದ ಮೂಲಕ ಸ್ಥಳೀಯ ವಿನಿಮಯ ಕೇಂದ್ರದ ಮಟ್ಟದಲ್ಲಿ ಹದಿನೈದು ದಿನಗಳೊಳಗೆ ವಿವಾದದ ಪರಿಹಾರವನ್ನು ಮಾಡತಕ್ಕದ್ದು.

(2) ಯಾವುದೇ ವಿವಾದವು ಸ್ಥಳೀಯ ವಿನಿಮಯ ಕೇಂದ್ರ ಮಟ್ಟದಲ್ಲಿ ಪರಿಹಾರವಾಗದಿದ್ದಲ್ಲಿ, ಸಂಬಂಧಪಟ್ಟವರು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಮೂವತ್ತು ದಿನಗಳೊಳಗೆ ಅಪೀಲು ಸಲ್ಲಿಸಬಹುದು ಮತ್ತು ಈ ಸಂಬಂಧದಲ್ಲಿ ಕೃಷಿ ಮಾರುಕಟ್ಟೆ ನಿರ್ದೇಶಕನ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

**131ಹೆಚ್. ಸಿವಿಲ್ ನ್ಯಾಯಾಲಯಗಳ ಮೇಲೆ ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ.–** ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ 131ಸಿ ಪ್ರಕರಣದ ಉಪಬಂಧಗಳ ಮೇರೆಗೆ ಇತ್ಯರ್ಥಗೊಳಿಸಬೇಕಾಗಿರುವ, ತೀರ್ಮಾನಿಸಬೇಕಾಗಿರುವ ಅಥವಾ ವ್ಯವಹರಿಸಬೇಕಾಗಿರುವ ಅಥವಾ ನಿರ್ಧರಿಸಬೇಕಾಗಿರುವ ಯಾವುದೇ ಪ್ರಶ್ನೆ ಅಥವಾ ಯಾವುದೇ ವಿಷಯವನ್ನು ಇತ್ಯರ್ಥಗೊಳಿಸಲು, ನಿರ್ಧರಿಸಲು ಅಥವಾ ವ್ಯವಹರಿಸಲು ಯಾವುದೇ ಸಿವಿಲ್ ನ್ಯಾಯಾಲಯಕ್ಕೆ ಅಧಿಕಾರವ್ಯಾಪ್ತಿ ಇರತಕ್ಕದ್ದಲ್ಲ.

**131ಐ. 131ಡಿ ಪ್ರಕರಣದ ಉಲ್ಲಂಘನೆಗಾಗಿ ದಂಡನೆ.–** 131ಡಿ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, ಆತನು, ಆರು ತಿಂಗಳುಗಳ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**131ಜೆ. ಅಪರಾಧದ ಸಂಜ್ಞೇಯತೆ.–** ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಆತನಿಂದ ಅಧಿಕೃತನಾದ ಇತರ ಯಾರೇ ಅಧಿಕಾರಿಯು ದೂರು ನೀಡಿದ ಹೊರತು, ಯಾವುದೇ ನ್ಯಾಯಾಲಯವು ಈ ಅಧ್ಯಾಯದ ಮೇರೆಗಿನ ಅಪರಾಧದ ಸಂಜ್ಞೇಯತೆಯನ್ನು ತೆಗೆದುಕೊಳ್ಳತಕ್ಕದ್ದಲ್ಲ][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ–XIV

### ಸಂಕೀರ್ಣ ವಿಷಯಗಳು

**132. [1][ಮಾರುಕಟ್ಟೆ ಸಮಿತಿಗೆ, ಮಂಡಲಿಗೆ ಅಥವಾ ಮಾರಾಟಗಾರನಿಗೆ][1] ಬಾಕಿ ಇರುವ ಮೊಬಲಗುಗಳ ವಸೂಲಿ.–** (1) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಲಾದ ಯಾವುವೇ ನಿಯಮಗಳ, ವಿನಿಯಮಗಳ ಅಥವಾ ಉಪವಿಧಿಗಳ ಉಪಬಂಧಗಳ ಮೇರೆಗೆ ಯಾವುದೇ ಚಾರ್ಜುಗಳು, ವೆಚ್ಚಗಳು, ಖರ್ಚುಗಳು, ಫೀಜುಗಳು, ಬಾಡಿಗೆಗಳು ಅಥವಾ ಯಾವುದೇ ಇತರ ಲೆಕ್ಕದ ನಿಮಿತ್ತ ಮಾರುಕಟ್ಟೆ ಸಮಿತಿಗೆ ಅಥವಾ ಮಂಡಲಿಗೆ ಬಾಕಿ ಇರುವ ಯಾವುದೇ ಮೊತ್ತವು [2][ಅಥವಾ 75 ಅಥವಾ 78ನೇ ಪ್ರಕರಣದ ಮೇರೆಗೆ ಮಾರಾಟಗಾರನಿಗೆ ಬೆಲೆ ಸಂದಾಯದ ಮೊತ್ತವು][2] ಭೂಕಂದಾಯದ ಬಾಕಿಯಂತೆ ಅಂಥ ಮೊಬಲಗು ಬಾಕಿ ಇರುವ ವ್ಯಕ್ತಿಯಿಂದ ವಸೂಲಾಗತಕ್ಕದ್ದು.

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) (1)ನೇ ಉಪಪ್ರಕರಣದ ಅರ್ಥವ್ಯಾಪ್ತಿಯೊಳಗೆ ಯಾವುದೇ ಒಂದು ಮೊತ್ತವು ಮಾರುಕಟ್ಟೆ ಸಮಿತಿಗೆ ಬಾಕಿ ಇದೆಯೇ ಅಥವಾ ಮಂಡಲಿಗೆ ಬಾಕಿ ಇದೆಯೇ [1][ಅಥವಾ ಮಾರಾಟಗಾರನಿಗೆ ಬಾಕಿಯಿದೆಯೇ][1] ಎಂಬ ಪ್ರಶ್ನೆಯು ಉದ್ಭವಿಸಿದರೆ, ಅದನ್ನು [2][ಕೃಷಿ ಮಾರುಕಟ್ಟೆ ನಿರ್ದೇಶಕ][2]ನಿಗೆ ಅಥವಾ ಅವನಿಂದ ಅಧಿಕೃತನಾದ ಅವನ ಅಧೀನ ಅಧಿಕಾರಿಗೆ ಒಪ್ಪಿಸತಕ್ಕದ್ದು ಮತ್ತು [2][ಕೃಷಿ ಮಾರುಕಟ್ಟೆ ನಿರ್ದೇಶಕನು][2] ಅಥವಾ ಅಧಿಕೃತನಾದ ಅಧಿಕಾರಿಯು, ತಾನು ಸೂಕ್ತವೆಂದು ಭಾವಿಸುವ ವಿಚಾರಣೆ ಮಾಡಿದ ಅನಂತರ, ಮತ್ತು ಯಾರಿಂದ ಆ ಮೊತ್ತವು ಬಾಕಿ ಇದೆ ಎನ್ನಲಾಗಿದೆಯೋ ಆ ವ್ಯಕ್ತಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ಅನಂತರ, ಆ ಪ್ರಶ್ನೆಯನ್ನು ತೀರ್ಮಾನಿಸತಕ್ಕದ್ದು ಮತ್ತು ಆ ಬಗ್ಗೆ ಆತನ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದನ್ನು ಯಾವುದೇ ನ್ಯಾಯಾಲಯದಲ್ಲಿ ಅಥವಾ ಯಾವುದೇ ಇತರ ಪ್ರಾಧಿಕಾರದ ಮುಂದೆ ಪ್ರಶ್ನಿಸತಕ್ಕದ್ದಲ್ಲ.

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**133. [1][ಸಹಕಾರ ಸಂಘಗಳು ಮುಂತಾದವುಗಳ][1] ಕೆಲವು ವರ್ಗಗಳಿಗೆ ಈ ಅಧಿನಿಯಮದ ಉಪಬಂಧಗಳಿಂದ ವಿನಾಯಿತಿ ನೀಡುವ ಅಧಿಕಾರ.–** ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ಅಂಥ ಅಧಿಸೂಚನೆಯಲ್ಲಿ, ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳಿಗೆ ಮತ್ತು ನಿರ್ಬಂಧಗಳಿಗೊಳಪಟ್ಟು, ಈ ಅಧಿನಿಯಮದ ಅಥವಾ ನಿಯಮಗಳ ಅಥವಾ ಉಪವಿಧಿಗಳ ಯಾವುವೇ ಉಪಬಂಧಗಳಿಂದ [2][ರಾಜ್ಯ ಸರ್ಕಾರದ ಯಾವುದೇ ಉದ್ದಿಮೆಗೆ ಅಥವಾ][2] ಸಹಕಾರ ಸಂಘಗಳ [3][XXX][3] ಯಾವುದೇ ವರ್ಗಕ್ಕೆ ವಿನಾಯಿತಿ ನೀಡಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1976ರ ಅಧಿನಿಯಮ ಸಂಖ್ಯೆ 47ರ ಮೂಲಕ 22-6-1976ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**134. ಅಧಿನಿಯಮದ ಉಪಬಂಧಗಳು ಕೇಂದ್ರ ಸರ್ಕಾರಕ್ಕೆ ಮತ್ತು ರಾಜ್ಯ ಸರ್ಕಾರಗಳಿಗೆ ಅನ್ವಯವಾಗದಿರುವುದು.–** ಈ ಅಧಿನಿಯಮದ ಉಪಬಂಧಗಳು ಕೇಂದ್ರ ಸರ್ಕಾರವು ಅಥವಾ ರಾಜ್ಯ ಸರ್ಕಾರವು ನೇರವಾಗಿ ಮಾಡಿದ ಯಾವುದೇ ಮಾರಾಟಗಳಿಗೆ ಅಥವಾ ಖರೀದಿಗಳಿಗೆ ಅನ್ವಯವಾಗತಕ್ಕದ್ದಲ್ಲ:

[1][ಪರಂತು, ರಾಜ್ಯ ಸರ್ಕಾರದಿಂದ ಅಥವಾ ಕೇಂದ್ರ ಸರ್ಕಾರದಿಂದ ಖರೀದಿ ಮಾಡುವ ಯಾವನೇ ವ್ಯಕ್ತಿಯು 65ನೇ ಪ್ರಕರಣದ ಮೇರೆಗೆ ಸಂದಾಯ ಮಾಡತಕ್ಕ ಯಾವುದೇ ಫೀಜನ್ನು ಸಂದಾಯ ಮಾಡುವ ಬಾಧ್ಯತೆಯಿಂದ ಅವನಿಗೆ ಈ ಪ್ರಕರಣದಲ್ಲಿರುವುದಾವುದೂ ವಿನಾಯತಿ ನೀಡತಕ್ಕದ್ದಲ್ಲ.][1]

1. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**135. ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ರಿಜಿಸ್ಟರು ಮುಂತಾದವುಗಳಲ್ಲಿ ನಮೂದುಗಳ ರುಜುವಾತು.–** (1) ಮಾರುಕಟ್ಟೆ ಸಮಿತಿಯು ಅಥವಾ ಮಂಡಲಿಯು ತನ್ನ ವ್ಯವಹಾರ ಕ್ರಮದಲ್ಲಿ ನಿಯತವಾಗಿ ಇಟ್ಟುಕೊಂಡ ಯಾವುದೇ ಪುಸ್ತಕ, ರಿಜಿಸ್ಟರು ಅಥವಾ ಪಟ್ಟಿಯಲ್ಲಿನ ಯಾವುದೇ ನಮೂದಿನ ಪ್ರತಿಯನ್ನು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಪ್ರಮಾಣೀಕರಿಸಲಾಗಿದ್ದರೆ, ಅದನ್ನು ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯಲ್ಲಿ, ಅಂಥ ನಮೂದು ಇದೆ ಎಂಬ ಬಗ್ಗೆ ಮೇಲುನೋಟದ ಸಾಕ್ಷ್ಯವಾಗಿ ಅಂಗೀಕರಿಸತಕ್ಕದ್ದು ಮತ್ತು ಯಾವ ವಿಷಯಗಳನ್ನು, ವ್ಯವಹಾರಗಳನ್ನು ಅಥವಾ ಲೆಕ್ಕಗಳನ್ನು ರುಜುವಾತುಪಡಿಸಲು ಮೂಲ ನಮೂದನ್ನು ಹಾಜರುಪಡಿಸಿದ್ದರೆ, ಯಾವ ಸಂದರ್ಭದಲ್ಲಿ ಮತ್ತು ಎಷ್ಟರ ಮಟ್ಟಿಗೆ ಅದು ಅಂಗೀಕಾರಾರ್ಹವಾಗಬಹುದಾಗಿತ್ತೋ ಅಂಥ ಪ್ರತಿಯೊಂದು ಸಂದರ್ಭದಲ್ಲಿ ಮತ್ತು ಅಷ್ಟರಮಟ್ಟಿಗೆ ಅಂಥ ವಿಷಯಗಳ, ವ್ಯವಹಾರಗಳ ಮತ್ತು ಲೆಕ್ಕಪತ್ರಗಳ ಬಗ್ಗೆ ಆ ಪ್ರತಿಯನ್ನು ಸಾಕ್ಷ್ಯವಾಗಿ ಅಂಗೀಕರಿಸತಕ್ಕದ್ದು.

(2) ಮಾರುಕಟ್ಟೆ ಸಮಿತಿಯು ಅಥವಾ ಮಂಡಲಿಯು ಪಕ್ಷಕಾರವಾಗಿರದ ಯಾವುದೇ ಕಾನೂನು ವ್ಯವಹರಣೆಯಲ್ಲಿ ಸಮಿತಿಯ ಅಥವಾ ಮಂಡಲಿಯ ಯಾವನೇ ಅಧಿಕಾರಿಯನ್ನು (1)ನೇ ಉಪಪ್ರಕರಣದ ಮೇರೆಗೆ ರುಜುವಾತುಪಡಿಸಲಾಗುವಂಥ ಒಳಾಂಶಗಳಿರುವ ಸಮಿತಿ ಅಥವಾ ಮಂಡಲಿಯ ಯಾವುವೇ ಪುಸ್ತಕಗಳನ್ನು ಹಾಜರುಪಡಿಸುವುದಕ್ಕೆ ಅಥವಾ ಅವುಗಳಲ್ಲಿ ದಾಖಲಾಗಿರುವ ವಿಷಯಗಳನ್ನು, ವ್ಯವಹಾರಗಳನ್ನು ಅಥವಾ ಲೆಕ್ಕಗಳನ್ನು ರುಜುವಾತುಪಡಿಸಲು ಸಾಕ್ಷಿದಾರನಾಗಿ ಹಾಜರಾಗುವುದಕ್ಕೆ ವಿಶೇಷ ಕಾರಣಕ್ಕಾಗಿ ಈ ಬಗ್ಗೆ ನ್ಯಾಯಾಲಯದ ಅಥವಾ ಇತರ ಪ್ರಾಧಿಕಾರದ ಆದೇಶ ಇರುವ ಹೊರತು ಒತ್ತಾಯಿಸತಕ್ಕದ್ದಲ್ಲ.

(3) (ಎ) ಕಾನೂನು ವ್ಯವಹರಣೆಗೆ ಪಕ್ಷಕಾರನಾಗಿರುವ ಯಾವನೇ ವ್ಯಕ್ತಿಯು ಅರ್ಜಿಯನ್ನು ಸಲ್ಲಿಸಿದ ಮೇಲೆ ನ್ಯಾಯಾಲಯವು ಅಥವಾ ಇತರ ಪ್ರಾಧಿಕಾರವು, ಅಂಥ ಪಕ್ಷಕಾರನು, ಅಂಥ ವ್ಯವಹರಣೆಯ ಯಾವುವೇ ಉದ್ದೇಶಗಳಿಗಾಗಿ ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ಪುಸ್ತಕದಲ್ಲಿನ ಯಾವುವೇ ನಮೂದುಗಳನ್ನು ಪರಿಶೀಲಿಸಬಹುದೆಂದು ಮತ್ತು ಅವುಗಳ ಪ್ರತಿಗಳನ್ನು ತೆಗೆದುಕೊಳ್ಳಬಹುದೆಂದು ಆದೇಶಿಸಬಹುದು ಅಥವಾ ಸಂದರ್ಭಾನುಸಾರ ಸಮಿತಿಯು ಅಥವಾ ಮಂಡಲಿಯು, ಆ ಆದೇಶದಲ್ಲಿ ನಿರ್ದಿಷ್ಟಪಡಿಸುವ ಅವಧಿಯೊಳಗೆ ಅಂಥ ಎಲ್ಲಾ ನಮೂದುಗಳ ಪ್ರಮಾಣಿತ ಪ್ರತಿಗಳನ್ನು

ತಯಾರಿಸಿ ಹಾಜರುಪಡಿಸತಕ್ಕದ್ದೆಂದು ಆದೇಶಿಸಬಹುದು ಹಾಗೂ ಅಂಥ ಪ್ರಮಾಣಿತ ಪ್ರತಿಗಳ ಜೊತೆಯಲ್ಲಿ ವ್ಯವಹರಣೆಯಲ್ಲಿಯ ವಿವಾದಾಂಶಗಳಿಗೆ ಸಂಬಂಧಪಟ್ಟಂತೆ, ಸಮಿತಿಯ ಅಥವಾ ಮಂಡಲಿಯ ಪುಸ್ತಕಗಳಲ್ಲಿ ಯಾವುವೇ ಇತರ ನಮೂದುಗಳು ಕಂಡುಬರುತ್ತಿಲ್ಲವೆಂಬ ಬಗ್ಗೆ ಹೆಚ್ಚಿನ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು ಮತ್ತು ಅಂಥ ಹೆಚ್ಚಿನ ಪ್ರಮಾಣ ಪತ್ರಕ್ಕೆ (1)ನೇ ಉಪಪ್ರಕರಣದ ಮೇರೆಗೆ ಪ್ರಮಾಣಿತ ಪ್ರತಿಗಳ ಬಗ್ಗೆ ಗೊತ್ತುಪಡಿಸಲಾದಂಥ ರೀತಿಯಲ್ಲಿಯೇ ದಿನಾಂಕ ಮತ್ತು ರುಜು ಹಾಕತಕ್ಕದ್ದು.

(ಬಿ) ಈ ಉಪಪ್ರಕರಣದ ಅಥವಾ (2)ನೇ ಉಪಪ್ರಕರಣದ ಮೇರೆಗೆ ಮಾಡುವ ಆದೇಶವನ್ನು ಸಮಿತಿಗೆ ಅಥವಾ ಮಂಡಲಿಗೆ ಸಮನು ನೀಡುವ ಮೂಲಕ ಅಥವಾ ನೀಡದೆಯೇ ಮಾಡಬಹುದು ಮತ್ತು ಸಮಿತಿಗೆ ಅಥವಾ ಮಂಡಲಿಗೆ, ನ್ಯಾಯಾಲಯವು ಅಥವಾ ಇತರ ಪ್ರಾಧಿಕಾರವು ಅನ್ಯಥಾ ನಿರ್ದೇಶಿಸಿದ ಹೊರತು ಸದರಿ ಆದೇಶ ಪಾಲನೆಗೆ ಅನುಸಾರವಾಗಿ ಸಾರ್ವಜನಿಕ ರಜಾದಿನಗಳನ್ನು ಬಿಟ್ಟು, ಮೂರು ಸ್ಪಷ್ಟ ದಿನಗಳ ಸಮನು ಜಾರಿ ಮಾಡತಕ್ಕದ್ದು.

(ಸಿ) ಸಮಿತಿಯು ಅಥವಾ ಮಂಡಲಿಯು, ಯಾವುದೇ ಅಂಥ ಆದೇಶವನ್ನು ಪಾಲಿಸಲು ನಿರ್ದಿಷ್ಟಪಡಿಸಿರುವ ಅವಧಿಗೆ ಮುಂಚೆ ಯಾವುದೇ ಕಾಲದಲ್ಲಿ, ಅಧಿವಿಚಾರಣೆಯ ಸಮಯದಲ್ಲಿ ತನ್ನ ಪುಸ್ತಕಗಳನ್ನು ಹಾಜರುಪಡಿಸುವುದಾಗಿ ಹೇಳಬಹುದು ಅಥವಾ ಅಂತಹ ಆದೇಶದ ವಿರುದ್ಧ ಕಾರಣವನ್ನು ತೋರಿಸುವ ತನ್ನ ಉದ್ದೇಶದ ಬಗ್ಗೆ ನೋಟೀಸನ್ನು ಕೊಡಬಹುದು ಮತ್ತು ಆ ತರುವಾಯ, ಆ ಆದೇಶವನ್ನು ಹೆಚ್ಚಿನ ಆದೇಶಗಳನ್ನು ಪಡೆಯದೆ ಜಾರಿ ಮಾಡತಕ್ಕದ್ದಲ್ಲ.

**136. ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು, ಅಧಿಕಾರಿಗಳು ಮತ್ತು ನೌಕರರು ಲೋಕ ನೌಕರರಾಗಿರುವುದು.–** ಮಾರುಕಟ್ಟೆ ಸಮಿತಿಯ ಅಧ್ಯಕ್ಷ, ಉಪಾಧ್ಯಕ್ಷ, ಸದಸ್ಯ, ಅಧಿಕಾರಿಗಳು ಮತ್ತು ಇತರ ನೌಕರರು ಮತ್ತು ಮಂಡಲಿಯ ಉಪಸಭಾಪತಿ, ಸದಸ್ಯರು, ಅಧಿಕಾರಿಗಳು, ಮತ್ತು ಇತರ ನೌಕರರು, ತತ್ಕಾಲದಲ್ಲಿ ಜಾರಿಯಲ್ಲಿರುವ ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಮತ್ತು 1947ರ ಭ್ರಷ್ಟಾಚಾರ ನಿವಾರಣಾ ಅಧಿನಿಯಮದ ಅರ್ಥವ್ಯಾಪ್ತಿಯೊಳಗೆ ಲೋಕ ನೌಕರರೆಂದು ಭಾವಿಸತಕ್ಕದ್ದು.

**137. ನೋಟೀಸು ನೀಡಿಲ್ಲದ ಸಂದರ್ಭದಲ್ಲಿ ದಾವೆಯ ಅಥವಾ ಇತರ ಕಾನೂನು ವ್ಯವಹರಣೆಯ ಪ್ರತಿಷೇಧ.–** ಈ ಅಧಿನಿಯಮದ ಮೇರೆಗೆ ಅಂಥ ಸದಸ್ಯನಾಗಿ, ಅಧಿಕಾರಿಯಾಗಿ, ನೌಕರನಾಗಿ ಅಥವಾ ವ್ಯಕ್ತಿಯಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದಂಥ ಯಾವುದೇ ಕಾರ್ಯದ ಬಗ್ಗೆ ಯಾವುದೇ ದಾವೆಯನ್ನು ಅಥವಾ ಕಾನೂನು ವ್ಯವಹರಣೆಯನ್ನು ವ್ಯಾಜ್ಯ ಕಾರಣ, ದಾವೆ ಹೂಡಲು ಉದ್ದೇಶಿಸಿರುವ ವಾದಿಯ ಹೆಸರು ಮತ್ತು ವಾಸಸ್ಥಳ ಮತ್ತು ಅವನು ಕ್ಲೇಮು ಮಾಡುವ ಪರಿಹಾರ ಇವುಗಳನ್ನು ಒಳಗೊಂಡ ಲಿಖಿತ ನೋಟೀಸನ್ನು ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ಸಂದರ್ಭದಲ್ಲಿ ಅದರ ಕಚೇರಿಯಲ್ಲಿ ತಲುಪಿಸಿದ ಅಥವಾ ಕೊಟ್ಟ ತರುವಾಯದ ಮತ್ತು ಮೇಲೆ ಹೇಳಿದ ಸದಸ್ಯನ, ಅಧಿಕಾರಿಯ, ನೌಕರನ ಅಥವಾ ವ್ಯಕ್ತಿಯ ಸಂದರ್ಭದಲ್ಲಿ ಅದನ್ನು ಅವನಿಗೆ ಅಥವಾ ಅವನ ಕಚೇರಿಯಲ್ಲಿ ಅಥವಾ ಅವನು ಸಾಮಾನ್ಯವಾಗಿ ವಾಸಿಸುವ ಸ್ಥಳದಲ್ಲಿ ತಲುಪಿಸಿದ ಅಥವಾ ಕೊಟ್ಟ ತರುವಾಯದ ಎರಡು ತಿಂಗಳ ಅವಧಿಯು ಮುಗಿಯುವವರೆಗೆ ಯಾವುದೇ ದಾವೆಯನ್ನು ಅಥವಾ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ ಮತ್ತು ಆ ವಾದ ಪತ್ರದಲ್ಲಿ ಅಂಥ ನೋಟೀಸನ್ನು ಹಾಗೆ ತಲುಪಿಸಲಾಗಿದೆ ಅಥವಾ ಕೊಡಲಾಗಿದೆ ಎಂಬುದನ್ನು ನಮೂದಿಸಿರತಕ್ಕದ್ದು ;

ಪರಂತು, ರಾಜ್ಯ ಸರ್ಕಾರವು [1][ಕೃಷಿ ಮಾರುಕಟ್ಟೆ ನಿರ್ದೇಶಕನು,][1] ಮಾರುಕಟ್ಟೆ ಸಮಿತಿಯು ಅಥವಾ ಮಂಡಲಿಯು ಯಾವನೇ ಸದಸ್ಯನ, ಅಧಿಕಾರಿಯ, ನೌಕರನ ಅಥವಾ ಇತರ ವ್ಯಕ್ತಿಯ ವಿರುದ್ಧ ಹೂಡುವ ಯಾವುದೇ ಇತರ ದಾವೆಗೆ ಅಥವಾ ಕಾನೂನು ವ್ಯವಹರಣೆಗೆ ಈ ಪ್ರಕರಣದಲ್ಲಿರುವುದು ಯಾವುದೂ ಅನ್ವಯವಾಗತಕ್ಕದ್ದಲ್ಲ.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**137ಎ. ಅಪೀಲು.–** (1) ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, ಈ ಅಧಿನಿಯಮದ ಮೇರೆಗೆ ಅಧ್ಯಕ್ಷನು ಅಥವಾ ಕಾರ್ಯದರ್ಶಿಯು ಹೊರಡಿಸಿದ ಮೂಲ ಆದೇಶದಿಂದ ಬಾಧಿತನಾದ ಯಾವನೇ ವ್ಯಕ್ತಿಯು 30 ದಿನಗಳೊಳಗಾಗಿ ಮಾರುಕಟ್ಟೆ ಸಮಿತಿಗೆ ಅಪೀಲು ಸಲ್ಲಿಸಬಹುದು.

(2) ಮಾರುಕಟ್ಟೆ ಸಮಿತಿಯು ಅಪೀಲುದಾರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶ ನೀಡಿದ ಮೇಲೆ ಮತ್ತು ತನಗೆ ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ ಅಪೀಲು ಕುರಿತು ತೀರ್ಮಾನ ಕೈಕೊಳ್ಳಬಹುದು ಮತ್ತು ಸಮಿತಿಯ ಅಂಥ ತೀರ್ಮಾನವು ಅಂತಿಮವಾಗಿರತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**138. ಪೊಲೀಸ್ ಅಧಿಕಾರಿಯ ಅಧಿಕಾರಗಳು ಮತ್ತು ಕರ್ತವ್ಯಗಳು.–** (1) ಯಾವನೇ ವ್ಯಕ್ತಿಯು ಈ ಅಧಿನಿಯಮದ ಅಥವಾ ಯಾವುದೇ ನಿಯಮ ಅಥವಾ ಉಪವಿಧಿಗಳ ಯಾವುದೇ ಉಪಬಂಧವನ್ನು ಉಲ್ಲಂಘಿಸಿ ಅಪರಾಧವನ್ನು ಮಾಡುತ್ತಿದ್ದಾನೆಂದು ಯಾವನೇ ಪೊಲೀಸು ಅಧಿಕಾರಿಯು ಅಭಿಪ್ರಾಯಪಟ್ಟರೆ ಮತ್ತು ಅಂಥ ವ್ಯಕ್ತಿಯ ಹೆಸರು ಮತ್ತು ವಿಳಾಸಗಳು ಆ ಅಧಿಕಾರಿಗೆ ತಿಳಿದಿರದಿದ್ದರೆ ಮತ್ತು ಆ ವ್ಯಕ್ತಿಯು ತನ್ನ ಹೆಸರು ಮತ್ತು ವಿಳಾಸವನ್ನು ಕೇಳಿದಾಗ ತಿಳಿಸಲು

ನಿರಾಕರಿಸಿದರೆ ಅಥವಾ ಅವನು ತಿಳಿಸಿದ ಹೆಸರು ಮತ್ತು ವಿಳಾಸ ಸರಿಯಾಗಿರುವ ಬಗ್ಗೆ ಸಂದೇಹಿಸಲು ಅವನಿಗೆ ಕಾರಣವಿದ್ದರೆ, ಆಗ ಆ ಪೊಲೀಸ್ ಅಧಿಕಾರಿಯು ಅಂಥ ವ್ಯಕ್ತಿಯನ್ನು ದಸ್ತಗಿರಿ ಮಾಡಬಹುದು ಮತ್ತು ಆ ವ್ಯಕ್ತಿಯ ಸರಿಯಾದ ಹೆಸರು ಮತ್ತು ವಿಳಾಸಗಳನ್ನು ಖಚಿತಪಡಿಸಿಕೊಳ್ಳುವವರೆಗೆ ಅವನನ್ನು ಪೊಲೀಸ್ ಠಾಣೆಯಲ್ಲಿ ಬಂಧಿಸಿಡಬಹುದು.

(2) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಲಾದ ಯಾವುವೇ ನಿಯಮಗಳ ಅಥವಾ ಉಪವಿಧಿಗಳ ವಿರುದ್ಧ ಯಾವುದೇ ಅಪರಾಧವನ್ನು ಮಾಡಲು ಪ್ರಯತ್ನಿಸಲಾಗುತ್ತಿದೆ ಅಥವಾ ಮಾಡಲಾಗಿದೆ ಎಂಬ ಬಗ್ಗೆ ಯಾವುದೇ ಮಾಹಿತಿಯನ್ನು ಸ್ವೀಕರಿಸುವ ಪ್ರತಿಯೊಬ್ಬ ಪೊಲೀಸ್ ಅಧಿಕಾರಿಯು ಆ ಮಾಹಿತಿಯನ್ನು ಸಾಧ್ಯವಾದಷ್ಟು ಬೇಗನೆ ಮಾರುಕಟ್ಟೆ ಸಮಿತಿಗೆ ತಿಳಿಸುವುದು ಮತ್ತು ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿ ಅಥವಾ ಯಾವನೇ ಅಧಿಕಾರಿಯು ಅಥವಾ ನೌಕರನು ತನ್ನ ಕಾನೂನುಬದ್ಧ ಅಧಿಕಾರವನ್ನು ಚಲಾಯಿಸುವಲ್ಲಿ ಆ ಪೊಲೀಸ್ ಅಧಿಕಾರಿಯು ಸಹಾಯವನ್ನು ಯುಕ್ತ ರೀತಿಯಲ್ಲಿ ಕೇಳಿದರೆ ಅವರಿಗೆ ಸಹಾಯ ನೀಡುವುದು ಅವನ ಕರ್ತವ್ಯವಾಗಿರತಕ್ಕದ್ದು.

**139. ಮಾಹಿತಿಯನ್ನು ಮತ್ತು ಸಹಾಯವನ್ನು ನೀಡುವುದು, ಸ್ಥಳೀಯ ಪ್ರಾಧಿಕಾರಗಳ ಕರ್ತವ್ಯವಾಗಿರುವುದು.–** (1) ಯಾವುದೇ ಚಾರ್ಜುಗಳನ್ನು ಸಂದಾಯವಿಲ್ಲದೆ ಸ್ಥಳೀಯ ಪ್ರಾಧಿಕಾರದ ಪ್ರದೇಶದ ಒಳಗೆ ಆಮದಾಗುವ ಮತ್ತು ಪ್ರದೇಶದ ಹೊರಗೆ ರಫ್ತಾಗುವ ಅಧಿಸೂಚಿತ ಕೃಷಿ ಉತ್ಪನ್ನಕ್ಕೆ ಸಂಬಂಧಪಟ್ಟಂತೆ ಆ ಪ್ರಾಧಿಕಾರದ ಅಧಿಕಾರಿಗಳ ಸ್ವಾಧೀನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಆ ಎಲ್ಲಾ ಅವಶ್ಯಕ ಮಾಹಿತಿಯನ್ನು ಮಾರುಕಟ್ಟೆ ಸಮಿತಿಗೆ ಅಥವಾ ಈ ಸಂಬಂಧದಲ್ಲಿ ಅಧಿಕಾರ ಪಡೆದ ಅದರ ಅಧಿಕಾರಿಗಳಿಗೆ ಕೊಡುವುದು ಪ್ರತಿಯೊಂದು ಸ್ಥಳೀಯ ಪ್ರಾಧಿಕಾರದ ಕರ್ತವ್ಯವಾಗಿರತಕ್ಕದ್ದು.

(2) 66 ಮತ್ತು 67ನೇ ಪ್ರಕರಣಗಳ ಮೇರೆಗೆ ಅಧಿಕಾರಗಳನ್ನು ಚಲಾಯಿಸುವ ಮತ್ತು ಕರ್ತವ್ಯಗಳನ್ನು ನಿರ್ವಹಿಸುವ ಮಾರುಕಟ್ಟೆ ಸಮಿತಿಯ ಯಾವನೇ ಅಧಿಕಾರಿಗೆ ಸಾಧ್ಯವಾದ ಎಲ್ಲಾ ಸಹಾಯವನ್ನು ಕೊಡುವುದು ಪ್ರತಿಯೊಂದು ಸ್ಥಳೀಯ ಪ್ರಾಧಿಕಾರದ ಮತ್ತು ಅದರ ಅಧಿಕಾರಿಗಳ ಮತ್ತು ಆಕ್ಟ್ರಾಯ್ ವಸೂಲಿಗೆ ಸಂಬಂಧಿಸಿದ ಸಿಬ್ಬಂದಿಯ ಕರ್ತವ್ಯವಾಗಿರತಕ್ಕದ್ದು.

[1][**139ಎ. ಮಾಹಿತಿ ಮತ್ತು ನೆರವು ನೀಡುವಲ್ಲಿ ಇಲಾಖಾ ಅಧಿಕಾರಿಗಳ ಕರ್ತವ್ಯ.–** ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಯಾವುದೇ ಮಾರುಕಟ್ಟೆ ಸಮಿತಿಯ ಪ್ರದೇಶದೊಳಗೆ ಆಮದು ಮಾಡಿಕೊಳ್ಳುವುದಕ್ಕೆ ಮತ್ತು ಹೊರಗೆ ರಫ್ತು ಮಾಡುವುದಕ್ಕೆ ಸಂಬಂಧಿಸಿದಂತೆ ರಾಜ್ಯ ಸರ್ಕಾರದ ಯಾವುದೇ ಇಲಾಖೆಯ ನಿಯಂತ್ರಣದಲ್ಲಿರುವ ಎಲ್ಲ ಅಗತ್ಯ ಮಾಹಿತಿಯನ್ನು ಉಚಿತವಾಗಿ ಮಾರುಕಟ್ಟೆ ಸಮಿತಿಗೆ ಈ ಸಂಬಂಧದಲ್ಲಿ ಅಧಿಕೃತನಾದ ಅದರ ಅಧಿಕಾರಿಗೆ ಒದಗಿಸುವುದು ಆ ಯಾವುದೇ ಇಲಾಖೆಯ ಪ್ರತಿಯೊಬ್ಬ ಅಧಿಕಾರಿಯ ಕರ್ತವ್ಯವಾಗಿರತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 16ರ ಮೂಲಕ 1-8-1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**140. ರಾಜ್ಯ ಸರ್ಕಾರದ ಮತ್ತು [1][ಕೃಷಿ ಮಾರುಕಟ್ಟೆ ನಿರ್ದೇಶಕನ][1] ಅಧಿಕಾರಗಳನ್ನು ವಹಿಸಿಕೊಡುವುದು.–** (1) ಈ ಅಧಿನಿಯಮದ 1,2,3,4,5, 10, 18, 38, 62, 68, 96, 100, 126, 127, 130, 133, 143, 144, 145, 146 ಮತ್ತು 152ನೇ ಪ್ರಕರಣಗಳ ಮೂಲಕ ಮತ್ತು ಅವುಗಳ ಮೇರೆಗೆ ರಾಜ್ಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರಗಳನ್ನು ಹೊರತುಪಡಿಸಿ ಯಾವುದೇ ಇತರ ಅಧಿಕಾರಗಳನ್ನು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿರಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೊಳಪಟ್ಟು, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸತಕ್ಕಂಥ ರಾಜ್ಯ ಸರ್ಕಾರದ ಅಧಿಕಾರಿಗಳು ಸಹ ಚಲಾಯಿಸಬಹುದೆಂದು ನಿರ್ದೇಶಿಸಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ರಾಜ್ಯ ಸರ್ಕಾರವು, ಈ ಅಧಿನಿಯಮದ 6,7,9, 11, [1][XXX][1] 91,149 ಮತ್ತು 150ನೇ ಪ್ರಕರಣಗಳ ಮೂಲಕ ಅಥವಾ ಅವುಗಳ ಮೇರೆಗೆ [2][ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ][2] ಪ್ರದತ್ತವಾದ ಅಧಿಕಾರಗಳನ್ನು ಹೊರತುಪಡಿಸಿ ಯಾವುವೇ ಇತರ ಅಧಿಕಾರಗಳನ್ನು ಅಧಿಸೂಚನೆಯ ಮೂಲಕ ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟು ಅಧೀನ ಅಧಿಕಾರಿಗಳು ಸಹ ಚಲಾಯಿಸಬಹುದೆಂದು ನಿರ್ದೇಶಿಸಬಹುದು.

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 3-11-1979ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**141. ಸದ್ಭಾವನೆಯಿಂದ ಕಾರ್ಯನಿರ್ವಹಿಸುವ ವ್ಯಕ್ತಿಗಳಿಗೆ ರಕ್ಷಣೆ.–** ಈ ಅಧಿನಿಯಮದ ಅಥವಾ ನಿಯಮಗಳ, ವಿನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ಯಾವನೇ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

**142. ಮಾರುಕಟ್ಟೆ ಪ್ರದೇಶದ ಪರಿಮಿತಿಗಳನ್ನು ಮಾತ್ರ ವ್ಯತ್ಯಾಸಗೊಳಿಸುವುದರ ಪರಿಣಾಮ.–** ಯಾವುದೇ ಮಾರುಕಟ್ಟೆ ಪ್ರದೇಶದಿಂದ ಯಾವುದೇ ಪ್ರದೇಶವನ್ನು ಹೊರತುಪಡಿಸಿ 5ನೇ ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಹೊರಡಿಸಲಾಗಿರುವಲ್ಲಿ ಮತ್ತು ಹಾಗೆ ಹೊರತುಪಡಿಸಲಾದ ಪ್ರದೇಶವನ್ನು ಪ್ರತ್ಯೇಕ ಮಾರುಕಟ್ಟೆ ಪ್ರದೇಶವೆಂದು ಘೋಷಿಸದಿರುವಲ್ಲಿ ಅಥವಾ ಮಾರುಕಟ್ಟೆ ಪ್ರದೇಶದೊಳಗೆ ಯಾವುದೇ ಪ್ರದೇಶವನ್ನು ಸೇರಿಸಿ 5ನೇ ಪ್ರಕರಣದ ಮೇರೆಗೆ

ಅಧಿಸೂಚನೆಯನ್ನು, ಅಂಥ ಹೊರತುಪಡಿಸುವಿಕೆಯ ಅಥವಾ ಸೇರಿಸುವಿಕೆಯ ದಿನಾಂಕಕ್ಕೆ ಮುಂಚೆ ರಚಿತವಾಗಿರುವ ಮಾರುಕಟ್ಟೆ ಸಮಿತಿಯು, ಈ ಅಧಿನಿಯಮದಲ್ಲಿ ಏನೇ ಇದ್ದಾಗ್ಯೂ, ಅದು ಈ ಅಧಿನಿಯಮದ ಮೇರೆಗೆ ಪುನರ್ ರಚಿತವಾಗುವವರೆಗೆ ಸದರಿ ಮಾರುಕಟ್ಟೆ ಪ್ರದೇಶದ ಮಾರುಕಟ್ಟೆ ಸಮಿತಿಯಾಗಿ ಮುಂದುವರಿಯತಕ್ಕದ್ದು.

**143. ಮಾರುಕಟ್ಟೆ ಪ್ರದೇಶಕ್ಕೆ ಸಂಬಂಧಪಟ್ಟ ಅಧಿಸೂಚನೆಯನ್ನು ಹಿಂತೆಗೆದುಕೊಳ್ಳುವುದು ಮತ್ತು ಅದರ ಪರಿಣಾಮಗಳು.–** (1) [1][XXX][1] ರಾಜ್ಯ ಸರ್ಕಾರವು ಅಧಿಸೂಚನೆ ಹೊರಡಿಸಿ ಮಾರುಕಟ್ಟೆಯಾಗಿರುವಂಥ ಒಂದು ಪ್ರದೇಶವು ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿರುವ ದಿನಾಂಕದಿಂದ ಹಾಗೆ ಮಾರುಕಟ್ಟೆ ಪ್ರದೇಶವಾಗಿರುವುದು ನಿಂತುಹೋಗತಕ್ಕುದೆಂದು ಘೋಷಿಸಬಹುದು.

1. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 4-11-1981 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) (1)ನೇ ಉಪಪ್ರಕರಣದ ಮೇರೆಗೆ ಯಾವುದೇ ಪ್ರದೇಶವು ಮಾರುಕಟ್ಟೆ ಪ್ರದೇಶವಾಗಿರುವುದು ನಿಂತುಹೋದಾಗ, ಆ ಬಗ್ಗೆ ರಚಿತವಾದ ಮಾರುಕಟ್ಟೆ ಸಮಿತಿಯು ಅಸ್ತಿತ್ವದಲ್ಲಿರುವುದು ನಿಂತುಹೋಗತಕ್ಕದ್ದು ಮತ್ತು ಯಾವುದೇ ಅಂಥ ಮಾರುಕಟ್ಟೆ ಸಮಿತಿಯಲ್ಲಿ ನಿಹಿತವಾದ ಸ್ವತ್ತುಗಳು ಮತ್ತು ಹಕ್ಕುಗಳು, ಅವುಗಳಿಗೆ ಸಂಬಂಧಪಟ್ಟ ಎಲ್ಲಾ ಪ್ರಭಾರಗಳಿಗೆ ಮತ್ತು ಹೊಣೆಗಾರಿಕೆಗಳಿಗೊಳಪಟ್ಟು [1][ರಾಜ್ಯ ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ನೆರೆಯ ಮಾರುಕಟ್ಟೆ ಸಮಿತಿಯಲ್ಲಿ ನಿಹಿತವಾಗತಕ್ಕದ್ದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಯಾವುದೇ ಅಂಥ ಪ್ರದೇಶವು ಎರಡು ಅಥವಾ ಹೆಚ್ಚು ಇತರ ಮಾರುಕಟ್ಟೆ ಪ್ರದೇಶಗಳಲ್ಲಿ ಸೇರಿದ್ದರೆ, ರಾಜ್ಯ ಸರ್ಕಾರವು, ಆದೇಶ ಹೊರಡಿಸಿ, ಅಂಥ ಸ್ವತ್ತುಗಳು, ಹಕ್ಕುಗಳು, ಪ್ರಭಾರಗಳು ಮತ್ತು ಹೊಣೆಗಾರಿಕೆಗಳು, ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ಹಾಗೂ ಪ್ರಮಾಣದಲ್ಲಿ ಅಂಥ ಪ್ರದೇಶದ ಮಾರುಕಟ್ಟೆ ಸಮಿತಿಗಳಲ್ಲಿ, ನಿಹಿತವಾಗತಕ್ಕದ್ದೆಂದು ನಿರ್ದೇಶಿಸಬಹುದು.

**144. ಮಾರುಕಟ್ಟೆ ಸಮಿತಿಗಳ ವಿಲೀನ.–** ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ ಯಾವುದೇ ಕೃಷಿ ಉತ್ಪನ್ನದ ಮಾರುಕಟ್ಟೆ ವ್ಯವಹಾರವನ್ನು ದಕ್ಷ ರೀತಿಯಲ್ಲಿ ನಿಯಂತ್ರಿಸುವುದಕ್ಕಾಗಿ ಎರಡು ಅಥವಾ ಹೆಚ್ಚು ಮಾರುಕಟ್ಟೆ ಸಮಿತಿಗಳು ವಿಲೀನಗೊಳ್ಳುವುದು ಅವಶ್ಯವೆಂದು ರಾಜ್ಯ ಸರ್ಕಾರಕ್ಕೆ ಮನದಟ್ಟಾದರೆ, ಆಗ ರಾಜ್ಯ ಸರ್ಕಾರವು ಸಂಬಂಧಪಟ್ಟ ಮಾರುಕಟ್ಟೆ ಸಮಿತಿಗಳೊಡನೆ ಸಮಾಲೋಚಿಸಿ, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ಕೃಷಿ ಉತ್ಪನ್ನದ ಸಂಬಂಧದಲ್ಲಿ ಅಂಥ ಮಾರುಕಟ್ಟೆ ಸಮಿತಿಗಳನ್ನು ಆ ಮಾರುಕಟ್ಟೆ ಪ್ರದೇಶದ ಮಾರುಕಟ್ಟೆ ಸಮಿತಿಯಾಗಿ ವಿಲೀನಗೊಳಿಸಲು, ಏರ್ಪಾಟು ಮಾಡಬಹುದು ಮತ್ತು ಹಾಗೆ ರಚಿತವಾದ ಮಾರುಕಟ್ಟೆ ಸಮಿತಿಯು ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅಂಗರಚನೆ, ಸ್ವತ್ತುಗಳು, ಹಕ್ಕುಗಳು, ಹಿತಾಸಕ್ತಿಗಳು ಮತ್ತು ಅಧಿಕಾರಗಳು ಮತ್ತು ಅಂಥ ಹೊಣೆಗಳು, ಕರ್ತವ್ಯಗಳು ಮತ್ತು ಬಾಧ್ಯತೆಗಳು (ಅಂಥ ವಿಲೀನವನ್ನು ಕಾರ್ಯಗತಗೊಳಿಸಲು ಅಗತ್ಯವಾಗುವ ಕರಾರುಗಳು, ಆಸ್ತಿಗಳು, ನೌಕರರು, ವ್ಯವಹರಣೆಗಳು ಮತ್ತು ಅಂಥ ಪ್ರಾಸಂಗಿಕ, ಆನುಷಂಗಿಕ ಮತ್ತು ಪೂರಕ ವಿಷಯಗಳ ಬಗ್ಗೆ ಏರ್ಪಾಟು ಸೇರಿದಂತೆ) – ಇವುಗಳನ್ನು ಹೊಂದಿರತಕ್ಕದ್ದು.

**145. ಮಾರುಕಟ್ಟೆ ಪ್ರದೇಶವನ್ನು ಎರಡು ಅಥವಾ ಹೆಚ್ಚು ಪ್ರತ್ಯೇಕ ಮಾರುಕಟ್ಟೆ ಪ್ರದೇಶಗಳಾಗಿ ವಿಭಾಗಿಸುವುದು.–** (1) 3 ಮತ್ತು 4ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿರುವ ಕಾರ್ಯವಿಧಾನಕ್ಕೊಳಪಟ್ಟು, ರಾಜ್ಯ ಸರ್ಕಾರವು, ಒಂದು ಮಾರುಕಟ್ಟೆ ಪ್ರದೇಶವನ್ನು, ಎರಡು ಅಥವಾ ಹೆಚ್ಚು ಪ್ರತ್ಯೇಕ ಮಾರುಕಟ್ಟೆ ಪ್ರದೇಶಗಳಾಗಿ ವಿಭಾಗಿಸಬಹುದು.

(2) ಒಂದು ಮಾರುಕಟ್ಟೆ ಪ್ರದೇಶದ ಬಗ್ಗೆ ಸ್ಥಾಪಿಸಲಾದ ಮಾರುಕಟ್ಟೆ ಸಮಿತಿಯ ಅಧಿಕಾರಾವಧಿಯಲ್ಲಿ ಆ ಮಾರುಕಟ್ಟೆ ಪ್ರದೇಶವನ್ನು, ಎರಡು ಅಥವಾ ಹೆಚ್ಚು ಪ್ರತ್ಯೇಕ ಮಾರುಕಟ್ಟೆ ಪ್ರದೇಶಗಳಾಗಿ ವಿಭಾಗಿಸಿದಾಗ ಈ ಕೆಳಕಂಡ ಪರಿಣಾಮಗಳು ಉಂಟಾಗುವವು:–

(ಎ) ಈ ಅಧಿನಿಯಮದ ಮೇರೆಗೆ ಮಾರುಕಟ್ಟೆ ಪ್ರದೇಶಕ್ಕಾಗಿ ರಚಿತವಾದ ಮಾರುಕಟ್ಟೆ ಸಮಿತಿಯನ್ನು ವಿಸರ್ಜಿಸಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ರಾಜ್ಯ ಸರ್ಕಾರವು, 10ನೇ ಪ್ರಕರಣದ ಮೇರೆಗೆ ಗೊತ್ತುಪಡಿಸಬಹುದಾದಂಥ ಷರತ್ತುಗಳಿಗೊಳಪಟ್ಟು ಪ್ರತಿಯೊಂದು ಮಾರುಕಟ್ಟೆ ಪ್ರದೇಶಕ್ಕಾಗಿ ಪ್ರತ್ಯೇಕ ಮಾರುಕಟ್ಟೆ ಸಮಿತಿಯನ್ನು ರಚಿಸತಕ್ಕದ್ದು ಮತ್ತು [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] ಆ ಪ್ರತಿಯೊಂದು ಹೊಸ ಮಾರುಕಟ್ಟೆ ಪ್ರದೇಶದ ಬಗ್ಗೆ ಒಂದು ನಿರ್ದಿಷ್ಟ ಪ್ರದೇಶವನ್ನು ಮತ್ತು ಒಂದು ನಿರ್ದಿಷ್ಟ ಸ್ಥಳವನ್ನು ಮಾರುಕಟ್ಟೆಯಾಗಿ ಮತ್ತು ಮಾರುಕಟ್ಟೆ ಪ್ರಾಂಗಣವಾಗಿ ಏಕಕಾಲದಲ್ಲಿ ಘೋಷಿಸತಕ್ಕದ್ದು;

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) ಹೊಸದಾಗಿ ರಚಿತವಾದ ಸಮಿತಿಗಳ ಪದಾವಧಿಯು, 10ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಮೊದಲನೆಯ ಮಾರುಕಟ್ಟೆ ಸಮಿತಿಗೆ ಅನ್ವಯವಾಗುವ ಪದಾವಧಿಯಾಗಿರತಕ್ಕದ್ದು;

(ಸಿ) ರಾಜ್ಯ ಸರ್ಕಾರವು ವಿಸರ್ಜಿತವಾದ ಮಾರುಕಟ್ಟೆ ಸಮಿತಿಯ ಆಸ್ತಿಗಳನ್ನು, ಹಕ್ಕುಗಳನ್ನು ಮತ್ತು ಹೊಣೆಗಾರಿಕೆಗಳನ್ನು, ಗೊತ್ತುಪಡಿಸಬಹುದಾದಂಥ ನಿಯಮಗಳಿಗನುಸಾರ ಹೊಸ ಮಾರುಕಟ್ಟೆ ಸಮಿತಿಗಳಲ್ಲಿ ಹಂಚತಕ್ಕದ್ದು;

(ಡಿ) ಹೊಸ ಮಾರುಕಟ್ಟೆ ಸಮಿತಿಗಳ ಅಧಿಕಾರಕ್ಕೊಳಪಟ್ಟ ಪ್ರದೇಶದ ಯಾವುದೇ ಭಾಗಕ್ಕೆ ಸಂಬಂಧಪಟ್ಟಂತೆ ವಿಸರ್ಜಿತವಾದ ಮಾರುಕಟ್ಟೆ ಸಮಿತಿಯು ಮಾಡಿದ, ಹೊರಡಿಸಿದ ಅಥವಾ ವಿಧಿಸಿದ, ಯಾವುದೇ ನೇಮಕ, ಅಧಿಸೂಚನೆ, ನೋಟೀಸು, ಫೀಜು, ಆದೇಶ, ಯೋಜನೆ, ಲೈಸೆನ್ಸ್, ಪರ್ಮಿಟ್, ಉಪವಿಧಿ ಅಥವಾ ನಮೂನೆ ಇವುಗಳನ್ನು ಸಂಬಂಧಪಟ್ಟ ಹೊಸ ಮಾರುಕಟ್ಟೆ ಸಮಿತಿಯು ಹೊರಡಿಸಿದ ಅಥವಾ ವಿಧಿಸಿದ ಯಾವುದೇ ಅಧಿಸೂಚನೆ, ನೋಟೀಸು, ಫೀಜು, ಆದೇಶ, ಯೋಜನೆ, ಲೈಸೆನ್ಸ್, ಪರ್ಮಿಟ್, ನಿಯಮ, ಉಪವಿಧಿ ಅಥವಾ ನಮೂನೆ ಇವುಗಳ ಮೂಲಕ ರದ್ದುಗೊಳಿಸಿದ ಹೊರತು ಮತ್ತು ಅವರೆಗೆ ಆ ಹೊಸ ಸಮಿತಿಯು ಮಾಡಿರುವುದಾಗಿ, ಹೊರಡಿಸಿರುವುದಾಗಿ ಅಥವಾ ವಿಧಿಸಿರುವುದಾಗಿ ಭಾವಿಸತಕ್ಕದ್ದು.

(3) ಈ ಪ್ರಕರಣದ ಉಪಬಂಧಗಳನ್ನು ಜಾರಿಗೆ ತರುವಲ್ಲಿ ಯಾವುದೇ ತೊಂದರೆಯು ಉಂಟಾದರೆ ರಾಜ್ಯ ಸರ್ಕಾರವು, ಆ ತೊಂದರೆ ನಿವಾರಣೆಗಾಗಿ ತನಗೆ ಅವಶ್ಯವೆಂದು ಕಂಡು ಬರುವಂಥ ಹಾಗೂ ಸಂದರ್ಭವು ಅಗತ್ಯಪಡಿಸಬಹುದಾದಂಥ ಯಾವುದೇ ಕಾರ್ಯವನ್ನು ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ಮಾಡಬಹುದು.

**146. ನಿಯಮಗಳು.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಜಾರಿಗೆ ತರುವುದಕ್ಕಾಗಿ ಇಡೀ ರಾಜ್ಯಕ್ಕಾಗಿ ಅಥವಾ ಮಾರುಕಟ್ಟೆ ಸಮಿತಿಗಳ ಯಾವುದೇ ವರ್ಗಕ್ಕಾಗಿ, ಅಧಿಸೂಚನೆಯ ಮೂಲಕ ಮತ್ತು ಪೂರ್ವ ಪ್ರಕಟಣೆಯ ಅನಂತರ, ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಉಪಬಂಧಗಳ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು ಈ ಕೆಳಕಂಡವುಗಳ ಬಗ್ಗೆ ಉಪಬಂಧಿಸಬಹುದು.

(ಎ) ಮತದಾರರ ಪಟ್ಟಿಯ ತಯಾರಿಕೆ ಮತ್ತು ಪರಿಷ್ಕರಣೆ, ಮಾರುಕಟ್ಟೆ ಪ್ರದೇಶವನ್ನು ಚುನಾವಣಾ ಕ್ಷೇತ್ರಗಳಿಗಾಗಿ ವಿಭಜಿಸುವುದು, [1][ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳಿಗಾಗಿ ಕೃಷಿಕರ ಒಂದು ಚುನಾವಣಾ ಕ್ಷೇತ್ರವನ್ನು ಮೀಸಲಿಡುವುದು,][1] ಮಾರುಕಟ್ಟೆ ಸಮಿತಿಯ ಸದಸ್ಯರ ಚುನಾವಣೆ ಅಥವಾ ನಾಮ ನಿರ್ದೇಶನ, ಠೇವಣಿಗಳ ಸಂದಾಯ ಮತ್ತು ಅವುಗಳ ಮುಟ್ಟುಗೋಲು, ಚುನಾವಣೆಗಳನ್ನು ನಡೆಸುವ ರೀತಿ, ಚುನಾವಣಾ ಕಾರ್ಯಕ್ರಮವನ್ನು ರಚಿಸುವುದು, ಮತಗಟ್ಟೆಗಳನ್ನು ನಿಗದಿಪಡಿಸುವುದು, ರಿಟರ್ನಿಂಗ್ ಆಫೀಸರ್‌ಗಳ, ಪ್ರಿಸೈಡಿಂಗ್ ಆಫೀಸರ್‌ಗಳ ಮತ್ತು ಪೋಲಿಂಗ್ ಆಫೀಸರ್‌ಗಳ ನೇಮಕಾತಿ ಮತ್ತು ಅಂಥ ಚುನಾವಣೆಗೆ ಸಂಬಂಧಿಸಿದ ಎಲ್ಲಾ ವಿಷಯಗಳು;

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30–6–1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) ಮಾರುಕಟ್ಟೆ ಸಮಿತಿಯ ಅಧ್ಯಕ್ಷನ ಮತ್ತು ಉಪಾಧ್ಯಕ್ಷನ ಚುನಾವಣೆ;

(ಸಿ) ಮಾರುಕಟ್ಟೆ ಸಮಿತಿಯ ಅಧ್ಯಕ್ಷನ, ಉಪಾಧ್ಯಕ್ಷನ ಅಥವಾ ಸದಸ್ಯನ ಸ್ಥಾನವು ಖಾಲಿಯಾದಾಗ ಅದನ್ನು ಭರ್ತಿ ಮಾಡುವುದು;

(ಡಿ) ಮಾರುಕಟ್ಟೆ ಸಮಿತಿಯು, [1][ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ][1] ಮತ್ತು ಆ [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] ಅಧಿಕೃತಗೊಳಿಸಬಹುದಾದಂಥ ಇತರ ಅಧಿಕಾರಿಗಳಿಗೆ ಸಲ್ಲಿಸತಕ್ಕ ವಿವರಪಟ್ಟಿಕೆಗಳ ನಮೂನೆಗಳು;

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17–6–1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಇ) ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ದಸ್ತಾವೇಜುಗಳ ಮತ್ತು ಆ ಸಮಿತಿಯ ಅಥವಾ ಮಂಡಲಿಯ ಪುಸ್ತಕಗಳಲ್ಲಿನ ನಮೂದುಗಳ ಪ್ರತಿಗಳನ್ನು ಪ್ರಮಾಣೀಕರಿಸಬಹುದಾದ ವ್ಯಕ್ತಿಗಳು ಮತ್ತು ಹಾಗೆ ಪ್ರಮಾಣೀಕರಿಸಬಹುದಾದ ನಮೂನೆ ಮತ್ತು ಅಂಥ ಪ್ರತಿಗಳ ಸರಬರಾಜಿಗಾಗಿ ವಿಧಿಸಬಹುದಾದ ಚಾರ್ಜುಗಳು;

(ಎಫ್) ಮಾರುಕಟ್ಟೆ ಸಮಿತಿಯ ವ್ಯವಹಾರಗಳಿಗೆ ಸಂಬಂಧಪಟ್ಟಂಥ ವಿಚಾರಣೆಯನ್ನು ಮತ್ತು ಪರಿಶೀಲನೆಯನ್ನು ನಡೆಸತಕ್ಕ ರೀತಿ;

(ಜಿ) ಮಾರುಕಟ್ಟೆ ಸಮಿತಿಯು ಅಥವಾ ಮಂಡಲಿಯು ಯಾವುದೇ ವೆಚ್ಚವನ್ನು ಯಾವ ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೊಳಪಟ್ಟು ಭರಿಸಬಹುದೋ ಆ ನಿರ್ಬಂಧಗಳು ಮತ್ತು ಷರತ್ತುಗಳು;

(ಎಚ್) ಮಾರುಕಟ್ಟೆ ಸಮಿತಿಯು ಅಥವಾ ಮಂಡಲಿಯು ಯಾವ ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೊಳಪಟ್ಟು ಕರಾರುಗಳನ್ನು ಮಾಡಿಕೊಳ್ಳಬಹುದೋ ಆ ನಿರ್ಬಂಧಗಳು ಮತ್ತು ಷರತ್ತುಗಳು;

(ಐ) ಯಾವುದೇ ವಸ್ತುವನ್ನು ಯಾವ ಸಂದರ್ಭಗಳಲ್ಲಿ ಕಲಬೆರಕೆ ಮಾಡಲಾಗಿದೆ ಎಂದು ಭಾವಿಸತಕ್ಕದ್ದೋ ಆ ಸಂದರ್ಭಗಳು;

(ಜೆ) ಈ ಅಧಿನಿಯಮದ ಅಥವಾ ನಿಯಮಗಳ ಮೇರೆಗಿನ ಅಪೀಲುಗಳ ಸಂಬಂಧದಲ್ಲಿ ಸಂದಾಯ ಮಾಡತಕ್ಕ ಫೀಜುಗಳು ಮತ್ತು ಯಾವುದೇ ಇತರ ವಿಷಯದ ಸಂಬಂಧದಲ್ಲಿ ಸಂದಾಯ ಮಾಡತಕ್ಕ ಫೀಜುಗಳು;

(ಕೆ) ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ವೆಚ್ಚದಲ್ಲಿ ಕೈಕೊಳ್ಳಬೇಕೆಂದು ಉದ್ದೇಶಿಸಿರುವ ಕಾಮಗಾರಿಗಳಿಗೆ ಸಂಬಂಧಿಸಿದ ಯೋಜನೆಗಳ ಮತ್ತು ಅಂದಾಜುಗಳ ತಯಾರಿಕೆ ಮತ್ತು ಅಂಥ ಯೋಜನೆಗಳಿಗೆ ಮತ್ತು ಅಂದಾಜುಗಳಿಗೆ ಮಂಜೂರಾತಿ ನೀಡಿಕೆ;

(ಎಲ್) ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ಲೆಕ್ಕಪತ್ರಗಳನ್ನು ಇಡತಕ್ಕ ನಮೂನೆ, ಅಂಥ ಲೆಕ್ಕಪತ್ರಗಳ ಪರಿಶೋಧನೆ, ಪರಿಶೀಲನೆ ಮತ್ತು ಪ್ರಕಟಣೆ, ಅಂಥ ಲೆಕ್ಕ ಪರಿಶೋಧನೆ ಮತ್ತು ಪರಿಶೀಲನೆ, ಲೆಕ್ಕಪತ್ರಗಳ ವಿವರಣೆ ಪತ್ರಗಳ ಪರಿಶೋಧನೆ ಮತ್ತು ಅಂಥ ವಿವರಣ ಪತ್ರಗಳ ಪ್ರತಿಗಳ ಸರಬರಾಜು–ಇವುಗಳ ಬಗ್ಗೆ ವಿಧಿಸತಕ್ಕ ಚಾರ್ಜುಗಳು ಯಾವುವಾದರೂ ಇದ್ದರೆ, ಆ ಚಾರ್ಜುಗಳು;

(ಎಂ) ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ವಾರ್ಷಿಕ ಆಯವ್ಯಯ ಪತ್ರ ಮತ್ತು ಅದರ ವರದಿ ಹಾಗೂ ವಿವರಪಟ್ಟಿಕೆಗಳನ್ನು ತಯಾರಿಸುವುದು ಮತ್ತು ಮಂಜೂರಾತಿಗಾಗಿ ಸಲ್ಲಿಸುವುದು;

(ಎನ್) ಮಾರುಕಟ್ಟೆ ಸಮಿತಿಯ ಅಥವಾ ಮಂಡಲಿಯ ಹೆಚ್ಚುವರಿ ನಿಧಿಗಳ ಹೂಡಿಕೆ ಮತ್ತು ವಿಲೆ;

[1][(ಎನ್1) 64ಎ ಪ್ರಕರಣದ ಮೇರೆಗೆ ನೋಂದಣಿಗಾಗಿ ಕಾರ್ಯವಿಧಾನ ಹಾಗೂ ಫೀಜು;

(ಎನ್2) ರೈತ–ಗ್ರಾಹಕ ಮಾರುಕಟ್ಟೆಯ ಮೂಲ ಸೌಲಭ್ಯಗಳು ಮತ್ತು 72ಎ, 72ಬಿ, 72ಸಿ ಮತ್ತು 72ಇ ಪ್ರಕರಣಗಳ ಮೇರೆಗೆ ಅಪೀಲು;

(ಎನ್3) 84ಎ ಪ್ರಕರಣದ ಮೇರೆಗೆ ವಿವಾದಗಳನ್ನು ಇತ್ಯರ್ಥಗೊಳಿಸುವ ರೀತಿ;

(ಎನ್4) 112ನೇ ಪ್ರಕರಣದ (ಜೆ) ಖಂಡದ ಮೇರೆಗೆ ಕೃಷಿ ಉತ್ಪನ್ನ ಮಾರುಕಟ್ಟೆ ಮಾನಕಗಳ ಸಂಸ್ಥೆಯ (ಬ್ಯೂರೋದ) ಅಧಿಕಾರಗಳು ಮತ್ತು ಪ್ರಕಾರ್ಯಗಳು

(ಎನ್5) 131ಸಿ ಪ್ರಕರಣದ ಮೇರೆಗೆ ಕರಾರು ವ್ಯವಸಾಯ ಪ್ರಾಯೋಜಕರ ನೋಂದಣಿಯ ರೀತಿ;

(ಎನ್6) 131ಸಿ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಮಾಡಿಕೊಳ್ಳಬೇಕಾದ ಕರಾರಿನ ನಿಬಂಧನೆಗಳು ಮತ್ತು ಷರತ್ತುಗಳು;

(ಎನ್7) 131ಸಿ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ವಿವಾದಗಳನ್ನು ಬಗೆಹರಿಸುವ ರೀತಿ][1];

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಓ) ನಿಯಮಿಸಲಾದ ಅಪೀಲು ಪ್ರಾಧಿಕಾರಗಳು ಮತ್ತು ಅಪೀಲುಗಳನ್ನು ಅಥವಾ ಪುನರೀಕ್ಷಣೆ ಅರ್ಜಿಗಳನ್ನು ಯಾವ ಅವಧಿಯೊಳಗೆ ಸಲ್ಲಿಸಬೇಕೆಂಬ ವಿಷಯವೂ ಸೇರಿ ಈ ಅಧಿನಿಯಮದಲ್ಲಿ ಯಾವ ವಿಷಯದ ಬಗ್ಗೆ ಉಪಬಂಧಿಸಿಲ್ಲವೋ ಮತ್ತು ಈ ಅಧಿನಿಯಮದ ಉದ್ದೇಶಗಳನ್ನು ಜಾರಿಗೆ ತರಲು ಉಪಬಂಧಿಸುವುದು ಅವಶ್ಯಕವೆಂದು ರಾಜ್ಯ ಸರ್ಕಾರ ಅಭಿಪ್ರಾಯ ಪಡುವುದೋ ಆ ಯಾವುದೇ ಇತರ ವಿಷಯ.

(3) ಈ ಅಧಿನಿಯಮದ ಮೇರೆಗೆ ಯಾವುದೇ ನಿಯಮವನ್ನು ಪೂರ್ವಾನ್ವಯವಾಗಿ ರಚಿಸಬಹುದು ಮತ್ತು ಅಂಥ ನಿಯಮವನ್ನು ರಚಿಸಿದಾಗ, ಆ ನಿಯಮದ ರಚನೆಯ ಕಾರಣಗಳನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳಲ್ಲಿ ಮಂಡಿಸಲಾಗುವ ಹೇಳಿಕೆಯಲ್ಲಿ ನಿರ್ದಿಷ್ಟಪಡಿಸಿರತಕ್ಕದ್ದು ಮತ್ತು 149ನೇ ಪ್ರಕರಣದ ಮೇರೆಗೆ ಮಾಡಲಾದ ಯಾವುದೇ ಮಾರ್ಪಾಟಿಗೊಳಪಟ್ಟು, ಈ ಅಧಿನಿಯಮದ ಮೇರೆಗೆ ರಚಿಸಲಾದ ಪ್ರತಿಯೊಂದು ನಿಯಮವು ಅದನ್ನು ಈ ಅಧಿನಿಯಮದಲ್ಲಿ ಅಧಿನಿಯಮಿಸಿದ್ದರೆ ಹೇಗೋ ಹಾಗೆ ಅದು ಪರಿಣಾಮಕಾರಿಯಾಗತಕ್ಕದ್ದು.

***147. ವಿನಿಯಮಗಳು.–** (1) ಮಂಡಲಿಯು ಅಧಿಸೂಚನೆಯ ಮೂಲಕ ಈ ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳಿಗೊಳಪಟ್ಟು, ಮತ್ತು ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಈ ಅಧಿನಿಯಮದ ಮೇರೆಗೆ ಮಂಡಲಿಗೆ ವಹಿಸಿರುವ ಪ್ರಕಾರ್ಯಗಳನ್ನು ಕಾರ್ಯಗತಗೊಳಿಸುವ ಸಂಬಂಧದಲ್ಲಿ ವಿನಿಯಮಗಳನ್ನು ರಚಿಸಬಹುದು.

* 61ನೇ ಪ್ರಕರಣದ ಕೆಳಗಿರುವ ಚುಕ್ಕಿ ಗುರುತಿನ ಟಿಪ್ಪಣಿ ನೋಡಿ.

**148. ಉಪವಿಧಿಗಳು.–** (1) ಈ ಅಧಿನಿಯಮದ ಮತ್ತು 146ನೇ ಪ್ರಕರಣದ ಮೇರೆಗೆ ರಚಿಸಲಾದ ನಿಯಮಗಳ ಉಪಬಂಧಗಳಿಗೊಳಪಟ್ಟು ಮತ್ತು [1][ಕೃಷಿ ಮಾರುಕಟ್ಟೆ ನಿರ್ದೇಶಕನ][1] ಪೂರ್ವ ಮಂಜೂರಾತಿಯನ್ನು ಪಡೆದು, ಮಾರುಕಟ್ಟೆ ಸಮಿತಿಯು [2][ನಿಯಮಿಸಿದ ರೀತಿಯಲ್ಲಿ ಪೂರ್ವ ಪ್ರಕಟಣೆಯ ತರುವಾಯ][2] ಮಾರುಕಟ್ಟೆ ಪ್ರದೇಶದಲ್ಲಿ ವ್ಯವಹಾರದ ಮತ್ತು ವ್ಯಾಪಾರದ ಸ್ಥಿತಿಗತಿಗಳ ವಿನಿಯಮನಕ್ಕಾಗಿ ಉಪವಿಧಿಗಳನ್ನು ರಚಿಸಬಹುದು. ಈ ಪ್ರಕರಣದ ಮೇರೆಗೆ ಮಾಡಲಾದ ಪ್ರತಿಯೊಂದು ಉಪವಿಧಿಯನ್ನು ಗೊತ್ತುಪಡಿಸಿದ ರೀತಿಯಲ್ಲಿ ಪ್ರಕಟಿಸತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ ಮತ್ತು ಅದೇ ಅಧಿನಿಯಮವನ್ನು 17-12-1981ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ವಿಶೇಷವಾಗಿ ಮತ್ತು ಹಿಂದೆ ಹೇಳಲಾದ ಉಪಬಂಧಗಳ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ, ಉಪವಿಧಿಗಳಲ್ಲಿ ಈ ಕೆಳಕಂಡವುಗಳ ಬಗ್ಗೆ ಉಪಬಂಧ ಕಲ್ಪಿಸಬಹುದು,–

(i) ಮಾರುಕಟ್ಟೆ ಸಮಿತಿಯ ವ್ಯವಹಾರಗಳ ನಿಯಂತ್ರಣ;

(ii) ಮಾರುಕಟ್ಟೆ ಸಮಿತಿಯ ಉಪಸಮಿತಿಗಳ ವ್ಯವಹಾರಗಳ ನಿಯಂತ್ರಣ;

(iii) ಉಪಸಮಿತಿಗಳಿಗೆ ಮಾರುಕಟ್ಟೆ ಸಮಿತಿಯ ಅಧಿಕಾರಗಳನ್ನು, ಪ್ರಕಾರ್ಯಗಳನ್ನು ಮತ್ತು ಕರ್ತವ್ಯಗಳನ್ನು ವಹಿಸಿಕೊಡುವುದಕ್ಕೆ ಸಂಬಂಧಿಸಿದ ಷರತ್ತುಗಳು;

[1][(iv) XXX][1];

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(v) ಮಾರುಕಟ್ಟೆ ಸಮಿತಿಯ ಅಧಿಕಾರಿಗಳಿಗೆ ಮತ್ತು ನೌಕರರಿಗೆ ಸಮಿತಿಯ ಅಧಿಕಾರಗಳನ್ನು, ಪ್ರಕಾರ್ಯಗಳನ್ನು ಮತ್ತು ಕರ್ತವ್ಯಗಳನ್ನು ವಹಿಸಿಕೊಡುವುದು;

(vi) ಈ ಅಧಿನಿಯಮದ ಮೇರೆಗೆ ಲೈಸನ್ಸ್‌ಗಳ ನೀಡಿಕೆಗೆ, ನವೀಕರಣಕ್ಕೆ, ನಿರಾಕರಣೆಗೆ, ಅಮಾನತ್ತಿಗೆ ಅಥವಾ ರದ್ದಿಯಾತಿಗೆ ಸಂಬಂಧಪಟ್ಟ ಕಾರ್ಯವಿಧಾನ ಮತ್ತು ಮಾರುಕಟ್ಟೆ ಸಮಿತಿಯು ಯಾವ ಸಂದರ್ಭಗಳಲ್ಲಿ ಲೈಸನ್ಸಿನ ಅಮಾನತ್ತನ್ನು ಅಥವಾ ರದ್ದಿಯಾತಿಯನ್ನು ಶೂನ್ಯಗೊಳಿಸಬಹುದು ಎಂಬ ವಿಚಾರ;

(vii) ಮಾರುಕಟ್ಟೆ ಪ್ರದೇಶದೊಳಗೆ ಯಾವುದೇ ಪದೀಯ ಸಾಮರ್ಥ್ಯದಲ್ಲಿ ಮಾರುಕಟ್ಟೆ ಕಾರ್ಯನಿರ್ವಾಹಕನಾಗಿ ವ್ಯಾಪಾರ ಮಾಡುವ ಅಥವಾ ಕಾರ್ಯನಿರ್ವಹಿಸುವ ಬಗ್ಗೆ ಇರುವ ಷರತ್ತುಗಳು;

(viii) ಮಾರಾಟಗಾರರ ಮತ್ತು ಖರೀದಿದಾರರ ನಡುವಿನ ವ್ಯವಹಾರದ ನಿಯಂತ್ರಣ ಮತ್ತು ವಿನಿಯಮನ;

(ix) ನಿಗದಿತ ಕಾಲದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನವನ್ನು ತೂಕ ಮಾಡುವಂತೆ ಒತ್ತಾಯಿಸುವುದು;

(x) ಮಾರಾಟಕ್ಕಾಗಿ ಕಮಿಷನ್ ಏಜೆಂಟನಿಗೆ ಉತ್ಪಾದಕನು ಒಪ್ಪಿಸುವ ಉತ್ಪನ್ನದ ಸಂಬಂಧದಲ್ಲಿ ಆ ಉತ್ಪಾದಕನಿಗೆ ಆ ಕೂಡಲೇ ರಸೀದಿ ನೀಡುವಂತೆ ಒತ್ತಾಯಿಸುವುದು;

(xi) ಮಾರುಕಟ್ಟೆ ಪ್ರದೇಶದಲ್ಲಿ, ಪ್ರಾಂಗಣಗಳಲ್ಲಿ ಅಥವಾ ಮಾರುಕಟ್ಟೆಯ ಮತ್ತು ಉಪಮಾರುಕಟ್ಟೆಯ ಹೊರಗೆ ಅಧಿಸೂಚಿತ ಕೃಷಿ ಉತ್ಪನ್ನದ ಮಾರಾಟದ ಕಾರ್ಯವಿಧಾನ;

(xii) ಮಾರುಕಟ್ಟೆ ಸಮಿತಿಯ ಸಿಬ್ಬಂದಿಯ ನೇರ ಮೇಲ್ವಿಚಾರಣೆಯ ಮೇರೆಗೆ ಪ್ರಾಂಗಣದಲ್ಲಿ ಅಧಿಕೃತ ಕೃಷಿ ಉತ್ಪನ್ನದ ಮಾರಾಟ;

(xiii) ಮಾರಾಟದ ಬಗ್ಗೆ ಒಪ್ಪಂದವಾದ ಕೂಡಲೇ ಮಾರಾಟದ ಒಪ್ಪಂದವನ್ನು ಬರೆದುಕೊಡುವುದು;

(xiv) ಮಾರಾಟದ ಒಪ್ಪಂದವನ್ನು ಬರೆದುಕೊಟ್ಟ ಕೂಡಲೆ ಸರಕುಗಳನ್ನು ಒಪ್ಪಿಸುವುದು;

(xv) ಕಮಿಷನ್ ಏಜೆಂಟನ ಸಹಾಯವಿಲ್ಲದೆ ಉತ್ಪಾದಕನು ಮಾಡಿದ ನೇರ ಖರೀದಿಗಳ ಎಲ್ಲಾ ಸಂದರ್ಭಗಳಲ್ಲಿ ಸರಕುಗಳನ್ನು ಒಪ್ಪಿಸಿಕೊಟ್ಟಾಗ ಖರೀದಿದಾರನು ಮಾರಾಟಗಾರನಿಗೆ ಉತ್ಪನ್ನದ ಬೆಲೆಯನ್ನು ಸಂದಾಯ ಮಾಡುವುದು;

(xvi) ಮಾರಾಟದ ಒಪ್ಪಂದದ ದಿನಾಂಕದಿಂದ ಕಮಿಷನ್ ಏಜೆಂಟನು ಖರೀದಿದಾರನಿಗೆ ಕೊಡಬಹುದಾದ ಗರಿಷ್ಠ ಸಾಲದ ಅವಧಿಯನ್ನು ನಿಗದಿ ಮಾಡುವುದು;

(xvii) ಖರೀದಿದಾರನಿಗೆ ಸರಕುಗಳನ್ನು ಒಪ್ಪಿಸಿದ ಕೂಡಲೆ ಕಮಿಷನ್ ಏಜೆಂಟನು ಉತ್ಪನ್ನದ ಮಾಲೀಕನಿಗೆ ತ್ವರಿತವಾಗಿ ಹಣಸಂದಾಯ ಮಾಡುವಂತೆ ಒತ್ತಾಯಿಸುವುದು;

(xviii) ಕಮಿಷನ್ ಏಜೆಂಟನು ಸಾಲದ ಮೇಲೆ ಖರೀದಿಗೆ ಅವಕಾಶ ಕೊಟ್ಟಿರುವಲ್ಲಿ, ಹಾಗೆ ಖರೀದಿಸಿದ ಸರಕುಗಳ ಬೆಲೆಯ ಸಂದಾಯವು ಸಾಲದ ನಿಬಂಧನೆಗಳಿಗನುಸಾರ ಬಾಕಿಯಾದಾಗ ಅದನ್ನು ಆ ಉಪವಿಧಿಯ ಮೇರೆಗೆ ಸಾಲ ಮರುಪಾವತಿಯ ಬಗ್ಗೆ ಅನುಮತಿಸಿದ ಗರಿಷ್ಠ ಅವಧಿಯ ಮುಕ್ತಾಯವಾಗುವುದಕ್ಕೆ ಮುಂಚೆ ಖರೀದಿದಾರನು ಅದನ್ನು ಕಮಿಷನ್ ಏಜೆಂಟನಿಗೆ ಸಂದಾಯ ಮಾಡುವಂತೆ ಒತ್ತಾಯಿಸುವುದು;

(xix) ಯಾವನೇ ಲೈಸನ್ಸ್‌ದಾರನು, ವ್ಯಾಪಾರಿಯು ಅಥವಾ ಕಮಿಷನ್ ಏಜೆಂಟನು ಮಾರುಕಟ್ಟೆಯ ಪ್ರಾಂಗಣದಲ್ಲಿನ ಮತ್ತು ಹೊರಗಡೆಯ ಅಥವಾ ಮಾರುಕಟ್ಟೆ ಪ್ರದೇಶದ ಉಪಮಾರುಕಟ್ಟೆಯಲ್ಲಿನ ವಹಿವಾಟುಗಳಿಗೆ ಸಂಬಂಧಿಸಿದಂತೆ ಸಂದಾಯವನ್ನು ತಡೆಹಿಡಿದಿರುವಲ್ಲಿ ಅಥವಾ ದಿವಾಳಿಯಾದಲ್ಲಿ ಅಥವಾ ತನ್ನ ಹೊಣೆಗಾರಿಕೆಗಳು ಮತ್ತು ಬಾಧ್ಯತೆಯನ್ನು ನಿರ್ವಹಿಸುವಲ್ಲಿ ಅನ್ಯಥಾ ಅಸಮರ್ಥನಾದಲ್ಲಿ ಅಥವಾ ನಿರಾಕರಿಸಿದಲ್ಲಿ ಅಥವಾ ಉಪೇಕ್ಷಿಸಿದಲ್ಲಿ ಅನುಸರಿಸಬೇಕಾದ

ಕಾರ್ಯವಿಧಾನ ಮತ್ತು ಅಂಥ ವ್ಯಾಪಾರಿಯ ಅಥವಾ ಕಮಿಷನ್ ಏಜೆಂಟನ ಮತ್ತು ಅವನು ಅಂಥ ವ್ಯವಹಾರಗಳನ್ನು ಯಾರೊಡನೆ ಇಟ್ಟುಕೊಂಡಿದ್ದನೋ ಆ ವ್ಯಕ್ತಿಗಳ ಹಕ್ಕುಗಳು, ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳು ಮತ್ತು ಅಂಥ ವ್ಯವಹಾರಗಳನ್ನು ಯಾವ ರೀತಿಯಲ್ಲಿ ಮತ್ತು ಯಾವ ನಿಬಂಧನೆಗಳ ಮೇಲೆ ಮುಕ್ತಾಯಗೊಳಿಸಬೇಕು ಅಥವಾ ವಹಿಸಿಕೊಡಬೇಕು ಎಂಬ ವಿಚಾರ;

(xx) ಮಾರುಕಟ್ಟೆ ಕಾರ್ಯನಿರ್ವಾಹಕರು ಮಾರುಕಟ್ಟೆ ಸಮಿತಿಗೆ ವಿವರ ಪಟ್ಟಿಕೆಗಳನ್ನು, ವರದಿಗಳನ್ನು ಮತ್ತು ತಖ್ತೆಗಳನ್ನು ಸಲ್ಲಿಸುವಂತೆ ಒತ್ತಾಯಿಸುವುದು;

(xxi) ಮಾರುಕಟ್ಟೆ ಕಾರ್ಯನಿರ್ವಾಹಕರ ಲೆಕ್ಕ ಪುಸ್ತಕಗಳನ್ನು ಮತ್ತು ಯಾವುದೇ ಇತರ ಪುಸ್ತಕಗಳನ್ನು, ಕಡತಗಳನ್ನು ಅಥವಾ ದಸ್ತಾವೇಜುಗಳನ್ನು ತಪಾಸಣೆಗಾಗಿ ಹಾಜರುಪಡಿಸುವಂತೆ ಒತ್ತಾಯಿಸುವುದು;

(xxii) ಸರಕುಗಳ ಕಲಬೆರಕೆಯನ್ನು ತಡೆಗಟ್ಟುವುದು;

(xxiii) ಮಾರುಕಟ್ಟೆ ಕಾರ್ಯನಿರ್ವಾಹಕರ ವಿವಿಧ ವರ್ಗಗಳಿಗೆ ನೀಡುವ ಲೈಸನ್ಸುಗಳ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಲೈಸೆನ್ಸ್ ಫೀಜುಗಳು;

(xxiv) 85 ಮತ್ತು 86ನೇ ಪ್ರಕರಣಗಳ ಮೇರೆಗೆ ಕಮಿಷನ್ ಏಜೆಂಟನು ಮತ್ತು ವ್ಯಾಪಾರಿಗಳ ವಿವಿಧ ವರ್ಗದವರು ಠೇವಣಿ ಇಡಬೇಕಾದ ಭದ್ರತಾ ಮೊತ್ತದ ಅಥವಾ ಒದಗಿಸಬೇಕಾದ ಬ್ಯಾಂಕ್ ಖಾತರಿಯ ಮೊತ್ತದ ಶೇಕಡಾವಾರನ್ನು ನಿಗದಿಪಡಿಸುವುದು;

(xxv) ಮಾರುಕಟ್ಟೆ ಸಮಿತಿಯ ಸದಸ್ಯರ ಪ್ರಯಾಣ ಭತ್ಯಗಳು ಮತ್ತು ದಿನಭತ್ಯಗಳು;

(xxvi) ಮಾರುಕಟ್ಟೆ ಕಾರ್ಯನಿರ್ವಾಹಕರು ಅಥವಾ ಇತರ ವ್ಯಕ್ತಿಗಳು ಉಪವಿಧಿಗಳನ್ನು ಉಲ್ಲಂಘಿಸಿದ್ದಕ್ಕಾಗಿ, ಯಾವ ಸಂದರ್ಭಗಳಲ್ಲಿ ಎಚ್ಚರಿಕೆಯನ್ನು ಕೊಡಬಹುದೋ ಅಥವಾ ದಂಡವನ್ನು ವಿಧಿಸಬಹುದೋ ಅಂಥ ಸಂದರ್ಭಗಳು ಮತ್ತು ಆ ಉದ್ದೇಶಕ್ಕಾಗಿ ಅನುಸರಿಸಬೇಕಾದ ಕಾರ್ಯವಿಧಾನ;

(xxvii) 66ನೇ ಪ್ರಕರಣದ ಮೇರೆಗೆ ವ್ಯವಹಾರಗಳ ಸ್ಥಳ ಮತ್ತು ಇತರ ಸ್ಥಳಗಳನ್ನು ಪ್ರವೇಶಿಸುವುದಕ್ಕೆ ಮತ್ತು ಪರಿವೀಕ್ಷಿಸುವುದಕ್ಕೆ ಸಂಬಂಧಪಟ್ಟ ಕಾರ್ಯವಿಧಾನ;

(xxviii) ಉತ್ಪಾದಕನು ಕಮಿಷನ್ ಏಜೆಂಟನ ಸಹಾಯವಿಲ್ಲದೆ, ಖರೀದಿದಾರನಿಗೆ ತನ್ನ ಸರಕುಗಳನ್ನು ನೇರವಾಗಿ ಮಾರಾಟ ಮಾಡಿರುವಾಗ ಇನ್‌ವಾಯ್ಸುಗಳನ್ನು ಮತ್ತು ಬಿಲ್ಲುಗಳನ್ನು ತಯಾರಿಸಿಕೊಡುವ ಮೂಲಕ ಅವನಿಗೆ ಸಹಾಯ ಮಾಡುವುದು;

(xxix) ಪ್ರಾಂಗಣದಲ್ಲಿ ಮಾರುಕಟ್ಟೆ ಕಾರ್ಯನಿರ್ವಾಹಕರ ಪ್ರವೇಶವನ್ನು ವಿನಿಯಮಿಸುವುದು ಮತ್ತು ಅಂತಹ ಕಾರ್ಯನಿರ್ವಾಹಕರ ನಡವಳಿಕೆಯನ್ನು ನಿಯಂತ್ರಿಸುವುದು;

(xxx) ಲೈಸನ್ಸ್ ಅರ್ಜಿಯ ನಮೂನೆ, ವಿವಿಧ ಬಗೆಯ ಲೈಸನ್ಸ್‌ಗಳ ನವೀಕರಣವನ್ನು ಪಡೆಯುವ ಬಗ್ಗೆ ಅರ್ಹತೆಗಳು ಮತ್ತು ಅನರ್ಹತೆಗಳು ಮತ್ತು ಲೈಸನ್ಸು ಅರ್ಜಿಗಳಲ್ಲಿ ನಮೂದಿಸಿದ ನಿರೂಪಣೆಗಳ ಬಗ್ಗೆ ವಿಚಾರಣೆ ನಡೆಸುವ ಮತ್ತು ಅವುಗಳ ಸರಿತನವನ್ನು ಪರಿಶೀಲಿಸುವ ಕಾರ್ಯವಿಧಾನ;

(xxxi) ಪ್ರಾಂಗಣದಲ್ಲಿ ಮಾರುಕಟ್ಟೆ ವ್ಯವಹಾರಗಳನ್ನು ಪ್ರಾರಂಭಿಸುವುದು ಮತ್ತು ಮುಕ್ತಾಯಗೊಳಿಸುವುದು;

(xxxii) ಇಡಬೇಕಾದ ಮತ್ತು ನಿರ್ವಹಿಸಬೇಕಾದ ಪುಸ್ತಕಗಳು, ರಿಜಿಸ್ಟರುಗಳು ಮತ್ತು ದಸ್ತಾವೇಜುಗಳು ಮತ್ತು ಮಾರುಕಟ್ಟೆ ಕಾರ್ಯನಿರ್ವಾಹಕರಿಂದ ಸ್ವೀಕರಿಸಲಾಗುವ ವಿವರ ಪಟ್ಟಿಕೆಗಳಿಂದ ತಯಾರಿಸಲಾಗುವ ತಃಖ್ತೆಗಳನ್ನು ಸಂಕಲಿಸುವುದು ಮತ್ತು ಮಾರುಕಟ್ಟೆ ಕಾರ್ಯನಿರ್ವಾಹಕರು ಇಡಬೇಕಾದ ಮತ್ತು ನಿರ್ವಹಿಸಬೇಕಾದ ರಿಜಿಸ್ಟರುಗಳು, ಪುಸ್ತಕಗಳು ಮತ್ತು ದಸ್ತಾವೇಜುಗಳು;

(xxxiii) ಈ ಅಧಿನಿಯಮದ ಮೇರೆಗೆ ಯಾವ ವಿಷಯದ ಸಂಬಂಧದಲ್ಲಿ ಉಪವಿಧಿಗಳನ್ನು ರಚಿಸತಕ್ಕುದೋ ಅಥವಾ ರಚಿಸಬಹುದೋ ಆ ಯಾವುದೇ ಇತರ ವಿಷಯ.

(3) ಈ ಪ್ರಕರಣದ ಮೇರೆಗೆ ರಚಿಸಲಾದ ಯಾವುದೇ ಉಪವಿಧಿಯನ್ನು, ಉಲ್ಲಂಘಿಸುವ ಯಾವನೇ ವ್ಯಕ್ತಿಯು ಅಪರಾಧ ನಿರ್ಣೀತನಾದ ಮೇಲೆ, ಎರಡು ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದಂತಹ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದೆಂದು ಅದರಲ್ಲಿ ಉಪಬಂಧಿಸಬಹುದು.

(4) (1)ನೇ ಉಪಪ್ರಕರಣದ ಮೇರೆಗೆ ಮಂಜೂರಾತಿಗಾಗಿ [1][ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ][1] ಯಾವುದೇ ಉಪವಿಧಿಯನ್ನು ಸಲ್ಲಿಸಲಾಗಿದ್ದು ಆ ಪ್ರಸ್ತಾವಿತ ಉಪವಿಧಿಯು,–

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎ) ಈ ಅಧಿನಿಯಮ ಅಥವಾ ನಿಯಮಗಳ ಉಪಬಂಧಗಳಿಗೆ ವಿರುದ್ಧವಾಗಿಲ್ಲವೆಂದು;

(ಬಿ) ಉತ್ತಮ ಆಡಳಿತ ಅಗತ್ಯತೆಗಳನ್ನು ಅದು ಪೂರೈಸುವುದೆಂದು 1[ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ]1 ಮನದಟ್ಟಾದರೆ, ಅವನು ಆ ಉಪವಿಧಿಗೆ ಮಂಜೂರಾತಿ ನೀಡಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(5) [1][ಕೃಷಿ ಮಾರುಕಟ್ಟೆ ನಿರ್ದೇಶಕನು][1], ಯಾವುದೇ ತಿದ್ದುಪಡಿ ಅಥವಾ ಉಪವಿಧಿಯನ್ನು ಮಂಜೂರು ಮಾಡಲು ನಿರಾಕರಿಸಿದಲ್ಲಿ, ಅದರ ಕಾರಣಗಳೊಂದಿಗೆ ತನ್ನ ಆದೇಶವನ್ನು ಮಾರುಕಟ್ಟೆ ಸಮಿತಿಗೆ ತಿಳಿಸತಕ್ಕದ್ದು :

ಪರಂತು, ಮಾರುಕಟ್ಟೆ ಸಮಿತಿಗೆ ಸುನಾವಣೆಯ ಯುಕ್ತ ಅವಕಾಶವನ್ನು ಕೊಡದೆ ಅಂತಹ ಆದೇಶವನ್ನು ಮಾಡತಕ್ಕದ್ದಲ್ಲ.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(6) (5)ನೇ ಉಪಪ್ರಕರಣದ ಮೇರೆಗೆ [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] ಹೊರಡಿಸಿದ ಆದೇಶದಿಂದ ಬಾಧಿತವಾದ ಯಾವುದೇ ಮಾರುಕಟ್ಟೆ ಸಮಿತಿಯು, ಮಂಜೂರಾತಿಯ ನಿರಾಕರಣೆಯ ಆದೇಶವು ತನಗೆ ತಲುಪಿದ ದಿನಾಂಕದಿಂದ ತೊಂಬತ್ತು ದಿವಸಗಳೊಳಗೆ, ರಾಜ್ಯ ಸರ್ಕಾರಕ್ಕೆ ಅಪೀಲು ಸಲ್ಲಿಸಬಹುದು ಮತ್ತು ಅಂಥ ಅಪೀಲಿನ ಮೇಲೆ ರಾಜ್ಯ ಸರ್ಕಾರವು ಕೈಗೊಳ್ಳುವ ನಿರ್ಣಯವು ಅಂತಿಮವಾಗಿರತಕ್ಕದ್ದು ಮತ್ತು ಅದನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಲು ಅವಕಾಶವಿರತಕ್ಕದ್ದಲ್ಲ.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**149. ಮಾರುಕಟ್ಟೆಗಳ ಸ್ಥಾಪನೆಯ ತರುವಾಯದ ಮೊದಲನೆಯ ಉಪವಿಧಿಗಳು.-** (1) [1][ಈ ಅಧಿನಿಯಮವು ಪ್ರಾರಂಭವಾದ ತರುವಾಯ 4ನೇ ಪ್ರಕರಣದ ಮೇರೆಗೆ ಮಾರುಕಟ್ಟೆ ಪ್ರದೇಶವೆಂದು ಘೋಷಿಸಲಾದ ಮಾರುಕಟ್ಟೆ ಪ್ರದೇಶಕ್ಕಾಗಿ 10ನೇ ಪ್ರಕರಣದ ಮೇರೆಗೆ ರಚಿತವಾದ ಮೊದಲನೆಯ ಮಾರುಕಟ್ಟೆ ಸಮಿತಿಗಾಗಿ][1] ಅಧ್ಯಕ್ಷರನ್ನು ನಾಮನಿರ್ದೇಶಿಸಿದ ಕೂಡಲೇ ಸಾಧ್ಯವಾದಷ್ಟು ಬೇಗನೆ [2][ಕೃಷಿ ಮಾರುಕಟ್ಟೆ ನಿರ್ದೇಶಕನು][2] ಸದರಿ ಅಧ್ಯಕ್ಷರೊಂದಿಗೆ ಸಮಾಲೋಚಿಸಿದ ಮೇಲೆ ಮತ್ತು ಮಾರುಕಟ್ಟೆ ಪ್ರದೇಶದ ಸ್ಥಳೀಯ ಪರಿಸ್ಥಿತಿಗಳನ್ನು ಗಮನಕ್ಕೆ ತೆಗೆದುಕೊಂಡು, ಈ ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳ ಅನುಸಾರವಾಗಿ ಮೊದಲನೆಯ ಉಪವಿಧಿಯನ್ನು ರಚಿಸಬಹುದು. ಹಾಗೆ ರಚಿತವಾದ ಮೊದಲನೆಯ ಉಪವಿಧಿಗಳು, ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದಾಗ್ಯೂ, 148ನೇ ಪ್ರಕರಣದ ಮೇರೆಗೆ ರಚಿಸಲಾದ ಯಾವುದೇ ಉಪವಿಧಿಗಳ ಮೂಲಕ ರದ್ದಾಗುವವರೆಗೆ ಅಥವಾ ತಿದ್ದುಪಡಿಯಾಗುವವರೆಗೆ ಅವುಗಳನ್ನು ಮಾರುಕಟ್ಟೆ ಸಮಿತಿಯು ರಚಿಸಿದ ಉಪವಿಧಿಗಳೆಂದು ಭಾವಿಸತಕ್ಕದ್ದು.

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಮೊದಲನೆಯ ಉಪವಿಧಿಗಳನ್ನು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಪ್ರಕಟಿಸತಕ್ಕದ್ದು.

**150. ಉಪವಿಧಿಗಳನ್ನು ರಚಿಸಲು ಅಥವಾ ತಿದ್ದುಪಡಿ ಮಾಡಲು [1][ಕೃಷಿ ಮಾರುಕಟ್ಟೆ ನಿರ್ದೇಶಕನ][1] ಅಧಿಕಾರ.-** (1) ಮಾರುಕಟ್ಟೆಯ ಅಥವಾ ಮಾರುಕಟ್ಟೆ ಸಮಿತಿಯ ಹಿತಾಸಕ್ತಿಯಲ್ಲಿ ಯಾವುದೇ ಉಪವಿಧಿಯನ್ನು ರಚಿಸುವುದು ಅಥವಾ ಯಾವುದೇ ಉಪವಿಧಿಯನ್ನು ತಿದ್ದುಪಡಿ ಮಾಡುವುದು ಅವಶ್ಯಕ ಅಥವಾ ಅಪೇಕ್ಷಣೀಯವೆಂದು [1][ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ][1] ಕಂಡುಬಂದರೆ, ಅವನು ಆದೇಶವನ್ನು ಹೊರಡಿಸಿ ತಾನು ನಿರ್ದಿಷ್ಟಪಡಿಸಬಹುದಾದಂಥ ಅವಧಿಯೊಳಗೆ ಉಪವಿಧಿಯನ್ನು ರಚಿಸುವಂತೆ ಅಥವಾ ಉಪವಿಧಿಯನ್ನು ತಿದ್ದುಪಡಿ ಮಾಡುವಂತೆ ಸಂಬಂಧಪಟ್ಟ ಮಾರುಕಟ್ಟೆ ಸಮಿತಿಯನ್ನು ಅಗತ್ಯಪಡಿಸಬಹುದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಮಾರುಕಟ್ಟೆ ಸಮಿತಿಯು, ಅಂಥ ಉಪವಿಧಿಯನ್ನು ರಚಿಸಲು ಅಥವಾ ಉಪವಿಧಿಯನ್ನು ಹಾಗೆ ತಿದ್ದುಪಡಿ ಮಾಡಲು ಮತ್ತು ಅಂತಹ ಆದೇಶದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ 148ನೇ ಪ್ರಕರಣದ ಉಪಬಂಧಗಳ ಅನುಸಾರವಾಗಿ ಮಂಜೂರಾತಿ ಕೋರಿ [1][ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ][1] ಅದನ್ನು ಕಳುಹಿಸಲು ತಪ್ಪಿದರೆ, [1][ಕೃಷಿ ಮಾರುಕಟ್ಟೆ ನಿರ್ದೇಶಕನು][1], ಮಾರುಕಟ್ಟೆ ಸಮಿತಿಗೆ [2][XXX][2] ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ತರುವಾಯ, ಆದೇಶಗಳ ಮೂಲಕ, ಅಂಥ ಉಪವಿಧಿಯನ್ನು ರಚಿಸಬಹುದು ಅಥವಾ ಉಪವಿಧಿಗೆ ಹಾಗೆ ತಿದ್ದುಪಡಿ ಮಾಡಬಹುದು ಮತ್ತು ಆ ತರುವಾಯ (3)ನೇ ಉಪಪ್ರಕರಣದ ಮೇರೆಗಿನ ಯಾವುದೇ ಆದೇಶಕ್ಕೊಳಪಟ್ಟು, ಅಂಥ ಉಪವಿಧಿಯನ್ನು ಅಥವಾ ಉಪವಿಧಿಯ ಅಂಥ ತಿದ್ದುಪಡಿಯನ್ನು, ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರ, ಮಾರುಕಟ್ಟೆ ಸಮಿತಿಯು ರಚಿಸಿದೆಯೆಂದು ಅಥವಾ ಮಾಡಿದೆಯೆಂದು ಭಾವಿಸತಕ್ಕದ್ದು. ಈ ಉಪಪ್ರಕರಣಗಳ ಮೇರೆಗೆ [1][ಕೃಷಿ ಮಾರುಕಟ್ಟೆ ನಿರ್ದೇಶಕರು][1] ಮಾಡಿದ ಪ್ರತಿಯೊಂದು ಆದೇಶವನ್ನು ರಾಜಪತ್ರದಲ್ಲಿ ಪ್ರಕಟಿಸತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 4ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(3) (2)ನೇ ಉಪಪ್ರಕರಣದ ಮೇರೆಗೆ, [1][ಕೃಷಿ ಮಾರುಕಟ್ಟೆ ನಿರ್ದೇಶಕನು][1] ಹೊರಡಿಸಿದ ಯಾವುದೇ ಆದೇಶದ ವಿರುದ್ಧ ಅಂಥ ಆದೇಶದ ಪ್ರಕಟಣೆಯ ದಿನಾಂಕದಿಂದ ಅರವತ್ತು ದಿವಸಗಳೊಳಗೆ ರಾಜ್ಯ ಸರ್ಕಾರಕ್ಕೆ ಅಪೀಲನ್ನು ಸಲ್ಲಿಸಲು ಅವಕಾಶವಿರತಕ್ಕದ್ದು ಮತ್ತು ಅಂಥ ಅಪೀಲಿನ ಮೇಲೆ ರಾಜ್ಯ ಸರ್ಕಾರದ ಆದೇಶವು ಅಂತಿಮವಾಗಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 35ರ ಮೂಲಕ 17-6-1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**151. ಸ್ಥಾಯೀ ಆದೇಶಗಳನ್ನು ಮಾಡುವ ಅಧಿಕಾರ.**– (1) ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಲಾದ ನಿಯಮಗಳ ಮತ್ತು ಉಪವಿಧಿಗಳ ಉಪಬಂಧಗಳಿಗೊಳಪಟ್ಟು, ಪ್ರತಿಯೊಂದು ಮಾರುಕಟ್ಟೆ ಸಮಿತಿಯು, ಠರಾವುಗಳ ಮೂಲಕ, ವ್ಯವಹಾರಗಳ ಯಾವುದೇ ವರ್ಗದ ಅಥವಾ ಮಾರುಕಟ್ಟೆ ಕಾರ್ಯನಿರ್ವಾಹಕರ ಯಾವುದೇ ವರ್ಗದ ವಿನಿಯಮನದ ಸಂಬಂಧದಲ್ಲಿ ಸ್ಥಾಯೀ ಆದೇಶಗಳನ್ನು ಮಾಡಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ಮಾಡಲಾದ ಪ್ರತಿಯೊಂದು ಸ್ಥಾಯಿ ಆದೇಶವನ್ನು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಪ್ರಕಟಿಸತಕ್ಕದ್ದು.

**152. ಈ ಅಧಿನಿಯಮವನ್ನು ಜಾರಿಗೆ ತರಲು ಅಗತ್ಯವಿರುವ ಆದೇಶಗಳು:**– ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದಾಗ್ಯೂ, ರಾಜ್ಯ ಸರ್ಕಾರವು ರಾಜಪತ್ರದಲ್ಲಿ ಪ್ರಕಟಿಸುವ ಆದೇಶದ ಮೂಲಕ,–

(ಎ) ಈ ಅಧಿನಿಯಮದ ಉಪಬಂಧಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದಕ್ಕಾಗಿ;

(ಬಿ) ಈ ಅಧಿನಿಯಮದ ಉಪಬಂಧಗಳಿಗೆ ಪರಿವರ್ತನೆಗೊಳ್ಳುವ ಸಂಬಂಧದಲ್ಲಿ ಅಥವಾ ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಉದ್ಭವಿಸುವ ತೊಂದರೆಗಳ ನಿವಾರಣೆಗಾಗಿ;

(ಸಿ) ಯಾವುದೇ ನ್ಯಾಯಾಲಯದ ಅಥವಾ ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯ ಅಧಿಕಾರಗಳನ್ನು ವ್ಯತ್ಯಾಸಗೊಳಿಸಲು ಮೇಲ್ಕಂಡ ಯಾವುದೇ ವಿಷಯದ ಸಂಬಂಧದಲ್ಲಿ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವಷ್ಟು ಮಟ್ಟಿಗೆ, ಮತ್ತು ಅಂಥ ಆದೇಶದಲ್ಲಿ ನಿರ್ದಿಷ್ಟ ಪಡಿಸಬಹುದಾದಂಥ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಲು ಹೊಸ ನ್ಯಾಯಾಲಯಗಳಿಗೆ ಅಥವಾ ಇತರ ಪ್ರಾಧಿಕಾರಗಳಿಗೆ ಅಧಿಕಾರ ನೀಡುವುದಕ್ಕಾಗಿ

– ತನಗೆ ಅವಶ್ಯವೆಂದು ಅಥವಾ ಯುಕ್ತವೆಂದು ಕಂಡುಬರುವಂಥ ಉಪಬಂಧಗಳನ್ನು ರಚಿಸಬಹುದು.

(2) (1)ನೇ ಉಪಪ್ರಕರಣದ ಮೇರೆಗಿನ ಯಾವುದೇ ಆದೇಶದಿಂದ ರಚಿಸಲಾದ ಉಪಬಂಧಗಳು, 149ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, ಈ ಅಧಿನಿಯಮದ ಮೂಲಕ ಅಧಿನಿಯಮಿತವಾಗಿದ್ದರೆ ಹೇಗೋ ಹಾಗೆ ಪರಿಣಾಮಕಾರಿಯಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಪ್ರಾರಂಭದ ದಿನಾಂಕಕ್ಕೆ ಮೊದಲಲ್ಲದ ಯಾವುದೇ ದಿನಾಂಕಕ್ಕೆ ಪೂರ್ವಾನ್ವಯವಾಗುವಂತೆ ಯಾವುದೇ ಅಂಥ ಆದೇಶವನ್ನು ಮಾಡಬಹುದು:

ಪರಂತು, ಅಂಥ ಯಾವುದೇ ಆದೇಶದ ಯಾವ ಭಾಗವು ಅದರ ಯಾವುದೇ ಉಪಬಂಧವನ್ನು ಆ ಆದೇಶವನ್ನು ಮಾಡುವುದಕ್ಕೆ ಮುಂಚಿನ ಯಾವುದೇ ದಿನಾಂಕಕ್ಕೆ ಪೂರ್ವಾನ್ವಯವಾಗುವ ಹಾಗೆ ಮಾಡುವುದೋ ಆ ಆದೇಶದ ಆ ಭಾಗದ ನಿಮಿತ್ತ ಯಾವನೇ ವ್ಯಕ್ತಿಯನ್ನು ಯಾವುದೇ ಅಪರಾಧದ ಬಗ್ಗೆ ತಪ್ಪಿತಸ್ಥನೆಂದು ಭಾವಿಸತಕ್ಕದ್ದಲ್ಲ.

[1][**152ಎ. ಅನುಸೂಚಿಯ ತಿದ್ದುಪಡಿ ಮಾಡುವ ಅಧಿಕಾರ.**– ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಕೃಷಿ ಉತ್ಪನ್ನದ ಬಾಬುಗಳಿಗೆ ಯಾವುದೇ ಬಾಬನ್ನು ಸೇರಿಸಬಹುದು, ಯಾವುದೇ ಬಾಬನ್ನು ತಿದ್ದುಪಡಿ ಮಾಡಬಹುದು ಅಥವಾ ಯಾವುದೇ ಬಾಬನ್ನು ತೆಗೆದುಹಾಕಬಹುದು ಮತ್ತು ಆ ತರುವಾಯ ಆ ಅನುಸೂಚಿಯನ್ನು ತದನುಸಾರವಾಗಿ ತಿದ್ದುಪಡಿ ಮಾಡಲಾಗಿದೆ ಎಂದು ಭಾವಿಸತಕ್ಕದ್ದು.][1]

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**153. [1][ನಿಯಮಗಳು, ಆದೇಶಗಳು][1] ಮತ್ತು ಅಧಿಸೂಚನೆಗಳನ್ನು ವಿಧಾನ ಮಂಡಲದ ಮುಂದೆ ಮಂಡಿಸುವುದು.**– ಈ ಅಧಿನಿಯಮದ ಮೇರೆಗೆ ರಚಿಸಲಾದ ಪ್ರತಿಯೊಂದು ನಿಯಮವನ್ನು ಅಥವಾ [2][133ನೇ ಪ್ರಕರಣದ [3][ಅಥವಾ 152ಎ ಪ್ರಕರಣದ][3] ಮೇರೆಗೆ ಹೊರಡಿಸಿದ ಪ್ರತಿಯೊಂದು ಅಧಿಸೂಚನೆಯನ್ನು][2] ಮತ್ತು 152ನೇ ಪ್ರಕರಣದ ಮೇರೆಗೆ ಹೊರಡಿಸಲಾದ ಪ್ರತಿಯೊಂದು ಆದೇಶವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗ ರಾಜ್ಯವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದಂಥ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಅದನ್ನು ಹಾಗೆ ಇಡಲಾದ ಅಧಿವೇಶನದ ನಿಕಟೋತ್ತರದ ಅಧಿವೇಶನಗಳ ಮುಕ್ತಾಯಕ್ಕೆ ಮುಂಚೆ ಆ [1][ನಿಯಮ, ಅಧಿಸೂಚನೆ ಅಥವಾ ಆದೇಶವನ್ನು][1] ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ [1][ನಿಯಮ, ಅಧಿಸೂಚನೆ ಅಥವಾ ಆದೇಶವು][1] ಆ ತರುವಾಯ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು, ಆ [1][ನಿಯಮ, ಅಧಿಸೂಚನೆ ಅಥವಾ ಆದೇಶದ][1] ಮೇರೆಗೆ ಆ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

1. 1976ರ ಅಧಿನಿಯಮ ಸಂಖ್ಯೆ 47ರ ಮೂಲಕ 22-6-1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1976ರ ಅಧಿನಿಯಮ ಸಂಖ್ಯೆ 47ರ ಮೂಲಕ 22-6-1976ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**154. ನಿರಸನ ಮತ್ತು ಉಳಿಸುವಿಕೆಗಳು.-** (1) ಬಳ್ಳಾರಿ ಜಿಲ್ಲೆಯಲ್ಲಿ ಜಾರಿಯಲ್ಲಿರುವ ಮದ್ರಾಸ್ ವಾಣಿಜ್ಯ ಬೆಳೆಗಳ ಮಾರುಕಟ್ಟೆಗಳ ಅಧಿನಿಯಮ, 1933 (1933ರ ಮದ್ರಾಸ್ ಅಧಿನಿಯಮ XX) [1][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಮದ್ರಾಸ್ ವಾಣಿಜ್ಯ ಬೆಳೆಗಳ ಮಾರುಕಟ್ಟೆ ಅಧಿನಿಯಮ, 1933 (1933ರ ಮದ್ರಾಸ್ ಅಧಿನಿಯಮ XX), [1][ಬೆಳಗಾಂ][1] ಪ್ರದೇಶದಲ್ಲಿ ಜಾರಿಯಲ್ಲಿರುವ ಮುಂಬಯಿ ಕೃಷಿ ಉತ್ಪನ್ನ ಮಾರುಕಟ್ಟೆ ಅಧಿನಿಯಮ, 1939 (1939ರ ಮುಂಬಯಿ ಅಧಿನಿಯಮ XXII), [1][ಗುಲ್ಬರ್ಗಾ][1] ಪ್ರದೇಶದಲ್ಲಿ ಜಾರಿಯಲ್ಲಿರುವ ಹೈದರಾಬಾದ್ ಕೃಷಿ ಮಾರುಕಟ್ಟೆ ಅಧಿನಿಯಮ, 1339 ಫಸಲಿ (1339 ಫಸಲಿ ಹೈದರಾಬಾದ್ ಅಧಿನಿಯಮ II), ಮೈಸೂರು ಪ್ರದೇಶದಲ್ಲಿ ಜಾರಿಯಲ್ಲಿರುವ ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ಅಧಿನಿಯಮ, 1939 (1939ರ ಮೈಸೂರು ಅಧಿನಿಯಮ XVI) ಮತ್ತು ಕೊಡಗು ಜಿಲ್ಲೆಯಲ್ಲಿ ಜಾರಿಯಲ್ಲಿರುವ ಕೊಡಗು ಕೃಷಿ ಉತ್ಪನ್ನ ಮಾರುಕಟ್ಟೆ ಅಧಿನಿಯಮ, 1956 (1956ರ ಕೊಡಗು ಅಧಿನಿಯಮ VII) ಇವುಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ಪರಂತು, ಅಂಥ ನಿರಸನವು,-

(ಎ) ಹಾಗೆ ನಿರಸಿತವಾದ ಅಧಿನಿಯಮಿತಿಗಳ ಯಾವುದೇ ಅಧಿನಿಯಮದ ಪೂರ್ವ ಪ್ರವರ್ತನೆಯನ್ನು ಬಾಧಿಸತಕ್ಕದ್ದಲ್ಲ ಮತ್ತು ಅಂಥ ಯಾವುದೇ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅವುಗಳ ಅಡಿಯಲ್ಲಿ ಮಾಡಲಾದ (ಯಾವುದೇ ನೇಮಕಾತಿ, ಪ್ರತ್ಯಾಯೋಜನೆ ಅಥವಾ ಘೋಷಣೆ, ಹೊರಡಿಸಲಾದ ಅಧಿಸೂಚನೆ, ಆದೇಶ, ನಿಯಮ, ನಿರ್ದೇಶನ ಅಥವಾ ನೋಟೀಸು, ರಚಿಸಲಾದ ಉಪವಿಧಿಗಳು, ಸ್ಥಾಪಿಸಲಾದ ಅಥವಾ ಅಧಿಸೂಚಿಸಲಾದ ಮಾರುಕಟ್ಟೆ ಪ್ರದೇಶ, ಮಾರುಕಟ್ಟೆಗಳು, ಉಪಮಾರುಕಟ್ಟೆ ಪ್ರಾಂಗಣಗಳು, ಮಂಜೂರಾದ ಲೈಸನ್ಸ್‌ಗಳು, ವಿಧಿಸಲಾದ ಮತ್ತು ಸಂಗ್ರಹಿಸಲಾದ ಫೀಜುಗಳು, ಬರೆದುಕೊಡಲಾದ ಪತ್ರಗಳು, ಸ್ಥಾಪಿಸಲಾದ ಅಥವಾ ರಚಿಸಲಾದ ಯಾವುದೇ ನಿಧಿ) ಇವುಗಳೂ ಸೇರಿ ಮಾಡಲಾದ ಯಾವುದೇ ಕಾರ್ಯ ಅಥವಾ ತೆಗೆದುಕೊಳ್ಳಲಾದ ಕ್ರಮವು ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗಿಲ್ಲದಷ್ಟು ಮಟ್ಟಿಗೆ ಅವುಗಳನ್ನು ಈ ಅಧಿನಿಯಮದ ಸಂವಾದಿ ಉಪಬಂಧಗಳ ಮೇರೆಗೆ ಮಾಡಲಾಗಿದೆಯೆಂದು ಅಥವಾ ಕೈಗೊಳ್ಳಲಾಗಿದೆಯೆಂದು ಭಾವಿಸತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಕೊಂಡ ಯಾವುದೇ ಕ್ರಮದ ಮೂಲಕ ಅವುಗಳನ್ನು ರದ್ದುಗೊಳಿಸುವ ಹೊರತು ಮತ್ತು ರದ್ದುಗೊಳಿಸುವವರೆಗೆ ಅವು ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು;

(ಬಿ) ಹಿಂದಿನ ಪರಂತುಕದಲ್ಲಿ ಮಾಡಿರುವ ನಿರ್ದಿಷ್ಟ ವಿಷಯಗಳ ಪ್ರಸ್ತಾವವು, ನಿರಸಿತ ಅಧಿನಿಯಮಿತಿಗಳ ಸಂಬಂಧದಲ್ಲಿ, ಈ ಅಧಿನಿಯಮಕ್ಕೆ 1899ರ [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮದ (1899ರ [1][ಕರ್ನಾಟಕ][1] ಅಧಿನಿಯಮ 3) 6ನೇ ಪ್ರಕರಣವು ಸಾಮಾನ್ಯವಾಗಿ ಅನ್ವಯವಾಗುವುದನ್ನು ಬಾಧಿಸತಕ್ಕದ್ದಲ್ಲ ಮತ್ತು ಸದರಿ ಅಧಿನಿಯಮದ 8ನೇ ಮತ್ತು 24ನೇ ಪ್ರಕರಣಗಳು ಈ ಅಧಿನಿಯಮದ ಮೂಲಕ ನಿರಸಿತವಾಗಿದ್ದರೆ ಮತ್ತು ಪುನರ್ ಅಧಿನಿಯಮಿತವಾಗಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು;

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಸಿ) ನಿರಸಿತ ಅಧಿನಿಯಮಿತಿಗಳ ಮೇರೆಗೆ ರಚಿಸಲಾಗಿರುವ ಎಲ್ಲಾ ಮಾರುಕಟ್ಟೆ ಸಮಿತಿಗಳು, ನೇಮಕಗೊಂಡ ಅಥವಾ ಚುನಾಯಿತರಾದ ಅಂಥ ಸಮಿತಿಗಳ ಸದಸ್ಯರು ಮತ್ತು ಚುನಾಯಿತರಾದ ಅಥವಾ ನೇಮಕಗೊಂಡ ಅಧ್ಯಕ್ಷ ಮತ್ತು ಉಪಾಧ್ಯಕ್ಷರು, [1][1969ರ ಜುಲೈ 19ನೇ ದಿನಾಂಕದವರೆಗೆ][1]ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಲಾದ ನಿಯಮಗಳ ಉಪಬಂಧಗಳ ಮೂಲಕ ಅನುಕ್ರಮವಾಗಿ ಅಂಥ ಸಮಿತಿಗಳ, ಮಾರುಕಟ್ಟೆ ಸಮಿತಿಗಳ ಸದಸ್ಯರಿಗೆ, ಅಧ್ಯಕ್ಷರಿಗೆ ಮತ್ತು ಉಪಾಧ್ಯಕ್ಷರಿಗೆ ವಿಧಿಸಲಾಗುವ ಹೊಣೆಗಾರಿಕೆಗಳಿಗೊಳಪಟ್ಟು ಅವರು ತಮಗೆ ಪ್ರದತ್ತವಾಗಿರುವ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು;

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಡಿ) ಪೂರ್ವೋಕ್ತ ಪರಂತುಕದ ಮೇರೆಗೆ, ಕಾರ್ಯವನ್ನು ನಿರ್ವಹಿಸುತ್ತಿರುವ ಮಾರುಕಟ್ಟೆ ಸಮಿತಿಯ ಸದಸ್ಯರ ಸ್ಥಾನಗಳಲ್ಲಿ ಅಥವಾ ಮಾರುಕಟ್ಟೆ ಸಮಿತಿಗಳಲ್ಲಿ ಅಥವಾ ಮಾರುಕಟ್ಟೆ ಸಮಿತಿಗಳ ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಪದದಲ್ಲಿ ಉಂಟಾದ ಆಕಸ್ಮಿಕ ಖಾಲಿ ಸ್ಥಾನಗಳನ್ನು [1][1969ರ ಜುಲೈ19ರ ವರೆಗೆ][1] ಭರ್ತಿ ಮಾಡತಕ್ಕದ್ದು ಮತ್ತು ಅಂಥ ಖಾಲಿಸ್ಥಾನಗಳನ್ನು ಭರ್ತಿ ಮಾಡುವ ಸಂಬಂಧದಲ್ಲಿನ ಎಲ್ಲಾ ವಿಷಯಗಳನ್ನು ಈ ಅಧಿನಿಯಮವು ಜಾರಿಗೆ ಬರುವ ದಿನಾಂಕಕ್ಕೆ ತತ್‌ಪೂರ್ವದಲ್ಲಿ ಜಾರಿಯಲ್ಲಿದ್ದಂತೆ ಅಂಥ ಖಾಲಿ ಸ್ಥಾನಗಳನ್ನು ಭರ್ತಿ ಮಾಡುವುದನ್ನು ನಿಯಂತ್ರಿಸುವ ಉಪಬಂಧಗಳಿಗೆ ಅನುಸಾರವಾಗಿ ವಿನಿಯಮಗೊಳಿಸತಕ್ಕದ್ದು:

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಪರಂತುಕಗಳು XXX][1]

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಸದರಿ ಉಪಪ್ರಕರಣದ [1][ಪರಂತುಕದ][1] ಉಪಬಂಧಗಳನ್ನು ಜಾರಿಗೊಳಿಸುವ ಉದ್ದೇಶಗಳಿಗಾಗಿ, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, –

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎ) ನಿರಸಿತ ಅಧಿನಿಯಮಿತಿಗಳ ಮೇರೆಗೆ ರಚಿಸಲಾದ ನಿಯಮಗಳು, ಹೊರಡಿಸಲಾದ ಅಧಿಸೂಚನೆಗಳು ಮತ್ತು ಆದೇಶಗಳ ಪೈಕಿ ಕೆಲವನ್ನು ಬಿಟ್ಟುಬಿಡುವುದು, ಅವುಗಳಿಗೆ ಕೆಲವನ್ನು ಸೇರಿಸುವುದು ಮತ್ತು ಅವುಗಳನ್ನು ಅಳವಡಿಸುವುದು ಅಥವಾ ಮಾರ್ಪಡಿಸುವುದು;

(ಬಿ) ಸದರಿ ಅಧಿಸೂಚನೆಯಲ್ಲಿ ಹೇಳಿರಬಹುದಾದ ಯಾವುದೇ ನಿರಸಿತ ಅಧಿನಿಯಮಿತಿಗಳ ಅಥವಾ ಯಾವುದೇ ನಿಯಮಗಳ, ಅಧಿಸೂಚನೆಗಳ ಅಥವಾ ಅದರ ಮೇರೆಗೆ ಹೊರಡಿಸಲಾದ ಆದೇಶಗಳ ಮೇರೆಗೆ ಚಲಾಯಿಸತಕ್ಕಂಥ ಪ್ರಕಾರ್ಯಗಳನ್ನು ಚಲಾಯಿಸುವುದಕ್ಕೆ ಸಕ್ಷಮವಾದ ಪ್ರಾಧಿಕಾರ, ಪದ ಅಥವಾ ಸಕ್ಷಮನಾದ ವ್ಯಕ್ತಿಯನ್ನು ನಿರ್ದಿಷ್ಟಪಡಿಸುವುದು

– ಇವುಗಳ ಬಗ್ಗೆ ಅವಶ್ಯಕವೆಂದು ಅಥವಾ ಸೂಕ್ತವೆಂದು ಕಂಡುಬರುವಂಥ ಉಪಬಂಧಗಳನ್ನು ರಚಿಸಬಹುದು.

[1][**154ಎ. ತಾತ್ಕಾಲೀನ ಉಪಬಂಧಗಳು.**– (1) ಈ ಅಧಿನಿಯಮದಲ್ಲಿ ಅಥವಾ 154ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ನಿರಸಿತವಾದ ಯಾವುದೇ ಅಧಿನಿಯಮಿತಿಗಳಲ್ಲಿ ಅಥವಾ ಇತರ ಯಾವುದೇ ಕಾನೂನಿನಲ್ಲಿ ಏನೇ ಅಡಕವಾಗಿದ್ದರೂ,–

1. 1969ರ ಅಧಿನಿಯಮ ಸಂಖ್ಯೆ 19ರ ಮೂಲಕ 1-5-1968 ರಿಂದ ಜಾರಿಗೆ ಬರುವಂತೆ 154ಎ ಪ್ರಕರಣ ಸೇರಿಸಲಾಗಿದೆ.

(ಎ) 1969ರ ಜುಲೈ 19ನೇ ದಿನಾಂಕದಂದು, 154ನೇ ಪ್ರಕರಣದ (1)ನೇ ಉಪಪ್ರಕರಣದ ಪರಂತುಕದ (ಸಿ) ಖಂಡದ ಅಡಿಯಲ್ಲಿ ಮುಂದುವರಿಯುತ್ತಿರುವ, ಪ್ರತಿಯೊಂದು ಮಾರುಕಟ್ಟೆ ಸಮಿತಿಯ ಸದಸ್ಯರ ಮತ್ತು ಅದರ ಅಧ್ಯಕ್ಷನ ಮತ್ತು ಉಪಾಧ್ಯಕ್ಷನ ಪದಾವಧಿಯು ಅಂತ್ಯಗೊಳ್ಳತಕ್ಕದ್ದು ಮತ್ತು ಸದರಿ ದಿನಾಂಕದಿಂದ ಜಾರಿಗೆ ಬರುವಂತೆ, ಮಾರುಕಟ್ಟೆ ಸಮಿತಿಗೆ, ಅಧ್ಯಕ್ಷ, ಉಪಾಧ್ಯಕ್ಷನಿಗೆ ಮತ್ತು ಮಾರುಕಟ್ಟೆ ಸಮಿತಿಯು ರಚಿಸಿದ ಯಾವುದೇ ಉಪಸಮಿತಿಗೆ ಅಥವಾ ಇತರ ನಿಕಾಯಕ್ಕೆ ಪ್ರದತ್ತವಾದ ಅಧಿಕಾರಗಳು ಮತ್ತು ವಿಧಿಸಲಾದ ಕರ್ತವ್ಯಗಳನ್ನು ಈ ಉಪಪ್ರಕರಣದ ವಿವರಣೆಯಲ್ಲಿ ಉಲ್ಲೇಖಿತನಾದ ಆಡಳಿತಾಧಿಕಾರಿಯು ಚಲಾಯಿಸತಕ್ಕದ್ದು ಮತ್ತು ನೆರವೇರಿಸತಕ್ಕದ್ದು;

(ಬಿ) 1969ರ ಜುಲೈ 19ನೇ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ ಮಾರುಕಟ್ಟೆ ಸಮಿತಿಯನ್ನು 11ನೇ ಪ್ರಕರಣದ ಉಪಬಂಧಗಳ ಅನುಸಾರವಾಗಿ ರಚಿಸತಕ್ಕದ್ದು;

(ಸಿ) ಆಡಳಿತಾಧಿಕಾರಿಯು 11ನೇ ಪ್ರಕರಣದ ಅಡಿಯಲ್ಲಿ ರಚಿಸಲಾಗುವ ಮಾರುಕಟ್ಟೆ ಸಮಿತಿಯ ಮೊದಲ ಸಭೆಯ ದಿನಾಂಕಕ್ಕೆ ನಿಕಟಪೂರ್ವದ ದಿನಾಂಕದವರೆಗೆ ಪದಧಾರಣ ಮಾಡಿರತಕ್ಕದ್ದು.

**ವಿವರಣೆ:**– ಈ ಉಪಪ್ರಕರಣದ ಉದ್ದೇಶಗಳಿಗಾಗಿ "ಆಡಳಿತಾಧಿಕಾರಿ" ಎಂದರೆ,–

(i) ಯಾವ ಮಾರುಕಟ್ಟೆ ಪ್ರದೇಶದ ಮಾರುಕಟ್ಟೆ ಪ್ರಾಂಗಣವು ಜಿಲ್ಲೆಯ ಕೇಂದ್ರ ಕಾರ್ಯಸ್ಥಾನದಲ್ಲಿ ಇರುವುದೋ ಆ ಪ್ರದೇಶದ ಮಾರುಕಟ್ಟೆ ಸಮಿತಿಯ ಸಂಬಂಧದಲ್ಲಿ ಡೆಪ್ಯುಟಿ ಕಮಿಷನರು;

(ii) ಯಾವ ಮಾರುಕಟ್ಟೆ ಪ್ರದೇಶದ ಮಾರುಕಟ್ಟೆ ಪ್ರಾಂಗಣವು ಜಿಲ್ಲೆಯ ಕೇಂದ್ರ ಕಾರ್ಯಸ್ಥಾನದಿಂದ ಹೊರತಾದ ಕಂದಾಯ ಉಪವಿಭಾಗದ ಕೇಂದ್ರ ಕಾರ್ಯಸ್ಥಾನದಲ್ಲಿ ಇರುವುದೋ ಆ ಪ್ರದೇಶದ ಮಾರುಕಟ್ಟೆ ಸಮಿತಿಯ ಸಂಬಂಧದಲ್ಲಿ ಕಂದಾಯ ಉಪವಿಭಾಗದ ಅಸಿಸ್ಟೆಂಟ್ ಕಮಿಷನರು;

(iii) ಯಾವ ಮಾರುಕಟ್ಟೆ ಪ್ರದೇಶದ ಮಾರುಕಟ್ಟೆ ಪ್ರಾಂಗಣವು ಜಿಲ್ಲಾ ಅಥವಾ ಉಪವಿಭಾಗ ಕೇಂದ್ರ ಕಾರ್ಯಸ್ಥಾನಗಳಿಂದ ಹೊರತಾದ ಯಾವ ತಾಲ್ಲೂಕಿನ ಯಾವುದೇ ಸ್ಥಳದಲ್ಲಿ ಇರುವುದೋ ಆ ಪ್ರದೇಶದ ಮಾರುಕಟ್ಟೆ ಸಮಿತಿಯ ಸಂಬಂಧದಲ್ಲಿ ಅಂಥ ತಾಲ್ಲೂಕಿನ ತಹಸೀಲ್ದಾರರು.

(2) (1)ನೇ ಉಪಪ್ರಕರಣದಲ್ಲಿ ಏನೇ ಅಡಕವಾಗಿದ್ದರೂ, ರಾಜ್ಯ ಸರ್ಕಾರವು 1969ರ ಜುಲೈ 19ನೇ ದಿನಾಂಕದ ನಂತರ ಯಾವುದೇ ಕಾಲದಲ್ಲಿ ಅಧಿಸೂಚನೆಯ ಮೂಲಕ, ಕಾಲಕಾಲಕ್ಕೆ ತಹಸೀಲ್ದಾರರ ದರ್ಜೆಗೆ ಕಡಿಮೆಯಿಲ್ಲದ ದರ್ಜೆಯ ಯಾವನೇ ಅಧಿಕಾರಿಯನ್ನು ಯಾವುದೇ ಮಾರುಕಟ್ಟೆ ಸಮಿತಿಗೆ ಆಡಳಿತಾಧಿಕಾರಿಯಾಗಿರಲು ನೇಮಕ ಮಾಡಬಹುದು ಮತ್ತು ಸದರಿ ಅಧಿಕಾರಿಯು ಈ ಪ್ರಕರಣದ ಉದ್ದೇಶಗಳಿಗಾಗಿ ಸದರಿ ಮಾರುಕಟ್ಟೆ ಸಮಿತಿಯ ಆಡಳಿತಾಧಿಕಾರಿಯಾಗಿರುವುದಾಗಿ ಭಾವಿಸತಕ್ಕದ್ದು.][1]

**155. ನಿರಸಿತ ಅಧಿನಿಯಮಿತಿಗಳ ಮೇರೆಗೆ ಬಿಟ್ಟುಬಿಡಲಾದ ಪ್ರದೇಶಗಳಿಗಾಗಿ ಮಾರುಕಟ್ಟೆ ಸಮಿತಿಗಳನ್ನು ರಚಿಸಿರುವ ಸಂದರ್ಭದಲ್ಲಿ ಸ್ವತ್ತುಗಳ ವರ್ಗಾವಣೆಗೆ ರಾಜ್ಯ ಸರ್ಕಾರದ ಅಧಿಕಾರ.**– ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು, ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ ಒಳಗೊಂಡಿರುವ ಯಾವುದೇ ಪ್ರದೇಶವನ್ನು, 154ನೇ ಪ್ರಕರಣದ ಮೂಲಕ ನಿರಸಿತವಾದ ಅಧಿನಿಯಮಿತಿಗಳ ಮೇರೆಗೆ ಅಂಥ ಮಾರುಕಟ್ಟೆ ಪ್ರದೇಶದಿಂದ ಬಿಟ್ಟುಬಿಡಲಾಗಿರುವಲ್ಲಿ ಮತ್ತು ಹಾಗೆ ಬಿಟ್ಟುಬಿಡಲಾದ ಪ್ರದೇಶವನ್ನು ಸದರಿ ಅಧಿನಿಯಮಿತಿಗಳ ಮೇರೆಗೆ ಅದನ್ನು ಪ್ರತ್ಯೇಕ ಮಾರುಕಟ್ಟೆ ಎಂದು ಘೋಷಿಸಲಾಗಿರುವ ಮತ್ತು ಅದಕ್ಕಾಗಿ

ಪ್ರತ್ಯೇಕ ಮಾರುಕಟ್ಟೆ ಸಮಿತಿಯನ್ನು ರಚಿಸಲಾಗಿರುವಲ್ಲಿ ಮತ್ತು ಆ ಎರಡೂ ಮಾರುಕಟ್ಟೆ ಸಮಿತಿಗಳು ಹಾಗೆ ಪ್ರಾರಂಭವಾದೊಡನೆಯೇ ತಮ್ಮ ಕಾರ್ಯನಿರ್ವಹಣೆಯನ್ನು ಮುಂದುವರಿಸಿರುವಲ್ಲಿ ಮತ್ತು ಆ ಮಾರುಕಟ್ಟೆ ಸಮಿತಿಗಳ ನಡುವಣ ಒಪ್ಪಂದದ ಮೂಲಕ ಅಥವಾ, ಅನ್ಯಥಾ, ಪ್ರತ್ಯೇಕ ಮಾರುಕಟ್ಟೆ ಸಮಿತಿಯ ಸ್ವತ್ತುಗಳು, ಹಕ್ಕುಗಳು ಮತ್ತು ಹೊಣೆಗಾರಿಕೆಗಳನ್ನು ಇನ್ನೂ ನಿರ್ಧರಿಸಿಲ್ಲದಿರುವಲ್ಲಿ ಆಗ ರಾಜ್ಯ ಸರ್ಕಾರವು, ಸಂಬಂಧಪಟ್ಟ ಮಾರುಕಟ್ಟೆ ಸಮಿತಿಗಳೊಡನೆ ಸಮಾಲೋಚನೆ ನಡೆಸಿದ ತರುವಾಯ ಅಧಿಸೂಚನೆಯ ಮೂಲಕ ಹಾಗೆ ಬಿಟ್ಟುಬಿಡಲಾದ ಪ್ರದೇಶದ ಸಂಬಂಧದಲ್ಲಿ (ಅದು ಮಾಡಿಕೊಂಡ ಯಾವುದೇ ಕರಾರಿನ ಹಕ್ಕುಗಳು ಸೇರಿದಂತೆ) ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ನಿಯಮಗಳು ಮತ್ತು ಷರತ್ತುಗಳ ಮೇಲೆ ಆ ಪ್ರತ್ಯೇಕ ಮಾರುಕಟ್ಟೆ ಸಮಿತಿಗಳಿಗೆ ಮಾರುಕಟ್ಟೆ ಸಮಿತಿಯ ಸ್ವತ್ತುಗಳ, ಹಕ್ಕುಗಳ ಮತ್ತು ಹೊಣೆಗಾರಿಕೆಗಳ ವರ್ಗಾವಣೆಗಾಗಿ ವ್ಯವಸ್ಥೆ ಮಾಡತಕ್ಕದ್ದು.

**156. 1958ರ [1][ಕರ್ನಾಟಕ][1] [2][ಅಧಿನಿಯಮ 16ರ][2] ತಿದ್ದುಪಡಿ.–** 1958ರ ಕರ್ನಾಟಕ ನ್ಯಾಯಾಲಯ ಫೀಜುಗಳು ಮತ್ತು ದಾವೆಗಳ ಮೌಲ್ಯ ನಿರ್ಣಯ ಅಧಿನಿಯಮದ ಅನುಸೂಚಿ II ರಲ್ಲಿ ಈ ಕೆಳಕಂಡ ತಿದ್ದುಪಡಿಗಳನ್ನು ಮಾಡತಕ್ಕದ್ದು ಮತ್ತು ಅವುಗಳನ್ನು 1ನೇ ಅಕ್ಟೋಬರ್ 1964ರಿಂದ ಜಾರಿಗೆ ಬರುವಂತೆ ಮಾಡಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

2. 2000ದ ಅಧಿನಿಯಮ ಸಂಖ್ಯೆ 22ರ ಮೂಲಕ 1-5-1968ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎ) 3ನೇ ಅನುಚ್ಛೇದದ (ii) ನೇ ಖಂಡದಲ್ಲಿ " [1][ಕರ್ನಾಟಕ ಕಂದಾಯ ಅಪೀಲು ನ್ಯಾಯಾಧಿಕರಣ][1] " ಎಂಬ ಪದಗಳ ತರುವಾಯ "ಅಥವಾ ಸಹಕಾರ ಅಪೀಲು ನ್ಯಾಯಾಧಿಕರಣ" ಎಂಬ ಪದಗಳನ್ನು ಸೇರಿಸತಕ್ಕದ್ದು;

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಬಿ) 10ನೇ ಅನುಚ್ಛೇದದ (ಜೆ) ಖಂಡದಲ್ಲಿ " [1][ಕರ್ನಾಟಕ ಕಂದಾಯ ಅಪೀಲು ನ್ಯಾಯಾಧಿಕರಣ][1] " ಎಂಬ ಪದಗಳ ತರುವಾಯ "ಅಥವಾ ಸಹಕಾರಿ ಅಪೀಲು ನ್ಯಾಯಾಧಿಕರಣ" ಎಂಬ ಪದಗಳನ್ನು ಸೇರಿಸತಕ್ಕದ್ದು.

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**157. 1959ರ [1][ಕರ್ನಾಟಕ][1] ಅಧಿನಿಯಮ 11ರ ತಿದ್ದುಪಡಿ.–** 1959ರ ಕರ್ನಾಟಕ ಸಹಕಾರಿ ಸಂಘಗಳ ಅಧಿನಿಯಮದ 2ಬಿ ಪ್ರಕರಣದಲ್ಲಿ, –

(1) (1)ನೇ ಉಪಪ್ರಕರಣದಲ್ಲಿ, "ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ" ಎಂಬ ಪದಗಳ ತರುವಾಯ "ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೇರೆಗೆ" ಎಂಬ ಪದಗಳನ್ನು ಸೇರಿಸತಕ್ಕದ್ದು;

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(2) (4)ನೇ ಉಪಪ್ರಕರಣದಲ್ಲಿ "ಅದರ ಮೇರೆಗೆ" ಎಂಬ ಪದಗಳ ತರುವಾಯ, "ಮತ್ತು ಅಂಥ ಕಾನೂನಿಗೆ ಸುಸಂಗತವಾದ ಯಾವುದೇ ಇತರ ಕಾನೂನಿನ ಮೇರೆಗಿನ ವ್ಯವಹರಣೆಗಳ ಸಂಬಂಧದಲ್ಲಿ" ಎಂಬ ಪದಗಳನ್ನು ಸೇರಿಸತಕ್ಕದ್ದು;

(3) (6)ನೇ ಉಪಪ್ರಕರಣದಲ್ಲಿ "ಅದಕ್ಕೆ ಅಪೀಲನ್ನು ಸಲ್ಲಿಸಲು ಅವಕಾಶವಿರುವುದು" ಎಂಬ ಪದಗಳ ತರುವಾಯ "ತತ್ಕಾಲದಲ್ಲಿ ಜಾರಿಯಲ್ಲಿರುವ ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಮೇರೆಗೆ" ಎಂಬ ಪದಗಳನ್ನು ಸೇರಿಸತಕ್ಕದ್ದು;

(4) (7)ನೇ ಉಪಪ್ರಕರಣದಲ್ಲಿ "105ನೇ ಪ್ರಕರಣದ ಮೇರೆಗೆ" ಎಂಬ ಪದಗಳು ಮತ್ತು ಅಂಕಿಗಳ ತರುವಾಯ "ಈ ಅಧಿನಿಯಮ ಅಥವಾ ಯಾವುದೇ ಇತರ ಕಾನೂನಿನ ಮೇರೆಗೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

**[1][ಅನುಸೂಚಿ**

1. 1980ರ ಅಧಿನಿಯಮ ಸಂಖ್ಯೆ 17ರ ಮೂಲಕ 30-6-1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**I. ಪಶುಸಂಗೋಪನೆ**

| | |
|---|---|
| 1. ಬೆಣ್ಣೆ | 2. ಜಾನುವಾರು |
| 3. ಮೊಟ್ಟೆಗಳು | 4. ತುಪ್ಪ |
| 5. ಮೇಕೆ | 6. ಕೋಳಿ |
| 7. ಹಂದಿ | 8. ಕುರಿ |
| 9. ಚರ್ಮ ಮತ್ತು ತೊಗಲು | 10. ಉಣ್ಣೆ |

**II. ನಾರು**

1. ಹತ್ತಿ (ಬೀಜ ತೆಗೆದ ಮತ್ತು ತೆಗೆಯದ)
2. ಮೆಸ್ಟ
3. ಸೆಣಬು (ಗೋಣಿನಾರು)

**[1][III ಹೂವುಗಳು**

**ಎಲ್ಲಾ ಹೂವುಗಳು][1]**

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 257 ಎಂಎಂಡಿ 86 ದಿನಾಂಕ 4-12-1986ರ ಮೂಲಕ ಬಿಟ್ಟುಬಿಡಲಾಗಿದೆ ಮತ್ತು ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 104 ಎಂಆರ್‌ಇ 94 ದಿನಾಂಕ 9-1-1995ರ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿ ಇದೆ.

## IV. ಆಹಾರ ಬೆಳೆಗಳು

1. ಸಜ್ಜೆ
2. ಜವೆ ಗೋಧಿ
3. ಜೋಳ
4. ಕಂಬು
5. ಮುಸುಕಿನ ಜೋಳ (ಮೆಕ್ಕೆಜೋಳ)
6. ನವಣೆ
7. ಭತ್ತ
8. ರಾಗಿ
9. ಅಕ್ಕಿ
10. ಸಾವೆ
11. ಗೋಧಿ

## V. ಅರಣ್ಯ ಉತ್ಪನ್ನ

1. ಅಂಟವಾಳ (ಅಂಟುವಾಳ)
2. ಬಿದಿರು (ಬೊಂಬು)
3. ಬೆತ್ತ
4. ಹಿಪ್ಪೆಬೀಜ
5. ಹೊಂಗೆ ಬೀಜ
6. ಅಳಲೆಕಾಯಿ
7. ಬೇವಿನ ಬೀಜ
8. ರೀಥಾ
9. ಜೊಂಡು
10. ಸೀಗೆಕಾಯಿ
11. ಹುಣಸೆ ಹಣ್ಣು
12. ಹುಣಸೆಬೀಜ

## VI. ಹಣ್ಣುಗಳು

1. ಸೇಬು
2. ಬಾಳೆ
3. ಬೋರೆ ಹಣ್ಣು
4. ಹುಳಿ ಹಣ್ಣು
5. ಚಕೋತಾ ಹಣ್ಣು
6. ಸೀಬೆ
7. ದ್ರಾಕ್ಷಿ
8. ಹಲಸು
9. ನೇರಳೆ
10. ನಿಂಬೆ
11. ಖರಬೂಜ
12. ಮಾವು
13. ಮೂಸಂಬಿ
14. ಮರಸೇಬು
15. ಅನಾನಸು
16. ಪಪಾಯ
17. ದಾಳಿಂಬೆ
18. ಸಪೋಟ
19. ಸಿದ್ದೋಟ
[1][20. ಕಿತ್ತಳೆ
21. ಕಲ್ಲಂಗಡಿ][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 257 ಎಂಎಂಡಿ 86, ದಿನಾಂಕ 4-12-1986ರ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

## VII. ಎಣ್ಣೆ ಬೀಜಗಳು

1. ಕಡಲೆಕಾಯಿ (ಶೇಂಗಾ ಸಿಪ್ಪೆ ಸಹಿತ ಮತ್ತು ಸಿಪ್ಪೆ ತೆಗೆದದ್ದು)
2. ಹರಳು ಬೀಜ
3. ಹತ್ತಿ ಬೀಜ
4. ಅಗಸೆ ಬೀಜ
5. ಸಾಸುವೆ
6. ಹುಚ್ಚೆಳ್ಳು
7. ರೇಪ್‌ಬೀಜ
8. ಕುಸುಬೆ
9. ಎಳ್ಳು
10. ಸೂರ್ಯಕಾಂತಿ ಬೀಜ
[1][11. ಸೊಯಾಬೀನ್][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ, 233 ಎಂಆರ್‌ಇ 94, ದಿನಾಂಕ:21-3-1996ರ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

## VIII. ತೋಟದ ಬೆಳೆಗಳು ಮತ್ತು ಸಾಂಬಾರ ಪದಾರ್ಥಗಳು

1. ಅಡಿಕೆ
[1][2. XXX][1]
3. ಗೋಡಂಬಿ ಬೀಜ
[2][3ಎ. ಗೋಡಂಬಿ ತಿರುಳು][1]
4. ಮೆಣಸಿನಕಾಯಿ (ಒಣಗಿದ್ದು)
5. ತೆಂಗು
6. ಕೊಬ್ಬರಿ
7. ಕೊತ್ತಂಬರಿ
8. ಬೆಳ್ಳುಳ್ಳಿ
9. ಶುಂಠಿ
10. ಮೆಂಥ್ಯೆ
11. ಮೆಣಸು
12. ಅರಿಸಿನ

[3][13. ಕಾಫಿಬೀಜಗಳು (ಉಚಿತ ಮಾರಾಟದ ಕೋಟಾದಷ್ಟು ಮಟ್ಟಿಗೆ)

(i) ಕಚ್ಚಾಕಾಫಿ (ಚೆರ್ರಿಕಾಫಿ)

(ii) ಸಂಸ್ಕರಿಸಿದ ಕಾಫಿ ಬೀಜಗಳು

(iii) ಸಂಸ್ಕರಿಸಿಲ್ಲದ ಕಾಫಿ ಬೀಜಗಳು][3]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 272 ಎಂಎಂಡಿ 86 ದಿನಾಂಕ 14-1-1987ರ ಮೂಲಕ ಬಿಟ್ಟುಬಿಡಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.
2. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 183 ಎಂಆರ್‌ಇ 88, 2-6-1989 ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.
3. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 96 ಎಂಆರ್‌ಇ 94 ದಿನಾಂಕ 9-11-1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

## IX ದ್ವಿದಳ ಧಾನ್ಯಗಳು

1. ಅಲಸಂದೆ (ಕೌಪಿಯಾ) (ಇಡಿ ಮತ್ತು ಒಡೆದ)
2. ಅವರೆ (ಇಡಿ ಮತ್ತು ಒಡೆದ)
3. ಕಡಲೆ (ಇಡಿ ಮತ್ತು ಒಡೆದ)
4. ಉದ್ದು (ಇಡಿ ಮತ್ತು ಒಡೆದ)
5. ಬಲ್ಲರ್ (ಇಡಿ ಮತ್ತು ಒಡೆದ)
6. ಹೆಸರು (ಇಡಿ ಮತ್ತು ಒಡೆದ)
7. ಹುರುಳಿ –
8. ಲಾಕ್ (ಇಡಿ ಮತ್ತು ಒಡೆದ)
9. ಮಡಕಿ (ಇಡಿ ಮತ್ತು ಒಡೆದ)
10. ಮಸೂರ್ (ಇಡಿ ಮತ್ತು ಒಡೆದ)
11. ಮೋತ್ (ಇಡಿ ಮತ್ತು ಒಡೆದ)
12. ಬಟಾಣಿ –
13. ತೊಗರಿ (ಇಡಿ ಮತ್ತು ಒಡೆದ)

## X. ತರಕಾರಿಗಳು

1. [1][ಗರ್ಕಿನ್ ಹೊರತುಪಡಿಸಿ][1] (ಸೊಪ್ಪುಗಳು ಸೇರಿ)
2. ಕಾಯಿಗಳು
3. ಹಸಿ ಮೆಣಸಿನಕಾಯಿ
4. ಈರುಳ್ಳಿ
5. ಆಲುಗಡ್ಡೆ
6. ಸುವರ್ಣ ಗೆಡ್ಡೆ
7. ಗೆಣಸು
8. ಟೊಮಾಟೊ

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## XI. ಮರ

1. ಬೀಟ್ (ರೋಜ್)
2. ಬಿಲ್ವಾಲ
3. ಸೌದೆ (ಉರುವಲು ಕಟ್ಟಿಗೆ)
4. ಗಂಜನ್
5. ಹಡಗ
6. ಹಳದಿ
7. ಹನಿಮತ್ತಲ್
8. ಹೊನ್ನೆ
9. ಐಯಾನಿ
10. ಹಲಸಿನ ಮರ
11. ಜಂಬಾ
12. ಕಲನ್
13. ಕಿಂಡಲ್
14. ಮಾವಿನ ಮರ
15. ಮತ್ತಿ
16. ನಂದಿ
17. ರಾಮ್‌ಪತ್ರೆ
18. ತೇಗ
19. ಬಿಳಿದೇವದಾರು

[1][20. ಸಿಲ್ವರ್ ಓಕ್][1]

21. [1][ಪಾರಿವಾಳ][1]

[2][22. ಸಾಲಂಗಬೆಟ್ಟು (ಸಾಲ್) (ಗಟ್ಟಿಮರ)

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 257 ಎಂಎಂಡಿ 86 ದಿನಾಂಕ: 4-12-1986ರ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.
2. 22 ರಿಂದ 86ರ ವರೆಗಿನ ಬಾಬುಗಳನ್ನು ಅಧಿಸೂಚನೆ ಸಂಖ್ಯೆ-ಸಿಎಂಡಬ್ಲ್ಯೂ 95 ಎಂಆರ್‌ಇ 89 ದಿನಾಂಕ 29-11-1989ರ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

23. ಬಳಾವು (ಗಟ್ಟಿ ಮರ)
24. ಕೆರುಯಿಂಗ್ (ಮೆದುಮರ)
25. ಸ್ವಾಂಪ್ ಎಂ ಎಲ್‌ಹೆಚ್ (ಮೆದುಮರ)
26. ಗುರ್ಜನ (ಮೆದುಮರ)
27. ಕಾಪುರ್ (ಕಾಡು ಮರ)
28. ಕಾಲ್ಫೋಫಿಲಿಯಮ್ (ಮೆದುಮರ)
29. ಮಿಕ್ಸೆಡ್ ಲೈಟ್ (ಗಟ್ಟಿಮರ)
30. ನ್ಯಾಟೋಹ್ (ಮೆದುಮರ)
31. ಮರಂತಿ (ಕಡುಗೆಂಪು) (ಮೆದುಮರ)
32. ರೆಸಾಕ್
33. ಸ್ವಾಂಪ್ ಮರಂತಿ (ಮೆದುಮರ)
34. ಹಿಲ್ ಎಂಎಲ್‌ಹೆಚ್
35. ಹಿಲ್‌ಮರಂತಿ (ಮೆದುಮರ)
36. ಮೌಂಡ್ ದಾಟಾ
37. ಕೆಂಪಾಸ್ (ಗಟ್ಟಿಮರ)
38. ಸಂಮಿಶ್ರಜಾತಿ ಮರಗಳು
39. ಕ್ವಿಲ್ (ಗಟ್ಟಿಮರ)
40. ಮರಸ್ವ ಮೇಡ್
41. ರೆಡಾಲ್
42. ಹೊಳಮತ್ತಿ (ಟರ್ಮಿನಾಲಿಯಾ)
43. ಹಸಿರು ಎಫ್‌ಎಸ್‌ಟಿ
44. ಹಳದಿ ಪಿಎಸ್‌ಡಿ
45. ಬ್ಲೂ ಆಲ್
46. ಬೆಟ್ಟದ ಕಣಿಗಲು (ಡಿಲ್ಲೇನಿಯಾ)
47. ಬರ್ಕೆಲ (ಬಹಳ ಗಟ್ಟಿ ಮರ)
48. ರೆಡ್‌ಮಿಕ್ಸ್
49. ವಾಟರ್‌ಗಮ್
50. ವಾಲ್‌ನಟ್
51. ಟರ್ಮಿನೆಲಿಯಾ ಕೆಲಾಮಿನಿಯಾ (ಮೆದುಮರದಿಂದ ಮಧ್ಯದ, ಗಟ್ಟಿವರೆಗೆ)
52. ಯಲ್ಲೋ ಆಲ್
53. ವೈಟ್ ಆಲ್
54. ಮಲಾಸ್ (ಗಟ್ಟಿಮರ)
55. ಕಮರರೆ (ಮಧ್ಯಮ ಗಟ್ಟಿ)
56. ವೈಟಿಕ್ಸ್ (ಗಟ್ಟಿ ಮರ)
57. ಪೈನ್ ಮರ
58. ರೆಂಗಾಸ್ (ಮಿಶ್ರ)
59. ತಿಂಗಡು
60. ಬಿನಾಟಾಂಗರ್
61. ನಾಗ
62. ಟೆಟ್ರಾಬರ್ಲಿನಿಯಾ
63. ಕುರ್ಸಿಯಾ
64. ಡೆಡ್ಡಿಲೋಷಿಯಾ
65. ಎಕ್ಕಿ
66. ಇರೋಕೋ
67. ಹೋಪಿಯಾ (ಭೋಗಿ)
68. ಅಂಗೆಲಿಮ್ ಬ್ರಿಗಿಲಿಯನ್ ಗಟ್ಟಿಮರ
69. ಜಟೋಬ
70. ಗೊಂಬೆ
71. ದಹೋಮ
72. ಒಪೇಪ್
73. ತಿಟ್‌ಕಾರ್
74. ತಾವುನ್
75. ಫಿಜಿ ಮೂಲದ ಗಟ್ಟಿಮರ
76. ವಂಡೇಜ್
77. ಅಗತಿ
78. ಇಂಜ್‌ನಿಯಾ
79. ಮೆಂಗ್ರಿಸ್
80. ಎಂಎಲ್‌ಹೆಚ್
81. ಮರ್‌ಕೂರ್
82. ವೆಸ್ಟ್
83. ಪಾಲಿ
84. ಸಾಲಮರ
85. ಸಾರವಾಕ್
86. ನೀಲಗಿರಿ][2]

## XII. ಇತರ ಉತ್ಪನ್ನಗಳು

1. ಆಂಬೋಡಾ ಬೀಜಗಳು
2. ವೀಳ್ಯದೆಲೆ

[1][3. XXX][1]
[1][4. XXX][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯು 258 ಎಂಎಂಡಿ 86 ದಿನಾಂಕ 7-1-1988ರ ಮೂಲಕ ಬಿಟ್ಟುಬಿಡಲಾಗಿದೆ. ಅಧಿನಿಯಮದ ಕೊನೆಯ ಭಾಗದಲ್ಲಿ ಸೇರಿಸಲಾಗಿದೆ.

5. ಬೆಲ್ಲ

[1][6. XXX][1]

7. ಸೀಗು (ತೆಂಗಿನ ಪೊರಕೆ ಕಡ್ಡಿ)
8. ಕಬ್ಬು
9. ತಂಬಾಕು

[2][10. ಒಣದ್ರಾಕ್ಷಿ][2]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯು 258 ಎಂಎಂಡಿ 86 ದಿನಾಂಕ 7-1-1988ರ ಮೂಲಕ ಬಿಟ್ಟುಬಿಡಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

2. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯು 48 ಎಂಆರ್‌ಇ 96 ದಿನಾಂಕ 4-10-1996ರ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

[1][**ವಿವರಣೆ:–** ಈ ಅನುಸೂಚಿಯ ಉದ್ದೇಶಕ್ಕಾಗಿ, ಬಾಬು ಸಂಖ್ಯೆ `IV ಆಹಾರ ಬೆಳೆಗಳು,' ಬಾಬು ಸಂಖ್ಯೆ VII' ಎಣ್ಣೆ ಬೀಜಗಳು, ಬಾಬು ಸಂಖ್ಯೆ VIII ರ ಉಪ ಬಾಬು 7 ಕೊತ್ತಂಬರಿಯನ್ನು ಮತ್ತು ಬಾಬು ಸಂಖ್ಯೆ X ರ ಉಪಬಾಬು 5. ಆಲೂಗಡ್ಡೆ–ಅಡಿಯಲ್ಲಿ ಬರುವ ಕೃಷಿ ಉತ್ಪನ್ನಗಳಲ್ಲಿ ಪ್ರಮಾಣಿತ ಹಾಗೂ ಸಂಸ್ಕರಿಸಿದ ಬೀಜಗಳಂಥ, ವಿಷವೆಂದು ಗುರುತುಮಾಡಿದ ಮತ್ತು ಸರಿಯಾಗಿ ಚೀಟಿ ಅಂಟಿಸಿರುವಂಥ ಎಲ್ಲಾ ಕೃಷಿ ಉತ್ಪನ್ನದ ಬೀಜಗಳು ಸೇರತಕ್ಕದ್ದಲ್ಲ.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯು 76 ಎಂಆರ್ಇ 89 ದಿನಾಂಕ 9-5-1991ರ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

## ಅಧಿಸೂಚನೆ

### I

**ಬೆಂಗಳೂರು, ದಿನಾಂಕ: 11ನೇ ಏಪ್ರಿಲ್, 1968 (ಸಂಖ್ಯೆ ಡಿಪಿಸಿ 257 ಸಿಎಂಡಿ 65)**

**ಎಸ್.ಓ. 526:–** ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಮೈಸೂರು ಅಧಿನಿಯಮ 27) 1ನೇ ಪ್ರಕರಣದ (3)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1968ರ ಮೇ ಮೊದಲನೇ ದಿವಸವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಭರಣಯ್ಯ**
ಸರ್ಕಾರದ ಕಾರ್ಯದರ್ಶಿ,
ವಸತಿ, ಪಂಚಾಯತ್ ರಾಜ್ಯ ಮತ್ತು ಸಹಕಾರ ಇಲಾಖೆ.

### II

**ಬೆಂಗಳೂರು, ದಿನಾಂಕ:27ನೇ ಜುಲೈ, 1991 [ಸಂಖ್ಯೆ: ಸಿಎಂಡಬ್ಲ್ಯೂ 115 ಎಂಆರ್ಇ 91]**

**ಎಸ್.ಓ. 830 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ ಮತ್ತು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 1999ರ (1999ರ ಕರ್ನಾಟಕ ಅಧಿನಿಯಮ 16) 1ನೇ ಪ್ರಕರಣದ (2)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1999ರ ಆಗಸ್ಟ್ 1ನೇ ದಿವಸವನ್ನು ಸದರಿ ತಿದ್ದುಪಡಿ ಅಧಿನಿಯಮದ 1, 2 ರಿಂದ 20, 22, 23, 28 ರಿಂದ 33, 35, 36, 38, 42 ರಿಂದ 44, 49, 51 ರಿಂದ 55 ಮತ್ತು 57 ರಿಂದ 59ನೇ ಪ್ರಕರಣಗಳ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಆರ್. ಭಾಗೀರತಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV 2ಸಿ (ii) ದಿನಾಂಕ 30-1-1991ರಲ್ಲಿ ಸಂಖ್ಯೆ, 519 ಆಗಿ ಪ್ರಕಟವಾಗಿದೆ).

### III

**ಬೆಂಗಳೂರು, ದಿನಾಂಕ:21ನೇ ಫೆಬ್ರವರಿ, 1992 [ಸಂಖ್ಯೆ: ಸಿಎಂಡಬ್ಲ್ಯೂ 115 ಎಂಆರ್ಇ 91(1)]**

**ಎಸ್.ಓ. 305 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮದ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 1991ರ (1991ರ ಕರ್ನಾಟಕ ಅಧಿನಿಯಮ 16) 1ನೇ ಪ್ರಕರಣದ (2)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1992ರ ಮಾರ್ಚ್ 21ನೇ ದಿವಸವನ್ನು ಸದರಿ ಅಧಿನಿಯಮದ 45ನೇ ಪ್ರಕರಣದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಆರ್. ಭಾಗೀರತಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV 2ಸಿ (ii) ದಿನಾಂಕ 27-3-1992ರಲ್ಲಿ ಸಂಖ್ಯೆ, 122 ಆಗಿ ಪ್ರಕಟವಾಗಿದೆ).

**IV**

**ಬೆಂಗಳೂರು, ದಿನಾಂಕ:4ನೇ ಮಾರ್ಚ್, 1992 [ಸಂಖ್ಯೆ: ಡಿಪಿಎಆರ್ 3 ಎಸ್‌ಡಿಇ 92]**

**ಎಸ್.ಓ. 463 :–** ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 1ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1992ರ ಏಪ್ರಿಲ್ ಎರಡನೇ ದಿವಸವನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮೋತಿರಾಂ ಪವಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV 2ಸಿ (ii) ದಿನಾಂಕ 26–3–1992ರಲ್ಲಿ ಪುಟ 376ರಲ್ಲಿ ಪ್ರಕಟವಾಗಿದೆ).

**V**

**ಬೆಂಗಳೂರು, ದಿನಾಂಕ:23ನೇ ಮಾರ್ಚ್, 1994 [ಸಂಖ್ಯೆ: ಸಿಎಂಡಬ್ಲ್ಯೂ 115 ಎಂಆರ್‌ಇ 91(1)]**

**ಎಸ್.ಓ.439 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 1991ರ (1991ರ ಕರ್ನಾಟಕ ಅಧಿನಿಯಮ 16) 1ನೇ ಪ್ರಕರಣದ (2)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1994ರ ಏಪ್ರಿಲ್ 1ನೇ ದಿವಸವನ್ನು ಸದರಿ ಅಧಿನಿಯಮದ 21, 26 ಮತ್ತು 34ನೇ ಪ್ರಕರಣಗಳ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಬೆಳಗಟ್ಟೆರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV 2ಸಿ (ii) ದಿನಾಂಕ 26–3–1994ರಲ್ಲಿ ಸಂಖ್ಯೆ, 215 ಆಗಿ ಪ್ರಕಟವಾಗಿದೆ).

**VI**

**ಬೆಂಗಳೂರು, ದಿನಾಂಕ:27ನೇ ಜೂನ್, 1995 [ಸಂಖ್ಯೆ: ಸಿಎಂಡಬ್ಲ್ಯೂ 297 ಎಂಇಡಿ 91]**

**ಎಸ್.ಓ.615 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 1991ರ (1991ರ ಕರ್ನಾಟಕ ಅಧಿನಿಯಮ 16) 1ನೇ ಪ್ರಕರಣದ (2)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1995ರ ಜೂನ್ 27ನೇ ದಿವಸವನ್ನು ಸದರಿ ತಿದ್ದುಪಡಿ ಅಧಿನಿಯಮದ 25ನೇ ಪ್ರಕರಣದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ. ಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV 2ಸಿ (ii) ದಿನಾಂಕ 27–6–1992ರಲ್ಲಿ ಸಂಖ್ಯೆ, 829 ಎಂದು ಪ್ರಕಟವಾಗಿದೆ).

**VII**

**ಬೆಂಗಳೂರು, ದಿನಾಂಕ:27ನೇ ಮಾರ್ಚ್, 1996 [ಸಂಖ್ಯೆ: ಸಿಎಂಡಬ್ಲ್ಯೂ 5 ಎಂಆರ್‌ಇ 91]**

**ಎಸ್.ಓ.439 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 1991ರ (1991ರ ಕರ್ನಾಟಕ ಅಧಿನಿಯಮ 16) 1ನೇ ಪ್ರಕರಣದ (2)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1–4–1996ನ್ನು ಸದರಿ ಅಧಿನಿಯಮದ (ಮೂಲ ಅಧಿನಿಯಮದ 112ನೇ ಪ್ರಕರಣದ (1)ನೇ ಉಪಪ್ರಕರಣ)ದ 50ನೇ ಪ್ರಕರಣದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ವಿ. ನಟರಾಜನ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

ಅನುಸೂಚಿಯನ್ನು ಮಾರ್ಪಾಡುಗೊಳಿಸುವ ಅಧಿಸೂಚನೆ.

**VIII**

**ಬೆಂಗಳೂರು, ದಿನಾಂಕ:4ನೇ ಡಿಸೆಂಬರ್, 1986 [ಸಂಖ್ಯೆ: ಸಿಎಂಡಬ್ಲ್ಯೂ 257 ಎಂಎಂಡಿ 86]**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) 152–ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಅನುಸೂಚಿಗೆ ಈ ಮೂಲಕ ಕೆಳಕಂಡಂತೆ ತಿದ್ದುಪಡಿಗಳನ್ನು ಮಾಡಿದೆ.

ಸದರಿ ಅನುಸೂಚಿಯಲ್ಲಿ:

(1) ``III ಹೂವುಗಳು'' ಎಂಬ ಬಾಬನ್ನು ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು.

(2) ``VI ಹಣ್ಣುಗಳು'' ಎಂಬ ಬಾಬಿನಲ್ಲಿ ಉಪಬಾಬು 19ರ ತರುವಾಯ ಈ ಕೆಳಕಂಡ ಬಾಬನ್ನು ಸೇರಿಸತಕ್ಕದ್ದು, ಎಂದರೆ:

"20. ಕಿತ್ತಳೆ" "21. ಕಲ್ಲಂಗಡಿ"

(3) ``XI ಮರ'' ಎಂಬ ಬಾಬಿನಲ್ಲಿ ಉಪಬಾಬು 19ರ ತರುವಾಯ ಈ ಕೆಳಕಂಡ ಬಾಬನ್ನು ಸೇರಿಸತಕ್ಕದ್ದು, ಎಂದರೆ: –

"20. ಸಿಲ್ವರ್ ಓಕ್" "21. ಪಾರಿವಾಳ"

**IX**

**ಬೆಂಗಳೂರು, ದಿನಾಂಕ:14ನೇ ಜನವರಿ, 1987 (ಸಂಖ್ಯೆ: ಸಿಎಂಡಬ್ಲ್ಯೂ 272 ಎಂಎಂಡಿ 86)**

**ಎಸ್.ಓ. 201 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) 152–ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಕೆಳಕಂಡಂತೆ ಅನುಸೂಚಿಯನ್ನು ಈ ಮೂಲಕ ತಿದ್ದುಪಡಿ ಮಾಡಿದೆ, ಎಂದರೆ,–

ಅನುಸೂಚಿಯಲ್ಲಿ "ತೋಟದ ಬೆಳೆಗಳು ಮತ್ತು ಸಂಬಾರ ಪದಾರ್ಥಗಳು" ಇವುಗಳಿಗೆ ಸಂಬಂಧಿಸಿದ ಬಾಬು ``VII'' ರಲ್ಲಿನ ಕ್ರಮ ಸಂಖ್ಯೆ 2 "ಏಲಕ್ಕಿ" ಎಂಬುದನ್ನು ಬಿಟ್ಟುಬಿಡತಕ್ಕದ್ದು.

**X**

**ಬೆಂಗಳೂರು, ದಿನಾಂಕ:7ನೇ ಜನವರಿ, 1988 (ಸಂಖ್ಯೆ: ಸಿಎಂಡಬ್ಲ್ಯೂ 258 ಎಂಎಂಡಿ 86)**

**ಎಸ್.ಓ. 75 :–** 1980ರ ಕರ್ನಾಟಕ ಅಧಿನಿಯಮ, 17ರ ಮೂಲಕ ತಿದ್ದುಪಡಿ ಮಾಡಲಾದಂತೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ 152ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಸದರಿ ಅಧಿನಿಯಮಕ್ಕೆ ಈ ಮುಂದಿನಂತೆ ಈ ಮೂಲಕ ತಿದ್ದುಪಡಿ ಮಾಡಿದೆ, ಎಂದರೆ,–

ಅನುಸೂಚಿಯಲ್ಲಿ ``XII ಇತರ ಉತ್ಪನ್ನಗಳು'' ಎಂಬ ಶೀರ್ಷಿಕೆ ಅಡಿಯಲ್ಲಿ ಬರುವ ಮುಂದಿನ ಬಾಬನ್ನು ಬಿಟ್ಟುಬಿಡತಕ್ಕದ್ದು.

"3. ಏಡಿಗಳು 4. ಮೀನು 6. ಸೀಗಡಿ"

**XI**

**ಬೆಂಗಳೂರು, ದಿನಾಂಕ:2ನೇ ಜೂನ್, 1989 (ಸಂಖ್ಯೆ: ಸಿಎಂಡಬ್ಲ್ಯೂ 183 ಎಂಆರ್‌ಇ 88)**

**ಎಸ್.ಓ. 970 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) 152–ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕೆಳಕಂಡಂತೆ ಅನುಸೂಚಿಯನ್ನು ಈ ಮೂಲಕ ತಿದ್ದುಪಡಿ ಮಾಡಿದೆ,–

ಅನುಸೂಚಿಯಲ್ಲಿ, "VIII'' ತೋಟದ ಬೆಳೆಗಳು ಮತ್ತು ಸಂಬಾರ ಪದಾರ್ಥಗಳು" ಇದರಲ್ಲಿ 3 ಗೋಡಂಬಿ ಎಂಬ ಉಪಬಾಬಿನ ತರುವಾಯ ಈ ಕೆಳಕಂಡ ಉಪಬಾಬನ್ನು ಸೇರಿಸತಕ್ಕದ್ದು, ಎಂದರೆ,–

"3ಎ ಗೋಡಂಬಿ ತಿರುಳು"

**XII**

**ಬೆಂಗಳೂರು, ದಿನಾಂಕ:29ನೇ ನವೆಂಬರ್, 1989 (ಸಂಖ್ಯೆ: ಸಿಎಂಡಬ್ಲ್ಯೂ 95 ಎಂಆರ್‌ಇ 89)**

**ಎಸ್.ಓ. 1800 :** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ 152–ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕೆಳಕಂಡಂತೆ ಅನುಸೂಚಿಯನ್ನು ಈ ಮೂಲಕ ತಿದ್ದುಪಡಿ ಮಾಡಿದೆ,–

21 ಎಂಬ ಉಪಬಾಬಿನ ತರುವಾಯ ಬಾಬು ಸಂಖ್ಯೆ "XI" ಮರ ಇದರಲ್ಲಿ ಮುಂದಿನವುಗಳನ್ನು ಸೇರಿಸತಕ್ಕದ್ದು ಎಂದರೆ,–

22. ಸಾಲಂಗಬೆಟ್ಟು (ಸಾಲ್) ಗಟ್ಟಿಮರ
23. ಬಳಾವು (ಗಟ್ಟಿಮರ)
24. ಕೆರುಯಿಂಗ್ (ಮೆದುಮರ)
25. ಸ್ವಾಂಪ್ ಎಂಎಲ್‌ಹೆಚ್ (ಮೆದುಮರ)
26. ಗುರ್ಜನ (ಮೆದುಮರ)
27. ಕಾಪುರ್ (ಕಾಡುಮರ)
28. ಕಾಲ್ವೊಫಿಲಿಯಮ್ (ಮೆದುಮರ)
29. ಮಿಕ್ಸೆಡ್ ಲೈಟ್ (ಗಟ್ಟಿಮರ)
30. ನ್ಯಾಟೋಹ್ (ಮೆದುಮರ)
31. ಮರಂತಿ (ಕಡು ಗೆಂಪು) (ಮೆದುಮರ)
32. ರೆಸಾಕ್
33. ಸ್ವಾಂಪ್ ಮರಂತಿ (ಮೆದುಮರ)
34. ಹಿಲ್ ಎಂಎಲ್‌ಎಚ್
35. ಹಿಲ್‌ಮರಂತಿ (ಮೆದುಮರ)
36. ಮೌಂಡ್ ದಾಟಾ
37. ಕೆಂಪಾಸ್ (ಗಟ್ಟಿಮರ)
38. ಸಂಮಿಶ್ರ ಜಾತಿ ಮರಗಳು
39. ಕ್ವಿಲ್ (ಗಟ್ಟಿಮರ)
40. ಮರಸ್ವ ಮೆಡ್
41. ರೆಡಾಲ್
42. ಹೊಳಮತ್ತಿ (ಟರ್ಮಿನಾಲಿಯಾ)
43. ಹಸಿರು ಎಫ್‌ಎಸ್‌ಟಿ
44. ಹಳದಿ ಪಿಎಸ್‌ಡಿ
45. ಬ್ಲೂ ಆಲ್
46. ಬೆಟ್ಟದ ಕಣಿಗಲು (ಡಿಲ್ಲೇನಿಯಾ)
47. ಬರ್ಕೆಲ (ಬಹಳ ಗಟ್ಟಿಮರ)
48. ರೆಡ್ ಮಿಕ್ಸ್
49. ವಾಟರ್‌ಗಮ್
50. ವಾಲ್‌ನಟ್
51. ಟರ್ಮಿನೆಲಿಯಾ ಕೆಲಾಮಿನಿಯ (ಮೆದು ಮರದಿಂದ ಮಧ್ಯದ ಗಟ್ಟಿವರೆಗೆ)
52. ಯಲ್ಲೋಆಲ್
53. ವೈಟ್‌ಆಲ್
54. ಮಲಾಸ್ (ಗಟ್ಟಿಮರ)
55. ಕಮರರೆ (ಮಧ್ಯಮ ಗಟ್ಟಿ)
56. ವೈಟಿಕ್ಸ್ (ಗಟ್ಟಿಮರ)
57. ಪೈನ್ ಮರ
58. ರೆಂಗಾನ್ (ಮಿಶ್ರ)
59. ತಿಂಗಡು
60. ಬಿನಾಟಾಂಗರ್
61. ನಾಗ
62. ಟೆಟ್ರಾ ಬರ್ಲಿನಿಯಾ
63. ಕುರ್ಸಿಯಾ
64. ಡೆಡ್ಡಿ ಲೋಷಿಯಾ
65. ಎಕ್ಕಿ
66. ಇರೋಕೋ
67. ಹೋಪಿಯಾ (ಭೋಗಿ)
68. ಅಂಗೆಲಿಮ್ ಬ್ರಿಗಿಲಿಯನ್ (ಗಟ್ಟಿಮರ)

69. ಜಟೋಬಾ
70. ಗೊಂಬೆ
71. ದಹೋಮ
72. ಒಪೇಪ್
73. ತಿಟ್‌ಕಾರ್
74. ತಾವುನ್
75. ಫಿಜಿ ಮೂಲದ ಗಟ್ಟಿಮರ
76. ವೆಂಡೇಜ್
77. ಅಗತಿ
78. ಇಂಜ್‌ನಿಯ
79. ಮೆಂಗ್ರಿಸ್
80. ಎಲ್‌ಎಲ್‌ಎಚ್
81. ಮರಕೂರ್
82. ವೆಸ್ಟ್
83. ಪಾಲಿ
84. ಸಾಲಮರ
85. ಸಾರವಾಕ್
86. ನೀಲಗಿರಿ

## XIII

**ಬೆಂಗಳೂರು, ದಿನಾಂಕ:9ನೇ ಮೇ, 1991 [ಸಂಖ್ಯೆ: ಸಿಎಂಡಬ್ಲ್ಯೂ 76 ಎಂಆರ್‌ಇ 89]**

**ಎಸ್.ಓ. 501 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ, 27)ರ 152–ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕೆಳಕಂಡಂತೆ ಅನುಸೂಚಿಯನ್ನು ಈ ಮೂಲಕ ತಿದ್ದುಪಡಿ ಮಾಡಿದೆ, ಎಂದರೆ:–

ಅನುಸೂಚಿಯಲ್ಲಿ ಕೆಳಕಂಡ ವಿವರಣೆಯನ್ನು ಕೊನೆಯಲ್ಲಿ ಸೇರಿಸತಕ್ಕದ್ದು ಎಂದರೆ,–

**"ವಿವರಣೆ:–** ಈ ಅನುಸೂಚಿಯ ಉದ್ದೇಶಕ್ಕಾಗಿ, ಬಾಬು ಸಂಖ್ಯೆ VI 'ಆಹಾರ ಬೆಳೆಗಳು' ಬಾಬು ಸಂಖ್ಯೆ VII ಎಣ್ಣೆ ಬೀಜಗಳು, ಬಾಬು ಸಂಖ್ಯೆ VIII ರ ಉಪಬಾಬು 7 ಕೊತ್ತಂಬರಿಯನ್ನು ಮತ್ತು ಬಾಬು ಸಂಖ್ಯೆ Xರ ಉಪಬಾಬು 5. ಆಲೂಗಡ್ಡೆ ಅಡಿಯಲ್ಲಿ ಬರುವ ಕೃಷಿ ಉತ್ಪನ್ನಗಳಲ್ಲಿ, ಪ್ರಮಾಣಿತ ಹಾಗೂ ಸಂಸ್ಕರಿಸಿದ ಬೀಜಗಳಂಥ, ವಿಷವೆಂದು ಗುರುತು ಮಾಡಿದ ಮತ್ತು ಸರಿಯಾಗಿ ಚೀಟಿ ಅಂಟಿಸಿರುವಂಥ ಎಲ್ಲಾ ಕೃಷಿ ಉತ್ಪನ್ನದ ಬೀಜಗಳು ಸೇರತಕ್ಕದ್ದಲ್ಲ.

## XIV

**ಬೆಂಗಳೂರು, ದಿನಾಂಕ:9ನೇ ನವೆಂಬರ್, 1994 [ಸಂಖ್ಯೆ: ಸಿಎಂಡಬ್ಲ್ಯೂ 96 ಎಂಆರ್‌ಇ 94]**

**ಎಸ್.ಓ. 1446 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ, 27)ರ 152–ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕೆಳಕಂಡಂತೆ ಅನುಸೂಚಿಯನ್ನು ಈ ಮೂಲಕ ತಿದ್ದುಪಡಿ ಮಾಡಿದೆ, ಎಂದರೆ:–

ಅನುಸೂಚಿಯಲ್ಲಿ, "VIII ತೋಟದ ಬೆಳೆಗಳು ಮತ್ತು ಸಂಬಾರ ಪದಾರ್ಥಗಳು" ಶೀರ್ಷಿಕೆಯ ಅಡಿಯಲ್ಲಿ 12ನೇ ಬಾಬಿನ ತರುವಾಯ ಈ ಕೆಳಕಂಡವುಗಳನ್ನು ಸೇರಿಸತಕ್ಕದ್ದು ಎಂದರೆ,–

"13. ಕಾಫಿ ಬೀಜಗಳು (ಉಚಿತ ಮಾರಾಟದ ಕೋಟಾದಷ್ಟು ಮಟ್ಟಿಗೆ)
(i) ಕಚ್ಚಾ ಕಾಫಿ (ಚೆರ್ರಿ ಕಾಫಿ)
(ii) ಸಂಸ್ಕರಿಸಿದ ಕಾಫಿ ಬೀಜಗಳು
(iii) ಸಂಸ್ಕರಿಸಿಲ್ಲದ ಕಾಫಿ ಬೀಜಗಳು".

## XV

**ಬೆಂಗಳೂರು, ದಿನಾಂಕ:9ನೇ ಜನವರಿ, 1995 [ಸಂಖ್ಯೆ: ಸಿಎಂಡಬ್ಲ್ಯೂ 104 ಎಂಆರ್‌ಇ 94]**

**ಎಸ್.ಓ. 67 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ, 27)ರ 152–ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅನುಸೂಚಿಗೆ ಕೆಳಕಂಡ ತಿದ್ದುಪಡಿಗಳನ್ನು ಈ ಮೂಲಕ ಮಾಡಿದೆ, ಎಂದರೆ:–

ಅನುಸೂಚಿಯಲ್ಲಿ, 11ನೇ ಬಾಬಿನ ತರುವಾಯ, ಕೆಳಕಂಡ ಬಾಬು ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ,–

"111 ಹೂವುಗಳು

ಎಲ್ಲಾ ಹೂವುಗಳು".

## XVI

**ಬೆಂಗಳೂರು, ದಿನಾಂಕ:21ನೇ ಮಾರ್ಚ್, 1996 [ಸಂಖ್ಯೆ: ಸಿಎಂಡಬ್ಲ್ಯೂ 233 ಎಂಆರ್‌ಇ 94]**

**ಎಸ್.ಓ. 1446 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ, 27)ರ 152–ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಅನುಸೂಚಿಗೆ ಈ ಕೆಳಕಂಡ ತಿದ್ದುಪಡಿಗಳನ್ನು ಈ ಮೂಲಕ ಮಾಡಿದೆ, ಎಂದರೆ,–

ಅನುಸೂಚಿಯಲ್ಲಿ, " VII ಎಣ್ಣೆ ಬೀಜಗಳು" ಎಂಬ ಶೀರ್ಷಿಕೆಯ ಅಡಿಯಲ್ಲಿ, 10ನೇ ಬಾಬಿನ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ,–

"11. ಸೊಯಾಬೀನ್".

## XVII

**ಬೆಂಗಳೂರು, ದಿನಾಂಕ:4ನೇ ಅಕ್ಟೋಬರ್, 1996 [ಸಂಖ್ಯೆ: ಸಿಎಂಡಬ್ಲ್ಯೂ 48 ಎಂಆರ್‌ಇ 96]**

**ಎಸ್.ಓ. 1742 :–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ, 27)ರ 152–ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಅನುಸೂಚಿಗೆ ಈ ಕೆಳಕಂಡ ತಿದ್ದುಪಡಿಗಳನ್ನು ಈ ಮೂಲಕ ಮಾಡಿದೆ, ಎಂದರೆ:–

ಅನುಸೂಚಿಯಲ್ಲಿ, " XI ಇತರ ಉತ್ಪನ್ನಗಳು" ಎಂಬ ಶೀರ್ಷಿಕೆ ಅಡಿಯಲ್ಲಿ, 9ನೇ ಬಾಬಿನ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ,–

"10 ಒಣದ್ರಾಕ್ಷಿ".

## XVIII

**ಅಧಿಸೂಚನೆ**

**ಸಂ: ಸಿಡಿ/ 288/ ಎಂಆರ್‌ಇ/ 2002, ಬೆಂಗಳೂರು, ದಿನಾಂಕ 11ನೇ ಮಾರ್ಚ್ 2003**

ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1889ರ 21ನೇ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ, 27) 65ನೇ ಪ್ರಕರಣದ (3)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಕರ್ನಾಟಕ ರಾಜ್ಯಪತ್ರ ವಿಶೇಷ ಸಂಚಿಕೆ ದಿನಾಂಕ 12.11.2001 ರಲ್ಲಿ ಪ್ರಕಟಿಸಿದ ಅಧಿಸೂಚನೆ ಸಂ: ಸಹಕಾರಿ ಇಲಾಖೆ/ 10/ ಎಂಆರ್‌ಇ/ 2001, ದಿನಾಂಕ 30.10.2001ಕ್ಕೆ ಈ ಮೂಲಕ ಈ ಮುಂದಿನ ತಿದ್ದುಪಡಿಗಳನ್ನು ಮಾಡಲಾಗಿದೆ, ಎಂದರೆ:–

ಸದರಿ ಅಧಿಸೂಚನೆಯ ಶೀರ್ಷಿಕೆ " x. ತರಕಾರಿಗಳು" ಅಡಿಯಲ್ಲಿ ಅದಕ್ಕೆ ಸಂಬಂಧಿಸಿದ ಕ್ರ.ಸಂ.1 ಮತ್ತು ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಸೇರಿಸಲಾಗಿದೆ, ಎಂದರೆ:–

1. ತರಕಾರಿಗಳು

[ಗರ್ಕಿನ್ ಹೊರತುಪಡಿಸಿ (ಸೊಪ್ಪುಗಳು ಸೇರಿ)].

**1984ರ ಕರ್ನಾಟಕ ಅಧಿನಿಯಮ ಸಂಖ್ಯೆ: 2**

**ಅಧ್ಯಾಯ I**

**ಪ್ರಾರಂಭಿಕ**

**35. 1966ರ ಕರ್ನಾಟಕ ತಿದ್ದುಪಡಿ ಅಧಿನಿಯಮ 27:–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರಲ್ಲಿ, 16ನೇ ಪ್ರಕರಣದ (2)ನೇ ಉಪಪ್ರಕರಣದ (ಬಿ) ಖಂಡಕ್ಕೆ ಮುಂದಿನ ಖಂಡವನ್ನು ಪ್ರತಿಯೋಜಿಸತಕ್ಕದ್ದು, ಎಂದರೆ,–

(ಬಿ) ಅವನು, (i) ನೈತಿಕ ಅಧಃಪತನವನ್ನು ಒಳಗೊಂಡಿರುವ ಮತ್ತು ಆರು ತಿಂಗಳಿಗೆ ಮೀರುವ ಅವಧಿಯ ಕಾರಾವಾಸ ಶಿಕ್ಷೆಯಿಂದ ದಂಡನೀಯವಾಗುವಂಥ ಅಪರಾಧಕ್ಕಾಗಿ;

(ii) 1976ರ ಕರ್ನಾಟಕ ವಿವಾಹಗಳ (ನೋಂದಣಿ ಮತ್ತು ಸಂಕೀರ್ಣ ಉಪಬಂಧಗಳ) ಅಧಿನಿಯಮದ 20, 21 ಅಥವಾ 22ನೇ ಪ್ರಕರಣದ ಮೇರೆಗಿನ ದಂಡನೀಯವಾದ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಕಾರಾವಾಸ ಶಿಕ್ಷೆಗೆ ಒಳಗಾಗಿದ್ದು, ಆ ತರುವಾಯ ಅಂಥ ಶಿಕ್ಷೆಯನ್ನು ವ್ಯತಿರಿಕ್ತಗೊಳಿಸಿರದಿದ್ದರೆ ಅಥವಾ ಮಾಫಿ ಮಾಡಿರದಿದ್ದರೆ; ಅಥವಾ"

**1991 ಕರ್ನಾಟಕ ಅಧಿನಿಯಮ ಸಂಖ್ಯೆ: 16**

**24. 61ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 61ನೇ ಪ್ರಕರಣದಲ್ಲಿ, (3)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ,–

"(3) (1)ನೇ ಮತ್ತು (2)ನೇ ಉಪಪ್ರಕರಣಗಳಲ್ಲಿ ಏನೇ ಇದ್ದರೂ, ಮಾರುಕಟ್ಟೆ ಸಮಿತಿಯು, ತನ್ನ ಪ್ರಕಾರ್ಯಗಳನ್ನು ನಿರ್ವಹಿಸಲು ಕೃಷಿ ಮಾರುಕಟ್ಟೆ ನಿರ್ದೇಶಕರಿಂದ ಮುಂಚಿತವಾಗಿಯೇ ಅನುಮತಿ ಪಡೆದು, ಒಂದು ನೂರಾ ಎಂಬತ್ತು ದಿವಸಗಳನ್ನು ಮೀರದ ಅವಧಿಯವರೆಗೆ ಅಂಥ ತಿಂಗಳ ವೇತನದೊಂದಿಗೆ ಅಂಥ ಸಂಖ್ಯೆಯಷ್ಟು ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಬಹುದು ಮತ್ತು ಅದರ ನೇಮಕಾತಿಗಳನ್ನು ಮಾಡಬಹುದು".

**27. 63ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 63ನೇ ಪ್ರಕರಣದ ತರುವಾಯ ಮುಂದಿನ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

**"63ಎ. ಮಾರುಕಟ್ಟೆ ಸಮಿತಿ ಮತ್ತು ಕಾರ್ಯದರ್ಶಿಯು, 1964ರ ಕರ್ನಾಟಕ ಅಧಿನಿಯಮ 22, 1977ರ 14 ಮತ್ತು 1985ರ 20ರ ಮೇರೆಗೆ ಚಲಾಯಿಸುವ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** (1) ಈ ಅಧಿನಿಯಮವು ಅನ್ವಯಿಸುವ ಯಾವುದೇ ಪ್ರದೇಶದಲ್ಲಿ ಅಥವಾ ಅದರ ಯಾವುದೇ ಭಾಗದಲ್ಲಿ, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಅದರಲ್ಲಿ, ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಮತ್ತು ಅವಧಿಗಾಗಿ ಮತ್ತು ಅಧಿಸೂಚನೆಯಲ್ಲಿ ಗೊತ್ತುಪಡಿಸಬಹುದಾದಂಥ ನಿರ್ಬಂಧಗಳು ಮತ್ತು ಮಾರ್ಪಾಟುಗಳು ಯಾವುವಾದರೂ ಇದ್ದರೆ ಅವುಗಳಿಗೊಳಪಟ್ಟು,–

(i) ಕರ್ನಾಟಕ ಪೌರಸಭೆಗಳ ಅಧಿನಿಯಮ, 1964, ಕರ್ನಾಟಕ ಪೌರಸಭಾ ನಿಗಮಗಳ ಅಧಿನಿಯಮ, 1976 ಮತ್ತು ಕರ್ನಾಟಕ ಜಿಲ್ಲಾ ಪರಿಷತ್ತುಗಳು, ತಾಲ್ಲೂಕು ಪಂಚಾಯತಿ ಸಮಿತಿಗಳು, ಮಂಡಲ ಪಂಚಾಯತಿಗಳು ಮತ್ತು ನ್ಯಾಯ ಪಂಚಾಯತಿಗಳ ಅಧಿನಿಯಮ, 1983ರ ಮೇರೆಗೆ ಮಾರುಕಟ್ಟೆ ಸಮಿತಿಯು, ಕಾರ್ಪೊರೇಷನ್ ಮುನಿಸಿಪಲ್ ಕೌನ್ಸಿಲ್ ಅಥವಾ ಮಂಡಲ ಪಂಚಾಯತಿ ಅಥವಾ ಅದರ ಸ್ಥಾಯಿ ಸಮಿತಿಯ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

(ii) ಕಾರ್ಪೊರೇಷನ್ನಿನ ಕಮಿಷನರನ, ಮುನ್ಸಿಪಲ್ ಕಮಿಷನರನ, ಮುನ್ಸಿಪಲ್ ಕೌನ್ಸಿಲ್‌ನ ಮುಖ್ಯ ಅಧಿಕಾರಿಯ ಅಥವಾ ಮಂಡಲ ಪಂಚಾಯತಿಯ ಕಾರ್ಯದರ್ಶಿಯ ಅಧಿಕಾರಗಳನ್ನು ಚಲಾಯಿಸತಕ್ಕದ್ದೆಂದು ಕಾರ್ಯದರ್ಶಿಯು ಸಂದರ್ಭಾನುಸಾರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದೆಂದು ಘೋಷಿಸಬಹುದು:

ಪರಂತು, ಅಂಥ ಪ್ರದೇಶ ಅಥವಾ ಅದರ ಭಾಗವು ನಗರ ಅಥವಾ ಟೌನ್ ಮುನ್ಸಿಪಾಲಿಟಿ ಅಥವಾ ಮಂಡಲದ ಪರಿಮಿತಿಯೊಳಗೆ ಇದ್ದರೆ ಅಂಥ ಘೋಷಣೆಯನ್ನು ಮಾಡುವುದಕ್ಕೆ ಮುಂಚೆ ಸಂಬಂಧಪಟ್ಟ ಕಾರ್ಪೊರೇಷನ್, ಮುನ್ಸಿಪಲ್ ಕೌನ್ಸಿಲ್ ಅಥವಾ ಮಂಡಲ ಪಂಚಾಯತಿಯನ್ನು ಸಮಾಲೋಚಿಸತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಘೋಷಣೆಯನ್ನು ಮಾಡಿದ ಮೇಲೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನಲ್ಲಿ ಮತ್ತು ಇತರದರಲ್ಲಿ ಏನೇ ಇದ್ದಾಗ್ಯೂ, ಕಾರ್ಪೊರೇಷನ್, ಮುನ್ಸಿಪಲ್ ಕೌನ್ಸಿಲ್ ಅಥವಾ ಮಂಡಲ ಪಂಚಾಯತಿ ಅಥವಾ ಅದರ ಯಾವುದೇ ಸ್ಥಾಯಿ ಸಮಿತಿ ಅಥವಾ ಕಾರ್ಪೊರೇಷನ್ ಕಮಿಷನರ್, ಮುನ್ಸಿಪಲ್ ಕಮಿಷನರ್ ಅಥವಾ ಮುನ್ಸಿಪಲ್ ಕೌನ್ಸಿಲ್‌ನ ಮುಖ್ಯ ಅಧಿಕಾರಿ ಅಥವಾ ಮಂಡಲ ಪಂಚಾಯತಿಯ ಕಾರ್ಯದರ್ಶಿ–ಇವರುಗಳು, ಸಂದರ್ಭಾನುಸಾರ ಅಂಥ ಘೋಷಣೆಯ ಮೂಲಕ ಮಾರುಕಟ್ಟೆ ಸಮಿತಿಗೆ ಮತ್ತು ಕಾರ್ಯದರ್ಶಿಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಅಥವಾ ವಿಧಿಸಿದಂಥ ಪ್ರಕಾರ್ಯಗಳನ್ನು ನೆರವೇರಿಸಲು ಸಕ್ಷಮವಾಗಿರತಕ್ಕದ್ದಲ್ಲ.

(3) ಮಾರುಕಟ್ಟೆ ಸಮಿತಿ ಅಥವಾ ಕಾರ್ಯದರ್ಶಿಯು, (1)ನೇ ಉಪಪ್ರಕರಣದ ಮೇರೆಗೆ, ಅದರಿಂದ ಅಥವಾ ಅವನಿಂದ ಚಲಾಯಿಸಬಹುದಾದ ಯಾವುವೇ ಅಧಿಕಾರಗಳನ್ನು ಮತ್ತು ನೆರವೇರಿಸಬಹುದಾದಂಥ ಪ್ರಕಾರ್ಯಗಳನ್ನು ಮಾರುಕಟ್ಟೆ ಸಮಿತಿಯ ಯಾರೇ ಅಧಿಕಾರಿ ಅಥವಾ ನೌಕರನಿಗೆ ಪ್ರತ್ಯಾಯೋಜಿಸಬಹುದು.

(4) (3)ನೇ ಉಪಪ್ರಕರಣದ ಮೇರೆಗೆ ನಿಯೋಜಿಸಿದ ಯಾವುವೇ ಅಧಿಕಾರಗಳನ್ನು ಚಲಾಯಿಸುವುದು ಅಥವಾ ಪ್ರಕಾರ್ಯಗಳನ್ನು ನೆರವೇರಿಸುವುದು ಸಂದರ್ಭಾನುಸಾರ ಮಾರುಕಟ್ಟೆ ಸಮಿತಿಯ ಅಥವಾ ಕಾರ್ಯದರ್ಶಿಯು ವಿಧಿಸಬಹುದಾದಂಥ ಪರಿಮಿತಿಗಳಿಗೆ, ಷರತ್ತುಗಳಿಗೆ ಮತ್ತು ನಿಯಂತ್ರಣಕ್ಕೆ ಒಳಪಟ್ಟಿರತಕ್ಕದ್ದು.

XXX XXX XXX

**37. 78ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 78ನೇ ಪ್ರಕರಣದಲ್ಲಿ, (1)ನೇ ಉಪ–ಪ್ರಕರಣದಲ್ಲಿ, ಪರಂತುಕದ ತರುವಾಯ ಈ ಕೆಳಕಂಡದ್ದನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತೂ ಪರಂತು, ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ಆ ಗರಿಷ್ಠ ಕಮಿಷನ್,–

(i) ತೆಂಗಿನಕಾಯಿಗೆ ಸಂಬಂಧಿಸಿದಂತೆ, ಪ್ರತಿ ಒಂದು ಸಾವಿರಕ್ಕೆ ಹದಿನೈದು ರೂಪಾಯಿಗಳನ್ನು; ಮತ್ತು

(ii) ಯಾವುದೇ ಇನ್ನಿತರ ಕೃಷಿ ಉತ್ಪನ್ನಗಳಿಗೆ ಸಂಬಂಧಿಸಿದಂತೆ, ಪ್ರತಿ ಕ್ವಿಂಟಾಲ್‌ಗೆ ಹದಿನೈದು ರೂಪಾಯಿಗಳನ್ನು

– ಮೀರತಕ್ಕದ್ದಲ್ಲ".

**39. 85ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 85ನೇ ಪ್ರಕರಣದಲ್ಲಿ:–

(1) (1)ನೇ ಉಪ-ಪ್ರಕರಣದಲ್ಲಿ, "ಅಥವಾ ಒಂದು ಸಾವಿರ ರೂಪಾಯಿಗಳಿಗಿಂತ ಕಡಿಮೆಯಲ್ಲದ ಬ್ಯಾಂಕ್ ಖಾತರಿ" ಎಂಬ ಪದಗಳಿಗೆ ಬದಲಾಗಿ, "ಐದು ಸಾವಿರ ರೂಪಾಯಿಗಳು, ಮತ್ತು ಹತ್ತು ಸಾವಿರ ರೂಪಾಯಿಗಳು ಅಥವಾ ಹಿಂದಿನ ವರ್ಷದ ವಾರ್ಷಿಕ ವಹಿವಾಟಿನ ಶೇಕಡಾ ಎರಡಕ್ಕೆ ಸಮನಾದ ಮೊತ್ತ ಇವುಗಳಲ್ಲಿ ಯಾವುದು ಹೆಚ್ಚೋ ಅಷ್ಟು ಮೊತ್ತದ ನಿರಂತರ ಬ್ಯಾಂಕ್ ಖಾತರಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(2) ಹಾಗೆ ತಿದ್ದುಪಡಿ ಮಾಡಿದ (1)ನೇ ಉಪ-ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:– "ಪರಂತು, (1)ನೇ ಉಪ-ಪ್ರಕರಣದಲ್ಲಿರುವುದು ಯಾವುದೂ ಯಾವುದೇ ಸಹಕಾರಿ ಸಂಘಕ್ಕೆ ಅನ್ವಯವಾಗತಕ್ಕದ್ದಲ್ಲ".

**40. 86ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 86ನೇ ಪ್ರಕರಣದಲ್ಲಿ, (1)ನೇ ಉಪ-ಪ್ರಕರಣದಲ್ಲಿ, "ಅಥವಾ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಒಂದು ಸಾವಿರ ರೂಪಾಯಿಗೆ ಕಡಿಮೆ ಇಲ್ಲದ ಆದರೆ ಐದು ಸಾವಿರ ರೂಪಾಯಿಗಳನ್ನು ಮೀರದ ಬ್ಯಾಂಕ್ ಖಾತರಿ" ಎಂಬ ಪದಗಳಿಗೆ ಬದಲಾಗಿ, "ಐದು ಸಾವಿರ ರೂಪಾಯಿಗಳು ಮತ್ತು ಹತ್ತು ಸಾವಿರ ರೂಪಾಯಿಗಳ ಅಥವಾ ಹಿಂದಿನ ವರ್ಷದ ವಾರ್ಷಿಕ ವಹಿವಾಟಿನ ಶೇಕಡಾ ಎರಡಕ್ಕೆ ಸಮನಾದ ಮೊತ್ತ ಇವುಗಳಲ್ಲಿ ಯಾವುದು ಹೆಚ್ಚೋ ಅಷ್ಟು ನಿರಂತರ ಬ್ಯಾಂಕ್ ಖಾತರಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**41. 90ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 90ನೇ ಪ್ರಕರಣದಲ್ಲಿ, (3)ನೇ ಉಪ-ಪ್ರಕರಣದಲ್ಲಿ, (ಎ) ಯಿಂದ (ಡಿ) ವರೆಗಿನ ಖಂಡಗಳಿಗೆ ಬದಲಾಗಿ, ಈ ಕೆಳಕಂಡದ್ದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎ) ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್‌ನಲ್ಲಿ; ಅಥವಾ

(ಬಿ) ಮಾರುಕಟ್ಟೆ ಪ್ರದೇಶದಲ್ಲಿ ತನ್ನ ಶಾಖಾ ಕಚೇರಿಯನ್ನು ಹೊಂದಿರುವ ಯಾವುದೇ ಸಹಕಾರಿ ಬ್ಯಾಂಕ್‌ನಲ್ಲಿ; ಅಥವಾ

(ಸಿ) ಸಹಕಾರಿ ಉಳಿತಾಯ ಬ್ಯಾಂಕ್‌ನಲ್ಲಿ",

**46. 106ನೇ ಪ್ರಕರಣದ ಪ್ರತಿಯೋಜನೆ.**– ಮೂಲ ಅಧಿನಿಯಮದ 106ನೇ ಪ್ರಕರಣಕ್ಕೆ ಬದಲಾಗಿ, ಈ ಕೆಳಕಂಡದ್ದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"106. ಮಂಡಲಿಯ ಸದಸ್ಯರ ಪದಾವಧಿ.**– ಮಂಡಲಿಯ ಚುನಾಯಿತ ಸದಸ್ಯರ ಪದಾವಧಿಯು, ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿದ್ದ ಹೊರತು ಮಾರುಕಟ್ಟೆ ಸಮಿತಿಯ ಸದಸ್ಯರ ಪದಾವಧಿಯೊಂದಿಗೆ ಸಹ-ಅಂತ್ಯವಾಗತಕ್ಕದ್ದು:

ಪರಂತು, ಮಂಡಲಿಯ ಚುನಾಯಿತ ಸದಸ್ಯರ ಪದಾವಧಿಯು, ಕ್ರಮಬದ್ಧವಾಗಿ ಚುನಾಯಿತರಾದ ಸದಸ್ಯರ ಪದಾವಧಿಯು ಪ್ರಾರಂಭವಾಗುವವರೆಗೂ ಮುಂದುವರೆಯುತ್ತದೆ ಎಂದು ಭಾವಿಸತಕ್ಕದ್ದು".

**47. 106ಎ ಹೊಸ ಪ್ರಕರಣದ ಸೇರ್ಪಡೆ.**– ಹಾಗೆ ಪ್ರತಿಯೋಜಿಸಿದ ಮೂಲ ಅಧಿನಿಯಮದ 106ನೇ ಪ್ರಕರಣದ ತರುವಾಯ ಈ ಕೆಳಕಂಡ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

**"106ಎ. ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಇತರ ಸದಸ್ಯರುಗಳಿಗೆ ಉಪವೇಶನ ಫೀಜು ಮತ್ತು ಭತ್ಯೆಗಳು:**– ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಇತರ ಸದಸ್ಯರುಗಳು, ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಉಪವೇಶನ ಫೀಜು ಮತ್ತು ಇತರ ಭತ್ಯೆಗಳನ್ನು ಪಡೆಯತಕ್ಕದ್ದು."

**48. 109ಎ ಹೊಸ ಪ್ರಕರಣದ ಸೇರ್ಪಡೆ.**– ಮೂಲ ಅಧಿನಿಯಮದ 109ನೇ ಪ್ರಕರಣದ ತರುವಾಯ, ಈ ಕೆಳಕಂಡ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ :–

**"109ಎ. ವ್ಯವಸ್ಥಾಪಕ ನಿರ್ದೇಶಕನ ಪ್ರಕಾರ್ಯಗಳು.**– (1) 107ನೇ ಪ್ರಕರಣದ ಮೇರೆಗಿನ ಅಧ್ಯಕ್ಷನ ಸಾಮಾನ್ಯ ಅಧಿಕಾರಗಳಿಗೆ ಒಳಪಟ್ಟು, ಮಂಡಲಿಯ ವ್ಯವಸ್ಥಾಪಕ ನಿರ್ದೇಶಕನು,–

(ಎ) ಈ ಅಧಿನಿಯಮದ ಅಥವಾ ಅದರ ಮೇರೆಗೆ ಮಾಡಲಾದ ನಿಯಮಗಳು ಮತ್ತು ವಿನಿಯಮಗಳ ಮೂಲಕ ತನಗೆ ವಿಶೇಷವಾಗಿ ಪ್ರದಾನ ಮಾಡಿದ ಅಥವಾ ವಿಧಿಸಿದ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನೆರವೇರಿಸತಕ್ಕದ್ದು;

(ಬಿ) ಅಧ್ಯಕ್ಷನ ಸಾಮಾನ್ಯ ಅಧೀಕ್ಷಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು, ಮಂಡಲಿಯ ಅಧಿಕಾರಿಗಳು ಮತ್ತು ನೌಕರರನ್ನು ನಿಯಂತ್ರಿಸತಕ್ಕದ್ದು;

(ಸಿ) ಮಂಡಲಿಯ ಎಲ್ಲಾ ಕಾರ್ಯ ನಿರ್ವಹಣೆಯ ಮೇಲ್ವಿಚಾರಣೆ ಮತ್ತು ನಿಯಂತ್ರಣ ನೋಡಿಕೊಳ್ಳತಕ್ಕದ್ದು;

(ಡಿ) ಮಂಡಲಿಯ ಸಭೆಗಳ ವ್ಯವಹರಣೆಗಳಿಗೆ ಸಂಬಂಧಿಸಿದ ಎಲ್ಲಾ ದಾಖಲೆಗಳ ಮತ್ತು ದಸ್ತಾವೇಜುಗಳ ಅಭಿರಕ್ಷೆಯನ್ನು ಹೊಂದಿರತಕ್ಕದ್ದು;

(ಇ) ಮಂಡಲಿಯ ನಿಧಿಗಳಿಂದ ಹಣವನ್ನು ತೆಗೆಯುವುದು ಮತ್ತು ಬಟವಾಡೆ ಮಾಡತಕ್ಕದ್ದು; ಮತ್ತು

(ಎಫ್) ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

(2) ಮಂಡಲಿಯ ವ್ಯವಸ್ಥಾಪಕ ನಿರ್ದೇಶಕನು ಮಂಡಲಿಯ ಪ್ರತಿಯೊಂದು ಸಭೆಗೆ ಹಾಜರಾಗತಕ್ಕದ್ದು ಮತ್ತು ಸಭೆಯ ವ್ಯವಹರಣೆಗಳಲ್ಲಿ ಭಾಗವಹಿಸತಕ್ಕದ್ದು ಆದರೆ ನಿರ್ಣಯವನ್ನು ಮಂಡಿಸುವುದಕ್ಕೆ ಅಥವಾ ಮತ ಚಲಾಯಿಸುವುದಕ್ಕೆ ಹಕ್ಕನ್ನು ಹೊಂದಿರತಕ್ಕದ್ದಲ್ಲ".

**50. 112ನೇ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 112ನೇ ಪ್ರಕರಣಕ್ಕೆ ಬದಲಾಗಿ, ಈ ಕೆಳಕಂಡ ಪ್ರಕರಣವನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಮಂಡಲಿಯ ಸ್ಥಾಪನೆ ತರುವಾಯ, 4, 5, 6, 68, 96, 126, 126ಎ, 127, 143, 144, 145 ಮತ್ತು 149ನೇ ಪ್ರಕರಣಗಳ ಮೇರೆಗಿನ ಯಾವುದೇ ಪ್ರಸ್ತಾವಗಳ ಬಗ್ಗೆ ಅದು ಸಮಾಲೋಚಿಸತಕ್ಕದ್ದು".

**56. 147ನೇ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 147ನೇ ಪ್ರಕರಣಕ್ಕೆ ಬದಲಾಗಿ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು ಎಂದರೆ:–

**"147. ವಿನಿಯಮಗಳು.–** (1) ಮಂಡಳಿಯು, ಈ ಅಧಿನಿಯಮದ ಉಪಬಂಧಗಳು ಮತ್ತು 146ನೇ ಪ್ರಕರಣದ ಮೇರೆಗೆ ರಚಿಸಿದ ನಿಯಮಗಳ ಉಪಬಂಧಗಳಿಗೆ ಒಳಪಟ್ಟು ಮತ್ತು ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸಲು ವಿನಿಯಮಗಳನ್ನು ರಚಿಸತಕ್ಕದ್ದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ, ಮಂಡಳಿಯು ಈ ಕೆಳಕಂಡ ಎಲ್ಲಾ ಅಥವಾ ಯಾವುದೇ ವಿಷಯಗಳಿಗೆ ಉಪಬಂಧ ಕಲ್ಪಿಸಲು ವಿನಿಯಮಗಳನ್ನು ರಚಿಸತಕ್ಕದ್ದು, ಎಂದರೆ:–

(ಎ) ಮಂಡಳಿಯ ಸಭೆಗಳನ್ನು ಕರೆಯುವುದು ಮತ್ತು ನಡೆಸುವುದು, ಅಂಥ ಸಭೆಗಳನ್ನು ನಡೆಸಬೇಕಾದಂಥ ಕಾಲ ಮತ್ತು ದಿನಾಂಕ, ಅಂಥ ಸಭೆಗಳಲ್ಲಿನ ವ್ಯವಹಾರ ನಡವಳಿಕೆ ಮತ್ತು ಅದರಲ್ಲಿ ಕೋರಂ ರಚಿಸುವುದಕ್ಕೆ ಅಗತ್ಯವಾದ ವ್ಯಕ್ತಿಗಳ ಸಂಖ್ಯೆ;

(ಬಿ) ಮಂಡಳಿಯ ಅಧಿಕಾರಿಗಳ ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು;

(3) ಮಂಡಳಿಯ ಅಧಿಕಾರಿಗಳ ಮತ್ತು ಇತರ ನೌಕರರ ಭರ್ತಿ, ನೇಮಕಾತಿ ಮತ್ತು ಇತರ ಸೇವಾ ಷರತ್ತುಗಳು;

(ಡಿ) ಮಂಡಳಿಯ ಸ್ವತ್ತಿನ ವ್ಯವಸ್ಥಾಪನೆ;

(ಇ) ಮಂಡಳಿಯ ಪರವಾಗಿ ಕರಾರುಗಳನ್ನು ಮಾಡಿಕೊಳ್ಳುವುದು ಮತ್ತು ಚರ ಮತ್ತು ಸ್ಥಿರ ಸ್ವತ್ತುಗಳನ್ನು ಆರ್ಜಿಸುವುದು;

(ಎಫ್) ಮಂಡಳಿಯಿಂದ ಲೆಕ್ಕಪತ್ರಗಳ ನಿರ್ವಹಣೆ, ಮೇಲ್ವಿಚಾರಣೆ ಮತ್ತು ಲೆಕ್ಕ ಪರಿಶೋಧನೆ ಮತ್ತು ಆಯವ್ಯಯ ಪಟ್ಟಿಯನ್ನು ಸಿದ್ಧಪಡಿಸುವುದು;

(ಜಿ) ಈ ಅಧಿನಿಯಮದ ಮೇರೆಗೆ ಮಂಡಳಿಯ ಪ್ರಕಾರ್ಯಗಳನ್ನು ನೆರವೇರಿಸುವ ಬಗೆಗಿನ ಪ್ರಕ್ರಿಯೆ;

(ಎಚ್) ಬಜೆಟ್‌ನ್ನು ಸಿದ್ಧಪಡಿಸುವ ರೀತಿ;

(ಐ) ವಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬೇಕಾದ ಅಥವಾ ಉಪಬಂಧ ಕಲ್ಪಿಸಬಹುದಾದ ಯಾವುದೇ ಇತರ ವಿಷಯ".

## 1998ರ ಕರ್ನಾಟಕ ಅಧಿನಿಯಮ ಸಂಖ್ಯೆ:– 16

**2. 10ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ ಸಂಖ್ಯೆ27) (ಇನ್ನು ಮುಂದೆ ಮೂಲ ಅಧಿನಿಯಮ ಎಂದು ಉಲ್ಲೇಖಿತವಾಗಿದೆ) 10ನೇ ಪ್ರಕರಣದ (1)ನೇ ಉಪಪ್ರಕರಣದ (ii) ನೇ ಖಂಡದಲ್ಲಿ ಚಿಲ್ಲರೆ ವ್ಯಾಪಾರಿಯಾಗಿರದ ಒಬ್ಬ ವ್ಯಾಪಾರಿ" ಎಂಬ ಪದಗಳಿಗೆ "ಚಿಲ್ಲರೆ ವ್ಯಾಪಾರಿಗಳಾಗಿರದ ಕಮಿಷನ್ ಏಜೆಂಟರುಗಳ ಅಥವಾ ವ್ಯಾಪಾರಿಗಳ ಪೈಕಿ ಒಬ್ಬ ವ್ಯಕ್ತಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**3. 11ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ನೇ ಪ್ರಕರಣದ (1)ನೇ ಉಪಪ್ರಕರಣದ (ii) ನೇ ಖಂಡದಲ್ಲಿ "ವ್ಯಾಪಾರಿಗಳು ಚುನಾಯಿಸಿದ" ಎಂಬ ಪದಗಳಿಗೆ "ಕಮಿಷನ್ ಏಜೆಂಟರುಗಳು ಮತ್ತು ವ್ಯಾಪಾರಿಗಳು ಚುನಾಯಿಸಿದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 63ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ನೇ ಪ್ರಕರಣದ (2)ನೇ ಉಪಪ್ರಕರಣದ (ಬಿ) ಖಂಡದಲ್ಲಿ (xi) ನೇ ಉಪಖಂಡದ ತರುವಾಯ ಈ ಮುಂದಿನ ಉಪಖಂಡವನ್ನು ಸೇರಿಸತಕ್ಕದ್ದು, ಎಂದರೆ,–

``(xii) ಸಂದರ್ಭಾನುಸಾರ ಕಮಿಷನ್ ಏಜೆಂಟರುಗಳು ಅಥವಾ ವ್ಯಾಪಾರಿಗಳಿಂದ ಅಧಿಸೂಚಿತ ಕೃಷಿ ಉತ್ಪನ್ನದ ಬೆಲೆಯನ್ನು ಪಡೆಯುವುದು ಮತ್ತು ಮಾರಾಟಗಾರರಿಗೆ ಸಂದಾಯದ ವ್ಯವಸ್ಥೆ ಮಾಡುವುದು".

**5. 75ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 75ನೇ ಪ್ರಕರಣದಲ್ಲಿ,–

(i) "ಮತ್ತು ಮಾರುಕಟ್ಟೆ ಹೊರಗೆ ಅಥವಾ ಉಪ ಮಾರುಕಟ್ಟೆಯಲ್ಲಿ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(ii) "ಉಪವಿಧಿಗಳಲ್ಲಿ ನಿಯಮಿಸಬಹುದಾದಂಥ ಸಾಲದ ಗರಿಷ್ಠ ಅವಧಿ" ಎಂಬ ಪದಗಳಿಗೆ "ಏಳು ದಿನಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**6. 77ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 77ನೇ ಪ್ರಕರಣದ ತರುವಾಯ ಈ ಮುಂದಿನ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

**"77ಎ. ವ್ಯಾಪಾರಿಗಳಿಂದ ಅಧಿಸೂಚಿತ ಕೃಷಿ ಉತ್ಪನ್ನದ ಬೆಲೆಯ ಸಂದಾಯ.–** ಅಧಿಸೂಚಿತ ಕೃಷಿ ಉತ್ಪನ್ನವನ್ನು ಖರೀದಿಸುವ ವ್ಯಾಪಾರಿಯು ಮಾರಾಟಗಾರನಿಗೆ ಈ ಕೆಳಕಂಡ ವಿಧಾನದಂತೆ ಅಂಥ ಉತ್ಪನ್ನದ ಬೆಲೆಯನ್ನು ಸಂದಾಯ ಮಾಡತಕ್ಕದ್ದು:–

(i) ವ್ಯಾಪಾರಿಯು ಮಾರಾಟಗಾರನಿಂದ ನೇರವಾಗಿ ಅಧಿಸೂಚಿತ ಕೃಷಿ ಉತ್ಪನ್ನವನ್ನು ಖರೀದಿಸಿದರೆ, ವ್ಯಾಪಾರಿಯು ಮಾರಾಟವಾದ ಕೂಡಲೇ ಅಧಿಕೃತ ದಾಖಲೆಗಳೊಂದಿಗೆ ಅಂಥ ಉತ್ಪನ್ನದ ಬೆಲೆಯನ್ನು ಮಾರುಕಟ್ಟೆ ಸಮಿತಿಗೆ ಜಮೆ ಮಾಡತಕ್ಕದ್ದು ಮತ್ತು ಉತ್ಪನ್ನವನ್ನು ಕೊಡತಕ್ಕದ್ದು.

(ii) ವ್ಯಾಪಾರಿಯು ಕಮಿಷನ್ ಏಜೆಂಟರುಗಳ ಮೂಲಕ ಅಧಿಸೂಚಿತ ಕೃಷಿ ಉತ್ಪನ್ನವನ್ನು ನಗದು ರೂಪದಲ್ಲಿ ಖರೀದಿಸಿದರೆ, ವ್ಯಾಪಾರಿಯು ಮಾರಾಟವಾದ ಕೂಡಲೇ ಅಧಿಕೃತ ದಾಖಲೆಗಳೊಂದಿಗೆ ಅಂಥ ಉತ್ಪನ್ನದ ಬೆಲೆಯನ್ನು, ಮಾರುಕಟ್ಟೆ ಸಮಿತಿಗೆ ಜಮೆ ಮಾಡತಕ್ಕದ್ದು ಮತ್ತು ಉತ್ಪನ್ನವನ್ನು ಕೊಡತಕ್ಕದ್ದು.

(iii) ವ್ಯಾಪಾರಿಯು ಕಮಿಷನ್ ಏಜೆಂಟರುಗಳ ಮೂಲಕ ಅಧಿಸೂಚಿತ ಕೃಷಿ ಉತ್ಪನ್ನವನ್ನು ಸಾಲದ ಮೇಲೆ ಖರೀದಿಸಿದರೆ, ವ್ಯಾಪಾರಿಯು, ಅಧಿಕೃತ ದಾಖಲೆಗಳೊಂದಿಗೆ ಅಂಥ ಉತ್ಪನ್ನದ ಬೆಲೆಯನ್ನು ಅನುಮತಿಸಿದ ಸಾಲದ ಅವಧಿಯೊಳಗೆ ಕಮಿಷನ್ ಏಜೆಂಟನಿಗೆ ಜಮೆ ಮಾಡತಕ್ಕದ್ದು ಮತ್ತು ಅಂಥ ಜಮೆ ಮಾಡುವವರೆಗೂ ಅವನು ಪ್ರಾಂಗಣದಿಂದ ಉತ್ಪನ್ನವನ್ನು ತೆಗೆಯತಕ್ಕದ್ದಲ್ಲ".

[1][ಪರಂತು, ಈ ಪ್ರಕರಣದ ಉಪಬಂಧಗಳು ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ಮಾರುಕಟ್ಟೆ ಪ್ರಾಂಗಣದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕೃಷಿ ಉತ್ಪನ್ನಗಳಿಗೆ ಅನ್ವಯಿಸತಕ್ಕದ್ದು][1].

1. 2007ರ ಅಧಿನಿಯಮ ಸಂಖ್ಯೆ 23ರ ಮೂಲಕ 14.08.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**7. 78ನೇ ಪ್ರಕರಣದ ಪ್ರತಿಯೋಜನೆ:–** ಮೂಲ ಅಧಿನಿಯಮದ 78ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"78. ಕಮಿಷನ್ ಏಜೆಂಟರ ಕಮಿಷನ್ ಮತ್ತು ಹೊಣೆಗಾರಿಕೆ.–** (1) ಕಮಿಷನ್ ಏಜೆಂಟನು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅಧಿಸೂಚಿತ ಕೃಷಿ ಉತ್ಪನ್ನವನ್ನು ಮಾರಾಟ ಮಾಡಿರುವ ಬೆಲೆಯ ಶೇಕಡಾ ಎರಡರಷ್ಟು ಮೀರದ ದರದಲ್ಲಿ ಮಾರುಕಟ್ಟೆ ಸಮಿತಿಯ ಮೂಲಕ ತನ್ನ ಖರೀದಿದಾರನ ಕಡೆಯಿಂದ ಮಾತ್ರ ಕಮಿಷನನ್ನು ಪಡೆಯತಕ್ಕದ್ದು :

ಪರಂತು, ಹಣ್ಣುಗಳು, ತರಕಾರಿಗಳು ಮತ್ತು ಹೂಗಳಂಥ ಅಧಿಸೂಚಿತ ಕೃಷಿ ಉತ್ಪನ್ನದ ಸಂದರ್ಭದಲ್ಲಿ ಕಮಿಷನ್ ಏಜೆಂಟನು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅಂಥ ಅಧಿಸೂಚಿತ ಕೃಷಿ ಉತ್ಪನ್ನದ ಬೆಲೆಯ ಶೇಕಡಾ ಐದರಷ್ಟನ್ನು ಮೀರದಂಥ ದರಗಳಲ್ಲಿ ಕಮಿಷನನ್ನು ವಿಧಿಸಬಹುದು.

(2) ಕಮಿಷನ್ ಏಜೆಂಟನು,–

(ಎ) ಮಾರಾಟಗಾರನು ತನಗೆ ವಹಿಸಿಕೊಟ್ಟ ಅಧಿಸೂಚಿತ ಕೃಷಿ ಉತ್ಪನ್ನದ ದಾಸ್ತಾನಿಡುವುದಕ್ಕೆ ಮತ್ತು ಅದರ ಮಾರಾಟ ಮಾಡುವುದಕ್ಕೆ ವ್ಯವಸ್ಥೆ ಮಾಡತಕ್ಕದ್ದು;

(ಬಿ) ಮಾರಾಟಗಾರನ ಸರಕುಗಳನ್ನು ಸುರಕ್ಷಿತ ಅಭಿರಕ್ಷೆಯಲ್ಲಿಡತಕ್ಕದ್ದು ಮತ್ತು ಅವುಗಳನ್ನು ಬೆಂಕಿ, ಕಳ್ಳತನ ಅಥವಾ ಪ್ರವಾಹ, ಮಳೆ ಅಥವಾ ಯಾವುದೇ ಇತರ ನೈಸರ್ಗಿಕ ವಿಪತ್ತುಗಳಿಂದ ರಕ್ಷಿಸಲು ಸಾಕಷ್ಟು ವಿಮೆ ಮಾಡಿಸತಕ್ಕದ್ದು; ಮತ್ತು

(ಸಿ) ಮಾರಾಟಗಾರನಿಗೆ ಸಂಬಂಧಿಸಿದ ಅಧಿಸೂಚಿತ ಕೃಷಿ ಉತ್ಪನ್ನದ ಸಾಲದ ಮಾರಾಟದ ಸಂದರ್ಭದಲ್ಲಿ ಮಾರಾಟವಾದ ಕೂಡಲೇ ಅವನು ಖರೀದಿದಾರನಿಂದ ಉತ್ಪನ್ನದ ಬೆಲೆಯನ್ನು ಪಡೆಯಲಿ ಅಥವಾ ಪಡೆಯದಿರಲಿ ಅಂಥ ಉತ್ಪನ್ನದ ಬೆಲೆಯನ್ನು ಅಧಿಕೃತ ದಾಖಲೆಗಳೊಂದಿಗೆ ಮಾರುಕಟ್ಟೆ ಸಮಿತಿಗೆ ಜಮೆ ಮಾಡತಕ್ಕದ್ದು.

(3) ಕಮಿಷನ್ ಏಜೆಂಟನು ತನ್ನ ಕಮಿಷನ್‌ನನ್ನು ಮತ್ತು ಅಧಿಕೃತ ದಾಖಲೆಗಳ ಆಧಾರದ ಮೇಲೆ ಹಿಡಿದುಕೊಳ್ಳಲು ಅಧಿಕೃತವಾದಂಥ ಇತರ ಮೊತ್ತವನ್ನು ಮಾರುಕಟ್ಟೆ ಸಮಿತಿ ಮೂಲಕ ಪಡೆಯತಕ್ಕದ್ದು."

* * * * *

## ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು, 1968
## ನಿಯಮಗಳ ಅನುಕ್ರಮಣಿಕೆ

ನಿಯಮ ಸಂಖ್ಯೆ

30. ಮತಪತ್ರಗಳ ಲೆಕ್ಕ
31. ಲಕೋಟೆಗಳನ್ನು ಮೊಹರು ಮಾಡುವುದು
32. ತುರ್ತು ಸನ್ನಿವೇಶದಲ್ಲಿ ಮತದಾನವನ್ನು ಮುಂದೂಡುವುದು
33. ಮತದಾನವನ್ನು ಮುಂದೂಡಿದ ತರುವಾಯದ ಕಾರ್ಯವಿಧಾನ
34. ಮತಪೆಟ್ಟಿಗೆಗಳ ನಾಶ, ಮುಂತಾದ ಸಂದರ್ಭಗಳಲ್ಲಿ ಹೊಸದಾಗಿ ಮತದಾನ ನಡೆಸುವುದು
35. ಮತಗಳ ಎಣಿಕೆ
36. ಎಣಿಕೆಯು ನಿರಂತರವಾಗಿ ನಡೆಯುವುದು
37. ಚುನಾವಣಾ ಫಲಿತಾಂಶಗಳ ಘೋಷಣೆ
38. ರಿಟರ್ನಿಂಗ್ ಆಫೀಸರ್ ಮೊಹರು ಮಾಡಿದ ಲಕೋಟೆಗಳನ್ನು ತೆರೆಯದಿರುವುದು
39. ಸಮಾನ ಮತಗಳು ಬಂದಾಗ ಚುನಾವಣೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ
40. ಚುನಾವಣೆಯ ಕಾಗದಪತ್ರಗಳನ್ನು ಡೆಪ್ಯೂಟಿ ಕಮಿಷನರನಿಗೆ ಕಳುಹಿಸಿಕೊಡುವುದು
41. ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳ ಮತ್ತು ಕೃಷಿ ಸಹಕಾರ ಸಂಸ್ಕರಣೆ ಸಂಘಗಳ ಪ್ರತಿನಿಧಿಗಳ ಚುನಾವಣೆ
42. ಆಕಸ್ಮಿಕ ಖಾಲಿ ಸ್ಥಾನಗಳು
43. ಮತಪತ್ರಗಳನ್ನು ಅಭಿರಕ್ಷಿಸುವುದು ಮತ್ತು ನಾಶಪಡಿಸುವುದು

## ಭಾಗ- III

### ಸಮಿತಿಯ ಅಧ್ಯಕ್ಷ, ಉಪಾಧ್ಯಕ್ಷ, ಅಧಿಕಾರಿಗಳು ಮತ್ತು ನೌಕರರು ಹಾಗೂ ಅವರ ಪ್ರಕಾರ್ಯಗಳು ಮತ್ತು ಅಧಿಕಾರಗಳು

44. ಅಧ್ಯಕ್ಷ ಮುಂತಾದವರ ಚುನಾವಣೆಗೆ ನಿಯಮಿಸಲಾದ ಅಧಿಕಾರಿ 44ಎ ದಿಂದ 44ಜೆ ವರೆಗೆ ಬಿಟ್ಟುಬಿಡಲಾಗಿದೆ.
45. ಚುನಾವಣೆಯ ಸಿಂಧುತ್ವ
46. ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ಅಧಿಕಾರವನ್ನು ವಹಿಸಿಕೊಳ್ಳುವುದು
46ಎ. ಮಾರುಕಟ್ಟೆ ಸಮಿತಿಯ ಅಧ್ಯಕ್ಷನಿಗೆ ಗೌರವಧನ ಸಂದಾಯ ಮಾಡುವುದು
47. ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಪದವು ಆಕಸ್ಮಿಕವಾಗಿ ತೆರವಾಗುವುದು
48. ಆಕಸ್ಮಿಕವಾಗಿ ತೆರವಾದ ಸ್ಥಾನವನ್ನು ಭರ್ತಿ ಮಾಡಲು ಚುನಾಯಿತನಾದ ಅಧ್ಯಕ್ಷನ, ಉಪಾಧ್ಯಕ್ಷನ ಪದಾವಧಿ
49. ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ವಿರುದ್ಧ ಅವಿಶ್ವಾಸ ಸೂಚನೆ
50. ಕಾರ್ಯದರ್ಶಿಯ ಕರ್ತವ್ಯಗಳು ಮತ್ತು ಅಧಿಕಾರಗಳು

## ಭಾಗ-IV

### ವ್ಯವಹಾರ ನಡೆಸುವುದು

51. ಸಮಿತಿಯ ಸಭೆ
52. ಸಭೆಯ ವ್ಯವಹರಣೆಗಳ ಪ್ರತಿ
53. ಮಾರುಕಟ್ಟೆ ಸಮಿತಿಯ ದಸ್ತಾವೇಜುಗಳ ಪ್ರತಿಗಳನ್ನು ಅಥವಾ ಪುಸ್ತಕಗಳಲ್ಲಿನ ನಮೂದುಗಳ ಪ್ರತಿಗಳನ್ನು ಪ್ರಮಾಣೀಕರಿಸುವುದು
54. ಅಧಿನಿಯಮ, ನಿಯಮಗಳು, ಮುಂತಾದವುಗಳ ತಹಲ್‌ವರೆಗಿನ ಪ್ರತಿಗಳನ್ನು ಇಟ್ಟುಕೊಂಡಿರುವುದು
55. ವಿವಾದಗಳನ್ನು ಇತ್ಯರ್ಥಪಡಿಸುವುದು
56. ಮನ್ನಾ ಮಾಡುವುದಕ್ಕೆ ಮಾರುಕಟ್ಟೆ ಸಮಿತಿಯ ಅಧಿಕಾರಗಳು
57. ಮಾರುಕಟ್ಟೆ ಸಮಿತಿಯ ಕರ್ತವ್ಯಗಳು
58. ಪತ್ರವ್ಯವಹಾರ
59. ಸಮಿತಿಯ ಮತ್ತು ಅದರ ಅಧ್ಯಕ್ಷನ ಆದೇಶದ ವಿರುದ್ಧ ಅಪೀಲು.

## ಭಾಗ-V

### ಮಾರುಕಟ್ಟೆ ನಿಧಿ, ವೆಚ್ಚ ಮತ್ತು ಲೆಕ್ಕಪತ್ರಗಳು

60. ಮಾರುಕಟ್ಟೆ ನಿಧಿ
60ಎ. ಉತ್ಪಾದಕ-ಮಾರಾಟಗಾರನಿಗೆ ಅಲ್ಪಾವಧಿ ಮುಂಗಡಗಳು

60ಬಿ. ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳು ಮತ್ತು ಕೃಷಿ ಸಂಸ್ಕರಣಾ ಸಹಕಾರ ಸಂಘಗಳು – ಇವುಗಳಿಗೆ ಸಾಲ ನೀಡುವುದು

60ಸಿ. ಮಾರುಕಟ್ಟೆ ಪ್ರಾಂಗಣ, ಉಪಮಾರುಕಟ್ಟೆ ಪ್ರಾಂಗಣ ಮತ್ತು ಮಾರುಕಟ್ಟೆ ಉಪಪ್ರಾಂಗಣ ಇವುಗಳ ಹೊರಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು

61. ವೆಚ್ಚ

62. ಖಜಾನೆ ಅಥವಾ ಬ್ಯಾಂಕಿಗೆ ಇರಸಾಲು ಮಾಡುವುದು

63. ಪಾಸ್‌ಬುಕ್

64. ಆಯವ್ಯಯ ಮಂಡನೆ

65. ಲೆಕ್ಕಪತ್ರಗಳು, ಲೆಕ್ಕಪರಿಶೋಧನೆ ಮತ್ತು ಪರಿಶೀಲನೆ

66. ಲೆಕ್ಕಪರಿಶೋಧಕನು ಎದ್ದುಕಾಣುವಂಥ ಅನೌಚಿತ್ಯ ಅಥವಾ ಅಕ್ರಮ, ನಷ್ಟ, ಪೋಲು ಅಥವಾ ದುರುಪಯೋಗ – ಇವುಗಳ ಬಗ್ಗೆ ವರದಿ ಮಾಡುವುದು

67. ವಾರ್ಷಿಕ ವರದಿ

68. ಸಂಚಿತ ನಿಧಿಗೆ ವಂತಿಗೆ

69. ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಗೆ ವಂತಿಗೆ

70. ನಕ್ಷೆಗಳನ್ನು ತಯಾರಿಸುವುದು

71. ನಕ್ಷೆಗಳ ಮತ್ತು ಅಂದಾಜುಗಳ ಅನುಮೋದನೆ

72. ಕಾಮಗಾರಿಗಳ ಮೇಲ್ವಿಚಾರಣೆ

## ಭಾಗ–VI

## ಫೀಜುಗಳನ್ನು ವಿಧಿಸುವುದು ಮತ್ತು ವಸೂಲಿ ಮಾಡುವುದು

73. ಫೀಜುಗಳ ವಸೂಲಿ

74. ರಸೀತಿ

74ಎ. 65ನೇ ಪ್ರಕರಣದ (3)ನೇ ಉಪಪ್ರಕರಣದ ಅಡಿಯ ಪ್ರಮಾಣಪತ್ರ

75. ಭದ್ರತೆ

76. ಲೈಸೆನ್ಸ್ ಪಡೆದ ವ್ಯಾಪಾರಿಗಳು, ಕಮಿಷನ್ ಏಜಂಟ್‌ರು ಮುಂತಾದವರು

77. ವ್ಯಾಪಾರಿಗಳಾಗಿ ಕಾರ್ಯ ನಿರ್ವಹಿಸುವ ಬಗ್ಗೆ ಲೈಸನ್ಸ್ ಪಡೆಯುವ ಸಂಬಂಧದಲ್ಲಿ ಅನರ್ಹತೆಗಳು

78. ಕಮಿಷನ್ ಏಜೆಂಟ್‌ನಾಗಿ ಕಾರ್ಯನಿರ್ವಹಿಸಲು ಅಗತ್ಯವಾದ ಲೈಸನ್ಸ್ ಪಡೆಯುವ ಸಂಬಂಧದಲ್ಲಿ ಅನರ್ಹತೆ

79. ಲೈಸನ್ಸು ಹೊಂದಿರುವ ತೂಕದಾರರು, ಅಳತೆಗಾರರು, ಸರ್ವೇಯರ್‌ಗಳು, ಹಮಾಲರು, ಎತ್ತಿನ ಗಾಡಿಯವರು, ಸಾರ್ವಜನಿಕ ಸಾಗಣಿದಾರರು, ಮುಂತಾದವರು

80. ಲೈಸನ್ಸ್ ದ್ವಿಪ್ರತಿಯನ್ನು ನೀಡುವುದು

81. ಲೈಸನ್ಸ್‌ನ ನಿರಾಕರಣೆಯನ್ನು, ರದ್ದಿಯಾತಿಯನ್ನು ಅಥವಾ ಅಮಾನತುಗೊಳಿಸಿರುವುದನ್ನು ಸಂಬಂಧಪಟ್ಟ ವ್ಯಕ್ತಿಗೆ ತಿಳಿಸುವುದು

82. ಖರೀದಿದಾರ ಮತ್ತು ಮಾರಾಟಗಾರ ಇವರಿಬ್ಬರ ಪರವಾಗಿ ಬ್ರೋಕರರು, ದಲ್ಲಾಳಿಗಳು ಕಾರ್ಯನಿರ್ವಹಿಸದಂತೆ ನಿಷೇಧಿಸುವುದು

83. [ಕಮಿಷನ್ ಏಜೆಂಟ್, ಮುಂತಾದವರು ತಮ್ಮ ಸೇವೆಗೆ ನಿರ್ದಿಷ್ಟ ಪಡಿಸಿರುವುದರ ಹೊರತಾಗಿ ಇತರ ಶುಲ್ಕಗಳನ್ನು ಸ್ವೀಕರಿಸತಕ್ಕುದಲ್ಲ ಬಿಟ್ಟುಬಿಡಲಾಗಿದೆ]

84. ವ್ಯಾಪಾರಿ, ಮುಂತಾದವರು ತೂಕ, ಅಳತೆ ಅಥವಾ ಸರ್ವೆ ಮಾಡಲು ಬ್ರೋಕರೇಜ್‌ನ್ನು (ದಲ್ಲಾಳಿ ಫೀಜನ್ನು) ಅಥವಾ ಚಾರ್ಜುಗಳನ್ನು ಕೇಳದಿರುವುದು

85. ಲೆಕ್ಕಪುಸ್ತಕಗಳನ್ನು ಇಡುವುದು ಮತ್ತು ರಸೀದಿ ಮುಂತಾದವುಗಳನ್ನು ನೀಡುವುದು

86. ವ್ಯಾಪಾರಿಗಳು ಮತ್ತು ಕಮಿಷನ್ ಏಜೆಂಟರು ವರದಿಗಳನ್ನು ಮತ್ತು ವಿವರಪಟ್ಟಿಕೆಗಳನ್ನು ಸಲ್ಲಿಸುವುದು

87. ವ್ಯಾಪಾರಿಗಳು ಮತ್ತು ಕಮಿಷನ್ ಏಜೆಂಟರ ಹೊರತಾಗಿ ಮಾರುಕಟ್ಟೆ ಕಾರ್ಯ ನಿರ್ವಾಹಕರು ಸಲ್ಲಿಸಬೇಕಾದ ವರದಿಗಳು

87ಎ. ಅಪರಾಧಗಳ ಬಗ್ಗೆ ರಾಜಿ

**ಅಭಿವೃದ್ಧಿ, ವಸತಿ, ಪಂಚಾಯತ್ ರಾಜ್ ಮತ್ತು**
**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಬೆಂಗಳೂರು, ದಿನಾಂಕ ಏಪ್ರಿಲ್ 3, 1968**

**ಜಿ.ಎಸ್.ಆರ್. 102**: ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27ರ) 146ನೇ ಪ್ರಕರಣದ ಮೂಲಕ ಪ್ರದಾನ ಮಾಡಲಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಕೆಳಕಂಡ ನಿಯಮಗಳನ್ನು ರಚಿಸಿದೆ. ಮತ್ತು ಸದರಿ ಅಧಿನಿಯಮದ 146ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಈ ನಿಯಮಗಳ ಕರಡನ್ನು 1967ರ ಫೆಬ್ರವರಿ 4ನೇ ದಿನಾಂಕದ ಕರ್ನಾಟಕ ರಾಜಪತ್ರದ (ವಿಶೇಷ ಸಂಚಿಕೆಯಲ್ಲಿ) ಅಧಿಸೂಚನೆ ಕ್ರಮಾಂಕ ಜಿ.ಎಸ್.ಆರ್. 65, (ಡಿಪಿಸಿ 257, ಸಿಎಂಡಿ 65, ದಿನಾಂಕ 1967ರ ಫೆಬ್ರವರಿ 4) ರಲ್ಲಿ ಪ್ರಕಟಿಸಲಾಗಿದ್ದಿತು ಎಂದರೆ:-

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು, 1968**

(2002ರ ಫೆಬ್ರವರಿ 5ನೇ ದಿನಾಂಕದವರೆಗೆ ತಿದ್ದುಪಡಿಯಾದಂತೆ)

**1. ಹೆಸರು ಮತ್ತು ವ್ಯಾಪ್ತಿ:-** (1) ಈ ನಿಯಮಗಳನ್ನು, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು, 1968 ಎಂದು ಕರೆಯತಕ್ಕದು.

(2) ಅವುಗಳು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು .

**2. ಪರಿಭಾಷೆಗಳು:-** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(i) "ಅಧಿನಿಯಮ" ಎಂದರೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966.

(ii) "ಉಪವಿಧಿಗಳು" ಎಂದರೆ ಈ ಅಧಿನಿಯಮದ 148 ಮತ್ತು 149ನೇ ಪ್ರಕರಣಗಳ ಮೇರೆಗೆ ರಚಿಸಿದ ಉಪವಿಧಿಗಳು.

(iii) "ಅಧ್ಯಕ್ಷ" ಎಂದರೆ ಸಮಿತಿಯ ಅಧ್ಯಕ್ಷ.

(iv) "ಸಮಿತಿ" ಎಂದರೆ ಮಾರುಕಟ್ಟೆ ಸಮಿತಿ.

(v) "ನಮೂನೆ" ಎಂದರೆ ಈ ನಿಯಮಗಳಿಗೆ ಲಗತ್ತಿಸಲಾದ ನಮೂನೆ.

(vi) "ಸರ್ಕಲ್" ಎಂದರೆ ರೆವಿನ್ಯೂ ಸರ್ಕಲ್ ಮತ್ತು ಈ ಪದವು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರಲ್ಲಿ ಇರುವ ಅರ್ಥವನ್ನೇ ಹೊಂದಿರತಕ್ಕದ್ದು.

(vii) "ಪ್ರಕರಣ" ಎಂದರೆ ಈ ಅಧಿನಿಯಮದ ಪ್ರಕರಣ.

(viii) "ಉಪಾಧ್ಯಕ್ಷ" ಎಂದರೆ ಸಮಿತಿಯ ಉಪಾಧ್ಯಕ್ಷ.

## ಭಾಗ-II

## ಮಾರುಕಟ್ಟೆ ಸಮಿತಿಯ ರಚನೆ ಮತ್ತು ಚುನಾವಣೆ

**3. ಮತನೀಡಲು ಅರ್ಹರಾದ ವ್ಯಕ್ತಿಗಳು.–** [1][(1) ಮಾರುಕಟ್ಟೆ ಪ್ರದೇಶದಲ್ಲಿ ವಾಸವಾಗಿರುವ ಮತ್ತು ಯಾವ ವರ್ಷದಲ್ಲಿ ಮತದಾರರ ಪಟ್ಟಿಯನ್ನು ತಯಾರಿಸಲಾಗುವುದೋ ಆ ವರ್ಷದ ಜನವರಿ 1ರಂದು [2][ಹದಿನೆಂಟು][1] ವರ್ಷ ವಯಸ್ಸಿಗೆ ಕಡಿಮೆ ಇಲ್ಲದ ವಯಸ್ಸಿನವರಾಗಿರುವ ಎಲ್ಲ ಕೃಷಿಕರು, ಕೃಷಿಕರ ಚುನಾವಣಾ ಕ್ಷೇತ್ರಗಳ ಮತದಾರರ ಪಟ್ಟಿಯಲ್ಲಿ ತಮ್ಮ ಹೆಸರನ್ನು ನಮೂದಿಸಿಕೊಳ್ಳಲು ಹಕ್ಕುಳ್ಳವರಾಗಿರತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

2. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 39 ಎಂಆರ್‌ಇ 90 ದಿನಾಂಕ 12-11-1990ರ ಮೂಲಕ ಪ್ರತಿಯೋಜಿಸಲಾಗಿದೆ.

(2) ಯಾರೇ ವ್ಯಕ್ತಿಯು ಒಂದಕ್ಕಿಂತ ಹೆಚ್ಚು ಕೃಷಿಕರ ಚುನಾವಣಾ ಕ್ಷೇತ್ರಗಳ ಮತದಾರರ ಪಟ್ಟಿಗಳಲ್ಲಿ ತನ್ನ ಹೆಸರನ್ನು ನಮೂದಿಸಿಕೊಳ್ಳಲು ಹಕ್ಕುಳ್ಳವನಾಗಿರತಕ್ಕುದಲ್ಲ. ಅವನ ಹೆಸರನ್ನು ತಪ್ಪಾಗಿ ಅಥವಾ ಅನ್ಯಥಾ ಎರಡು ಅಥವಾ ಹೆಚ್ಚು ಚುನಾವಣಾ ಕ್ಷೇತ್ರಗಳ ಪಟ್ಟಿಗಳಲ್ಲಿ ನಮೂದಿಸಿದ್ದಾಗ್ಯೂ, ಅವನು ಒಂದು ಚುನಾವಣಾ ಕ್ಷೇತ್ರದಲ್ಲಿ ಮಾತ್ರ ತನ್ನ ಮತವನ್ನು ಚಲಾಯಿಸತಕ್ಕದ್ದು. ಅವನು ಎರಡು ಅಥವಾ ಹೆಚ್ಚು ಚುನಾವಣಾ ಕ್ಷೇತ್ರಗಳಲ್ಲಿ ತನ್ನ ಮತವನ್ನು ಚಲಾಯಿಸಿದರೆ, ಆ ಎಲ್ಲ ಚುನಾವಣಾ ಕ್ಷೇತ್ರಗಳಲ್ಲಿ ದಾಖಲಾದ ಅವನ ಮತಗಳು ಶೂನ್ಯವಾಗಿರುವುದಾಗಿ ಭಾವಿಸತಕ್ಕದ್ದು.

[1][(3) ಮಾರುಕಟ್ಟೆ ಪ್ರದೇಶದಲ್ಲಿರುವ ಚಿಲ್ಲರೆ ವ್ಯಾಪಾರಿಗಳಲ್ಲದ ಇತರ ಎಲ್ಲ ವ್ಯಾಪಾರಿಗಳು, ವ್ಯಾಪಾರಿಗಳ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ತಮ್ಮ ಹೆಸರುಗಳನ್ನು ನಮೂದಿಸಿಕೊಳ್ಳಲು ಹಕ್ಕುಳ್ಳವರಾಗಿರತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ 130 ಎಂಆರ್‌ಇ 88 ದಿನಾಂಕ 30-1-1990ರ ಮೂಲಕ ಪ್ರತಿಯೋಜಿಸಲಾಗಿದೆ.

[1][(4) ಬಿಟ್ಟುಬಿಡಲಾಗಿದೆ.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-1994ರ ಮೂಲಕ ಬಿಟ್ಟುಬಿಡಲಾಗಿದೆ.

(5) ಯಾವುದೇ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ಯಾರೇ ವ್ಯಕ್ತಿಯ ಹೆಸರನ್ನು ಒಂದಕ್ಕಿಂತ ಹೆಚ್ಚು ಬಾರಿ ಸೇರಿಸಿದ್ದರೂ ಅವನು ಆ ಚುನಾವಣಾ ಕ್ಷೇತ್ರದ ಯಾವುದೇ ಚುನಾವಣೆಯಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ಮತವನ್ನು ಚಲಾಯಿಸತಕ್ಕದ್ದಲ್ಲ ಮತ್ತು ಅವನು ಒಂದಕ್ಕಿಂತ ಹೆಚ್ಚು ಬಾರಿ ಮತ ನೀಡಿದಲ್ಲಿ ಆ ಚುನಾವಣಾ ಕ್ಷೇತ್ರದಲ್ಲಿ ದಾಖಲಾದ ಅವನ ಎಲ್ಲ ಮತಗಳು ಶೂನ್ಯವಾಗಿರುವುದಾಗಿ ಭಾವಿಸತಕ್ಕದ್ದು.

**4. ಫರ್ಮುಗಳು, ಸಂಘಗಳು, ಮುಂತಾದವುಗಳು ಮತನೀಡಲು ಅಧಿಕೃತರಾದ ವ್ಯಕ್ತಿಗಳ ಹೆಸರನ್ನು ತಿಳಿಸುವುದು.–** ಈ ನಿಯಮಗಳ ಮೇರೆಗೆ ವ್ಯಾಪಾರಿಗಳ ಚುನಾವಣಾ ಕ್ಷೇತ್ರದಲ್ಲಿ [1][..........][1] ಮತನೀಡಲು ಅರ್ಹವಾಗಿರುವ ಪ್ರತಿಯೊಂದು ಫರ್ಮು ಅಥವಾ ನಿಗಮವು ಅಥವಾ ಸಹಕಾರ ಸಂಘವು ತನ್ನ ಪರವಾಗಿ ಮತನೀಡಲು ಒಬ್ಬ ವ್ಯಕ್ತಿಯನ್ನು ನಾಮನಿರ್ದೇಶಿಸತಕ್ಕದ್ದು ಮತ್ತು ಹಾಗೆ ನಾಮನಿರ್ದೇಶಿಸಿದ ವ್ಯಕ್ತಿಯ ಹೆಸರನ್ನು [2][ಡೆಪ್ಯೂಟಿ ಕಮಿಷನರನು ಈ ಸಂಬಂಧದಲ್ಲಿ ನಿಗದಿಪಡಿಸಿದ ದಿನಾಂಕದೊಳಗೆ ಸಮಿತಿಗೆ ಅಥವಾ ಡೆಪ್ಯೂಟಿ ಕಮಿಷನರನಿಗೆ ಅಥವಾ ಈ ಸಂಬಂಧದಲ್ಲಿ ಅವನಿಂದ ಅಧಿಕೃತನಾದ ಯಾವನೇ ಇತರ ಅಧಿಕಾರಿಗೆ][2] ಲಿಖಿತದಲ್ಲಿ ತಿಳಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-1994ರ ಮೂಲಕ ಬಿಟ್ಟುಬಿಡಲಾಗಿದೆ.

2. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

[1][**5. ಕೃಷಿಕರ ಚುನಾವಣಾ ಮತದಾರರ ಪಟ್ಟಿಗಳನ್ನು ಸಿದ್ಧಪಡಿಸುವುದು.–** (1) ಕೃಷಿಕರ ಚುನಾವಣಾ ಕ್ಷೇತ್ರಗಳ ಮತದಾರರ ಪಟ್ಟಿಗಳಲ್ಲಿ ತಮ್ಮ ಹೆಸರುಗಳನ್ನು ನಮೂದಿಸಿಕೊಳ್ಳಲು ಹಕ್ಕುಳ್ಳ ಮತದಾರರ ಪಟ್ಟಿಗಳನ್ನು ಡೆಪ್ಯೂಟಿ ಕಮಿಷನರನು ಅಥವಾ ಈ ಸಂಬಂಧದಲ್ಲಿ ಅವರಿಂದ ಅಧಿಕೃತನಾದ ಯಾರೇ ಅಧಿಕಾರಿಯು (ಇದರಲ್ಲಿ ಇನ್ನು ಮುಂದೆ ಅಧಿಕೃತ ಅಧಿಕಾರಿ ಎಂದು ಉಲ್ಲೇಖಿಸಲಾಗಿದೆ) ಕನ್ನಡದಲ್ಲಿ ಮತ್ತು ಅವರು ಅವಶ್ಯವೆಂದು ಭಾವಿಸುವಂಥ ಇತರ ಭಾಷೆಯಲ್ಲಿ ಅಥವಾ ಭಾಷೆಗಳಲ್ಲಿ ತಯಾರಿಸುವ ವ್ಯವಸ್ಥೆ ಮಾಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3-2-1970ರ ಮೂಲಕ ನಿಯಮ 5, 5ಎ ಮತ್ತು 5ಬಿ ಯನ್ನು ಪ್ರತಿಯೋಜಿಸಲಾಗಿದೆ.

(2) ಪಟ್ಟಿಗಳನ್ನು ಅನುಕೂಲಕ್ಕೆ ತಕ್ಕಂತೆ ವಿಭಜಿಸತಕ್ಕದ್ದು, ಪ್ರತಿಯೊಂದು ಭಾಗವು, ಒಂದು ಗ್ರಾಮದಲ್ಲಿರುವ ಅಥವಾ ಹೊಂದಿಕೊಂಡಿರುವ ಗ್ರಾಮಗಳ ಸಮೂಹದಲ್ಲಿದ್ದು ಮತದಾರರನ್ನು ಒಳಗೊಂಡಿರತಕ್ಕದ್ದು ಮತ್ತು ಆ ಭಾಗಗಳಿಗೆ ಕ್ರಮಸಂಖ್ಯೆ ಕೊಡತಕ್ಕದ್ದು ಮತ್ತು ಯಾವುದೇ ಭಾಗದಲ್ಲಿ ಸೇರಿಸಲಾದ ಹೆಸರುಗಳ ಸಂಖ್ಯೆಯು ಸಾಮಾನ್ಯವಾಗಿ ಎಂಟುನೂರನ್ನು ಮೀರತಕ್ಕದ್ದಲ್ಲ.

(3) ಮತದಾರರ ಪಟ್ಟಿಗಳ ಪ್ರತಿಯೊಂದು ಭಾಗದಲ್ಲಿರುವ ಮತದಾರರ ಹೆಸರುಗಳು, ಪ್ರತಿಯೊಬ್ಬ ಕೃಷಿಕನು ಆ ಗ್ರಾಮದಲ್ಲಿ ಸಾಗುವಳಿ ಮಾಡುವ ಭೂಮಿಯ ಮೋಜಣಿ ಸಂಖ್ಯೆಗನುಸಾರ ಅಥವಾ ಮೋಜಣಿ ಸಂಖ್ಯೆಯ ಉಪವಿಭಾಗಕ್ಕನುಸಾರ ಇರತಕ್ಕದ್ದು ಮತ್ತು ಯಾರೇ ಕೃಷಿಕನು ಒಂದಕ್ಕಿಂತ ಹೆಚ್ಚು ಮೋಜಣಿ ಸಂಖ್ಯೆಗಳಲ್ಲಿ ಅಥವಾ ಮೋಜಣಿ ಸಂಖ್ಯೆಯ ಒಂದಕ್ಕಿಂತ ಹೆಚ್ಚು ಉಪವಿಭಾಗಗಳಲ್ಲಿ ಸಾಗುವಳಿ ಮಾಡುತ್ತಿರುವಲ್ಲಿ ಅವನ ಹೆಸರನ್ನು ಅಂಥ ಎಲ್ಲ ಭೂಮಿಗಳ ಸಂಬಂಧದಲ್ಲಿ ಒಂದೇ ಬಾರಿಗೆ ಮಾತ್ರ ನಮೂದಿಸತಕ್ಕದ್ದು ಮತ್ತು ಪಟ್ಟಿಯ ಪ್ರತಿಯೊಂದು ಭಾಗದಲ್ಲಿರುವ ಎಲ್ಲ ಮತದಾರರ ಹೆಸರುಗಳಿಗೆ ಸಾಧ್ಯವಾದಷ್ಟು ಮಟ್ಟಿಗೆ ಕ್ರಮಸಂಖ್ಯೆ 1 ರಿಂದ ಪ್ರಾರಂಭವಾಗುವ ಪ್ರತ್ಯೇಕ ಸರಣಿಗಳಲ್ಲಿ ಕ್ರಮಸಂಖ್ಯೆ ನೀಡತಕ್ಕದ್ದು.

(4) ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು, ಮತದಾರರ ಹೆಸರು, ಅಡ್ಡಹೆಸರು ಯಾವುದಾದರೂ ಇದ್ದರೆ, ಅದು ಅವನ ವಯಸ್ಸು ಮತ್ತು 1964ರ ಕರ್ನಾಟಕ ಭೂ ಕಂದಾಯ ಅಧಿನಿಯಮದ (1964ರ ಕರ್ನಾಟಕ ಅಧಿನಿಯಮ 12) ಮೇರೆಗೆ ನಮೂನೆ 16ರಲ್ಲಿ ಇಡಲಾದ ಹಕ್ಕು ದಾಖಲೆಯಲ್ಲಿನ ನಮೂದುಗಳ ಆಧಾರದ ಮೇಲೆ ಅಥವಾ ಕೃಷಿ ಭೂಮಿಗಳನ್ನು ಸಾಗುವಳಿ ಮಾಡುತ್ತಿರುವ ವ್ಯಕ್ತಿಗಳ ವಿವರಗಳಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರವು ನಿರ್ವಹಿಸುವ ಅಥವಾ ಅದರ ಪರವಾಗಿ ನಿರ್ವಹಿಸಲಾಗುವ ಯಾವುದೇ ಇತರ ದಾಖಲೆಯ ಆಧಾರದ ಮೇಲೆ ಗ್ರಾಮದಲ್ಲಿ ಕೃಷಿಕನು ಸಾಗುವಳಿ ಮಾಡುವ ಭೂಮಿಯ ಮೋಜಣಿ ಸಂಖ್ಯೆ ಅಥವಾ ಮೋಜಣಿ ಸಂಖ್ಯೆಯ ಉಪವಿಭಾಗದ ಸಂಖ್ಯೆ – ಇವುಗಳನ್ನೊಳಗೊಂಡ ಮತದಾರರ ಪ್ರಾರಂಭಿಕ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು:

ಪರಂತು, ಯಾವುದೇ ಗ್ರಾಮಕ್ಕೆ ಸಂಬಂಧಪಟ್ಟಂತೆ ಸುಸಂಗತ ವಿವರಗಳನ್ನೊಳಗೊಂಡ ದಾಖಲೆಯು ಲಭ್ಯವಿಲ್ಲದಿರುವಲ್ಲಿ, ಕೃಷಿ ಭೂಮಿಗಳನ್ನು ಅಧಿಭೋಗದಾರರಾಗಿ ಅಥವಾ ಅಧಿಭೋಗದಾರರ ಗೇಣಿದಾರರಾಗಿ ಸಾಗುವಳಿ ಮಾಡುತ್ತಿರುವ ವ್ಯಕ್ತಿಗಳ ಹೆಸರುಗಳನ್ನು ಮತ್ತು ವಯಸ್ಸನ್ನು ಖಚಿತಪಡಿಸಿಕೊಂಡ ತರುವಾಯ ಪ್ರಾರಂಭಿಕ ಮತದಾರರ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.

(5) ಮತದಾರರ ಪ್ರಾರಂಭಿಕ ಪಟ್ಟಿಯು ಸಿದ್ಧವಾದ ಕೂಡಲೇ ಡೆಪ್ಯೂಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ಅದನ್ನು ಪ್ರಕಟಿಸತಕ್ಕದ್ದು ಮತ್ತು ಅದರ ಪ್ರತಿಯನ್ನು ಪರಿಶೀಲನೆಗಾಗಿ ದೊರೆಯುವಂತೆ ಏರ್ಪಾಟುಮಾಡಿ ಆ ಸಂಬಂಧದಲ್ಲಿ ನಮೂನೆ 1ರಲ್ಲಿರುವ ನೋಟೀಸನ್ನು,

(i) ತನ್ನ ಕಚೇರಿಯಲ್ಲಿ, ಮತ್ತು

(ii) ಈ ಉದ್ದೇಶಕ್ಕಾಗಿ ತಾನು ನಿರ್ದಿಷ್ಟಪಡಿಸಬಹುದಾದ ಮಾರುಕಟ್ಟೆ ಪ್ರದೇಶದಲ್ಲಿರುವಂಥ ಇತರ ಸ್ಥಳಗಳಲ್ಲಿ ಪ್ರದರ್ಶಿಸುವ ವ್ಯವಸ್ಥೆ ಮಾಡತಕ್ಕದ್ದು.

ಅಲ್ಲದೆ ಅವನು,

(ಎ) ನಮೂನೆ 1ರಲ್ಲಿರುವ ನೋಟೀಸಿನ ಪ್ರತಿಯೊಂದಿಗೆ ಪಟ್ಟಿಯ ಪ್ರತಿಯೊಂದು ಪ್ರತ್ಯೇಕ ಭಾಗದ ಪ್ರತಿಯು ಸಾರ್ವಜನಿಕರಿಗೆ ಪ್ರವೇಶಾವಕಾಶವಿರುವ ನಿರ್ದಿಷ್ಟಪಡಿಸಲಾದ ಸ್ಥಳದಲ್ಲಿ ಮತ್ತು ಆ ಭಾಗಕ್ಕೆ ಸಂಬಂಧಪಟ್ಟಂಥ ಪ್ರದೇಶದಲ್ಲಿ ಅಥವಾ ಅದರ ಸಮೀಪದಲ್ಲಿ ಪರಿಶೀಲನೆಗೆ ದೊರೆಯುವಂತೆ ಮಾಡತಕ್ಕದ್ದು.

(ಬಿ) ನಮೂನೆ 1ರಲ್ಲಿರುವ ನೋಟೀಸಿನ ಬಗ್ಗೆ ತಾನು ಅವಶ್ಯವೆಂದು ಪರಿಗಣಿಸಬಹುದಾದಂಥ ಹೆಚ್ಚಿನ ಪ್ರಚಾರವನ್ನು ನೀಡತಕ್ಕದ್ದು.

(6) ಮತದಾರರ ಪಟ್ಟಿಯಲ್ಲಿ ಹೆಸರಿನ ಸೇರ್ಪಡೆ ಬಗ್ಗೆ ಪ್ರತಿಯೊಂದು ಕ್ಲೇಮನ್ನು ಮತ್ತು ಅದರಲ್ಲಿನ ಯಾವುದೇ ನಮೂದಿನ ಬಗ್ಗೆ ಪ್ರತಿಯೊಂದು ಆಕ್ಷೇಪಣೆಯನ್ನು, (5)ನೇ ಉಪನಿಯಮದ ಮೇರೆಗೆ "ಮತದಾರರ ಪ್ರಾರಂಭಿಕ ಪಟ್ಟಿ" ಪ್ರಕಟಣೆಯ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ದಾಖಲು ಮಾಡತಕ್ಕದ್ದು:

ಪರಂತು, ಕೃಷಿ ಮಾರಾಟ ನಿರ್ದೇಶಕನು, ರಾಜ್ಯಪತ್ರದಲ್ಲಿ ಅಧಿಸೂಚಿಸುವ ಮೂಲಕ ಆ ಅವಧಿಯನ್ನು ವಿಸ್ತರಿಸಬಹುದು.

(7) (ಎ) ಪ್ರತಿಯೊಂದು ಕ್ಲೇಮು,–

(i) ನಮೂನೆ 2ರಲ್ಲಿರತಕ್ಕದ್ದು;

(ii) ಮತದಾರರ ಪಟ್ಟಿಯಲ್ಲಿ ತನ್ನ ಹೆಸರನ್ನು ಸೇರಿಸಲು ಇಷ್ಟಪಡುವಂಥ ವ್ಯಕ್ತಿಯು ಅದಕ್ಕೆ ರುಜು ಹಾಕತಕ್ಕದ್ದು; ಮತ್ತು

(iii) ಕ್ಲೇಮುದಾರನು ಮತದಾರರ ಪಟ್ಟಿಯ ಯಾವ ಭಾಗದಲ್ಲಿ ತನ್ನ ಹೆಸರನ್ನು ಸೇರಿಸಬೇಕೆಂದು ಇಷ್ಟಪಡುವನೋ ಆ ಭಾಗದಲ್ಲಿ ಈಗಾಗಲೇ ಯಾವ ವ್ಯಕ್ತಿಯ ಹೆಸರನ್ನು ಸೇರಿಸಲಾಗಿದೆಯೋ ಆ ಯಾರೇ ಇತರ ವ್ಯಕ್ತಿಯು ಕ್ಲೇಮಿಗೆ ಮೇಲುರುಜು ಹಾಕತಕ್ಕದ್ದು.

(ಬಿ) ಮತದಾರರ ಪಟ್ಟಿಯಲ್ಲಿ ಹೆಸರನ್ನು ಸೇರಿಸುವುದಕ್ಕೆ ಸಂಬಂಧಪಟ್ಟಂತೆ,–

(i) ಪ್ರತಿಯೊಂದು ಆಕ್ಷೇಪಣೆಯು ನಮೂನೆ 3ರಲ್ಲಿ ಇರತಕ್ಕದ್ದು;

(ii) ಅಂಥ ಆಕ್ಷೇಪಣೆಯನ್ನು ಈಗಾಗಲೇ ಮತದಾರರ ಪಟ್ಟಿಯಲ್ಲಿ ಯಾವ ವ್ಯಕ್ತಿಯ ಹೆಸರನ್ನು ಸೇರಿಸಲಾಗಿದೆಯೋ ಆ ವ್ಯಕ್ತಿಯು ಮಾತ್ರ ಸಲ್ಲಿಸತಕ್ಕದ್ದು; ಮತ್ತು

(iii) ಆಕ್ಷೇಪಿಸಲಾದ ಹೆಸರು ಮತದಾರರ ಪಟ್ಟಿಯ ಯಾವ ಭಾಗದಲ್ಲಿ ಕಂಡು ಬರುವುದೋ ಆ ಭಾಗದಲ್ಲಿ ಈಗಾಗಲೇ ಯಾವ ವ್ಯಕ್ತಿಯ ಹೆಸರನ್ನು ಸೇರಿಸಲಾಗಿರುವುದೋ ಆ ಯಾರೇ ಇತರ ವ್ಯಕ್ತಿಯು ಆ ಆಕ್ಷೇಪಣೆಗೆ ಮೇಲುರುಜು ಹಾಕತಕ್ಕದ್ದು.

(ಸಿ) ಮತದಾರರ ಪಟ್ಟಿಯಲ್ಲಿರುವ ನಮೂದಿನ ಯಾವುದೇ ವಿವರ ಅಥವಾ ವಿವರಗಳಿಗೆ ಸಂಬಂಧಪಟ್ಟಂತೆ,–

(i) ಪ್ರತಿಯೊಂದು ಆಕ್ಷೇಪಣೆಯು ನಮೂನೆ 4ರಲ್ಲಿ ಇರತಕ್ಕದ್ದು; ಮತ್ತು

(ii) ಅಂಥ ಪ್ರತಿಯೊಂದು ಆಕ್ಷೇಪಣೆಯನ್ನು ಆ ನಮೂದು ಸಂಬಂಧಪಡುವ ವ್ಯಕ್ತಿಯು ಮಾತ್ರ ಸಲ್ಲಿಸತಕ್ಕದ್ದು.

(8) ಪ್ರತಿಯೊಂದು ಕ್ಲೇಮನ್ನು ಅಥವಾ ಆಕ್ಷೇಪಣೆಯನ್ನು,–

(i) ಡೆಪ್ಯುಟಿ ಕಮಿಷನರನಿಗೆ ಅಥವಾ ಅಧಿಕೃತ ಅಧಿಕಾರಿಗೆ ಸಲ್ಲಿಸತಕ್ಕದ್ದು; ಅಥವಾ

(ii) ಡೆಪ್ಯುಟಿ ಕಮಿಷನರನಿಗೆ ಅಥವಾ ಅಧಿಕೃತ ಅಧಿಕಾರಿಗೆ ನೋಂದಾಯಿತ ಅಂಚೆಯ ಮೂಲಕ ಕಳುಹಿಸತಕ್ಕದ್ದು.

(9) ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು,–

(ಎ) ನಮೂನೆ 5ರಲ್ಲಿ ದ್ವಿಪ್ರತಿಯಲ್ಲಿ ಕ್ಲೇಮುಗಳ ಪಟ್ಟಿಯನ್ನು, ನಮೂನೆ 6ರಲ್ಲಿ ಹೆಸರುಗಳ ಸೇರ್ಪಡೆಯ ಬಗೆಗಿನ ಆಕ್ಷೇಪಣೆಗಳ ಪಟ್ಟಿಯನ್ನು ಮತ್ತು ನಮೂನೆ 7ರಲ್ಲಿ ವಿವರಗಳ ಬಗೆಗಿನ ಆಕ್ಷೇಪಣೆಗಳ ಪಟ್ಟಿಯನ್ನು ಇಡತಕ್ಕದ್ದು, ಮತ್ತು

(ಬಿ) ತನ್ನ ಕಚೇರಿಯಲ್ಲಿರುವ ಸೂಚನಾ ಫಲಕದ ಮೇಲೆ ಅಂಥ ಪ್ರತಿಯೊಂದು ಪಟ್ಟಿಗಳ ಪ್ರತಿಯನ್ನು ಪ್ರದರ್ಶಿಸತಕ್ಕದ್ದು.

(10) ನಿರ್ದಿಷ್ಟಪಡಿಸಿರುವ ಅವಧಿಯೊಳಗೆ ಅಥವಾ ನಮೂನೆಯಲ್ಲಿ ಮತ್ತು ರೀತಿಯಲ್ಲಿ ಸಲ್ಲಿಸದಿರುವ ಯಾವುದೇ ಕ್ಲೇಮನ್ನು ಅಥವಾ ಆಕ್ಷೇಪಣೆಯನ್ನು ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ತಿರಸ್ಕರಿಸತಕ್ಕದ್ದು.

(11) ಡೆಪ್ಯುಟಿ ಕಮಿಷನರನಿಗೆ ಅಥವಾ ಅಧಿಕೃತ ಅಧಿಕಾರಿಗೆ, ಯಾವುದೇ ಕ್ಲೇಮಿನ ಅಥವಾ ಆಕ್ಷೇಪಣೆಯ ಸಿಂಧುತ್ವದ ಬಗ್ಗೆ ಮನದಟ್ಟಾದರೆ (9)ನೇ ಉಪನಿಯಮದ (ಬಿ) ಖಂಡದ ಮೇರೆಗೆ ತಾನು ಪ್ರದರ್ಶಿಸಿದ ಪಟ್ಟಿಗಳಲ್ಲಿ ಆ ಕ್ಲೇಮನ್ನು ಅಥವಾ ಆಕ್ಷೇಪಣೆಯನ್ನು ನಮೂದಿಸಲಾದ ದಿನಾಂಕದಿಂದ ಒಂದು ವಾರದ ಅವಧಿಯು ಮುಕ್ತಾಯವಾದ ತರುವಾಯ ಆ ಸಂಬಂಧದಲ್ಲಿ ಹೆಚ್ಚಿನ ವಿಚಾರಣೆಯಿಲ್ಲದೆಯೇ ಅದನ್ನು ಅಂಗೀಕರಿಸಬಹುದು:

ಪರಂತು, ಅಂಥ ಯಾವುದೇ ಕ್ಲೇಮನ್ನು ಅಥವಾ ಆಕ್ಷೇಪಣೆಯನ್ನು ಅಂಗೀಕರಿಸುವ ಮೊದಲು, ಯಾರೇ ವ್ಯಕ್ತಿಯು ಡೆಪ್ಯುಟಿ ಕಮಿಷನರನಿಗೆ ಅಥವಾ ಅಧಿಕೃತ ಅಧಿಕಾರಿಗೆ ಆ ಸಂಬಂಧದಲ್ಲಿ ವಿಚಾರಣೆ ಮಾಡುವಂತೆ ಲಿಖಿತದಲ್ಲಿ ಕೋರಿಕೆ ಸಲ್ಲಿಸಿದರೆ ಆ ಕ್ಲೇಮನ್ನು ಅಥವಾ ಆಕ್ಷೇಪಣೆಯನ್ನು ಹೆಚ್ಚಿನ ವಿಚಾರಣೆಯಿಲ್ಲದೆ ಅಂಗೀಕರಿಸತಕ್ಕದ್ದಲ್ಲ.

(12) (10)ನೇ ಉಪನಿಯಮ ಅಥವಾ (11)ನೇ ಉಪನಿಯಮದ ಮೇರೆಗೆ ಯಾವುದೇ ಕ್ಲೇಮನ್ನು ಅಥವಾ ಆಕ್ಷೇಪಣೆಯನ್ನು ಇತ್ಯರ್ಥ ಮಾಡದಿರುವಲ್ಲಿ, ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಪ್ರಾಧಿಕಾರಿಯು,–

(ಎ) (9)ನೇ ಉಪನಿಯಮದ (ಬಿ) ಖಂಡದ ಮೇರೆಗೆ ತಾನು ಪ್ರದರ್ಶಿಸಿದ ಪಟ್ಟಿಗಳಲ್ಲಿ ಕ್ಲೇಮಿನ ಅಥವಾ ಆಕ್ಷೇಪಣೆಯ ಬಗೆಗಿನ ವಿಚಾರಣೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ನಿರ್ದಿಷ್ಟಪಡಿಸತಕ್ಕದ್ದು; ಮತ್ತು

(ಬಿ) ವಿಚಾರಣೆಯ ನೋಟೀಸನ್ನು,–

(i) ಕ್ಲೇಮಿನ ಸಂಬಂಧದಲ್ಲಿ ಕ್ಲೇಮುದಾರನಿಗೆ ನಮೂನೆ 8ರಲ್ಲಿ;

(ii) ಒಂದು ಹೆಸರಿನ ಸೇರ್ಪಡೆಯ ಬಗೆಗಿನ ಆಕ್ಷೇಪಣೆಯ ಸಂಬಂಧದಲ್ಲಿ ಅರ್ಜಿದಾರನಿಗೆ ನಮೂನೆ 9ರಲ್ಲಿ ಮತ್ತು ಆಕ್ಷೇಪಣೆಗೆ ಗುರಿಯಾದ ವ್ಯಕ್ತಿಗೆ ನಮೂನೆ 10ರಲ್ಲಿ; ಮತ್ತು

(iii) ನಮೂದಿನಲ್ಲಿರುವ ವಿವರದ ಅಥವಾ ವಿವರಗಳ ಬಗೆಗಿನ ಆಕ್ಷೇಪಣೆಯ ಸಂಬಂಧದಲ್ಲಿ ಆಕ್ಷೇಪಣೆದಾರನಿಗೆ ನಮೂನೆ 11ರಲ್ಲಿ

–ನೀಡತಕ್ಕದ್ದು, ಈ ಉಪನಿಯಮದ ಮೇರೆಗಿನ ನೋಟೀಸನ್ನು ಖುದ್ದಾಗಿ ಅಥವಾ ನೋಂದಾಯಿತ ಅಂಚೆಯ ಮೂಲಕ ಅಥವಾ ವ್ಯಕ್ತಿಯ ನಿವಾಸದಲ್ಲಿ ಅಥವಾ ಮಾರುಕಟ್ಟೆ ಪ್ರದೇಶದಲ್ಲಿ ಅವನು ಕಡೆಯದಾಗಿ ವಾಸಿಸಿದ್ದನೆಂದು ತಿಳಿದುಬಂದ ನಿವಾಸದಲ್ಲಿ ಅದನ್ನು ಅಂಟಿಸುವ ಮೂಲಕ ಜಾರಿಗೊಳಿಸಬಹುದು.

(13) (ಎ) ಡೆಪ್ಯುಟಿ ಕಮಿಷನರನು ಅಥವಾ ಪ್ರಾಧಿಕೃತ ಅಧಿಕಾರಿಯು ಯಾವ ಕ್ಲೇಮಿನ ಅಥವಾ ಆಕ್ಷೇಪಣೆಯ ಸಂಬಂಧದಲ್ಲಿ (12)ನೇ ಉಪನಿಯಮದ ಮೇರೆಗೆ ನೋಟೀಸನ್ನು ನೀಡಲಾಗಿದೆಯೋ ಅಂಥ ಪ್ರತಿಯೊಂದು ಕ್ಲೇಮನ್ನು ಅಥವಾ ಆಕ್ಷೇಪಣೆಯನ್ನು ಕುರಿತು ಕ್ಷಿಪ್ರ ವಿಚಾರಣೆ ನಡೆಸತಕ್ಕದ್ದು ಮತ್ತು ಆ ಕುರಿತು ತನ್ನ ನಿರ್ಣಯವನ್ನು ದಾಖಲು ಮಾಡತಕ್ಕದ್ದು.

(ಬಿ) ಕ್ಲೇಮುದಾರನು ಅಥವಾ ಸಂದರ್ಭಾನುಸಾರ, ಆಕ್ಷೇಪಣೆ ಎತ್ತಿದ ಮತ್ತು ಆಕ್ಷೇಪಣೆಗೆ ಗುರಿಯಾದ ವ್ಯಕ್ತಿಗಳು ಮತ್ತು ಡೆಪ್ಯುಟಿ ಕಮಿಷನರನ ಅಥವಾ ಅಧಿಕೃತ ಅಧಿಕಾರಿಯ ಅಭಿಪ್ರಾಯದಲ್ಲಿ ಅವನಿಗೆ ಸಹಾಯ ಮಾಡಬಹುದಾದಂಥ ಯಾವನೇ ಇತರ ವ್ಯಕ್ತಿಯು ವಿಚಾರಣೆಯಲ್ಲಿ ಹಾಜರಾಗಲು ಮತ್ತು ತಮ್ಮ ಅಹವಾಲನ್ನು ಹೇಳಿಕೊಳ್ಳಲು ಹಕ್ಕುಳ್ಳವರಾಗಿರತಕ್ಕದ್ದು.

(ಸಿ) ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ತನ್ನ ವಿವೇಚನಾನುಸಾರ, ಯಾರೇ ಕ್ಲೇಮುದಾರನನ್ನು, ಆಕ್ಷೇಪಣೆ ಎತ್ತಿದ ವ್ಯಕ್ತಿಯನ್ನು ಅಥವಾ ಆಕ್ಷೇಪಣೆಗೆ ಗುರಿಯಾದ ವ್ಯಕ್ತಿಯನ್ನು ತನ್ನ ಮುಂದೆ ಖುದ್ದಾಗಿ ಹಾಜರಾಗುವಂತೆ ಅಗತ್ಯಪಡಿಸಬಹುದು.

(14) ಮತದಾರರ ಪಟ್ಟಿಗಳನ್ನು ಸಿದ್ಧಪಡಿಸುವಾಗ ಅಜಾಗರೂಕತೆಯಿಂದ ಅಥವಾ ತಪ್ಪಿನಿಂದ ಆ ಮತದಾರರ ಪಟ್ಟಿಗಳಲ್ಲಿ ಯಾರೇ ಮತದಾರನ ಹೆಸರು ಬಿಟ್ಟುಹೋಗಿರುವುದೆಂದು ಮತ್ತು ಆ ಬಗ್ಗೆ ಈ ಉಪನಿಯಮದ ಮೇರೆಗೆ ಸರಿಪಡಿಸುವ ಕ್ರಮ ಕೈಗೊಳ್ಳಬೇಕೆಂದು ಡೆಪ್ಯುಟಿ ಕಮಿಷನರನಿಗೆ ಅಥವಾ ಅಧಿಕೃತ ಅಧಿಕಾರಿಗೆ ಕಂಡುಬಂದರೆ ಆ ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು,–

(ಎ) ಅಂಥ ಮತದಾರರ ಹೆಸರುಗಳ ಮತ್ತು ಇತರ ವಿವರಗಳ ಪಟ್ಟಿಯೊಂದನ್ನು ಸಿದ್ಧಪಡಿಸತಕ್ಕದ್ದು;

(ಬಿ) ತನ್ನ ಕಛೇರಿಯ ಸೂಚನಾ ಫಲಕದ ಮೇಲೆ ಅಂಥ ಪಟ್ಟಿಯ ಒಂದು ಪ್ರತಿಯನ್ನು ಆ ಪಟ್ಟಿಯಲ್ಲಿ ಆ ಹೆಸರುಗಳ ಸೇರ್ಪಡೆಯ ವಿಷಯವನ್ನು ಪರಿಶೀಲಿಸುವ ಸಮಯ ಮತ್ತು ಸ್ಥಳವನ್ನು ಕುರಿತ ನೋಟೀಸನ್ನು ಪ್ರದರ್ಶಿಸತಕ್ಕದ್ದು ಮತ್ತು ತಾನು ಯುಕ್ತವೆಂದು ಯೋಚಿಸಬಹುದಾದಂಥ ಇತರ ರೀತಿಯಲ್ಲಿ ಆ ಪಟ್ಟಿಯನ್ನು ಮತ್ತು ನೋಟೀಸನ್ನು ಪ್ರಕಟಿಸತಕ್ಕದ್ದು; ಮತ್ತು

(ಸಿ) ಸಲ್ಲಿಸಬಹುದಾದ ಯಾವುದೇ ಮೌಖಿಕ ಅಥವಾ ಲಿಖಿತ ಆಕ್ಷೇಪಣೆಗಳನ್ನು ಪರಿಶೀಲಿಸಿದ ತರುವಾಯ, ಮತದಾರರ ಪಟ್ಟಿಯಲ್ಲಿ ಆ ಎಲ್ಲ ಅಥವಾ ಆ ಪೈಕಿ ಯಾವುದೇ ಹೆಸರನ್ನು ಸೇರಿಸುವ ಬಗ್ಗೆ ತೀರ್ಮಾನಿಸತಕ್ಕದ್ದು.

(15) (ಎ) ಆ ತರುವಾಯ, ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು,–

(i) (11) (13) ಮತ್ತು (14)ನೇ ಉಪನಿಯಮಗಳ ಮೇರೆಗೆ ತನ್ನ ನಿರ್ಣಯಗಳನ್ನು ಕಾರ್ಯಗತಗೊಳಿಸಲು ಮತ್ತು ಮತದಾರರ ಪಟ್ಟಿಯಲ್ಲಿ ಆ ತರುವಾಯ ಕಂಡುಬಂದ ಯಾವುದೇ ಲಿಪಿಕ ಅಥವಾ ಮುದ್ರಣ ದೋಷಗಳನ್ನು ಅಥವಾ ಇತರ ನ್ಯೂನತೆಗಳನ್ನು ಸರಿಪಡಿಸಿ ತಿದ್ದುಪಡಿಗಳ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು; ಮತ್ತು

(ii) ತಿದ್ದುಪಡಿಗಳೂ ಸೇರಿದ ಮತದಾರರ ಪಟ್ಟಿಗಳ ಒಂದು ಪೂರ್ಣ ಪ್ರತಿಯು ಪರಿಶೀಲನೆಗೆ ದೊರೆಯುವಂತೆ ಮಾಡುವ ಮೂಲಕ ಮತ್ತು ಆ ಬಗ್ಗೆ ನಮೂನೆ 12ರಲ್ಲಿ ಒಂದು ನೋಟೀಸನ್ನು ತನ್ನ ಕಛೇರಿಯಲ್ಲಿ ಪ್ರದರ್ಶಿಸುವ ಮೂಲಕ ಆ ಮತದಾರರ ಪಟ್ಟಿಗಳನ್ನು ಪ್ರಕಟಿಸತಕ್ಕದ್ದು.

(ಬಿ) ಅಂಥ ಪ್ರಕಟಣೆಯ ತರುವಾಯ ತಿದ್ದುಪಡಿಗಳ ಪಟ್ಟಿಯೂ ಸೇರಿದ ಆ ಮತದಾರರ ಪಟ್ಟಿಗಳು ಕೃಷಿಕರ ಚುನಾವಣಾ ಕ್ಷೇತ್ರಗಳ ಮತದಾರರ ಪಟ್ಟಿಗಳಾಗಿರತಕ್ಕದ್ದು.

(16) (ಎ) ಉಪನಿಯಮ (13) ಅಥವಾ ಉಪನಿಯಮ (14)ರ ಮೇರೆಗೆ ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ಕೈಗೊಂಡ ಯಾವುದೇ ತೀರ್ಮಾನದ ಮೇಲೆ [1][ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ][1] ಅಪೀಲು ಸಲ್ಲಿಸಲು ಅವಕಾಶವಿರತಕ್ಕದ್ದು:

1. 2004ರ ಅಧಿಸೂಚನೆ ಸಂಖ್ಯೆ ಸಂ.ಸಿಡಿ 248 ಎಂಆರ್‌ಇ 2003, ಬೆಂಗಳೂರು, ದಿನಾಂಕ 3ನೇ ಫೆಬ್ರವರಿ, 2004ರ ಮೂಲಕ ಪ್ರತಿಯೋಜಿಸಲಾಗಿದೆ.

ಪರಂತು, ಅಪೀಲು ಸಲ್ಲಿಸಲು ಇಚ್ಛೆಪಡುವ ವ್ಯಕ್ತಿಯು, ಅಪೀಲಿನಲ್ಲಿ ಒಳಗೊಂಡಿರುವ ವಿಷಯದ ಬಗ್ಗೆ ಡೆಪ್ಯುಟಿ ಕಮಿಷನರನ ಅಥವಾ ಅಧಿಕೃತ ಅಧಿಕಾರಿಯ ಮುಂದೆ ತನ್ನ ಅಹವಾಲು ಹೇಳಿಕೊಳ್ಳುವ ಅಥವಾ ಅವನಿಗೆ ಮನವಿ ಮಾಡಿಕೊಳ್ಳುವ ತನ್ನ ಹಕ್ಕನ್ನು ಉಪಯೋಗಿಸಿಕೊಳ್ಳದಿದ್ದಲ್ಲಿ ಅವನಿಗೆ ಅಪೀಲು ಸಲ್ಲಿಸಲು ಅವಕಾಶವಿರತಕ್ಕದ್ದಲ್ಲ.

(ಬಿ) (ಎ) ಖಂಡದ ಮೇರೆಗೆ ಸಲ್ಲಿಸುವ ಪ್ರತಿಯೊಂದು ಅಪೀಲು,–

(i) ಅರ್ಜಿದಾರನು ಸಹಿಮಾಡಿದ ಕೋರಿಕೆ ಪತ್ರದ ರೂಪದಲ್ಲಿರತಕ್ಕದ್ದು; ಮತ್ತು

(ii) ತೀರ್ಮಾನವನ್ನು ಪ್ರಕಟಿಸಿದ ದಿನಾಂಕದಿಂದ ಹದಿನೈದು ದಿವಸಗಳೊಳಗೆ ಅದನ್ನು ಅಪೀಲು ಅಧಿಕಾರಿಗೆ ಸಲ್ಲಿಸತಕ್ಕದ್ದು ಅಥವಾ ಆ ಅಧಿಕಾರಿಗೆ ಆ ಅವಧಿಯೊಳಗೆ ತಲುಪುವಂತೆ ನೋಂದಾಯಿತ ಅಂಚೆಯ ಮೂಲಕ ಕಳುಹಿಸತಕ್ಕದ್ದು.

(ಸಿ) ಈ ಉಪನಿಯಮದ ಮೇರೆಗೆ ಅಪೀಲನ್ನು ಸಲ್ಲಿಸುವುದರಿಂದ (15)ನೇ ಉಪನಿಯಮದ ಮೇರೆಗೆ ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ಕೈಗೊಳ್ಳಬೇಕಾದ ಯಾವುದೇ ಕಾರ್ಯವನ್ನು ತಡೆಯುವ ಅಥವಾ ಮುಂದೂಡುವ ಪರಿಣಾಮ ಉಂಟಾಗತಕ್ಕದ್ದಲ್ಲ.

(ಡಿ) ಅಪೀಲು ಅಧಿಕಾರಿಯು ಕೈಗೊಂಡ ಪ್ರತಿಯೊಂದು ತೀರ್ಮಾನವು ಅಂತಿಮವಾಗಿರತಕ್ಕದ್ದು, ಆದರೆ, ಅದು ಡೆಪ್ಯುಟಿ ಕಮಿಷನರನ ಅಥವಾ ಅಧಿಕೃತ ಅಧಿಕಾರಿಯ ತೀರ್ಮಾನವನ್ನು ವ್ಯತಿರಿಕ್ತಗೊಳಿಸುವಷ್ಟರ ಮಟ್ಟಿಗೆ ಅಥವಾ ಮಾರ್ಪಾಟುಗೊಳಿಸುವಷ್ಟರ ಮಟ್ಟಿಗೆ, ಅಪೀಲಿನಲ್ಲಿನ ತೀರ್ಮಾನದ ದಿನಾಂಕದಿಂದ ಮಾತ್ರವೇ ಪರಿಣಾಮಕಾರಿಯಾಗತಕ್ಕದ್ದು.

(ಇ) ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ಈ ಉಪನಿಯಮದ ಮೇರೆಗೆ ಅಪೀಲು ಅಧಿಕಾರಿಯು ಕೈಗೊಂಡ ತೀರ್ಮಾನಗಳನ್ನು ಕಾರ್ಯಗತಗೊಳಿಸಲು ಮತದಾರರ ಪಟ್ಟಿಗಳಲ್ಲಿ ಯಾವ ತಿದ್ದುಪಡಿಗಳನ್ನು ಮಾಡುವುದು ಅವಶ್ಯವಿರುವುದೋ ಆ ತಿದ್ದುಪಡಿಗಳನ್ನು ಮಾಡುವ ವ್ಯವಸ್ಥೆ ಮಾಡತಕ್ಕದ್ದು.

(17) (ಎ) ಮತದಾರರ ಪಟ್ಟಿಗಳನ್ನು ಕೃಷಿ ಮಾರಾಟ ನಿರ್ದೇಶಕನು ನಿರ್ದೇಶಿಸಬಹುದಾದಂತೆ ಯಾವುದೇ ಕಾಲದಲ್ಲಿ ವಿವರವಾಗಿ ಅಥವಾ ಸಂಕ್ಷಿಪ್ತವಾಗಿ ಅಥವಾ ಭಾಗಶಃ ವಿವರವಾಗಿ ಅಥವಾ ಭಾಗಶಃ ಸಂಕ್ಷಿಪ್ತವಾಗಿ ಪರಿಷ್ಕರಿಸತಕ್ಕದ್ದು.

(ಬಿ) ಮತದಾರರ ಪಟ್ಟಿಗಳನ್ನು ಅಥವಾ ಅವುಗಳ ಯಾವುದೇ ಭಾಗವನ್ನು ಯಾವುದೇ ಕಾಲದಲ್ಲಿ ವಿವರವಾಗಿ ಪರಿಷ್ಕರಿಸಬೇಕಾದಲ್ಲಿ ಅದನ್ನು ಹೊಸದಾಗಿ ಸಿದ್ಧಪಡಿಸತಕ್ಕದ್ದು ಮತ್ತು ಈ ಹಿಂದಿನ ಉಪನಿಯಮಗಳು, ಮತದಾರರ ಪಟ್ಟಿಗಳನ್ನು ಮೊದಲು ಸಿದ್ಧಪಡಿಸುವುದಕ್ಕೆ ಸಂಬಂಧಿಸಿ ಅನ್ವಯವಾಗುವಂತೆ ಅಂಥ ಪರಿಷ್ಕರಣೆಗೆ ಕೂಡ ಅನ್ವಯವಾಗತಕ್ಕದ್ದು.

(ಸಿ) ಮತದಾರರ ಪಟ್ಟಿಗಳನ್ನು ಅಥವಾ ಅವುಗಳ ಯಾವುದೇ ಭಾಗವನ್ನು ಯಾವುದೇ ಕಾಲದಲ್ಲಿ ಸಂಕ್ಷಿಪ್ತವಾಗಿ ಪರಿಷ್ಕರಿಸಬೇಕಾದಾಗ, ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು, ಆ ಕೂಡಲೇ ಲಭ್ಯವಿರಬಹುದಾದಂಥ ಮಾಹಿತಿಯ ಆಧಾರದ ಮೇಲೆ ಮತದಾರರ ಪಟ್ಟಿಗಳಿಗೆ ಸಂಬಂಧಪಟ್ಟ ಭಾಗಗಳ ತಿದ್ದುಪಡಿಗಳ ಪಟ್ಟಿಯೊಂದನ್ನು ಸಿದ್ಧಪಡಿಸುವ ವ್ಯವಸ್ಥೆ ಮಾಡತಕ್ಕದ್ದು ಮತ್ತು ತಿದ್ದುಪಡಿಗಳ ಪಟ್ಟಿಯೊಂದಿಗೆ ಮತದಾರರ ಪಟ್ಟಿಗಳ ಕರಡನ್ನು ಪ್ರಕಟಿಸತಕ್ಕದ್ದು ಮತ್ತು (3) ರಿಂದ (16)ರವರೆಗಿನ ಉಪನಿಯಮಗಳ ಉಪಬಂಧಗಳು, ಮತದಾರರ ಪಟ್ಟಿಗಳನ್ನು ಮೊದಲು ಸಿದ್ಧಪಡಿಸುವುದಕ್ಕೆ ಸಂಬಂಧಿಸಿ ಅನ್ವಯವಾಗುವಂತೆ ಅಂಥ ಪರಿಷ್ಕರಣೆಗೆ ಕೂಡ ಅನ್ವಯವಾಗತಕ್ಕದ್ದು.

(ಡಿ) (ಬಿ) ಖಂಡದ ಮೇರೆಗೆ ಮತದಾರರ ಪರಿಷ್ಕೃತ ಪಟ್ಟಿಗಳ ಯಾವುದೇ ಕರಡಿನ ಅಥವಾ (ಸಿ) ಖಂಡದ ಮೇರೆಗೆ ಮತದಾರರ ಪಟ್ಟಿಗಳ ಮತ್ತು ತಿದ್ದುಪಡಿಗಳ ಪಟ್ಟಿಯ ಕರಡಿನ ಪ್ರಕಟಣೆ ಮತ್ತು (15)ನೇ ಉಪನಿಯಮದ ಮೇರೆಗೆ ಅವುಗಳ ಅಂತಿಮ ಪ್ರಕಟಣೆ – ಇವುಗಳ ಮಧ್ಯೆ ಯಾವುವೇ ಕಾಲದಲ್ಲಿ ಯಾವುದೇ ಹೆಸರುಗಳನ್ನು (16)ನೇ ಉಪನಿಯಮದ ಮೇರೆಗೆ ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ಅಂಥ ಸೇರ್ಪಡೆಗೆ ಯಾವುದೇ ಸಿಂಧುವಾದ ಆಕ್ಷೇಪಣೆಗಳು ಇವೆಯೆಂದು ಅಭಿಪ್ರಾಯಪಡುವ ಹೊರತು, ಆ ಹೆಸರುಗಳನ್ನು ಮತದಾರರ ಪರಿಷ್ಕೃತ ಪಟ್ಟಿಗಳಲ್ಲಿ ಸೇರಿಸುವ ವ್ಯವಸ್ಥೆ ಮಾಡತಕ್ಕದ್ದು.

**5ಎ. ಕೃಷಿಕರ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಗಳಲ್ಲಿರುವ ನಮೂದುಗಳನ್ನು ಸರಿಪಡಿಸುವುದು ಮತ್ತು ಅಂಥ ಪಟ್ಟಿಗಳಲ್ಲಿ ಹೆಸರುಗಳನ್ನು ಸೇರಿಸುವುದು.**– (1) ಡೆಪ್ಯುಟಿ ಕಮಿಷನರನು ಅಥವಾ ಈ ಸಂಬಂಧದಲ್ಲಿ ಅವನಿಂದ ಅಧಿಕೃತನಾದ ಯಾರೇ ಅಧಿಕಾರಿಯು (ಇನ್ನು ಮುಂದೆ ಈ ನಿಯಮದಲ್ಲಿ ಅಧಿಕೃತ ಅಧಿಕಾರಿ ಎಂದು ಉಲ್ಲೇಖಿಸಲಾಗಿದೆ) ಈ ಬಗ್ಗೆ ಯಾರಾದರೂ ಅರ್ಜಿ ಸಲ್ಲಿಸಿದಾಗ ಅಥವಾ ಸ್ವಪ್ರೇರಣೆಯಿಂದ, ತಾನು ಸೂಕ್ತವೆಂದು ಯೋಚಿಸುವಂಥ ವಿಚಾರಣೆ ನಡೆಸಿದ ತರುವಾಯ ಕೃಷಿಕರ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿನ ಯಾವುದೇ ನಮೂದು,–

(ಎ) ಯಾವುದೇ ನಿರ್ದಿಷ್ಟ ವಿವರಕ್ಕೆ ಸಂಬಂಧಪಟ್ಟಂತೆ ತಪ್ಪಾಗಿದೆಯೆಂದು ಅಥವಾ ದೋಷಪೂರ್ಣವಾಗಿದೆಯೆಂದು; ಅಥವಾ

(ಬಿ) ಸಂಬಂಧಪಟ್ಟ ವ್ಯಕ್ತಿಯು ಮೃತನಾಗಿದ್ದಾನೆ ಅಥವಾ ಚುನಾವಣಾ ಕ್ಷೇತ್ರದಲ್ಲಿ ಕೃಷಿಕನಾಗಿ ಮುಂದುವರಿದಿಲ್ಲ ಅಥವಾ ಆ ಪಟ್ಟಿಯಲ್ಲಿ ನೋಂದಾಯಿತನಾಗಲು ಅನ್ಯಥಾ ಹಕ್ಕುಳ್ಳವನಾಗಿಲ್ಲ ಎಂಬ ಕಾರಣದ ಮೇಲೆ ಆ ನಮೂದನ್ನು ತೆಗೆದುಹಾಕತಕ್ಕುದೆಂದು ಡೆಪ್ಯುಟಿ ಕಮಿಷನರ್‌ಗೆ ಅಥವಾ ಅಧಿಕೃತ ಅಧಿಕಾರಿಗೆ ಮನದಟ್ಟಾದರೆ ಅವನು ಈ ಸಂಬಂಧದಲ್ಲಿ ಕೃಷಿ ಮಾರಾಟ ನಿರ್ದೇಶಕನು ನೀಡಬಹುದಾದಂಥ ಸಾಮಾನ್ಯ ಅಥವಾ ವಿಶೇಷ ನಿರ್ದೇಶನಗಳು ಯಾವುವಾದರೂ ಇದ್ದರೆ, ಅವುಗಳಿಗೊಳಪಟ್ಟು ಆ ನಮೂದನ್ನು ತಿದ್ದುಪಡಿ ಮಾಡತಕ್ಕದ್ದು ಅಥವಾ ತೆಗೆದುಹಾಕತಕ್ಕದ್ದು:

ಪರಂತು, (ಎ) ಖಂಡದಲ್ಲಿ ನಮೂದಿಸಿದ ಯಾವುದೇ ಆಧಾರದ ಮೇಲೆ ಯಾವುದೇ ಕ್ರಮವನ್ನು ಕೈಕೊಳ್ಳುವ ಮುಂಚೆ ಅಥವಾ ಸಂಬಂಧಪಟ್ಟ ವ್ಯಕ್ತಿಯು ಯಾವುದೇ ಚುನಾವಣೆ ಕ್ಷೇತ್ರದಲ್ಲಿ ಕೃಷಿಕನಾಗಿ ಮುಂದುವರೆಯುತ್ತಿಲ್ಲ ಅಥವಾ ಆ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ನೋಂದಾಯಿತನಾಗಲು ಅನ್ಯಥಾ ಹಕ್ಕುಳ್ಳವನಾಗಿಲ್ಲ ಎಂಬ ಆಧಾರದ ಮೇಲೆ (ಬಿ) ಖಂಡದ ಮೇರೆಗೆ ಯಾವುದೇ ಕ್ರಮವನ್ನು ಕೈಗೊಳ್ಳುವ ಮುಂಚೆ, ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ಸಂಬಂಧಪಟ್ಟ ವ್ಯಕ್ತಿಯ ಸಂಬಂಧದಲ್ಲಿ ಕೈಗೊಳ್ಳಬೇಕೆಂದು ಪ್ರಸ್ತಾವಿಸಲಾದ ಕ್ರಮದ ಬಗ್ಗೆ ಅಹವಾಲು ಹೇಳಿಕೊಳ್ಳುವುದಕ್ಕೆ ಅವನಿಗೆ ಸೂಕ್ತ ಅವಕಾಶವನ್ನು ನೀಡತಕ್ಕದ್ದು.

(2) (ಎ) ಕೃಷಿಕರ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ಯಾವ ವ್ಯಕ್ತಿಯ ಹೆಸರು ಸೇರಿಲ್ಲವೋ ಆ ವ್ಯಕ್ತಿಯು ಆ ಪಟ್ಟಿಯಲ್ಲಿ ತನ್ನ ಹೆಸರನ್ನು ಸೇರಿಸುವಂತೆ ಕೋರಿ ಡೆಪ್ಯುಟಿ ಕಮಿಷನರನಿಗೆ ಅಥವಾ ಅಧಿಕೃತ ಅಧಿಕಾರಿಗೆ ಅರ್ಜಿ ಸಲ್ಲಿಸಬಹುದು.

(ಬಿ) ಡೆಪ್ಯುಟಿ ಕಮಿಷನರನಿಗೆ ಅಥವಾ ಅಧಿಕೃತ ಅಧಿಕಾರಿಗೆ ಕೃಷಿಕನು ಮತದಾರನ ಪಟ್ಟಿಯಲ್ಲಿ ಹೆಸರನ್ನು ನೋಂದಾಯಿಸಿಕೊಳ್ಳಲು ಹಕ್ಕುಳ್ಳವನಾಗಿದ್ದಾನೆ ಎಂದು ಮನದಟ್ಟಾದರೆ ಅವನು ಆ ಕೃಷಿಕನ ಹೆಸರನ್ನು ಪಟ್ಟಿಯಲ್ಲಿ ಸೇರಿಸುವಂತೆ ನಿರ್ದೇಶಿಸಬಹುದು.

(ಸಿ) ಯಾವುದೇ ಚುನಾವಣಾ ಕ್ಷೇತ್ರದಲ್ಲಿ ಚುನಾವಣೆಗೆ ನಾಮನಿರ್ದೇಶನ ಮಾಡುವುದಕ್ಕೆ ನಿಗದಿಪಡಿಸಿದ ಕೊನೆಯ ದಿನಾಂಕದ ತರುವಾಯ ಮತ್ತು ಆ ಚುನಾವಣೆಯು ಪೂರ್ಣಗೊಳ್ಳುವುದಕ್ಕೆ ಮುಂಚೆ (1)ನೇ ಉಪನಿಯಮದ ಮೇರೆಗೆ ಯಾವುದೇ ನಮೂದಿನ ತಿದ್ದುಪಡಿ ಮಾಡತಕ್ಕದ್ದಲ್ಲ ಅಥವಾ ತೆಗೆದುಹಾಕತಕ್ಕದ್ದಲ್ಲ ಮತ್ತು ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ಹೆಸರನ್ನು ಸೇರಿಸುವ ಬಗೆಗಿನ ಯಾವುವೇ ನಿರ್ದೇಶನಗಳನ್ನು ಈ ಉಪನಿಯಮದ ಮೇರೆಗೆ ನೀಡತಕ್ಕದ್ದಲ್ಲ.

(3) (ಎ) (1)ನೇ ಉಪನಿಯಮದ ಅಥವಾ (2)ನೇ ಉಪನಿಯಮದ (ಎ) ಖಂಡದ ಮೇರೆಗೆ ಸಲ್ಲಿಸುವ ಪ್ರತಿಯೊಂದು ಅರ್ಜಿಯನ್ನು 2, 4 ಮತ್ತು 13 ಈ ನಮೂನೆಗಳ ಪೈಕಿ ಸಮುಚಿತವಾಗಬಹುದಾದಂಥ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

(ಬಿ) ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು, ಅಂಥ ಅರ್ಜಿಯನ್ನು ಸ್ವೀಕರಿಸಿದ ಮೇಲೆ ಆ ಕೂಡಲೇ ಅದರ ಒಂದು ಪ್ರತಿಯನ್ನು ಆತನ ಕಛೇರಿಯ ಎದ್ದು ಕಾಣುವ ಯಾವುದಾದರೂ ಸ್ಥಳದಲ್ಲಿ ಅಂಟಿಸುವಂತೆ ಮತ್ತು ಹಾಗೆ ಅದನ್ನು ಅಂಟಿಸಿದ ದಿನಾಂಕದಿಂದ ಏಳು ದಿನಗಳ ಅವಧಿಯೊಳಗೆ ಅಂಥ ಅರ್ಜಿಗೆ ಸಂಬಂಧಿಸಿದಂತೆ ಆಕ್ಷೇಪಣೆಗಳನ್ನು ಆಹ್ವಾನಿಸುವಂಥ ನೋಟೀಸನ್ನು ಸಹ ಅಂಟಿಸುವಂತೆ ನಿರ್ದೇಶಿಸತಕ್ಕದ್ದು.

(ಸಿ) (ಬಿ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಅವಧಿಯು ಮುಗಿದ ತರುವಾಯ ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು, ಆಕ್ಷೇಪಣೆಗಳೇನಾದರೂ ಬಂದಿದ್ದರೆ ಅವುಗಳನ್ನು ಸಾಧ್ಯವಾದಷ್ಟು ಬೇಗನೆ ಪರಿಶೀಲಿಸತಕ್ಕದ್ದು ಮತ್ತು ಅರ್ಜಿದಾರನು ಮತದಾರರ ಪಟ್ಟಿಯಲ್ಲಿ ತನ್ನ ಹೆಸರನ್ನು ನೋಂದಾಯಿಸಿಕೊಳ್ಳಲು ಹಕ್ಕುಳ್ಳವನಾಗಿದ್ದಾನೆಂದು ತನಗೆ ಮನದಟ್ಟಾದರೆ, ಅವನ ಹೆಸರನ್ನು ಪಟ್ಟಿಯಲ್ಲಿ ಸೇರಿಸಲು ನಿರ್ದೇಶಿಸತಕ್ಕದ್ದು:

ಪರಂತು, ಅಂಥ ಯಾವುದೇ ಅರ್ಜಿಯನ್ನು ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ತಿರಸ್ಕರಿಸಿದಾಗ ಅವನು ಹಾಗೆ ಅರ್ಜಿಯನ್ನು ತಿರಸ್ಕರಿಸಿರುವುದಕ್ಕೆ ಸಂಬಂಧಪಟ್ಟ ಕಾರಣಗಳ ಸಂಕ್ಷಿಪ್ತ ವಿವರಣೆಯನ್ನು ಲಿಖಿತದಲ್ಲಿ ದಾಖಲು ಮಾಡತಕ್ಕದ್ದು.

(4) (ಎ) (1)ನೇ ಉಪನಿಯಮದ ಅಥವಾ (2)ನೇ ಉಪನಿಯಮದ ಮೇರೆಗೆ ಮಾಡಲಾದ ಯಾವುದೇ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು ಯಾವ ಆದೇಶದ ವಿರುದ್ಧ ಅಪೀಲು ಸಲ್ಲಿಸಲಾಗಿದೆಯೋ ಆ ಆದೇಶದ ದಿನಾಂಕದಿಂದ ಹದಿನೈದು ದಿವಸಗಳ ಅವಧಿಯೊಳಗೆ [1][ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ][1] ಅಪೀಲು ಸಲ್ಲಿಸಬಹುದು.

(ಬಿ) (ಎ) ಖಂಡದ ಮೇರೆಗೆ ಅಪೀಲು ಸಲ್ಲಿಸುವಾಗ,–

(i) ಪ್ರತಿಯೊಂದು ಅಪೀಲು, ಅಪೀಲುದಾರನು ಸಹಿಮಾಡಿದ ಜ್ಞಾಪನ ಪತ್ರದ ರೂಪದಲ್ಲಿರತಕ್ಕದ್ದು;

(ii) ಯಾವ ಆದೇಶದ ವಿರುದ್ಧ ಅಪೀಲು ಸಲ್ಲಿಸಲಾಗಿದೆಯೋ ಆ ಆದೇಶದ ಪ್ರತಿಯನ್ನು ಅದಕ್ಕೆ ಲಗತ್ತಿಸಿರತಕ್ಕದ್ದು;

(iii) ಅದನ್ನು [1][ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ][1] ಸಲ್ಲಿಸತಕ್ಕದ್ದು ಅಥವಾ (ಎ) ಖಂಡದಲ್ಲಿ ನಿರ್ದಿಷ್ಟ ಪಡಿಸಿರುವ ಅವಧಿಯೊಳಗೆ ಅವನಿಗೆ ತಲುಪುವಂತೆ ನೋಂದಾಯಿತ ಅಂಚೆಯ ಮೂಲಕ ಕಳುಹಿಸತಕ್ಕದ್ದು.

(ಸಿ) ಅಪೀಲುದಾರನು ಅಥವಾ ಅವನ ಪರವಾಗಿ ಯಾರೇ ವ್ಯಕ್ತಿಯು ಸ್ವತಃ [1][ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ][1] ಅಥವಾ ಈ ಸಂಬಂಧದಲ್ಲಿ ಅವನಿಂದ ನೇಮಕಗೊಂಡ ಯಾರೇ ಇತರ ಅಧಿಕಾರಿಗೆ ಅಪೀಲಿನ ಜ್ಞಾಪನ ಪತ್ರವನ್ನು ಒಪ್ಪಿಸಿದ್ದರೆ, (ಬಿ) ಖಂಡದ ಉದ್ದೇಶಗಳಿಗಾಗಿ ಆ ಅಪೀಲನ್ನು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಸಲ್ಲಿಸಿರುವುದಾಗಿ ಭಾವಿಸತಕ್ಕದ್ದು.

1. 2004ರ ಅಧಿಸೂಚನೆ ಸಂಖ್ಯೆ ಸಂ.ಸಿಡಿ 248 ಎಂಆರ್‌ಇ 2003, ಬೆಂಗಳೂರು, ದಿನಾಂಕ 3ನೇ ಫೆಬ್ರವರಿ, 2004ರ ಮೂಲಕ ಪ್ರತಿಯೋಜಿಸಲಾಗಿದೆ.

(ಡಿ) 5ನೇ ನಿಯಮದ (16)ನೇ ಉಪನಿಯಮದ (ಡಿ) ಮತ್ತು (ಇ) ಖಂಡಗಳ ಉಪಬಂಧಗಳು ಮತ್ತು ಈ ನಿಯಮದ (2)ನೇ ಉಪನಿಯಮದ (ಸಿ) ಖಂಡವು, ಈ ಉಪನಿಯಮದ ಮೇರೆಗೆ ಅಪೀಲಿನಲ್ಲಿ ಹೊರಡಿಸಿದ ಆದೇಶಕ್ಕೆ ಸಂಬಂಧಿಸಿದಂತೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

**5ಬಿ. [1][........][1] ವ್ಯಾಪಾರಿಗಳ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಗಳನ್ನು ತಯಾರಿಸುವುದು.–** (1) ಡೆಪ್ಯುಟಿ ಕಮಿಷನರನು ಅಥವಾ ಈ ಸಂಬಂಧದಲ್ಲಿ ಅವನಿಂದ ಅಧಿಕೃತನಾದ ಯಾರೇ ಅಧಿಕಾರಿಯು (ಈ ನಿಯಮದಲ್ಲಿ ಇನ್ನು ಮುಂದೆ ಅವನನ್ನು ಅಧಿಕೃತ ಅಧಿಕಾರಿಯೆಂದು ಉಲ್ಲೇಖಿಸಲಾಗಿದೆ), ಕಾರ್ಯಾಚರಣೆ ಕೈಗೊಳ್ಳಲು ಮಾರುಕಟ್ಟೆ ಸಮಿತಿಯಿಂದ ಲೈಸೆನ್ಸ್ ಪಡೆದಿರುವ, [2][ಚಿಲ್ಲರೆ ವ್ಯಾಪಾರಿಗಳಲ್ಲದ, ಇತರ ವ್ಯಾಪಾರಿಗಳ][2] ಹೆಸರು, ತಂದೆಯ:ಗಂಡನ ಹೆಸರು, ವಾಸಸ್ಥಳ, ವಯಸ್ಸು, ವಿಳಾಸ ಮತ್ತು ಲೈಸೆನ್ಸ್ ನಂಬರ್ ಇವುಗಳನ್ನೊಳಗೊಂಡ ಒಂದು ಪ್ರತ್ಯೇಕ ಮತದಾರರ [3][ಪಟ್ಟಿಯನ್ನು][3] ತನ್ನ ಕಛೇರಿಯಲ್ಲಿ ಇಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-94ರ ಮೂಲಕ ಬಿಟ್ಟುಬಿಡಲಾಗಿದೆ.

2. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ 88 ದಿನಾಂಕ 30-1-90ರ ಮೂಲಕ ಪ್ರತಿಯೋಜಿಸಲಾಗಿದೆ.

3. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-94ರ ಮೂಲಕ ಪ್ರತಿಯೋಜಿಸಲಾಗಿದೆ.

(2) ಡೆಪ್ಯುಟಿ ಕಮಿಷನರನಿಗೆ ಅಥವಾ ಅಧಿಕೃತ ಅಧಿಕಾರಿಗೆ, (1)ನೆಯ ಉಪನಿಯಮದಲ್ಲಿ ಮತದಾರರ ಪಟ್ಟಿಗಳನ್ನು ತಹಲ್ವರೆಗೆ ಸರಿಪಡಿಸಿ ಇಟ್ಟುಕೊಳ್ಳಲು ಅನುಕೂಲವಾಗುವಂತೆ ಪ್ರತಿಯೊಂದು ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯು, [1][........][1] ಲೈಸನ್ಸು ಪಡೆದ ವ್ಯಾಪಾರಿಗಳ ಪಟ್ಟಿಯಲ್ಲಿ ಉಂಟಾದ ಪ್ರತಿಯೊಂದು ಬದಲಾವಣೆಯ ಬಗ್ಗೆ ಆ ಕೂಡಲೇ ತಿಳಿಸತಕ್ಕದ್ದು ಮತ್ತು ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ಅಂಥ ಮಾಹಿತಿಯನ್ನು ಸ್ವೀಕರಿಸಿದ ಮೇಲೆ ಲೈಸನ್ಸು ಪಡೆದ ವ್ಯಾಪಾರಿಗಳಾಗಿ ಮುಂದುವರಿದಿಲ್ಲದ ವ್ಯಕ್ತಿಗಳ ಹೆಸರುಗಳನ್ನು ಸಂಬಂಧಪಟ್ಟ ಮತದಾರರ ಪಟ್ಟಿಗಳಿಂದ ಹೊಡೆದು ಹಾಕತಕ್ಕದ್ದು ಮತ್ತು [1][........][1] ಲೈಸನ್ಸು ಪಡೆದು ವ್ಯಾಪಾರಿಗಳಾಗಿರುವವರ ಹೆಸರುಗಳನ್ನು ಆ ಪಟ್ಟಿಯಲ್ಲಿ ಸೇರಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-94ರ ಮೂಲಕ ಬಿಟ್ಟುಬಿಡಲಾಗಿದೆ.

(3) 5ಎ ನಿಯಮದ ಉಪಬಂಧಗಳು [1][........][1] ಕೃಷಿಕರ ಚುನಾವಣಾ ಕ್ಷೇತ್ರಗಳ ಮತದಾರರ ಪಟ್ಟಿಗಳ ಸಂಬಂಧದಲ್ಲಿ ಅನ್ವಯವಾಗುವಂತೆ ವ್ಯಾಪಾರಿಗಳ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಗಳ ಸಂಬಂಧದಲ್ಲಿ ಸಹ ಅನ್ವಯವಾಗತಕ್ಕದ್ದು:

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-94ರ ಮೂಲಕ ಬಿಟ್ಟುಬಿಡಲಾಗಿದೆ.

ಪರಂತು, ಹೆಸರನ್ನು ಸೇರಿಸುವಂತೆ ಕೋರಿ ಸಲ್ಲಿಸುವ ಅರ್ಜಿಯ ನಮೂನೆ 14ರಲ್ಲಿರತಕ್ಕದ್ದು:

ಮತ್ತೂ ಪರಂತು, 5ಎ ನಿಯಮದ (1)ನೇ ಉಪನಿಯಮದ ಅಥವಾ (2)ನೇ ಉಪನಿಯಮದ (ಎ) ಖಂಡದ ಮೇರೆಗೆ ಸಲ್ಲಿಸಿದ ಅರ್ಜಿಯನ್ನು ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ಸ್ವೀಕರಿಸಿದಲ್ಲಿ, ಅವನು ಅಂಥ ಅರ್ಜಿಯನ್ನು ಸಂಬಂಧಪಟ್ಟ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಗೆ ಕಳುಹಿಸತಕ್ಕದ್ದು ಮತ್ತು ಸದರಿ ಕಾರ್ಯದರ್ಶಿಯಿಂದ ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸ್ವೀಕರಿಸಿದ ಮೇಲೆ, ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು (2)ನೇ ಉಪನಿಯಮಕ್ಕನುಸಾರ ಕ್ರಮ ಕೈಕೊಳ್ಳತಕ್ಕದ್ದು.]

[1][**5ಸಿ. [2][ಸಹಕಾರ ಮಾರುಕಟ್ಟೆ [3][.......][3] ವ್ಯವಹಾರ ಸಂಘಗಳ ಮತ್ತು ಕೃಷಿ ಸಹಕಾರ ಸಂಸ್ಕರಣ ಸಂಘಗಳ][2] ವ್ಯವಸ್ಥಾಪಕ ಸಮಿತಿಯ ಸದಸ್ಯರ ಹೆಸರುಗಳ ಪಟ್ಟಿಯನ್ನು ಇಡುವುದು.–** (1) ಡೆಪ್ಯುಟಿ ಕಮಿಷನರನು ಅಥವಾ ಈ ಸಂಬಂಧದಲ್ಲಿ ಅವನಿಂದ ಅಧಿಕೃತನಾದ ಯಾರೇ ಅಧಿಕಾರಿಯು ಈ ನಿಯಮದಲ್ಲಿ (ಇನ್ನು ಮುಂದೆ ಅವನನ್ನು ಅಧಿಕೃತ ಅಧಿಕಾರಿಯೆಂದು ಉಲ್ಲೇಖಿಸಲಾಗಿದೆ) 11ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ [2][ಸಹಕಾರ ಮಾರುಕಟ್ಟೆ [3][........][3] ವ್ಯವಹಾರ ಸಂಘಗಳ ಮತ್ತು ಕೃಷಿ ಸಹಕಾರ ಸಂಸ್ಕರಣ ಸಂಘಗಳ][2] ಸಂಬಂಧದಲ್ಲಿ ತನ್ನ ಕಚೇರಿಯಲ್ಲಿ ಅಂಥ ಪ್ರತಿಯೊಂದು ವರ್ಗದ ಸಂಘದ ಆಡಳಿತ ಸಮಿತಿಯ ಎಲ್ಲ ಸದಸ್ಯರ ಪಟ್ಟಿಯನ್ನು ಇಟ್ಟಿರತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 191 ದಿನಾಂಕ 25-5-70ರ ಮೂಲಕ ಸೇರಿಸಲಾಗಿದೆ.
2. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-94ರ ಮೂಲಕ ಪ್ರತಿಯೋಜಿಸಲಾಗಿದೆ.
3. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ 88 ದಿನಾಂಕ 30-1-90ರ ಮೂಲಕ ಬಿಟ್ಟುಬಿಡಲಾಗಿದೆ.

(2) ಡೆಪ್ಯುಟಿ ಕಮಿಷನರನಿಗೆ ಅಥವಾ ಅಧಿಕೃತ ಅಧಿಕಾರಿಗೆ (1)ನೇ ಉಪನಿಯಮದಲ್ಲಿ ಉಲ್ಲೇಖಿಸಲಾದ ಸದಸ್ಯರುಗಳ ಪಟ್ಟಿಯನ್ನು ತಹಲ್ವರೆಗೆ ಸರಿಪಡಿಸಿ ಇಟ್ಟುಕೊಳ್ಳಲು ಅನುಕೂಲವಾಗುವಂತೆ ಅಂಥ ಪ್ರತಿಯೊಂದು ಸಂಘದ ವ್ಯವಸ್ಥಾಪಕನು ಅಥವಾ ಕಾರ್ಯದರ್ಶಿಯು ಅಂಥ ಸಂಘಗಳ ಆಡಳಿತ ಸಮಿತಿಯ ಸದಸ್ಯರ ಹೆಸರುಗಳಲ್ಲಿ ಉಂಟಾದ ಪ್ರತಿಯೊಂದು ಬದಲಾವಣೆಯನ್ನು ಆ ಕೂಡಲೇ ಡೆಪ್ಯುಟಿ ಕಮಿಷನರನಿಗೆ ಅಥವಾ ಅಧಿಕೃತ ಅಧಿಕಾರಿಗೆ ತಿಳಿಸತಕ್ಕದ್ದು ಮತ್ತು ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ಆ ಮಾಹಿತಿಯನ್ನು ಸ್ವೀಕರಿಸಿದ ಮೇಲೆ ಅಂಥ ಸಂಘಗಳ ಆಡಳಿತ ಸಮಿತಿಯ ಸದಸ್ಯರಾಗಿ ಮುಂದುವರಿದಿಲ್ಲದ ವ್ಯಕ್ತಿಗಳ ಹೆಸರುಗಳನ್ನು ಸಂಬಂಧಪಟ್ಟ ಮತದಾರರ ಪಟ್ಟಿಯಿಂದ ಹೊಡೆದು ಹಾಕತಕ್ಕದ್ದು ಮತ್ತು ಹೊಸದಾಗಿ ಸದಸ್ಯರಾಗಿರುವ ವ್ಯಕ್ತಿಗಳ ಹೆಸರುಗಳನ್ನು ಆ ಪಟ್ಟಿಗಳಲ್ಲಿ ಸೇರಿಸತಕ್ಕದ್ದು.

(3) 5ಎ ನಿಯಮದ ಉಪಬಂಧಗಳು, [1][........][1] 11ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಪ್ರತಿಯೊಂದು ಸಂಘದ ಆಡಳಿತ ಸಮಿತಿಯ ಸದಸ್ಯರ ಹೆಸರುಗಳ ಪಟ್ಟಿಯ ಸಂದರ್ಭದಲ್ಲಿ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು:

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-94ರ ಮೂಲಕ ಬಿಟ್ಟುಬಿಡಲಾಗಿದೆ.

ಮತ್ತೂ ಪರಂತು, 5ಎ ನಿಯಮದ (1)ನೇ ಉಪನಿಯಮ ಅಥವಾ (2)ನೇ ಉಪನಿಯಮದ (ಎ) ಖಂಡದ ಮೇರೆಗೆ ಸಲ್ಲಿಸಿದ ಅರ್ಜಿಯನ್ನು ಡೆಪ್ಯುಟಿ ಕಮಿಷನರನು ಅಥವಾ ಅಧಿಕೃತ ಅಧಿಕಾರಿಯು ಸ್ವೀಕರಿಸಿರುವಲ್ಲಿ, ಅವನು ಅಂಥ ಅರ್ಜಿಯನ್ನು ಸಂಬಂಧಪಟ್ಟ ಸಂಘದ ವ್ಯವಸ್ಥಾಪಕನಿಗೆ ಅಥವಾ ಕಾರ್ಯದರ್ಶಿಗೆ ಕಳುಹಿಸತಕ್ಕದ್ದು, ಮತ್ತು ಸದರಿ ವ್ಯವಸ್ಥಾಪಕನಿಂದ ಅಥವಾ ಕಾರ್ಯದರ್ಶಿಯಿಂದ ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸ್ವೀಕರಿಸಿದ ಮೇಲೆ (2)ನೇ ಉಪನಿಯಮಕ್ಕನುಸಾರ ಕ್ರಮ ಕೈಗೊಳ್ಳತಕ್ಕದ್ದು.][1]

[1][**6. ಸದಸ್ಯರನ್ನು ಚುನಾಯಿಸುವಂತೆ ಚುನಾವಣಾ ಕ್ಷೇತ್ರಗಳಿಗೆ [2][ಮತ್ತು ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳಿಗೆ ಹಾಗೂ ಕೃಷಿ ಸಹಕಾರ ಸಂಸ್ಕರಣ ಸಂಘಗಳಿಗೆ][2] ಕರೆ ನೀಡುವುದು.–** (1) 154ಎ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಅಥವಾ 10ನೇ ಪ್ರಕರಣದ ಮೇರೆಗೆ ರಚಿಸಲಾದ ಮಾರುಕಟ್ಟೆ ಸಮಿತಿಯ ಪದಾವಧಿಯು ಮುಕ್ತಾಯವಾದ ತರುವಾಯ ಅಥವಾ ಮಾರುಕಟ್ಟೆ ಸಮಿತಿಯ ಸದಸ್ಯರ ಸ್ಥಾನಗಳು ತೆರವಾದಾಗಲೆಲ್ಲ ಅವುಗಳನ್ನು ಭರ್ತಿ ಮಾಡುವ ಉದ್ದೇಶಕ್ಕಾಗಿ ಅಥವಾ 127ನೇ ಪ್ರಕರಣದ ಮೇರೆಗೆ ಮಾಡಲಾದ ರದ್ದಿಯಾತಿಯ ಅವಧಿಯು ಮುಕ್ತಾಯವಾದ ತರುವಾಯ ಅಥವಾ 130ನೇ ಪ್ರಕರಣದ ಮೇರೆಗೆ ನೇಮಕಗೊಂಡ ಆಡಳಿತಾಧಿಕಾರಿಯ ಪದಾವಧಿಯು ಮುಕ್ತಾಯವಾದ ತರುವಾಯ ಮಾರುಕಟ್ಟೆ ಸಮಿತಿಯನ್ನು ರಚಿಸುವ ಉದ್ದೇಶಗಳಿಗಾಗಿ ಡೆಪ್ಯುಟಿ ಕಮಿಷನರನು ಈ ಅಧಿನಿಯಮದ, ಈ ನಿಯಮಗಳ ಮತ್ತು ಈ ಅಧಿನಿಯಮದ ಅಥವಾ ಈ ನಿಯಮಗಳ ಮೇರೆಗೆ ಹೊರಡಿಸಲಾದ ಆದೇಶಗಳ ಉಪಬಂಧಗಳನುಸಾರ ಸದಸ್ಯರನ್ನು ಚುನಾಯಿಸುವಂತೆ ಚುನಾವಣಾ ಕ್ಷೇತ್ರಗಳಿಗೆ [2][ಮತ್ತು ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳಿಗೆ ಹಾಗೂ ಕೃಷಿ ಸಹಕಾರ ಸಂಸ್ಕರಣ ಸಂಘಗಳಿಗೆ][2] ಆದೇಶದ ಮೂಲಕ ಕರೆ ನೀಡತಕ್ಕದ್ದು:

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3-2-70ರ ಮೂಲಕ ಪ್ರತಿಯೋಜಿಸಲಾಗಿದೆ.
2. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-94ರ ಮೂಲಕ ಪ್ರತಿಯೋಜಿಸಲಾಗಿದೆ.

ಪರಂತು, ನಿವೃತ್ತರಾಗುವ ಸದಸ್ಯರ ಪದಾವಧಿಯು [1][ಅಥವಾ ಆಡಳಿತಾಧಿಕಾರಿಯ ನೇಮಕಾತಿಯ ಅವಧಿಯು][1] ಮುಕ್ತಾಯವಾಗುವ ದಿನಾಂಕಕ್ಕೆ ಮೂರು ತಿಂಗಳಿಗೆ ಮುಂಚೆಯಲ್ಲಿದ್ದಂತೆ ಈ ಉಪನಿಯಮದ ಮೇರೆಗೆ ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 191 ದಿನಾಂಕ 25–5–70ರ ಮೂಲಕ ಸೇರಿಸಲಾಗಿದೆ.

(2) ಮಾರುಕಟ್ಟೆ ಸಮಿತಿಗೆ ಆಯ್ಕೆಯಾದ ಸದಸ್ಯನ ಸ್ಥಾನವು ಖಾಲಿಯಾದಾಗ ಅಥವಾ ಖಾಲಿಯಾಗಿದೆಯೆಂದು ಘೋಷಿಸಿದಾಗ ಅಥವಾ ಅವನು ಸಮಿತಿಯ ಸದಸ್ಯನಾಗಿ ಚುನಾಯಿತನಾಗಿರುವುದು ಶೂನ್ಯವೆಂದು ಘೋಷಿಸಿದಾಗ, ಡೆಪ್ಯುಟಿ ಕಮಿಷನರನು, ಆದೇಶ ಹೊರಡಿಸಿ ಹಾಗೆ ಉಂಟಾದ ಖಾಲಿಸ್ಥಾನವನ್ನು ಭರ್ತಿ ಮಾಡುವ ಉದ್ದೇಶಕ್ಕಾಗಿ ವ್ಯಕ್ತಿಯೊಬ್ಬರನ್ನು ಆ ಆದೇಶದಲ್ಲಿ ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮುಂಚೆ ಚುನಾಯಿಸುವಂತೆ ಸಂಬಂಧಪಟ್ಟ ಚುನಾವಣಾ ಕ್ಷೇತ್ರಕ್ಕೆ [1][ಮತ್ತು ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳಿಗೆ ಹಾಗೂ ಕೃಷಿ ಸಹಕಾರ ಸಂಸ್ಕರಣ ಸಂಘಗಳಿಗೆ][1] ಕರೆ ನೀಡತಕ್ಕದ್ದು, ಮತ್ತು ಅಧಿನಿಯಮದ ಈ ನಿಯಮಗಳ ಮತ್ತು ಅಧಿನಿಯಮದ ಅಥವಾ ಈ ನಿಯಮಗಳ ಮೇರೆಗೆ ಹೊರಡಿಸಲಾದ ಆದೇಶಗಳ ಉಪಬಂಧಗಳು ಅಂಥ ಖಾಲಿಸ್ಥಾನವನ್ನು ತುಂಬುವುದಕ್ಕಾಗಿ ನಡೆಸಲಾಗುವ ಸದಸ್ಯನೊಬ್ಬನ ಚುನಾವಣೆಯ ಸಂಬಂಧದಲ್ಲಿ ಸಹ ಸಾಧ್ಯವಾದಷ್ಟು ಮಟ್ಟಿಗೆ ಅನ್ವಯವಾಗತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್ಇ 91 ದಿನಾಂಕ 27–1–94ರ ಮೂಲಕ ಪ್ರತಿಯೋಜಿಸಲಾಗಿದೆ.

**7. ಚುನಾವಣೆಯ ನೋಟೀಸು.–** ಡೆಪ್ಯುಟಿ ಕಮಿಷನರನು ಮಾರುಕಟ್ಟೆ ಪ್ರದೇಶದಲ್ಲಿ ಮತ್ತು 1[5ನೇ ನಿಯಮದ (5)ನೇ ಉಪನಿಯಮದಲ್ಲಿ]1 ನಿರ್ದಿಷ್ಟಪಡಿಸಲಾದ ಸ್ಥಳಗಳಲ್ಲಿ ಪ್ರಸಾರದಲ್ಲಿರುವ ಕನ್ನಡ ವೃತ್ತಪತ್ರಿಕೆಯಲ್ಲಿ ಚುನಾವಣೆಯ ದಿನಾಂಕಕ್ಕೆ ಮೊದಲು ನಲವತ್ತೈದು ದಿನಗಳಿಗೆ ಕಡಿಮೆಯಿಲ್ಲದಷ್ಟು ಅವಧಿಯ ನೋಟೀಸನ್ನು ಕನ್ನಡದಲ್ಲಿ ಪ್ರಕಟಿಸುವ ವ್ಯವಸ್ಥೆ ಮಾಡತಕ್ಕದ್ದು ಮತ್ತು ಆ ನೋಟೀಸು ಈ ಕೆಳಕಂಡ ಸಂಗತಿಗಳನ್ನು ಒಳಗೊಂಡಿರತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44 ದಿನಾಂಕ 3–2–70ರ ಮೂಲಕ ಪ್ರತಿಯೋಜಿಸಲಾಗಿದೆ.

[1][(ಎ) 11ನೇ ಪ್ರಕರಣದ ಉಪಪ್ರಕರಣ (1)ರಲ್ಲಿ ಉಲ್ಲೇಖಿಸಲಾಗಿರುವ, ಪ್ರತಿಯೊಂದು ಚುನಾವಣಾ ಕ್ಷೇತ್ರದಲ್ಲಿ ಮತ್ತು ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳು ಮತ್ತು ಕೃಷಿ ಸಹಕಾರ ಸಂಸ್ಕರಣ ಸಂಘಗಳು ಚುನಾಯಿಸಬೇಕಾದ ವ್ಯಕ್ತಿಗಳ ಸಂಖ್ಯೆ;][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್ಇ 91 ದಿನಾಂಕ 27–1–94ರ ಮೂಲಕ ಪ್ರತಿಯೋಜಿಸಲಾಗಿದೆ.

(ಬಿ) ನಾಮನಿರ್ದೇಶನಗಳನ್ನು ಮಾಡುವುದಕ್ಕಾಗಿ ನಿಗದಿಯಾದ ಸ್ಥಳ, ವೇಳೆ ಮತ್ತು ಕೊನೆಯ ದಿನಾಂಕ ಆ ಕೊನೆಯ ದಿನಾಂಕವು ನೋಟೀಸು ಪ್ರಕಟವಾದ ದಿನಾಂಕದಿಂದ ಹದಿನಾಲ್ಕು ದಿನಗಳಿಗಿಂತ ಕಡಿಮೆಯಿಲ್ಲದ ಅವಧಿಯ ದಿನಾಂಕವಾಗಿರತಕ್ಕದ್ದು.

(ಸಿ) ನಾಮನಿರ್ದೇಶನಗಳ ಪರಿಶೀಲನೆಯ ದಿನಾಂಕ – ಆ ದಿನಾಂಕವು ನಾಮ ನಿರ್ದೇಶನಕ್ಕೆ ನಿಗದಿಯಾದ ಕೊನೆಯ ದಿನಾಂಕದ ತರುವಾಯದ ಎರಡನೇ ದಿನವಾಗಿರತಕ್ಕದ್ದು ಅಥವಾ ಆ ದಿನವು ಸಾರ್ವಜನಿಕ ರಜಾ ದಿನವಾಗಿದ್ದರೆ ಸಾರ್ವಜನಿಕ ರಜಾ ದಿನವಾಗಿಲ್ಲದ ಆ ತರುವಾಯಆದ ದಿನ.

(ಡಿ) ನಾಮನಿರ್ದೇಶನಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ – ಆ ದಿನಾಂಕವು ನಾಮನಿರ್ದೇಶನಗಳ ಪರಿಶೀಲನೆಯ ದಿನಾಂಕದ ತರುವಾಯದ ಮೂರನೆಯ ದಿನವಾಗಿರತಕ್ಕದ್ದು ಅಥವಾ ಆ ದಿನವು ಸಾರ್ವಜನಿಕ ರಜಾದಿನವಾಗಿದ್ದರೆ ಸಾರ್ವಜನಿಕ ರಜಾದಿನವಾಗಿಲ್ಲದ ಆ ತರುವಾಯದ ದಿನ.

(ಇ) ಮತದಾನವು ಅವಶ್ಯವಾದರೆ ಆ ಮತದಾನ ನಡೆಯುವ ದಿನಾಂಕ ಮತ್ತು ವೇಳೆ – ಆ ದಿನಾಂಕವು ನೋಟೀಸು ಪ್ರಕಟಣೆಯಾದ ದಿನಾಂಕದಿಂದ ನಲವತ್ತೈದು ದಿವಸಗಳಿಗೆ ಕಡಿಮೆಯಲ್ಲದ ಅವಧಿಯ ದಿನಾಂಕವಾಗಿರತಕ್ಕದ್ದು.

(ಎಫ್) ಮತಗಳ ಎಣಿಕೆಯ ದಿನಾಂಕ, ಸ್ಥಳ ಮತ್ತು ವೇಳೆ – ಆ ದಿನಾಂಕವು ಮತದಾನದ ದಿನಾಂಕದ ತರುವಾಯದ ಎರಡು ದಿನಗಳಿಗೆ ಮೀರದ ಅವಧಿಯ ದಿನಾಂಕವಾಗಿರತಕ್ಕದ್ದಲ್ಲ.

(ಜಿ) ಯಾವ ದಿನಾಂಕಕ್ಕೆ ಮೊದಲು ಚುನಾವಣೆ ಪೂರ್ಣಗೊಳ್ಳತಕ್ಕುದೋ ಆ ದಿನಾಂಕ.

**8. ನಾಮನಿರ್ದೇಶನಗಳು.–** (1) 7ನೇ ನಿಯಮದ (ಬಿ) ಖಂಡದ ಮೇರೆಗೆ ಗೊತ್ತುಪಡಿಸಲಾದ ದಿನಾಂಕದಂದು ಮತ್ತು ವೇಳೆಗೆ ಅಥವಾ ಅದಕ್ಕೆ ಮುಂಚೆ, ಪ್ರತಿಯೊಬ್ಬ ಅಭ್ಯರ್ಥಿಯು, ಖುದ್ದಾಗಿ ಅಥವಾ ತನ್ನ ಸೂಚಕನ ಮೂಲಕ ಈ ಸಂಬಂಧದಲ್ಲಿ ಡೆಪ್ಯುಟಿ ಕಮಿಷನರನಿಂದ ವಿಶೇಷವಾಗಿ ಅಧಿಕೃತನಾದ ಅಧಿಕಾರಿಗೆ (ಅವನನ್ನು ಈ ಅಧ್ಯಾಯದಲ್ಲಿ ಇನ್ನು ಮುಂದೆ ಚುನಾವಣಾ ಅಧಿಕಾರಿಯೆಂದು ಕರೆಯಲಾಗಿದೆ) ನಾಮನಿರ್ದೇಶನ ಪತ್ರವನ್ನು ಸಲ್ಲಿಸತಕ್ಕದ್ದು ಮತ್ತು [1][ನಮೂನೆ 15ರಲ್ಲಿ][1] ಭರ್ತಿಮಾಡಿದ ಆ ನಾಮನಿರ್ದೇಶನ ಪತ್ರಕ್ಕೆ ಅಭ್ಯರ್ಥಿಯು ಮತ್ತು ಸೂಚಕನಾಗಿರತಕ್ಕ ಒಬ್ಬ ಮತದಾರನು ಸಹಿ ಹಾಕಿರತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44 ದಿನಾಂಕ 3–2–70ರ ಮೂಲಕ ಪ್ರತಿಯೋಜಿಸಲಾಗಿದೆ.

(2) ಭರ್ತಿ ಮಾಡಬೇಕಾಗಿರುವ ಖಾಲಿಸ್ಥಾನಗಳು ಎಷ್ಟು ಇರುವುವೋ ಅವುಗಳಿಗೆ ಸಂಬಂಧಿಸಿದ ಎಲ್ಲ ನಾಮನಿರ್ದೇಶನ ಪತ್ರಗಳಿಗೆ ಒಬ್ಬನೇ ವ್ಯಕ್ತಿಯು ಸೂಚಕನಾಗಿ ಸಹಿ ಮಾಡಬಹುದು. ಪ್ರತಿಯೊಬ್ಬ ಅಭ್ಯರ್ಥಿಯನ್ನು ಪ್ರತ್ಯೇಕ ನಾಮನಿರ್ದೇಶನ ಪತ್ರದ ಮೂಲಕ ನಾಮ ನಿರ್ದೇಶನ ಮಾಡತಕ್ಕದ್ದು.

(3) ಯಾವನೇ ವ್ಯಕ್ತಿಯು, ಭರ್ತಿ ಮಾಡಬೇಕಾಗಿರುವ ಖಾಲಿ ಸ್ಥಾನಗಳಿಗಿಂತ ಹೆಚ್ಚಿನ ಸಂಖ್ಯೆಯ ನಾಮನಿರ್ದೇಶನ ಪತ್ರಗಳಿಗೆ ಸಹಿ ಮಾಡಿರುವಲ್ಲಿ, ಆ ರೀತಿ ಸಹಿ ಮಾಡಿದಂಥ ನಾಮನಿರ್ದೇಶನ ಪತ್ರಗಳಲ್ಲಿ, ಭರ್ತಿ ಮಾಡಬೇಕಾಗಿರುವ ಖಾಲಿಸ್ಥಾನಗಳ ಸಂಖ್ಯೆಗಳವರೆಗೆ ಇರುವಂಥ ಮತ್ತು ಮೊದಲು ಸ್ವೀಕರಿಸಲಾದಂಥ ನಾಮನಿರ್ದೇಶನ ಪತ್ರಗಳನ್ನು ಮಾತ್ರ ಅಂಗೀಕರಿಸಿರುವುದಾಗಿ ಭಾವಿಸತಕ್ಕದ್ದು.

(4) ರಿಟರ್ನಿಂಗ್ ಅಧಿಕಾರಿಯು, ನಾಮನಿರ್ದೇಶನ ಪತ್ರವನ್ನು ಸ್ವೀಕರಿಸಿದ ಮೇಲೆ, ಆ ನಾಮನಿರ್ದೇಶನ ಪತ್ರದಲ್ಲಿ ಅದರ ಕ್ರಮಸಂಖ್ಯೆಯನ್ನು ನಾಮ ನಿರ್ದೇಶನ ಪತ್ರವನ್ನು ಅವನಿಗೆ ಸಲ್ಲಿಸಿದ ದಿನಾಂಕ ಮತ್ತು ವೇಳೆಯನ್ನು ನಮೂದಿಸತಕ್ಕದ್ದು ಮತ್ತು ಸೂಚಕನ ಮತ್ತು ಅಭ್ಯರ್ಥಿಯ ಹೆಸರುಗಳು ಮತ್ತು ಕ್ರಮಸಂಖ್ಯೆಗಳನ್ನು ಮತದಾರರ ಪಟ್ಟಿಯೊಂದಿಗೆ ಹೋಲಿಸಿ ಪರಿಶೀಲಿಸತಕ್ಕದ್ದು.

(5) 7ನೇ ನಿಯಮದ (ಬಿ) ಖಂಡದ ಮೇರೆಗೆ ಗೊತ್ತುಪಡಿಸಿದ ದಿನಾಂಕ ಮತ್ತು ವೇಳೆಯ ತರುವಾಯ ಬಂದ ನಾಮನಿರ್ದೇಶನ ಪತ್ರಗಳನ್ನು ತಿರಸ್ಕರಿಸತಕ್ಕದ್ದು.

**9. ಠೇವಣಿ.–** (1) ಯಾವನೇ ಅಭ್ಯರ್ಥಿಯು ನಾಮ ನಿರ್ದೇಶನ ಪತ್ರವನ್ನು ಸಲ್ಲಿಸುವ ಸಮಯದಲ್ಲಿ ಐವತ್ತು ರೂಪಾಯಿ ಮೊತ್ತವನ್ನು ರಿಟರ್ನಿಂಗ್ ಅಧಿಕಾರಿಯ ಬಳಿ ಠೇವಣಿ ಇಟ್ಟ ಹೊರತು ಅಥವಾ ಠೇವಣಿಯಿಡುವ ವ್ಯವಸ್ಥೆ ಮಾಡುವ ಹೊರತು ಅವನು ಚುನಾವಣಾ ಕ್ಷೇತ್ರದಿಂದ ಚುನಾವಣೆಗೆ ಆಯ್ಕೆಯಾಗಲು ಯುಕ್ತವಾಗಿ ನಾಮನಿರ್ದೇಶಿತನಾಗಿರುವನೆಂದು ಭಾವಿಸತಕ್ಕದ್ದಲ್ಲ. ಠೇವಣಿ ರಸೀತಿಯನ್ನು ಠೇವಣಿದಾರನ ಹೆಸರಿನಲ್ಲಿ ನೀಡತಕ್ಕದ್ದು:

[1][ಪರಂತು, ಅನುಸೂಚಿತ ಜಾತಿಗಳ ಅಥವಾ ಅನುಸೂಚಿತ ಪಂಗಡಗಳ ಅಭ್ಯರ್ಥಿಗಳಾದರೆ ಠೇವಣಿ ಇಡಬೇಕಾದ ಮೊಬಲಗು ಇಪ್ಪತ್ತೈದು ರೂಪಾಯಿಗಳು ಮಾತ್ರ ಆಗಿರತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಆರ್‌ಡಿಸಿ 242 ಎಂಎಂಡಿ 80 ದಿನಾಂಕ 12-12-85ರ ಮೂಲಕ ಸೇರಿಸಲಾಗಿದೆ.

(2) ಅಭ್ಯರ್ಥಿಯು 7ನೇ ನಿಯಮದ (ಡಿ) ಖಂಡದಲ್ಲಿ ನಿರ್ದಿಷ್ಟಪಡಿಸಿರುವ ರೀತಿಯಲ್ಲಿ ಮತ್ತು ವೇಳೆಯೊಳಗೆ ತನ್ನ ಉಮೇದುವಾರಿಕೆಯನ್ನು ಹಿಂತೆಗೆದುಕೊಂಡಲ್ಲಿ ಅಥವಾ 12ನೇ ನಿಯಮದ ಮೇರೆಗೆ ಅವನ ನಾಮನಿರ್ದೇಶನವು ತಿರಸ್ಕೃತವಾದಲ್ಲಿ ಅಥವಾ ಮತದಾನವು ಪ್ರಾರಂಭವಾಗುವುದಕ್ಕೆ ಮುಂಚೆ ಅವನು ಮೃತನಾದಲ್ಲಿ ಅಥವಾ (1)ನೇ ಉಪನಿಯಮದ ಮೇರೆಗೆ ಇಡಲಾದ ಠೇವಣಿಯನ್ನು (4)ನೇ ಉಪನಿಯಮದ ಮೇರೆಗೆ ಮುಟ್ಟುಗೋಲು ಹಾಕಿಕೊಳ್ಳದಿದ್ದಲ್ಲಿ ಅದನ್ನು ಅವನಿಗೆ ಅಥವಾ ಅವನ ನಾಮನಿರ್ದೇಶಿತನಿಗೆ ಹಿಂತಿರುಗಿಸತಕ್ಕದ್ದು.

(3) ಪ್ರತಿಯೊಬ್ಬ ಅಭ್ಯರ್ಥಿಯು ಠೇವಣಿ ಇಡುವ ವೇಳೆಯಲ್ಲಿ (2)ನೇ ಉಪನಿಯಮದ ಉದ್ದೇಶಕ್ಕಾಗಿ ಒಬ್ಬ ವ್ಯಕ್ತಿಯನ್ನು ನಾಮನಿರ್ದೇಶನ ಮಾಡತಕ್ಕದ್ದು.

(4) ಎಲ್ಲ ಅಭ್ಯರ್ಥಿಗಳ ಪರವಾಗಿ ಚಲಾಯಿಸಿದ ಕ್ರಮಬದ್ಧ ಮತಗಳ ಒಟ್ಟು ಸಂಖ್ಯೆಯನ್ನು ಚುನಾಯಿಸಬೇಕಾದ ಸದಸ್ಯರ ಸಂಖ್ಯೆಯಿಂದ ಭಾಗಿಸಿದಾಗ ಬರುವ ಭಾಗಲಬ್ಧ ಎಂಟನೇ ಒಂದು ಭಾಗಕ್ಕಿಂತ ಹೆಚ್ಚಿನ ಕ್ರಮಬದ್ಧ ಮತಗಳನ್ನು ಯಾವನೇ ಅಭ್ಯರ್ಥಿಯು ಪಡೆಯದಿದ್ದರೆ, (1)ನೇ ಉಪನಿಯಮದ ಮೇರೆಗೆ ಇಡಲಾದ ಅವನ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಮಾಡಿಕೊಳ್ಳತಕ್ಕದ್ದು.

**10. ನಾಮನಿರ್ದೇಶನ ಪತ್ರಗಳ ಪಟ್ಟಿಯ ಪ್ರಕಟಣೆ.–** ಸಮಿತಿಯ ಕಛೇರಿಯಲ್ಲಿ ನಾಮನಿರ್ದೇಶನ ಪತ್ರಗಳನ್ನು ಸಲ್ಲಿಸಲು ಗೊತ್ತುಪಡಿಸಿದ ವೇಳೆಯ ಮುಕ್ತಾಯದ ತರುವಾಯ ಸಾಧ್ಯವಾದಷ್ಟು ಬೇಗನೇ ಒಂದು ನೋಟೀಸಿನೊಂದಿಗೆ ಸ್ವೀಕೃತವಾದ ಎಲ್ಲಾ ನಾಮನಿರ್ದೇಶನಗಳ [1][ನಮೂನೆ 16ರಲ್ಲಿರುವ][1] ಪಟ್ಟಿಯನ್ನು ಅವರಿಗೆ ಸೂಕ್ತವೆನಿಸಬಹುದಾದಂಥ ರೀತಿಯಲ್ಲಿ ಆ ನಾಮನಿರ್ದೇಶನ ಪತ್ರಗಳನ್ನು (ಸಿ) ಖಂಡ ಅಥವಾ 7ನೇ ನಿಯಮದ ಮೇರೆಗೆ ಗೊತ್ತುಪಡಿಸಿದ ದಿನಾಂಕದಂದು ನೋಟೀಸಿನಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳ ಮತ್ತು ವೇಳೆಯಲ್ಲಿ ಪರಿಶೀಲಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3-2-70ರ ಮೂಲಕ ಪ್ರತಿಯೋಜಿಸಲಾಗಿದೆ.

**11. ನಾಮನಿರ್ದೇಶನ ಪತ್ರಗಳ ಪರಿಶೀಲನೆ.–** ನಾಮನಿರ್ದೇಶನ ಪತ್ರಗಳ ಪರಿಶೀಲನೆಗಾಗಿ 7ನೇ ನಿಯಮದ (ಸಿ) ಖಂಡದ ಮೇರೆಗೆ ನಿಗದಿಪಡಿಸಿದ ದಿನಾಂಕದಂದು, ಅಭ್ಯರ್ಥಿಯು ಮತ್ತು ಪ್ರತಿಯೊಬ್ಬ ಅಭ್ಯರ್ಥಿಯಿಂದ ಯುಕ್ತವಾಗಿ ಲಿಖಿತದಲ್ಲಿ ಅಧಿಕೃತನಾದ ಅವನ ಪ್ರತಿನಿಧಿಯು ರಿಟರ್ನಿಂಗ್ ಅಧಿಕಾರಿಯು ಗೊತ್ತುಪಡಿಸಬಹುದಾದಂಥ ವೇಳೆ ಮತ್ತು ಸ್ಥಳದಲ್ಲಿ ಹಾಜರಾಗತಕ್ಕದ್ದು ಮತ್ತು ರಿಟರ್ನಿಂಗ್ ಅಧಿಕಾರಿಯು ಆ ಎಲ್ಲ ಅಭ್ಯರ್ಥಿಗಳ ನಾಮನಿರ್ದೇಶನ ಪತ್ರಗಳನ್ನು ಪರೀಕ್ಷಿಸಲು ಅವರಿಗೆ ಸೂಕ್ತವಾದ ಎಲ್ಲಾ ಸೌಲಭ್ಯಗಳನ್ನು ಒದಗಿಸತಕ್ಕದ್ದು.

**12. ನಾಮನಿರ್ದೇಶನ ಪತ್ರಗಳಿಗೆ ಸಂಬಂಧಿಸಿದ ಆಕ್ಷೇಪಣೆಗಳನ್ನು ವಿಲೆ ಮಾಡುವುದು ಮತ್ತು ನಾಮನಿರ್ದೇಶನ ಪತ್ರಗಳನ್ನು ತಿರಸ್ಕರಿಸುವುದು.–** (1) ಚುನಾವಣಾ ಅಧಿಕಾರಿಯು ಆ ತರುವಾಯ ನಾಮನಿರ್ದೇಶನ ಪತ್ರಗಳನ್ನು ಪರೀಕ್ಷಿಸತಕ್ಕದ್ದು

ಮತ್ತು ಯಾವುದೇ ನಾಮನಿರ್ದೇಶನ ಪತ್ರಕ್ಕೆ ಸಂಬಂಧಿಸಿದಂತೆ ಪರಿಶೀಲನೆಯ ಸಮಯದಲ್ಲಿ ಮಾಡಬಹುದಾದಂಥ ಎಲ್ಲ ಆಕ್ಷೇಪಣೆಗಳ ಕುರಿತು ನಿರ್ಧಾರ ಕೈಗೊಳ್ಳತಕ್ಕದ್ದು ಮತ್ತು ಅಂಥ ಆಕ್ಷೇಪಣೆಗಳನ್ನು ಆಧರಿಸಿ ಅಥವಾ ಸ್ವಪ್ರೇರಣೆಯಿಂದ ಕ್ಷಿಪ್ರ ವಿಚಾರಣೆ ನಡೆಸುವುದು ಅವಶ್ಯವೆಂದು ಭಾವಿಸಿದರೆ ಅಂಥ ವಿಚಾರಣೆ ನಡೆಸಿದ ತರುವಾಯ, ಈ ಕೆಳಕಂಡ ಆಧಾರಗಳ ಪೈಕಿ ಯಾವುದೇ ಆಧಾರದ ಮೇಲೆ ನಾಮನಿರ್ದೇಶನ ಪತ್ರವನ್ನು ತಿರಸ್ಕರಿಸಬಹುದು:–

(i) ನಾಮನಿರ್ದೇಶನ ಪತ್ರಗಳ ಪರಿಶೀಲನೆಗೆ ನಿಗದಿಪಡಿಸಿದ ದಿನಾಂಕದಂದು, ಅಭ್ಯರ್ಥಿಯು ಪ್ರಕರಣ 16ರ ಮೇರೆಗೆ ಅರ್ಹನಾಗಿರಲಿಲ್ಲ ಅಥವಾ 15ನೇ ಪ್ರಕರಣದ ಮೇರೆಗೆ ಆ ಖಾಲಿ ಸ್ಥಾನವನ್ನು ಭರ್ತಿ ಮಾಡುವ ಬಗ್ಗೆ ಆಯ್ಕೆಯಾಗಲು ಅರ್ಹನಾಗಿದ್ದನು.

(ii) ನಾಮನಿರ್ದೇಶನ ಪತ್ರದ ಮೇಲಣ ಅಭ್ಯರ್ಥಿಯ ಅಥವಾ ಸೂಚಕನ ಸಹಿಯು ನಿಜವಾದುದಾಗಿರಲಿಲ್ಲ.

(iii) ಮತದಾರರ ಪಟ್ಟಿಯಲ್ಲಿ ಹೆಸರು ಸೇರಿಲ್ಲದ ವ್ಯಕ್ತಿಯು ಸೂಚಕನಾಗಿದ್ದನು ಅಥವಾ

(iv) [1][........][1] 8ನೇ ನಿಯಮದ ಅಥವಾ 9ನೇ ನಿಯಮದ ಯಾವುದೇ ಉಪಬಂಧಗಳನ್ನು ಪಾಲಿಸಿಲ್ಲ.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44 ದಿನಾಂಕ 3–2–70ರ ಮೂಲಕ ಕೆಲವು ಪದಗಳನ್ನು ಬಿಟ್ಟುಬಿಡಲಾಗಿದೆ.

(2) ರಿಟರ್ನಿಂಗ್ ಅಧಿಕಾರಿಯು, ಗಣನೀಯ ಸ್ವರೂಪದ್ದಲ್ಲದ ಯಾವುದೇ ನ್ಯೂನತೆಯ ಕಾರಣದ ಮೇಲೆ ಯಾವುದೇ ನಾಮ ನಿರ್ದೇಶನ ಪತ್ರವನ್ನು ತಿರಸ್ಕರಿಸತಕ್ಕದ್ದಲ್ಲ.

**ವಿವರಣೆ.–** ಈ ಉಪನಿಯಮದ ಉದ್ದೇಶಕ್ಕಾಗಿ, 9ನೇ ನಿಯಮದ (3)ನೇ ಉಪನಿಯಮದ ಮೇರೆಗೆ ನಾಮನಿರ್ದೇಶಿತನನ್ನು ನೇಮಕ ಮಾಡದಿರುವುದನ್ನು ಗಣನೀಯ ಸ್ವರೂಪದ ದೋಷವೆಂದು ಭಾವಿಸತಕ್ಕದ್ದಲ್ಲ.

(3) ರಿಟರ್ನಿಂಗ್ ಅಧಿಕಾರಿಯು ಪ್ರತಿಯೊಂದು ನಾಮ ನಿರ್ದೇಶನ ಪತ್ರದ ಮೇಲೆ ಅದನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಬಗ್ಗೆ ತನ್ನ ತೀರ್ಮಾನವನ್ನು ದಾಖಲಿಸತಕ್ಕದ್ದು ಮತ್ತು ನಾಮ ನಿರ್ದೇಶನ ಪತ್ರವನ್ನು ತಿರಸ್ಕರಿಸಿದರೆ, ಅಂಥ ತಿರಸ್ಕಾರಕ್ಕೆ ಆಧಾರವಾದ ಕಾರಣಗಳ ಸಂಕ್ಷಿಪ್ತ ವಿವರಣೆಯನ್ನು ದಾಖಲಿಸತಕ್ಕದ್ದು.

(4) ರಿಟರ್ನಿಂಗ್ ಅಧಿಕಾರಿಯು 7ನೇ ನಿಯಮದ (ಸಿ) ಖಂಡದ ಮೇರೆಗೆ ಆ ಬಗ್ಗೆ ನಿಗದಿಪಡಿಸಿದ ದಿನಾಂಕದಂದು ಪರಿಶೀಲನೆಯನ್ನು ಪೂರೈಸತಕ್ಕದ್ದು ಮತ್ತು ಅಂಥ ಪರಿಶೀಲನೆಯ ವ್ಯವಹರಣೆಗಳಿಗೆ ದೊಂಬಿಯಿಂದಾಗಿ ಅಥವಾ ತನ್ನ ನಿಯಂತ್ರಣಕ್ಕೆ ಮೀರಿದ ಕಾರಣಗಳಿಂದಾಗಿ ತಡೆಯುಂಟಾದ ಅಥವಾ ಅಡ್ಡಿಯುಂಟಾದ ಹೊರತು ಯಾವುದೇ ಇತರ ಕಾರಣದ ಮೇಲೆ ಆ ಪರಿಶೀಲನೆಯನ್ನು ಮುಂದೂಡತಕ್ಕದ್ದಲ್ಲ.

(5) ನಾಮ ನಿರ್ದೇಶನ ಪತ್ರಗಳ ಪರಿಶೀಲನೆಯು ಪೂರ್ಣಗೊಂಡ ಕೂಡಲೇ ಅದೇ ದಿನ ರಿಟರ್ನಿಂಗ್ ಅಧಿಕಾರಿಯು ಕ್ರಮಬದ್ಧವಾಗಿ ನಾಮನಿರ್ದೇಶಿತರಾದ ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸತಕ್ಕದ್ದು ಮತ್ತು ಅದನ್ನು ಸಮಿತಿಯ ಮತ್ತು ತನ್ನ ಕಚೇರಿಯ ಸೂಚನಾ ಫಲಕದಲ್ಲಿ ಅಂಟಿಸುವ ಮೂಲಕ ಪ್ರಕಟಿಸತಕ್ಕದ್ದು.

**13. ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವುದು.–** (1) ಯಾವನೇ ಅಭ್ಯರ್ಥಿಯು, 7ನೇ ನಿಯಮದ (ಡಿ) ಖಂಡದ ಮೇರೆಗೆ ನಿಗದಿಪಡಿಸಿದ ದಿನಾಂಕದೊಳಗೆ ಚುನಾವಣಾ ಅಧಿಕಾರಿಗೆ ಖುದ್ದಾಗಿ ಅಥವಾ ತನ್ನ ಸೂಚಕನ ಮೂಲಕ ತಾನು ಸಹಿ ಮಾಡಿರುವ ಲಿಖಿತ ನೋಟೀಸನ್ನು ಸಲ್ಲಿಸಿ ತನ್ನ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಬಹುದು ಮತ್ತು ಅಂಥ ನೋಟೀಸನ್ನು ಸ್ವೀಕರಿಸಿದ ಮೇಲೆ, ರಿಟರ್ನಿಂಗ್ ಅಧಿಕಾರಿಯು ಅದನ್ನು ತನಗೆ ಸಲ್ಲಿಸಿದ ದಿನಾಂಕ ಮತ್ತು ವೇಳೆಯನ್ನು ಮತ್ತು ಅದನ್ನು ಯಾರು ಸಲ್ಲಿಸಿದರು ಎಂಬುದನ್ನು ಅದರ ಮೇಲೆ ಟಿಪ್ಪಣಿ ಮಾಡತಕ್ಕದ್ದು.

(2) (1)ನೇ ಉಪನಿಯಮದ ಮೇರೆಗೆ ಉಮೇದುವಾರಿಕೆಯನ್ನು ಯಾವ ಅವಧಿಯೊಳಗೆ ಹಿಂತೆಗೆದುಕೊಳ್ಳಬಹುದೋ ಆ ಅವಧಿಯು ಮುಕ್ತಾಯವಾದ ಕೂಡಲೇ ಅಧಿಕಾರಿಯು ಯಾವ ಅಭ್ಯರ್ಥಿಗಳ ನಾಮ ನಿರ್ದೇಶನ ಪತ್ರಗಳು ಕ್ರಮಬದ್ಧವಾಗಿರುವವೋ, ಯಾರು ತಮ್ಮ ಉಮೇದುವಾರಿಕೆಗಳನ್ನು ಹಿಂತೆಗೆದುಕೊಂಡಿಲ್ಲವೋ ಅಂಥ ಅಭ್ಯರ್ಥಿಗಳ ಪಟ್ಟಿಯನ್ನು [1][ನಮೂನೆ 17ರಲ್ಲಿ][1] ಕನ್ನಡ ಅಕ್ಷರಾನುಕ್ರಮವಾಗಿ ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ತನ್ನ ಕಚೇರಿಯ ಮತ್ತು ಸಮಿತಿಯ ಕಚೇರಿಯ ಸೂಚನಾ ಫಲಕದ ಮೇಲೆ ಅಂಟಿಸುವ ವ್ಯವಸ್ಥೆ ಮಾಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44 ದಿನಾಂಕ 3–2–70ರ ಮೂಲಕ ಪ್ರತಿಯೋಜಿಸಲಾಗಿದೆ.

**14. ಚುನಾವಣಾ ಕಾರ್ಯವಿಧಾನ.–** (1) ಯುಕ್ತವಾಗಿ ನಾಮನಿರ್ದೇಶಿತರಾದ ಮತ್ತು 13ನೇ ನಿಯಮದ (1)ನೇ ಉಪನಿಯಮದಲ್ಲಿ ನಿರ್ದಿಷ್ಟಪಡಿಸಿರುವ ರೀತಿಯಲ್ಲಿ ಮತ್ತು ವೇಳೆಯೊಳಗೆ ತಮ್ಮ ಉಮೇದುವಾರಿಕೆಯನ್ನು ಹಿಂತೆಗೆದುಕೊಂಡಿರುವ ಅಭ್ಯರ್ಥಿಗಳ ಸಂಖ್ಯೆಯು ಭರ್ತಿ ಮಾಡಬೇಕಾಗಿರುವ ಖಾಲಿ ಸ್ಥಾನಗಳ ಸಂಖ್ಯೆಯನ್ನು ಮೀರಿದರೆ, ಮತದಾನದ ಮೂಲಕ ಚುನಾವಣೆ ನಡೆಸತಕ್ಕದ್ದು.

(2) ಯುಕ್ತವಾಗಿ ನಾಮನಿರ್ದೇಶಿತರಾದ ಅಭ್ಯರ್ಥಿಗಳ ಸಂಖ್ಯೆಯು ಭರ್ತಿ ಮಾಡಬೇಕಾಗಿರುವ ಖಾಲಿಸ್ಥಾನಗಳ ಸಂಖ್ಯೆಗೆ ಸಮನಾಗಿದ್ದರೆ ಅಥವಾ ಅದಕ್ಕಿಂತ ಕಡಿಮೆ ಇದ್ದರೆ, ಅಂಥ ಎಲ್ಲ ಅಭ್ಯರ್ಥಿಗಳು ಯುಕ್ತವಾಗಿ ಚುನಾಯಿತರಾಗಿದ್ದಾರೆಂದು ಘೋಷಿಸತಕ್ಕದ್ದು.

**15. ಚಿಹ್ನೆಗಳನ್ನು ಗೊತ್ತುಪಡಿಸುವುದು.–** ಚುನಾವಣೆ ಅಗತ್ಯವಾದಲ್ಲಿ ರಿಟರ್ನಿಂಗ್ ಅಧಿಕಾರಿಯು ಈ ಕೆಳಕಂಡ ಚಿಹ್ನೆಗಳಲ್ಲಿ ಪ್ರತಿಯೊಬ್ಬ ಅಭ್ಯರ್ಥಿಗೆ ಒಂದು ಚಿಹ್ನೆಯನ್ನು ಗೊತ್ತುಪಡಿಸತಕ್ಕದ್ದು ಮತ್ತು ಈ ಸಂಬಂಧದಲ್ಲಿ ಚುನಾವಣಾಧಿಕಾರಿಯ ತೀರ್ಮಾನವು ಅಂತಿಮವಾಗಿರತಕ್ಕದ್ದು.

1. ಹಸು
2. ತಕ್ಕಡಿ
3. ಕುದುರೆ
4. ಸೂರ್ಯ
5. ಛತ್ರಿ
6. ನಾಯಿ
7. ಪಕ್ಷಿ
8. ಮೇಕೆ
9. ಕುರಿಮರಿ
10. [1][.....ಬಿಡಲಾಗಿದೆ][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-94ರ ಮೂಲಕ ಬಿಟ್ಟುಬಿಡಲಾಗಿದೆ.

11. ಹೂವು
12. [1][.....ಬಿಡಲಾಗಿದೆ][1]

1. ಅಧಿಸೂಚನೆ ಸಂಖ್ಯೆ ಆರ್‌ಡಿಸಿ 132 ಎಂಎಂಡಿ 78–ರಾಜ್ಯಪತ್ರ ದಿನಾಂಕ 18–1–79ರ ಮೂಲಕ ಬಿಟ್ಟುಬಿಡಲಾಗಿದೆ.

13. ಎರಡು ಎಲೆಗಳ ಕುಡಿ
14. ಆನೆ
15. ಮನುಷ್ಯ:

ಪರಂತು, ಚಿಹ್ನೆಗಳ ಸಂಖ್ಯೆಯು ಸ್ಪರ್ಧಿಸಿರುವ ಅಭ್ಯರ್ಥಿಗಳ ಸಂಖ್ಯೆಗಿಂತ ಕಡಿಮೆ ಇದ್ದರೆ, ರಿಟರ್ನಿಂಗ್ ಆಫೀಸರನು ತನ್ನ ವಿವೇಚನಾನುಸಾರ ಯಾವುದೇ ಚಿಹ್ನೆಯನ್ನು ಗೊತ್ತುಪಡಿಸಬಹುದು.

**16. ಮತ ಪತ್ರದ ನಮೂನೆ.–** ಪ್ರತಿಯೊಂದು ಮತಪತ್ರವು, [1][ನಮೂನೆ 18ರಲ್ಲಿರತಕ್ಕದ್ದು][1] ಮತ್ತು ಅಭ್ಯರ್ಥಿಗಳ ಹೆಸರುಗಳು [1][ನಮೂನೆ 17ರಲ್ಲಿ][1] ಯಾವ ಕ್ರಮದಲ್ಲಿ ಇರುವುವೋ ಅದೇ ಕ್ರಮದಲ್ಲಿ ಕನ್ನಡದಲ್ಲಿರತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3–2–70ರ ಮೂಲಕ ಪ್ರತಿಯೋಜಿಸಲಾಗಿದೆ.

**17. ಚುನಾವಣಾ ವ್ಯವಸ್ಥೆಗಳು.–** ಡೆಪ್ಯುಟಿ ಕಮಿಷನರನು ಅಥವಾ ರಿಟರ್ನಿಂಗ್ ಅಧಿಕಾರಿಯು ಚುನಾವಣೆಗಳಿಗೆ ಸಂಬಂಧಪಟ್ಟಂತೆ ಮತಪೆಟ್ಟಿಗೆಗಳ ತಯಾರಿಕೆ, ಚುನಾವಣೆಯ ನಿರ್ವಹಣೆ ಮತ್ತು ಮೇಲ್ವಿಚಾರಣೆ, ಮತಪತ್ರಗಳ ಪರಿಶೀಲನೆ, ಚುನಾವಣಾ ಫಲಿತಾಂಶಗಳ ಘೋಷಣೆ – ಇವುಗಳ ಬಗ್ಗೆ ಅವಶ್ಯವಾಗಬಹುದಾದಂಥ ವ್ಯವಸ್ಥೆಗಳನ್ನು ಮಾಡತಕ್ಕದ್ದು.

**18. ಮತದಾನ.–** ಮತದಾರರ ಪಟ್ಟಿಯಲ್ಲಿ ಯಾವ ವ್ಯಕ್ತಿಯ ಹೆಸರು ಸೇರಿದೆಯೋ ಅಂಥ ಪ್ರತಿಯೊಬ್ಬ ವ್ಯಕ್ತಿಯು, ಸಂಬಂಧಪಟ್ಟ ಚುನಾವಣಾ ಕ್ಷೇತ್ರಕ್ಕಾಗಿ ಚುನಾಯಿತರಾಗಬೇಕಾಗಿರುವ ಸದಸ್ಯರ ಸಂಖ್ಯೆಯಷ್ಟು ಮತಗಳನ್ನು ಹೊಂದಿರತಕ್ಕದ್ದು, ಆದರೆ ಅವನು ಯಾವನೇ ಒಬ್ಬ ಅಭ್ಯರ್ಥಿಗೆ ಒಂದಕ್ಕಿಂತ ಹೆಚ್ಚು ಮತಗಳನ್ನು ನೀಡತಕ್ಕದ್ದಲ್ಲ.

**19. ಮತದಾನಕ್ಕೆ ಮುಂಚೆ ಅಭ್ಯರ್ಥಿಯ ಮರಣ.–** ಮತದಾನವು ಅವಶ್ಯಕವಾಗಿದ್ದು ಆ ಮತದಾನವು ನಡೆಯುವುದಕ್ಕೆ ಮುಂಚೆ ಯುಕ್ತವಾಗಿ ನಾಮನಿರ್ದೇಶಿತನಾದ ಒಬ್ಬ ಅಭ್ಯರ್ಥಿಯು ಮರಣ ಹೊಂದಿದರೆ, ಡೆಪ್ಯುಟಿ ಕಮಿಷನರನು ಆ ಅಭ್ಯರ್ಥಿಯ ಮರಣದ ಸಂಗತಿಯ ಬಗ್ಗೆ ಮನದಟ್ಟು ಮಾಡಿಕೊಂಡ ಮೇಲೆ ಆ ಮತದಾನವನ್ನು ರದ್ದುಗೊಳಿಸತಕ್ಕದ್ದು ಮತ್ತು ಆ ಚುನಾವಣೆಗೆ ಸಂಬಂಧಪಟ್ಟ ಎಲ್ಲಾ ವ್ಯವಹರಣೆಗಳು ಎಲ್ಲ ವಿಧದಲ್ಲೂ ಹೊಸ ಚುನಾವಣೆ ಆಗಿದ್ದರೆ ಹೇಗೋ ಹಾಗೆ ಹೊಸದಾಗಿ ಪ್ರಾರಂಭವಾಗತಕ್ಕದ್ದು:

ಪರಂತು, ಮತದಾನವನ್ನು ರದ್ದುಗೊಳಿಸಿದ ಸಮಯದಲ್ಲಿ ಸ್ಪರ್ಧಿಸಿರುವ ವ್ಯಕ್ತಿಗೆ ಸಂಬಂಧಿಸಿದಂತೆ ಹೊಸದಾಗಿ ನಾಮ ನಿರ್ದೇಶನ ಪತ್ರದಅಗತ್ಯವಿರತಕ್ಕದ್ದಲ್ಲ.

**20. ಮತಗಟ್ಟೆಗಳು ಮತ್ತು ಅಧಿಕಾರಿಗಳು.–** (1) ರಿಟರ್ನಿಂಗ್ ಅಧಿಕಾರಿಯು, ಪ್ರತಿಯೊಂದು ಚುನಾವಣಾ ಕ್ಷೇತ್ರಕ್ಕೆ ಸಾಕಷ್ಟು ಮತಗಟ್ಟೆಗಳ ವ್ಯವಸ್ಥೆ ಮಾಡತಕ್ಕದ್ದು ಮತ್ತು ಅವನು, ಪ್ರತಿಯೊಂದು ಮತಗಟ್ಟೆಗೆ ಒಬ್ಬ ಪ್ರಿಸೈಡಿಂಗ್ ಆಫೀಸರ್ ಮತ್ತು ಒಬ್ಬ ಅಥವಾ ಹೆಚ್ಚು ಪೋಲಿಂಗ್ ಅಧಿಕಾರಿಗಳನ್ನು ನೇಮಿಸತಕ್ಕದ್ದು. ಇದಲ್ಲದೆ, ಅಗತ್ಯವಾದರೆ ಅವನು, ಮತದಾರರನ್ನು ಗುರುತಿಸುವುದಕ್ಕಾಗಿ ಪೋಲಿಂಗ್ ಅಧಿಕಾರಿಗಳಿಗೆ ನೆರವು ನೀಡಲು ಒಬ್ಬ ಅಥವಾ ಹೆಚ್ಚು ಅಧಿಕಾರಿಗಳನ್ನು ನೇಮಿಸತಕ್ಕದ್ದು.

ಪರಂತು, ಪೋಲಿಂಗ್ ಆಫೀಸರ್ ಮತಗಟ್ಟೆಯಿಂದ ಗೈರು ಹಾಜರಾದರೆ ಪ್ರಿಸೈಡಿಂಗ್ ಆಫೀಸರ್ ಮತಗಟ್ಟೆಯಲ್ಲಿ ಹಾಜರಿರುವ ಯಾವನೇ ಅಧಿಕಾರಿಯನ್ನು ಪೋಲಿಂಗ್ ಆಫೀಸರ್ ಆಗಿ ನೇಮಿಸಬಹುದು.

(2) ಪ್ರಿಸೈಡಿಂಗ್ ಆಫೀಸರ್ ಎಲ್ಲ ಅಥವಾ ಯಾವುವೇ ಪ್ರಕಾರ್ಯಗಳನ್ನು ನೆರವೇರಿಸತಕ್ಕದೆಂದು ಪ್ರಿಸೈಡಿಂಗ್ ಅಧಿಕಾರಿ ಮತದಾನ ಅಧಿಕಾರಿಗೆ ನಿರ್ದೇಶಿಸಿದರೆ ಅವನು ಹಾಗೆ ಮಾಡತಕ್ಕದ್ದು.

(3) ಪ್ರಿಸೈಡಿಂಗ್ ಆಫೀಸರ್ ಖಾಯಿಲೆ ಅಥವಾ ಇತರ ಅನಿವಾರ್ಯ ಕಾರಣದಿಂದಾಗಿ ಮತಗಟ್ಟೆಯಿಂದ ಗೈರು ಹಾಜರಾದರೆ, ಅವನ ಪ್ರಕಾರ್ಯಗಳನ್ನು, ಆ ಸಂಬಂಧದಲ್ಲಿ ರಿಟರ್ನಿಂಗ್ ಅಧಿಕಾರಿಯು ಅಧಿಕೃತಗೊಳಿಸಬಹುದಾದಂಥ ಪೋಲಿಂಗ್ ಆಫೀಸರ್ ನೆರವೇರಿಸತಕ್ಕದ್ದು.

(4) ಪ್ರಿಸೈಡಿಂಗ್ ಆಫೀಸರ್ ಮತಗಟ್ಟೆಯ ಎಲ್ಲ ವ್ಯವಸ್ಥೆಗಳಿಗೆ ಹೊಣೆಗಾರನಾಗಿರತಕ್ಕದ್ದು ಮತ್ತು ಮತಗಟ್ಟೆಯೊಳಗೆ ವ್ಯಕ್ತಿಗಳನ್ನು ಯಾವ ರೀತಿ ಬಿಡಬೇಕೆಂಬ ಬಗ್ಗೆ ಮತ್ತು ಸಾಮಾನ್ಯವಾಗಿ ಮತಗಟ್ಟೆಯಲ್ಲಿ ಅಥವಾ ಅದರ ಆಸುಪಾಸಿನಲ್ಲಿ ಶಾಂತಿ ಮತ್ತು ಸುವ್ಯವಸ್ಥೆಯನ್ನು ಕಾಪಾಡಿಕೊಂಡು ಬರುವ ಬಗ್ಗೆ ಆದೇಶಗಳನ್ನು ಹೊರಡಿಸಬಹುದು. ಪ್ರಿಸೈಡಿಂಗ್ ಆಫೀಸರ್ ತನ್ನ ಕರ್ತವ್ಯಗಳನ್ನು ನೆರವೇರಿಸುವಲ್ಲಿ ಅವನಿಗೆ ನೆರವು ನೀಡುವುದು ಪೋಲಿಂಗ್ ಆಫೀಸರ್ ಕರ್ತವ್ಯವಾಗಿರತಕ್ಕದ್ದು.

**21. ಪೋಲಿಂಗ್ ಏಜೆಂಟರ ನೇಮಕ.–** (1) ಸ್ಪರ್ಧಿಸುವ ಅಭ್ಯರ್ಥಿಯು [1][ನಮೂನೆ 19ರಲ್ಲಿ][1] ಒಬ್ಬ ಮತದಾನ ಏಜೆಂಟನನ್ನು ಮತ್ತು ಇಬ್ಬರು ಬದಲಿ ಏಜೆಂಟರನ್ನು ನೇಮಕ ಮಾಡಬಹುದು ಮತ್ತು ಆ ನೇಮಕದ ಆದೇಶವನ್ನು ಮತಗಟ್ಟೆಗಳಲ್ಲಿ ಹಾಜರು ಪಡಿಸುವುದಕ್ಕಾಗಿ ಮತದಾನ ಏಜೆಂಟರುಗಳಿಗೆ ನೀಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44 ದಿನಾಂಕ 3.2.70ರ ಮೂಲಕ ಪ್ರತಿಯೋಜಿಸಲಾಗಿದೆ

(2) ಯಾವನೇ ಮತದಾನ ಏಜೆಂಟನು (1)ನೇ ಉಪನಿಯಮದ ಮೇರೆಗಿನ ತನ್ನ ನೇಮಕದ ಆದೇಶದಲ್ಲಿ ಒಳಗೊಂಡಿರುವ ಘೋಷಣೆಯನ್ನು ಪ್ರಿಸೈಡಿಂಗ್ ಆಫೀಸರ್ ಸಮ್ಮುಖದಲ್ಲಿ ಯುಕ್ತವಾಗಿ ಭರ್ತಿ ಮಾಡಿ ಮತ್ತು ಅದಕ್ಕೆ ಸಹಿ ಮಾಡಿ ಆ ಆದೇಶವನ್ನು ಪ್ರಿಸೈಡಿಂಗ್ ಆಫೀಸರ್‌ಗೆ ಸಲ್ಲಿಸಿದ ಹೊರತು ಅವನಿಗೆ ಮತಗಟ್ಟೆಯೊಳಗೆ ಪ್ರವೇಶ ನೀಡತಕ್ಕದ್ದಲ್ಲ.

**22. ಮತಗಟ್ಟೆಗೆ ಸಾಮಗ್ರಿಗಳ ಸರಬರಾಜು.–** ರಿಟರ್ನಿಂಗ್ ಆಫೀಸರ್, ಪ್ರತಿಯೊಂದು ಮತಗಟ್ಟೆಗೆ, ಅಗತ್ಯವಿರುವಷ್ಟು ಮತ ಪೆಟ್ಟಿಗೆಗಳನ್ನು, ಸಾಕಷ್ಟು ಮತ ಪತ್ರಗಳನ್ನು, ಮತದಾರರ ಪಟ್ಟಿಯ ಮೂರು ಪ್ರತಿಗಳನ್ನು, ನಾಮನಿರ್ದೇಶನ ಪಟ್ಟಿಯನ್ನು ಮತ್ತು ಅಗತ್ಯವಿರಬಹುದಾದಂಥ ಇತರ ಕಾಗದ ಪತ್ರಗಳನ್ನು, ಲೇಖನ ಸಾಮಗ್ರಿಗಳನ್ನು ಮತ್ತು ನಮೂನೆಗಳನ್ನು ಒದಗಿಸತಕ್ಕದ್ದು.

**23. ಮತಗಟ್ಟೆಗಳಿಗೆ ಪ್ರವೇಶಾವಕಾಶ.–** ಪ್ರಿಸೈಡಿಂಗ್ ಆಫೀಸರ್, ಮತಗಟ್ಟೆಯೊಳಗೆ ಯಾವುದೇ ಒಂದು ನಿರ್ದಿಷ್ಟ ಸಮಯದಲ್ಲಿ ಎಷ್ಟು ಜನ ಮತದಾರರನ್ನು ಬಿಡಬಹುದೋ ಅಷ್ಟು ಜನರನ್ನು ಮಾತ್ರ ಬಿಡುವ ವ್ಯವಸ್ಥೆ ಮಾಡತಕ್ಕದ್ದು ಮತ್ತು ಈ ಕೆಳಕಂಡವರನ್ನು ಹೊರತುಪಡಿಸಿ ಉಳಿದ ಎಲ್ಲ ವ್ಯಕ್ತಿಗಳನ್ನು ಮತಗಟ್ಟೆಯಿಂದ ಹೊರಗೆ ಕಳುಹಿಸುವ ವ್ಯವಸ್ಥೆ ಮಾಡತಕ್ಕದ್ದು.

(ಎ) ಪೋಲಿಂಗ್ ಆಫೀಸರ್‌ಗಳು;

(ಬಿ) ಚುನಾವಣಾ ಕರ್ತವ್ಯದ ಮೇಲೆ ಇರುವ ಸರ್ಕಾರಿ ನೌಕರರು;

(ಸಿ) ಡೆಪ್ಯೂಟಿ ಕಮೀಷನರನಿಂದ ಅಧಿಕೃತರಾದ ವ್ಯಕ್ತಿಗಳು;

(ಡಿ) ಅಭ್ಯರ್ಥಿಗಳು ಮತ್ತು ಅವರ ಮತದಾನ ಏಜೆಂಟರು;

(ಇ) ಮತದಾರನೊಂದಿಗೆ ಬರುವ ಕೈಕೂಸು,;

(ಎಫ್) ಬೇರೆಯವರ ಸಹಾಯವಿಲ್ಲದೆ ಓಡಾಡಲಾಗದ ಕುರುಡರ ಮತ್ತು ಅಶಕ್ತ ಮತದಾರರೊಂದಿಗೆ ಬರುವ ವ್ಯಕ್ತಿ ಮತ್ತು;

(ಜಿ) 20ನೇ ನಿಯಮದ (1)ನೇ ಉಪನಿಯಮದ ಮೇರೆಗೆ ಚುನಾವಣಾ ಅಧಿಕಾರಿಯ ಅಥವಾ ಪ್ರಿಸೈಡಿಂಗ್ ಆಫೀಸರ್ ನೇಮಿಸಬಹುದಾದಂಥ ಇತರ ವ್ಯಕ್ತಿಗಳು.

**24. ಮತದಾನ ವ್ಯವಸ್ಥೆ ಮತ್ತು ಮತಗಳನ್ನು ದಾಖಲು ಮಾಡುವ ರೀತಿ.–** (1) ಪ್ರತಿಯೊಂದು ಮತಗಟ್ಟೆಯ ಹೊರಗೆ ಕೆಳಕಂಡವುಗಳನ್ನು ಎದ್ದು ಕಾಣುವಂತೆ ಪ್ರದರ್ಶಿಸಿರತಕ್ಕದ್ದು:–

(ಎ) ಮತದಾನ ಮಾಡುವ ಯಾವ ಪ್ರದೇಶದ ಮತದಾರರು ಆ ಮತಗಟ್ಟೆಯಲ್ಲಿ ಮತ ನೀಡಲು ಹಕ್ಕುಳ್ಳವರಾಗಿರುವರೋ ಅದನ್ನು ನಿರ್ದಿಷ್ಟಪಡಿಸುವ ನೋಟೀಸು; ಮತ್ತು

(ಬಿ) ಸ್ಪರ್ಧಿಸಿರುವ ಅಭ್ಯರ್ತಿಗಳ ಪಟ್ಟಿಯ ಒಂದು ಪ್ರತಿ

(2) ಅಂಥ ಮತಗಟ್ಟೆಯಲ್ಲಿ ಮತದಾರರು ಬೇರೆಯವರಿಗೆ ಕಾಣದ ಹಾಗೆ ತಮ್ಮ ಮತಗಳನ್ನು ಚಲಾಯಿಸಲು ಅನುಕೂಲವಾಗುವಂತೆ ಎರಡು ಅಥವಾ ಹೆಚ್ಚು ಮತದಾನ ಸ್ಥಳಗಳನ್ನು ವ್ಯವಸ್ಥೆ ಮಾಡತಕ್ಕದ್ದು.

(3) ಮತದಾನ ಪ್ರಾರಂಭವಾಗುವುದಕ್ಕೆ ನಿಕಟಪೂರ್ವದಲ್ಲಿ ಪ್ರಿಸೈಡಿಂಗ್ ಆಫೀಸರ್, ಮತಗಟ್ಟೆಯಲ್ಲಿ ಹಾಜರಿರಬಹುದಾದಂಥ ಅಭ್ಯರ್ಥಿಗಳಿಗೆ, ಅವರ ಏಜೆಂಟರಿಗೆ ಅಥವಾ ಸಂಬಂಧಪಟ್ಟ ವ್ಯಕ್ತಿಗಳಿಗೆ ಮತಪೆಟ್ಟಿಗೆಯು ಖಾಲಿಯಿದೆ ಎಂಬುದನ್ನು ತೋರಿಸತಕ್ಕದ್ದು ಮತ್ತು ಆಮೇಲೆ:–

(ಎ) ಆ ಮತಪೆಟ್ಟಿಗೆಗೆ–,

(i) ಚುನಾವಣಾ ಕ್ಷೇತ್ರದ ಕ್ರಮಸಂಖ್ಯೆ ಯಾವುದಾದರೂ ಇದ್ದರೆ, ಆ ಕ್ರಮಸಂಖ್ಯೆ ಮತ್ತು ಅದರ ಹೆಸರು;

(ii) ಮತಗಟ್ಟೆಯ ಕ್ರಮಸಂಖ್ಯೆ ಮತ್ತು ಹೆಸರು;

(iii) ಮತಪೆಟ್ಟಿಗೆಯ ಕ್ರಮಸಂಖ್ಯೆ; ಮತ್ತು

(iv) ಮತದಾನದ ದಿನಾಂಕ

– ಇವುಗಳನ್ನು ಗುರುತು ಮಾಡಿದ ಚೀಟಿಗಳನ್ನು ಅಂಟಿಸತಕ್ಕದ್ದು;

(ಬಿ) ಮತಪೆಟ್ಟಿಗೆಯನ್ನು ಮುಚ್ಚಿ ತನ್ನ ಮೊಹರು ಹಾಕತಕ್ಕದ್ದು ಮತ್ತು ಅಲ್ಲಿ ಹಾಜರಿರುವ ಮತ್ತು ತಮ್ಮ ಮೊಹರನ್ನು ಹಾಕಲು ಇಚ್ಛಿಸುವ ಅಭ್ಯರ್ಥಿಗಳ ಅಥವಾ ಅವರ ಏಜೆಂಟರ ಮೊಹರನ್ನು ಸಹ ಹಾಕಿಸತಕ್ಕದ್ದು. ಮೊಹರನ್ನು ಒಡೆಯದೆ ಪೆಟ್ಟಿಗೆಯನ್ನು ತೆರೆಯಲು ಸಾಧ್ಯವಾಗದ ರೀತಿಯಲ್ಲಿ ಮೊಹರನ್ನು ಅಂಟಿಸತಕ್ಕದ್ದು.

(4) ಮೊಹರು ಮಾಡಿದ ಮತಪೆಟ್ಟಿಗೆಯನ್ನು, ಪ್ರಿಸೈಡಿಂಗ್ ಆಫೀಸರ್ ಮತ್ತು ಅಭ್ಯರ್ಥಿಗಳ ಏಜೆಂಟರಿಗೆ ಸ್ಪಷ್ಟವಾಗಿ ಕಾಣುವಂತೆ ಇಡತಕ್ಕದ್ದು.

(5) ಪ್ರತಿಯೊಬ್ಬ ಮತದಾರನು ಮತಗಟ್ಟೆಯನ್ನು ಪ್ರವೇಶಿಸುತ್ತಿದ್ದಂತೆ, ಪ್ರಿಸೈಡಿಂಗ್ ಆಫೀಸರ್ ಅಥವಾ ಅವನಿಂದ ಅಧಿಕೃತನಾದ ಪೋಲಿಂಗ್ ಆಫೀಸರ್ ಪ್ರತಿಯೊಬ್ಬ ಮತದಾರನ ಹೆಸರು ಮತ್ತು ಇತರ ವಿವರಗಳನ್ನು ಮತದಾರರ ಪಟ್ಟಿಯಲ್ಲಿರುವ ಸಂಬಂಧಪಟ್ಟ ನಮೂದುಗಳೊಂದಿಗೆ ಹೋಲಿಸಿ ಪರಿಶೀಲಿಸತಕ್ಕದ್ದು.

[1][(5ಎ) [2][.............][2] ವ್ಯಾಪಾರಿಗಳ ಚುನಾವಣಾ ಕ್ಷೇತ್ರದಲ್ಲಿ ಮತ ನೀಡಲು ಅರ್ಹವಾದ ಒಂದು ಫರ್ಮಿನ, ನಿಗಮದ ಅಥವಾ ಸಹಕಾರ ಸಂಘದ ಸಂದರ್ಭದಲ್ಲಿ ಅದರ ಪರವಾಗಿ ಮತ ನೀಡಲು ಅದರಿಂದ ನಾಮ ನಿರ್ದೇಶಿತನಾದ ಮತ್ತು ಫರ್ಮಿನ, ನಿಗಮದ ಅಥವಾ ಸಂಘದ ಮೊಹರು ಯಾವುದಾದರೂ ಇದ್ದರೆ ಆ ಮೊಹರು ಇರುವ ಅವಶ್ಯಕ ಅಧಿಕಾರ ಪತ್ರವನ್ನು ಹಾಜರುಪಡಿಸುವ ವ್ಯಕ್ತಿಗೆ ಹಾಗೆ ಮತನೀಡಲು ಅವಕಾಶ ಕೊಡಬಹುದು.][1]

1. ಅಧಿಸೂಚನೆ ಸಂಖ್ಯೆ ಜಿ.ಎಸ್.ಆರ್. 44, ದಿನಾಂಕ 3-2-1970ರ ಮೂಲಕ ಸೇರಿಸಲಾಗಿದೆ.

2. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27.1.94ರ ಮೂಲಕ ಬಿಟ್ಟು ಬಿಡಲಾಗಿದೆ.

(6) ಒಬ್ಬ ವ್ಯಕ್ತಿಯು ಮತಪತ್ರವನ್ನು ಪಡೆಯಲು ಹೊಂದಿರುವ ಹಕ್ಕನ್ನು ತೀರ್ಮಾನಿಸುವಲ್ಲಿ, ಸಂದರ್ಭಾನುಸಾರ ಪ್ರಿಸೈಡಿಂಗ್ ಆಫೀಸರ್ ಅಥವಾ ಪೋಲಿಂಗ್ ಆಫೀಸರ್‌ಗೆ ಮತದಾರರ ಪಟ್ಟಿಯಲ್ಲಿರುವ ನಮೂದಿಗೆ ಸಂಬಂಧಪಡುವ ಮತದಾರನು ಅಂಥ ವ್ಯಕ್ತಿಯೇ ಎಂದು ಮನದಟ್ಟಾದರೆ ಅವನು ಅಂಥ ನಮೂದಿನಲ್ಲಿರುವ ಕೇವಲ ಲಿಪಿಕ ಅಥವಾ ಮುದ್ರಣದ ದೋಷಗಳನ್ನು ಕಡೆಗಣಿಸತಕ್ಕದ್ದು.

(7) ಮತದಾರನು ಮತವನ್ನು ಖುದ್ದಾಗಿ ಮತಪತ್ರದ ಮೂಲಕ ನೀಡತಕ್ಕದ್ದು ಮತ್ತು ಮತದಾರನು ಪ್ರತಿನಿಧಿ ಮೂಲಕ ನೀಡಿದ ಯಾವುದೇ ಮತವನ್ನು ಅಂಗೀಕರಿಸತಕ್ಕದ್ದಲ್ಲ.

(8) ಮತನೀಡಲು ಇಚ್ಛಿಸುವ ಪ್ರತಿಯೊಬ್ಬ ಮತದಾರನಿಗೆ [1][18][1] ನೇ ನಮೂನೆಯಲ್ಲಿರುವ ಮತಪತ್ರವನ್ನು ಒದಗಿಸತಕ್ಕದ್ದು ಮತ್ತು ಆ ಮತಪತ್ರವನ್ನು ಕೊಡುವುದಕ್ಕೆ ಮುಂಚೆ, ಮತದಾನ ಅಧಿಕಾರಿಯು–

1. ಅಧಿಸೂಚನೆ ಸಂಖ್ಯೆ ಜಿ.ಎ.ಆರ್ 44 ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(i) ಅದರ ಹಿಂಭಾಗದಲ್ಲಿ ಚಿಕ್ಕ ರುಜು ಮಾಡತಕ್ಕದ್ದು;

(ii) ಮತಪತ್ರದ ಪಕ್ಕ ಪ್ರತಿಯಲ್ಲಿ ಮತದಾರರ ಪಟ್ಟಿಯಲ್ಲಿರುವ ಆ ಮತದಾರನ ಸಂಖ್ಯೆಯನ್ನು ನಮೂದಿಸತಕ್ಕದ್ದು; ಮತ್ತು

(iii) ಮತದಾರರ ಪಟ್ಟಿಯಲ್ಲಿ ಆ ಮತದಾರನ ಹೆಸರಿನ ಎದುರು ತನ್ನ ಚಿಕ್ಕ ರುಜು ಹಾಕತಕ್ಕದ್ದು.

(9) ಮತದಾರನು ಮತಪತ್ರವನ್ನು ಸ್ವೀಕರಿಸಿದ ಕೂಡಲೆ ಮತದಾನ ಸ್ಥಳಕ್ಕೆ ಹೋಗಿ [1][ಮತದಾನ ಕೇಂದ್ರದಲ್ಲಿ ಸ್ಥಾಪಿಸಲಾದ ಮತಗಟ್ಟೆಯೊಂದಕ್ಕೆ ಹೋಗಿ ಅಲ್ಲಿ ಮತ ಗುರುತು ಮಾಡುವ ಉದ್ದೇಶಕ್ಕಾಗಿ ಒದಗಿಸಲಾದ ಉಪಕರಣದಿಂದ][1] ತಾನು ಮತ ನೀಡಲು ಉದ್ದೇಶಿಸಿರುವ ಅಭ್ಯರ್ಥಿಯ ಅಥವಾ ಅಭ್ಯರ್ಥಿಗಳ ಹೆಸರಿನ ಎದುರು ಒಂದು ಗುರುತನ್ನು ಹಾಕಿ ಮತಪತ್ರವನ್ನು ಮಡಚಿ ಮತಪೆಟ್ಟಿಗೆಯೊಳಗೆ ಹಾಕತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ ದಿನಾಂಕ 30.1.90ರ ಮೂಲಕ ಪ್ರತಿಯೋಜಿಸಲಾಗಿದೆ

(10) ಮತದಾರನು, ಕುರುಡನು ಅಥವಾ ದುರ್ಬಲನು ಅಥವಾ ಮತಪತ್ರದ ಮೇಲಿನ ಚಿಹ್ನೆಗಳನ್ನು ಗುರುತಿಸಲು ಅಥವಾ ಅದರ ಮೇಲೆ ಗುರುತು ಹಾಕಲು ಅಶಕ್ತನಾಗಿದ್ದರೆ, ಪ್ರಿಸೈಡಿಂಗ್ ಆಫೀಸರ್ ಆ ಮತದಾರನ ಇಚ್ಛೆಗನುಸಾರ ಮತಪತ್ರದ ಮೇಲೆ ಮತವನ್ನು ದಾಖಲ್ಮಾಡತಕ್ಕದ್ದು ಮತ್ತು ಅವನ ಹೆಬ್ಬೆಟ್ಟಿನ ಗುರುತನ್ನು ತೆಗೆದುಕೊಂಡು ಅದನ್ನು ದೃಢೀಕರಿಸತಕ್ಕದ್ದು. ಪ್ರಿಸೈಡಿಂಗ್ ಆಫೀಸರ್ ಈ ಉಪನಿಯಮದ ಮೇರೆಗೆ ಕಾರ್ಯನಿರ್ವಹಿಸುವಾಗ, ಸಾಧ್ಯವಾದಷ್ಟು ಮಟ್ಟಿಗೆ ರಹಸ್ಯವನ್ನು ಕಾಪಾಡತಕ್ಕದ್ದು ಮತ್ತು ಆ ಮತವನ್ನು ಯಾರ ಪರವಾಗಿ ನೀಡಲಾಗಿದೆ ಎಂಬುದನ್ನು ಸೂಚಿಸದೆ ಅಂಥ ಪ್ರತಿಯೊಂದು ಸಂದರ್ಭದ ಬಗ್ಗೆ ಸಂಕ್ಷಿಪ್ತವಾಗಿ ಟಿಪ್ಪಣಿ ಮಾಡತಕ್ಕದ್ದು.

(11) ಮಹಿಳಾ ಮತದಾರರ ಸಂಬಂಧದಲ್ಲಿ ವಿಶೇಷ ಸೌಲಭ್ಯಗಳನ್ನು ನೀಡುವಂತೆ ಡೆಪ್ಯೂಟಿ ಕಮೀಷನರನು ಹೊರಡಿಸಿದ ನಿರ್ದೇಶನಗಳು, ಯಾವುದಾದರೂ ಇದ್ದರೆ, ಅವುಗಳಿಗೆ ಅನುಸಾರ ಕ್ರಮ ಕೈಗೊಳ್ಳತಕ್ಕದ್ದು.

**25. ನೀಡಲಾದ ಮತಗಳು.–** (1) ನಿರ್ದಿಷ್ಟ ಮತದಾರನೆಂದು ಹೇಳಿಕೊಳ್ಳುವ ಒಬ್ಬ ವ್ಯಕ್ತಿಯು, ಅಂಥ ನಿರ್ದಿಷ್ಟ ಮತದಾರನೆಂದು ಈಗಾಗಲೇ ಇನ್ನೊಬ್ಬ ವ್ಯಕ್ತಿಯು ಮತ ನೀಡಿ ಹೋದ ತರುವಾಯ ಮತಪತ್ರ ನೀಡುವಂತೆ ಕೇಳಿಕೊಂಡರೆ, ಪ್ರಿಸೈಡಿಂಗ್ ಆಫೀಸರ್ ಅವನ ಗುರುತಿನ ಬಗ್ಗೆ ಕೇಳಬಹುದಾದಂಥ ಪ್ರಶ್ನೆಗಳಿಗೆ ಅವನು ತೃಪ್ತಿಕರವಾಗಿ ಉತ್ತರವನ್ನು ಕೊಟ್ಟ ಮೇಲೆ ಅವನು ಈ ನಿಯಮದ ಕೆಳಕಂಡ ಉಪಬಂಧಗಳಿಗೊಳಪಟ್ಟು, ಯಾವನೇ ಇತರ ಮತದಾರನು ಮತಪತ್ರದ ಮೇಲೆ ಗುರುತು ಹಾಕಲು ಹೇಗೆ ಹಕ್ಕುಳ್ಳವನಾಗುವನೋ ಹಾಗೆ ಹಕ್ಕುಳ್ಳವನಾಗತಕ್ಕದ್ದು. (ಇನ್ನು ಮುಂದೆ ಈ ನಿಯಮಗಳಲ್ಲಿ ಈ ರೀತಿ ನೀಡಿದ ಮತಗಳಿಗೆ 'ಟೆಂಡರ್ ಮತಗಳು' ಎಂದು ಉಲ್ಲೇಖಿಸಲಾಗಿದೆ)

(2) ಅಂಥ ಪ್ರತಿಯೊಬ್ಬ ವ್ಯಕ್ತಿಯು, ಟೆಂಡರ್ ಮತ ನೀಡಲು ಮತಪತ್ರವನ್ನು ಪಡೆಯುವುದಕ್ಕೆ ಮುಂಚೆ ಅವನು [1][20][1] ನೇ ನಮೂನೆಯಲ್ಲಿರುವ ಪಟ್ಟಿಯಲ್ಲಿ ಅವನಿಗೆ ಸಂಬಂಧಪಟ್ಟ ನಮೂದಿನ ಮುಂದೆ ತನ್ನ ರುಜು ಮಾಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44 ದಿನಾಂಕ: 3.2.70ರ ಮೂಲಕ ಪ್ರತಿಯೋಜಿಸಲಾಗಿದೆ.

(3) ಟೆಂಡರ್ ಮತ ನೀಡಲು ಒದಗಿಸಲಾಗುವ ಮತಪತ್ರವು ಕೆಳಕಂಡ ವ್ಯತ್ಯಾಸಗಳನ್ನು ಹೊರತುಪಡಿಸಿ ಆ ಚುನಾವಣೆಯಲ್ಲಿ ಉಪಯೋಗಿಸುವ ಇತರ ಮತಪತ್ರಗಳಂತೆ ಇರತಕ್ಕದ್ದು:–

(ಎ) ಮತಗಟ್ಟೆಯಲ್ಲಿ ಉಪಯೋಗಿಸಲು ನೀಡಿದ ಮತಪತ್ರಗಳ ಕಟ್ಟಿನಲ್ಲಿ ಅನುಕ್ರಮವಾಗಿ ಕೊನೆಯದಾಗಿರತಕ್ಕದ್ದು; ಮತ್ತು

(ಬಿ) ಪ್ರಿಸೈಡಿಂಗ್ ಆಫೀಸರ್ ತನ್ನ ಕೈಬರಹದಲ್ಲಿ ಅದರ ಹಿಂಭಾಗದಲ್ಲಿ 'ಟೆಂಡರ್ ಮತ' ಎಂಬ ಪದಗಳನ್ನು ಬರೆದು ಸಹಿ ಮಾಡತಕ್ಕದ್ದು.

(4) ಮತದಾರನು ಟೆಂಡರ್ ಮತಪತ್ರದ ಮೇಲೆ ಗುರುತು ಮಾಡಿ ಅದನ್ನು ಮಡಿಸಿದ ತರುವಾಯ ಮತಪೆಟ್ಟಿಗೆಯಲ್ಲಿ ಹಾಕುವುದಕ್ಕೆ ಬದಲಾಗಿ ಪ್ರಿಸೈಡಿಂಗ್ ಆಫೀಸರ್‌ಗೆ ಅದನ್ನು ಒಪ್ಪಿಸತಕ್ಕದ್ದು ಮತ್ತು ಪ್ರಿಸೈಡಿಂಗ್ ಆಫೀಸರ್ ಅದನ್ನು ಆ ಉದ್ದೇಶಕ್ಕಾಗಿಯೇ ತನ್ನ ಮುಂದೆ ಇರುವ ಲಕೋಟೆಯಲ್ಲಿ ಇಡತಕ್ಕದ್ದು.

**26. ಗುರುತಿನ ಬಗ್ಗೆ ಆಕ್ಷೇಪ.–** (1) ಒಬ್ಬ ನಿರ್ದಿಷ್ಟ ಮತದಾರನೆಂದು ಕ್ಲೇಮು ಮಾಡುವ ವ್ಯಕ್ತಿಯ ಗುರುತಿನ ಬಗ್ಗೆ ಆಕ್ಷೇಪವೆತ್ತಬಯಸುವ ಯಾವನೇ ಮತದಾನ ಏಜೆಂಟನು, ಅಂಥ ಪ್ರತಿಯೊಂದು ಆಕ್ಷೇಪಣೆಯ ಸಂಬಂಧದಲ್ಲಿ ಪ್ರಿಸೈಡಿಂಗ್ ಆಫೀಸರ್ ಬಳಿ ನಗದಾಗಿ ಎರಡು ರೂಪಾಯಿಗಳ ಮೊತ್ತವನ್ನು ಮೊದಲು ಠೇವಣಿ ಇಟ್ಟು ಹಾಗೆ ಮಾಡಬಹುದು.

(2) ಹಾಗೆ ಠೇವಣಿಯನ್ನು ಮಾಡಿದ ಮೇಲೆ, ಪ್ರಿಸೈಡಿಂಗ್ ಆಫೀಸರನು:–

(ಎ) ಆಕ್ಷೇಪಕ್ಕೆ ಒಳಗಾದ ವ್ಯಕ್ತಿಗೆ, ಪರರೂಪಧಾರಣೆ ಸಂಬಂಧದಲ್ಲಿ ವಿಧಿಸುವ ದಂಡನೆಯ ಬಗ್ಗೆ ಎಚ್ಚರಿಕೆ ನೀಡತಕ್ಕದ್ದು;

(ಬಿ) ಮತದಾರರ ಪಟ್ಟಿಯಲ್ಲಿರುವ ಸಂಬಂಧಪಟ್ಟ ನಮೂದನೆಯನ್ನು ಪೂರ್ಣವಾಗಿ ಓದಿ ಆ ನಮೂದಿನಲ್ಲಿ ಉಲ್ಲೇಖಿಸಲಾದ ವ್ಯಕ್ತಿಯು ಅವನೇ ಆಗಿರುವನೇ ಹೇಗೆ ಎಂಬ ಬಗ್ಗೆ ಕೇಳತಕ್ಕದ್ದು;

(ಸಿ) ಆಕ್ಷೇಪಿತ ಮತಗಳ ಪಟ್ಟಿಯಲ್ಲಿ ಇರುವ ಅವನ ಹೆಸರು ಮತ್ತು ವಿಳಾಸವನ್ನು ನಮೂನೆ [1][21][1] ರಲ್ಲಿ ನಮೂದಿಸತಕ್ಕದ್ದು; ಮತ್ತು

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44 ದಿನಾಂಕ 3.2.1970 ರ ಮೂಲಕ ಪ್ರತಿಯೋಜಿಸಲಾಗಿದೆ.

(ಡಿ) ಸದರಿ ಪಟ್ಟಿಯಲ್ಲಿ ರುಜು ಹಾಕುವಂತೆ ಅವನನ್ನು ಅಗತ್ಯಪಡಿಸತಕ್ಕದ್ದು.

(3) ಪ್ರಿಸೈಡಿಂಗ್ ಆಫೀಸರ್ ಆ ತರುವಾಯ ಆಕ್ಷೇಪಣೆಯ ಬಗ್ಗೆ ಸಂಕ್ಷಿಪ್ತ ವಿಚಾರಣೆಯನ್ನು ನಡೆಸತಕ್ಕದ್ದು ಮತ್ತು ಆ ಉದ್ದೇಶಕ್ಕಾಗಿ:–

(ಎ) ಆಕ್ಷೇಪವೆತ್ತಿದವನನ್ನು ಆಕ್ಷೇಪಣೆಯ ಬಗ್ಗೆ ರುಜುವಾತು ಪಡಿಸಲು ಸಾಕ್ಷ್ಯವನ್ನು ಒದಗಿಸುವಂತೆ ಮತ್ತು ಆಕ್ಷೇಪಕ್ಕೆ ಒಳಗಾದ ವ್ಯಕ್ತಿಯನ್ನು ತನ್ನ ಗುರುತನ್ನು ರುಜುವಾತು ಪಡಿಸಲು ಸಾಕ್ಷ್ಯವನ್ನು ಒದಗಿಸುವಂತೆ ಅಗತ್ಯಪಡಿಸಬಹುದು;

(ಬಿ) ಆಕ್ಷೇಪಕ್ಕೆ ಒಳಗಾದ ವ್ಯಕ್ತಿಯ ಗುರುತನ್ನು ರುಜುವಾತು ಪಡಿಸುವ ಉದ್ದೇಶಕ್ಕಾಗಿ ಅವನಿಗೆ ಯಾವುದೇ ಪ್ರಶ್ನೆಯನ್ನು ಕೇಳಬಹುದು ಮತ್ತು ಪ್ರಮಾಣ ಮಾಡಿ ಆ ಪ್ರಶ್ನೆಗಳಿಗೆ ಉತ್ತರಿಸುವಂತೆ ಅವನನ್ನು ಅಗತ್ಯಪಡಿಸಬಹುದು; ಮತ್ತು

(ಸಿ) ಆಕ್ಷೇಪಕ್ಕೆ ಒಳಗಾದ ವ್ಯಕ್ತಿಯಿಂದ ಪ್ರಮಾಣ ಮಾಡಿಸಬಹುದು ಮತ್ತು ಸಾಕ್ಷ್ಯ ನೀಡಲು ಮುಂದೆ ಬರುವ ಇತರ ಯಾವನೇ ವ್ಯಕ್ತಿಯಿಂದ ಸಹ ಪ್ರಮಾಣ ಮಾಡಿಸಬಹುದು.

(4) ವಿಚಾರಣೆ ಮಾಡಿದ ಮೇಲೆ, ಪ್ರಿಸೈಡಿಂಗ್ ಆಫೀಸರನು ಆಕ್ಷೇಪಣೆಯು ರುಜುವಾತಾಗಿಲ್ಲವೆಂದು ಪರಿಗಣಿಸಿದರೆ, ಅವರು ಆಕ್ಷೇಪಕ್ಕೆ ಒಳಗಾದ ವ್ಯಕ್ತಿಗೆ ಮತ ನೀಡಲು ಅನುಮತಿ ಕೊಡತಕ್ಕದ್ದು ಮತ್ತು ಅವರು ಆಕ್ಷೇಪವು ರುಜುವಾತಾಗಿದೆ ಎಂದು ಪರಿಗಣಿಸಿದರೆ ಆಕ್ಷೇಪಕ್ಕೆ ಒಳಗಾದ ವ್ಯಕ್ತಿಯನ್ನು ಮತ ನೀಡದಂತೆ ಹೊರಹಾಕತಕ್ಕದ್ದು.

(5) ಆಕ್ಷೇಪಣೆಯು ಕ್ಷುಲ್ಲಕವಾದದ್ದು ಅಥವಾ ಅದನ್ನು ಸದ್ಭಾವನೆಯಿಂದ ಎತ್ತಲಾಗಿಲ್ಲವೆಂದು ಪ್ರಿಸೈಡಿಂಗ್ ಆಫೀಸರ್ ಅಭಿಪ್ರಾಯಪಟ್ಟರೆ, ಅವನು (1)ನೇ ಉಪನಿಯಮದ ಮೇರೆಗೆ ಮಾಡಿದ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ನಿರ್ದೇಶಿಸತಕ್ಕದ್ದು ಮತ್ತು ಯಾವುದೇ ಇತರ ಸಂದರ್ಭದಲ್ಲಿ ವಿಚಾರಣೆಯು ಮುಕ್ತಾಯವಾದ ಮೇಲೆ ಅದನ್ನು ಆಕ್ಷೇಪವೆತ್ತಿದವನಿಗೆ ಹಿಂದಿರುಗಿಸತಕ್ಕದ್ದು.

**27. ಹಾಳಾದ ಮತ್ತು ಹಿಂದಿರುಗಿಸಿದ ಮತಪತ್ರಗಳು.–** (1) ಮತಪತ್ರವೆಂದು ಉಪಯೋಗಿಸಲಾಗದಂಥ ರೀತಿಯಲ್ಲಿ ತನಗೆ ಕೊಟ್ಟ ಮತಪತ್ರವನ್ನು ಅಜಾಗರೂಕತೆಯಿಂದ ಬಳಸಿರುವ ಮತದಾರನು, ಪ್ರಿಸೈಡಿಂಗ್ ಆಫೀಸರ್‌ಗೆ ಅದನ್ನು ಹಿಂದಿರುಗಿಸಿ ತನ್ನ ಅಜಾಗರೂಕತೆಯ ಬಗ್ಗೆ ಅವನಿಗೆ ಮನದಟ್ಟು ಮಾಡಿಕೊಟ್ಟ ಮೇಲೆ ಪ್ರಿಸೈಡಿಂಗ್ ಆಫೀಸರ್ ಅವನಿಗೆ ಇನ್ನೊಂದು ಮತಪತ್ರವನ್ನು ಕೊಡಬಹುದು, ಮತ ಹಾಗೆ ಹಿಂದಿರುಗಿಸಿದ ಮತಪತ್ರದ ಮತ್ತು ಅದರ ಪಕ್ಕಪ್ರತಿಯ ಮೇಲೆ "ಹಾಳಾಗಿದೆ: ರದ್ದುಪಡಿಸಲಾಗಿದೆ" ಎಂದು ಗುರುತು ಮಾಡತಕ್ಕದ್ದು.

(2) ಮತದಾರನು ಮತಪತ್ರವನ್ನು ಪಡೆದ ತರುವಾಯ ಅದನ್ನು ಉಪಯೋಗಿಸಬಾರದೆಂದು ತೀರ್ಮಾನಿಸಿದರೆ, ಅವನು ಅದನ್ನು ಪ್ರಿಸೈಡಿಂಗ್ ಆಫೀಸರ್‌ಗೆ ಹಿಂದಿರುಗಿಸತಕ್ಕದ್ದು ಮತ್ತು ಹಾಗೆ ಹಿಂದಿರುಗಿಸಲಾದ ಮತಪತ್ರದ ಮೇಲೆ ಪ್ರಿಸೈಡಿಂಗ್ ಆಫೀಸರ್ "ಹಿಂದಿರುಗಿಸಲಾಗಿದೆ: ರದ್ದುಪಡಿಸಲಾಗಿದೆ" ಎಂದು ಗುರುತು ಮಾಡತಕ್ಕದ್ದು.

(3) (1)ನೇ ಮತ್ತು (2)ನೇ ಉಪನಿಯಮಗಳ ಮೇರೆಗೆ ರದ್ದುಪಡಿಸಲಾದ ಎಲ್ಲ ಮತಪತ್ರಗಳನ್ನು ಒಂದು ಪ್ರತ್ಯೇಕ ಲಕೋಟೆಯಲ್ಲಿಡತಕ್ಕದ್ದು.

**28. ಮತದಾನದ ಮುಕ್ತಾಯ.–** (1) ಪ್ರಿಸೈಡಿಂಗ್ ಆಫೀಸರ್, 7ನೇ ನಿಯಮದ (ಇ) ಖಂಡದ ಮೇರೆಗೆ ಈ ಸಂಬಂಧದಲ್ಲಿ ನಿಗದಿಪಡಿಸಿದ ವೇಳೆಗೆ ಮತಗಟ್ಟೆಯನ್ನು ಮುಚ್ಚತಕ್ಕದ್ದು ಮತ್ತು ಆ ತರುವಾಯ ಯಾವನೇ ಮತದಾರನನ್ನು ಮತಗಟ್ಟೆಯೊಳಗೆ ಬಿಡತಕ್ಕದ್ದಲ್ಲ:

ಪರಂತು, ಮತಗಟ್ಟೆಯನ್ನು ಮುಚ್ಚುವುದಕ್ಕೆ ಮುಂಚೆ ಅಲ್ಲಿ ಹಾಜರಿರುವ ಎಲ್ಲ ಮತದಾರರಿಗೆ ತಮ್ಮ ಮತಗಳನ್ನು ಚಲಾಯಿಸಲು ಅವಕಾಶ ನೀಡತಕ್ಕದ್ದು.

(2) ಯಾವನೇ ಮತದಾರನು ಮತಗಟ್ಟೆಯನ್ನು ಮುಚ್ಚುವುದಕ್ಕೆ ಮುಂಚೆ ಅಲ್ಲಿ ಹಾಜರಿದ್ದನೇ ಎಂಬ ಬಗ್ಗೆ ಯಾವುದೇ ಪ್ರಶ್ನೆಯು ಉದ್ಭವಿಸಿದರೆ, ಪ್ರಿಸೈಡಿಂಗ್ ಆಫೀಸರ್ ಅದನ್ನು ತೀರ್ಮಾನಿಸತಕ್ಕದ್ದು ಮತ್ತು ಆ ಸಂದರ್ಭದಲ್ಲಿ ಅವನ ತೀರ್ಮಾನವು ಅಂತಿಮವಾಗಿರತಕ್ಕದ್ದು.

(3) ಯಾವುದೇ ಕಾರಣದಿಂದಾಗಿ, ನಿಗದಿಪಡಿಸಿದ ವೇಳೆಯಲ್ಲಿ ಮತಗಟ್ಟೆಯನ್ನು ತೆರೆಯಲು ಸಾಧ್ಯವಾಗದೆ ಇದ್ದರೆ ಅಥವಾ ಮತದಾನದ ಮತಗಟ್ಟೆಯಲ್ಲಿ ಅವ್ಯವಸ್ಥೆಯ ಕಾರಣದಿಂದ ಅಥವಾ ಯಾವುದೇ ಇತರ ಸಾಕಷ್ಟು ಕಾರಣಗಳಿಂದ ಮತದಾನವನ್ನು ಒಂದಿಷ್ಟು ಸಮಯದವರೆಗೆ ನಿಲ್ಲಿಸಬೇಕಾದರೆ, ಪ್ರಿಸೈಡಿಂಗ್ ಆಫೀಸರ್ ಕಾರಣಗಳನ್ನು ದಾಖಲ್ಮಾಡಿ ಆ ಕುರಿತು ಅಭ್ಯರ್ಥಿಗಳಿಗೆ ಅಥವಾ ಅವರ ಏಜೆಂಟರು ಯಾರಾದರೂ ಇದ್ದರೆ ಅವರಿಗೆ ತಿಳಿಸಿದ ತರುವಾಯ, ಮತಗಟ್ಟೆಯನ್ನು ತೆರೆಯುವುದಕ್ಕಾಗಿ ಗೊತ್ತುಪಡಿಸಿರುವಂಥ ವೇಳೆ ಮತ್ತು ವಾಸ್ತವಿಕವಾಗಿ ಅದನ್ನು ತೆರೆಯಲಾದಂಥ ವೇಳೆ ಅಥವಾ ಸಂದರ್ಭಾನುಸಾರ ಮತದಾನವನ್ನು ನಿಲ್ಲಿಸಲಾದಂಥ ವೇಳೆ ಇವುಗಳ ನಡುವೆ ಗತಿಸಿದ ಸಮಯಕ್ಕೆ ಸಮಾನವಾದ ಆನಂತರದ ಅವಧಿಯವರೆಗೆ ಮತಗಟ್ಟೆಯನ್ನು ತೆರೆದಿಡತಕ್ಕದ್ದು.

**29. ಮತದಾನದ ತರುವಾಯ ಮತಪೆಟ್ಟಿಗೆಗಳನ್ನು ಮೊಹರು ಮಾಡುವುದು.–** (1) ಮತದಾನವು ಮುಕ್ತಾಯವಾದ ತರುವಾಯ ಕಾರ್ಯಸಾಧ್ಯವಾದಷ್ಟು ಬೇಗನೆ, ಪ್ರಿಸೈಡಿಂಗ್ ಆಫೀಸರ್ ಮತಪೆಟ್ಟಿಗೆಯ ಸೀಳು ಜಾಗವನ್ನು ಮುಚ್ಚತಕ್ಕದ್ದು ಮತ್ತು ಅವನು ಮುಚ್ಚಲು ಯಾವುದೇ ಯಾಂತ್ರಿಕ ಸಾಧನವು ಇಲ್ಲದಿರುವಲ್ಲಿ, ಅವನು ಆ ಸೀಳು ಜಾಗವನ್ನು ಮೊಹರು ಮಾಡತಕ್ಕದ್ದು ಮತ್ತು ಹಾಜರಿದ್ದ ಯಾವನೇ ಮತದಾನ ಏಜೆಂಟನಿಗೆ ಅವನ ಮೊಹರನ್ನು ಹಾಕಲು ಸಹ ಅವಕಾಶ ನೀಡತಕ್ಕದ್ದು.

(2) ಆ ತರುವಾಯ ಮತಪೆಟ್ಟಿಗೆಯನ್ನು ಮೊಹರು ಮಾಡಿ ಭದ್ರಪಡಿಸತಕ್ಕದ್ದು.

(3) ಮೊದಲನೆಯ ಪೆಟ್ಟಿಗೆಯ ಭರ್ತಿಯಾದ ಕಾರಣ ಎರಡನೆಯ ಪೆಟ್ಟಿಗೆಯನ್ನು ಉಪಯೋಗಿಸುವುದು ಅವಶ್ಯವಾಗಿರುವಲ್ಲಿ ಇನ್ನೊಂದು ಮತಪೆಟ್ಟಿಗೆಯನ್ನು ಉಪಯೋಗಿಸುವುದಕ್ಕೆ ಮುಂಚೆ ಮೊದಲನೆಯ ಪೆಟ್ಟಿಗೆಯನ್ನು (1)ನೇ ಉಪನಿಯಮಗಳಲ್ಲಿ ಹೇಳಿರುವಂತೆ ಮುಚ್ಚತಕ್ಕದ್ದು, ಮೊಹರು ಮಾಡತಕ್ಕದ್ದು ಮತ್ತು ಭದ್ರಪಡಿಸತಕ್ಕದ್ದು.

**30. ಮತಪತ್ರಗಳ ಲೆಕ್ಕ.–** ಪ್ರಿಸೈಡಿಂಗ್ ಆಫೀಸರ್, ಮತದಾನವು ಮುಕ್ತಾಯವಾದ ತರುವಾಯ, [1][22ನೇ ನಮೂನೆಯಲ್ಲಿ][1] ಮತಪತ್ರಗಳಲೆಕ್ಕವನ್ನು ತಯಾರಿಸತಕ್ಕದ್ದು ಮತ್ತು ಅದರ ಮೇಲೆ "ಮತಪತ್ರದ ಲೆಕ್ಕ" ಎಂಬ ಪದಗಳನ್ನು ಬರೆದು ಪ್ರತ್ಯೇಕ ಲಕೋಟೆಯಲ್ಲಿಟ್ಟು ಅದನ್ನು ಮುಚ್ಚತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3.2.1970 ರ ಮೂಲಕ ಪ್ರತಿಯೋಜಿಸಲಾಗಿದೆ

**31. ಲಕೋಟೆಗಳನ್ನು ಮೊಹರು ಮಾಡುವುದು.–** ಆ ತರುವಾಯ ಪ್ರಿಸೈಡಿಂಗ್ ಆಫೀಸರ್,

(ಎ) ಮತಪೆಟ್ಟಿಗೆಗಳ ಬೀಗದ ಕೈಗಳು;

(ಬಿ) ಉಪಯೋಗಿಸದಿರುವ ಮತಪತ್ರಗಳು;

(ಸಿ) ಹಾಳಾದ ಮತಪತ್ರಗಳು;

(ಡಿ) ಹಿಂತಿರುಗಿಸಿದ ಮತಪತ್ರಗಳು;

(ಇ) ಟೆಂಡರು ಮತಪತ್ರಗಳು;

(ಎಫ್) ಟೆಂಡರ್ ಮತದಾರರ ಪಟ್ಟಿ;

(ಜಿ) ಆಕ್ಷೇಪವೆತ್ತಿದ ಮತಗಳ ಪಟ್ಟಿ;

(ಹೆಚ್) ಮತದಾರರ ಪಟ್ಟಿಯ ಗುರುತು ಮಾಡಿದ ಪ್ರತಿಗಳು;

(ಐ) ಮತಗಳ ಲೆಕ್ಕ;

(ಜೆ) ಮತಪತ್ರಗಳ ಪಕ್ಕ ಪ್ರತಿಗಳು; ಮತ್ತು

(ಕೆ) ರಿಟರ್ನಿಂಗ್ ಆಫೀಸರ್ ಮೊಹರು ಮಾಡಿದ ಲಕೋಟೆಗಳಲ್ಲಿಡಬೇಕೆಂದು ನಿರ್ದೇಶಿಸಿದ ಇತರ ಯಾವುದೇ ಕಾಗದ ಪತ್ರಗಳು

– ಇಂಥ ಪ್ರತ್ಯೇಕ ಲಕೋಟೆಗಳನ್ನು ಮಾಡತಕ್ಕದ್ದು.

(2) ಅಂಥ ಪ್ರತಿಯೊಂದು ಲಕೋಟೆಗೆ ಪ್ರಿಸೈಡಿಂಗ್ ಆಫೀಸರ್ ಮತ್ತು ಹಾಜರಿರುವ ಅಭ್ಯರ್ಥಿಯ ಮತ್ತು ಅವುಗಳ ಮೇಲೆ ತಮ್ಮ ಮೊಹರನ್ನು ಹಾಕಲು ಇಚ್ಛಿಸುವ ಅಭ್ಯರ್ಥಿಯ ಮತದಾನ ಏಜೆಂಟ್‌ನ ಮೊಹರುಗಳಿಂದ ಮೊಹರು ಹಾಕತಕ್ಕದ್ದು.

(3) ಆ ತರುವಾಯ ಪ್ರಿಸೈಡಿಂಗ್ ಆಫೀಸರ್, ವಿವರಣಾ ಪಟ್ಟಿಯನ್ನು ಲಗತ್ತಿಸಿದ ಮತಪೆಟ್ಟಿಗೆಯನ್ನು ಮತ್ತು (1)ನೇ ಉಪನಿಯಮದಲ್ಲಿ ಉಲ್ಲೇಖಿತವಾದ ಲಕೋಟೆಗಳನ್ನು ರಿಟರ್ನಿಂಗ್ ಆಫೀಸರ್‌ಗೆ ನೀಡತಕ್ಕದ್ದು. ಪ್ರತಿಯೊಂದು ಲಕೋಟೆಗೆ ಸಂಖ್ಯೆ ನೀಡತಕ್ಕದ್ದು ಮತ್ತು ಅದರಲ್ಲಿ ಒಳಗೊಂಡ ವಿಷಯಗಳ ಬಗ್ಗೆ ಒಂದು ಸಂಕ್ಷಿಪ್ತ ವಿವರಣೆ ಇರತಕ್ಕದ್ದು.

**32. ತುರ್ತು ಸನ್ನಿವೇಶದಲ್ಲಿ ಮತದಾನವನ್ನು ಮುಂದೂಡುವುದು.–** (1) ಚುನಾವಣೆ ನಡೆಯುವಾಗ ಯಾವುದೇ ಮತಗಟ್ಟೆಯಲ್ಲಿ ಯಾವುದೇ ದೊಂಬಿಯಿಂದ ಅಥವಾ ಬಹಿರಂಗ ಹಿಂಸಾಚಾರದಿಂದ ಅಡಚಣೆ, ಚುನಾವಣಾ ವ್ಯವಹರಣೆಗೆ ಅಡಚಣೆ ಅಥವಾ ತಡೆಯುಂಟಾದರೆ, ಅಥವಾ ಚುನಾವಣೆ ನಡೆಯುವಾಗ ಯಾವುದೇ ಮತಗಟ್ಟೆಯಲ್ಲಿ ಯಾವುದೇ ನೈಸರ್ಗಿಕ ವಿಪತ್ತಿನಿಂದ ಅಥವಾ ಯಾವುದೇ ಇತರ ಸಾಕಷ್ಟು ಕಾರಣದಿಂದ ಮತದಾನವನ್ನು ನಡೆಸುವುದು ಸಾಧ್ಯವಾಗದಿದ್ದರೆ, ಅಂಥ ಮತದಾನ ಕೇಂದ್ರದ ಪ್ರಿಸೈಡಿಂಗ್ ಆಫೀಸರ್ ಅಥವಾ ರಿಟರ್ನಿಂಗ್ ಆಫೀಸರ್ ಆ ಬಗ್ಗೆ ಲಿಖಿತದಲ್ಲಿ ಅಭ್ಯರ್ಥಿಗಳಿಗೆ ಅಥವಾ ಅದರ ಏಜೆಂಟರಿಗೆ ತಿಳಿಸತಕ್ಕದ್ದು ಮತ್ತು ಆ ತರುವಾಯ ಅಧಿಸೂಚಿಸಲಾಗುವ ದಿನಾಂಕಕ್ಕೆ ಮತದಾನವನ್ನು ಮುಂದೂಡಲಾಗಿದೆ ಎಂದು ಪ್ರಕಟಿಸತಕ್ಕದ್ದು ಮತ್ತು ಪ್ರಿಸೈಡಿಂಗ್ ಆಫೀಸರ್ ಹಾಗೆ ಮತದಾನವನ್ನು ಮುಂದೂಡಿರುವಲ್ಲಿ ಅವನು ಅದನ್ನು ಆ ಕೂಡಲೇ ಸಂಬಂಧಪಟ್ಟ ರಿಟರ್ನಿಂಗ್ ಆಫೀಸರ್‌ಗೆ ತಿಳಿಸತಕ್ಕದ್ದು.

(2) ಮತದಾನವನ್ನು (1)ನೇ ಉಪನಿಯಮದ ಮೇರೆಗೆ ಮುಂದೂಡಿದಾಗಲೆಲ್ಲಾ, ರಿಟರ್ನಿಂಗ್ ಆಫೀಸರ್ ಯಾವ ಸನ್ನಿವೇಶಗಳಲ್ಲಿ ಮತದಾನವನ್ನು ಮುಂದೂಡಲಾಯಿತೋ ಆ ಬಗ್ಗೆ ಆ ಕೂಡಲೇ ಡೆಪ್ಯೂಟಿ ಕಮಿಷನರನಿಗೆ ಮತ್ತು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಮತ್ತು ಸಂಬಂಧಪಟ್ಟ ಅಭ್ಯರ್ಥಿಗಳಿಗೆ ಲಿಖಿತದಲ್ಲಿ ವರದಿ ಮಾಡತಕ್ಕದ್ದು ಮತ್ತು ಆದಷ್ಟು ಬೇಗನೆ, ಮತದಾನವು ಪುನಃ ಪ್ರಾರಂಭವಾಗುವ ದಿನಾಂಕವನ್ನು ಗೊತ್ತುಪಡಿಸತಕ್ಕದ್ದು ಮತ್ತು ಮತದಾನವು ನಡೆಯತಕ್ಕ ಮತಗಟ್ಟೆಯನ್ನು ಮತ್ತು ವೇಳೆಯನ್ನು ಸಹ ನಿಗದಿಪಡಿಸತಕ್ಕದ್ದು ಹಾಗೂ ಮುಂದೂಡಲಾದ ಅಂಥ ಮತದಾನವು ಪೂರ್ಣಗೊಳ್ಳುವವರೆಗೆ ಆ ಚುನಾವಣೆಯಲ್ಲಿ ಆವರೆಗೆ ಚಲಾಯಿಸಲಾದ ಮತಗಳನ್ನು ಎಣಿಕೆ ಮಾಡತಕ್ಕದ್ದಲ್ಲ.

(3) ಮೇಲೆ ಹೇಳಿರುವಂಥ ಪ್ರತಿಯೊಂದು ಸಂದರ್ಭದಲ್ಲಿ, ರಿಟರ್ನಿಂಗ್ ಆಫೀಸರ್ ತಾನು ಯುಕ್ತವೆಂದು ಭಾವಿಸಬಹುದಾದಂಥ ರೀತಿಯಲ್ಲಿ (2)ನೇ ಉಪನಿಯಮದ ಮೇರೆಗೆ ನಿಗದಿಪಡಿಸಲಾದ ಮತದಾನದ ದಿನಾಂಕ, ಸ್ಥಳ ಮತ್ತು ವೇಳೆಯನ್ನು ಅಧಿಸೂಚಿಸತಕ್ಕದ್ದು.

**33. ಮತದಾನವನ್ನು ಮುಂದೂಡಿದ ತರುವಾಯದ ಕಾರ್ಯವಿಧಾನ.–** (1) ಯಾವುದೇ ಮತಗಟ್ಟೆಯಲ್ಲಿ ಮತದಾನವನ್ನು 32ನೇ ನಿಯಮದ ಮೇರೆಗೆ ಮುಂದೂಡಿದ್ದರೆ 29 ರಿಂದ 31ನೇ ನಿಯಮಗಳ ಉಪಬಂಧಗಳು ಕಾರ್ಯ ಸಾಧ್ಯವಾದಷ್ಟು ಮಟ್ಟಿಗೆ, 7ನೇ ನಿಯಮದ (2)ನೇ ಬಾಬಿನ ಮೇರೆಗೆ ಆ ಬಗ್ಗೆ ನಿಗದಿಪಡಿಸಿದ ವೇಳೆಯಲ್ಲಿ ಮತದಾನವನ್ನು ಮುಕ್ತಾಯಗೊಳಿಸಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

(2) ಮುಂದೂಡಲಾದ ಮತದಾನವನ್ನು 32ನೇ ನಿಯಮದ (2)ನೇ ಉಪನಿಯಮದ ಮೇರೆಗೆ ಪುನಃ ಪ್ರಾರಂಭಿಸಿದಾಗ ಹಾಗೆ ಮುಂದೂಡಲಾದ ಮತದಾನದಲ್ಲಿ ಈಗಾಗಲೇ ಮತ ಚಲಾಯಿಸಿರುವ ಮತದಾರರಿಗೆ ಪುನಃ ಮತ ಚಲಾಯಿಸಲು ಅವಕಾಶ ನೀಡತಕ್ಕದ್ದಲ್ಲ.

(3) ರಿಟರ್ನಿಂಗ್ ಆಫೀಸರ್, ಯಾವ ಮತಗಟ್ಟೆಯಲ್ಲಿ ಮುಂದೂಡಲಾದ ಆ ಮತದಾನವನ್ನು ನಡೆಸಲಾಗುವುದೋ ಅಲ್ಲಿ ಮತದಾರರ ಪಟ್ಟಿಯ ಗುರುತು ಮಾಡಿದ ಪ್ರತಿಯನ್ನೊಳಗೊಂಡ ಮೊಹರು ಮಾಡಿದ ಪ್ಯಾಕೆಟ್ ಮತ್ತು ಒಂದು ಹೊಸ ಮತಪೆಟ್ಟಿಗೆಯನ್ನು ಪ್ರಿಸೈಡಿಂಗ್ ಆಫೀಸರ್‌ಗೆ ಒದಗಿಸತಕ್ಕದ್ದು.

(4) ಪ್ರಿಸೈಡಿಂಗ್ ಆಫೀಸರ್ ಹಾಜರಿರುವ ಮತದಾನ ಏಜೆಂಟರ ಸಮ್ಮುಖದಲ್ಲಿ ಮೊಹರು ಮಾಡಿದ ಲಕೋಟೆಯನ್ನು ತೆಗೆದು ಮುಂದೂಡಲಾದ ಮತದಾನದಲ್ಲಿ ಮತ ಚಲಾಯಿಸುವ ಮತದಾರರಿಗೆ ನೀಡಲಾಗುವ ಮತಪತ್ರಗಳ ಕ್ರಮಸಂಖ್ಯೆಯನ್ನು ದಾಖಲು ಮಾಡಿಕೊಳ್ಳುವುದಕ್ಕಾಗಿ ಮತದಾರರ ಪಟ್ಟಿಯ ಗುರುತು ಮಾಡಿದ ಪ್ರತಿಯನ್ನು ಉಪಯೋಗಿಸತಕ್ಕದ್ದು.

(5) ಈ ಅಧಿನಿಯಮದ ಮತ್ತು ಈ ನಿಯಮಗಳ ಉಪಬಂಧಗಳು ಮೂಲ ಮತದಾನಕ್ಕೆ ಅನ್ವಯವಾಗುವಂತೆಯೇ ಪುನಃ ಪ್ರಾರಂಭಿಸಲಾದಂಥ ಪ್ರತಿಯೊಂದು ಮತದಾನಕ್ಕೂ ಅನ್ವಯವಾಗತಕ್ಕದ್ದು.

**34. ಮತಪೆಟ್ಟಿಗೆಗಳ ನಾಶ ಮುಂತಾದ ಸಂದರ್ಭಗಳಲ್ಲಿ ಹೊಸದಾಗಿ ಮತದಾನ ನಡೆಸುವುದು.–** (1) ಯಾವುದೇ ಚುನಾವಣೆಯಲ್ಲಿ:–

(ಎ) ಮತಗಟ್ಟೆಯಲ್ಲಿ ಉಪಯೋಗಿಸಲಾಗುವ ಯಾವುದೇ ಮತಪೆಟ್ಟಿಗೆಯನ್ನು ಪ್ರಿಸ್ಯೈಡಿಂಗ್ ಆಫೀಸರ್ ಅಥವಾ ರಿಟರ್ನಿಂಗ್ ಆಫೀಸರ್‌ರ ಅಭಿರಕ್ಷೆಯಿಂದ ಯಾವನೇ ವ್ಯಕ್ತಿಯು ಕಾನೂನು ಬಾಹಿರವಾಗಿ ತೆಗೆದುಕೊಂಡು ಹೋದರೆ, ಅಥವಾ ಅದು ಆಕಸ್ಮಿಕವಾಗಿ ನಾಶವಾದರೆ ಅಥವಾ ಯಾವನೇ ವ್ಯಕ್ತಿಯು ಉದ್ದೇಶಪೂರ್ವಕವಾಗಿ ಅದನ್ನು ನಾಶಪಡಿಸಿದರೆ ಅಥವಾ ಅದು ಕಳೆದುಹೋದರೆ ಅಥವಾ ಆ ಮತಗಟ್ಟೆಯಲ್ಲಿ ಆದ ಮತದಾನದ ಫಲಿತಾಂಶವನ್ನು ಖಚಿತಪಡಿಸಿಕೊಳ್ಳಲು ಸಾಧ್ಯವಾಗದಷ್ಟು ಮಟ್ಟಿಗೆ ಆ ಮತಪೆಟ್ಟಿಗೆಗೆ ಹಾನಿಯುಂಟಾಗಿದ್ದರೆ ಅಥವಾ ಆ ಮತಪೆಟ್ಟಿಗೆಯಲ್ಲಿ ಹಸ್ತಕ್ಷೇಪ ಉಂಟಾಗಿದ್ದರೆ; ಅಥವಾ

(ಬಿ) ಮತಗಟ್ಟೆಯಲ್ಲಿ ನಡೆದ ಮತದಾನವನ್ನು ದೂಷಿತಗೊಳಿಸುವ ಹಾಗೆ ಕಾರ್ಯವಿಧಾನದಲ್ಲಿ ಯಾವುದೇ ತಪ್ಪು ಅಥವಾ ಅಕ್ರಮ ಉಂಟಾಗಿದ್ದರೆ

– ಪ್ರಿಸ್ಯೈಡಿಂಗ್ ಆಫೀಸರ್ ಆ ವಿಷಯವನ್ನು ಆ ಕೂಡಲೇ ರಿಟರ್ನಿಂಗ್ ಆಫೀಸರ್‌ಗೆ ವರದಿ ಮಾಡತಕ್ಕದ್ದು.

(2) ಆ ತರುವಾಯ, ರಿಟರ್ನಿಂಗ್ ಆಫೀಸರ್, ಎಲ್ಲಾ ಮುಖ್ಯ ಸನ್ನಿವೇಶಗಳನ್ನು ಗಣನೆಗೆ ತೆಗೆದುಕೊಂಡು,–

(ಎ) ಆ ಮತಗಟ್ಟೆಯಲ್ಲಿ ನಡೆದ ಮತದಾನವನ್ನು ಶೂನ್ಯವೆಂದು ಘೋಷಿಸತಕ್ಕದ್ದು. ಮತ್ತು ಆ ಮತಗಟ್ಟೆಯಲ್ಲಿ ಹೊಸದಾಗಿ ಮತದಾನವನ್ನು ನಡೆಸಲು ಒಂದು ದಿನವನ್ನು ಗೊತ್ತುಪಡಿಸತಕ್ಕದ್ದು ಮತ್ತು ಆ ಬಗ್ಗೆ ವೇಳೆಯನ್ನು ನಿಗದಿಪಡಿಸತಕ್ಕದ್ದು ಮತ್ತು ಹಾಗೆ ಗೊತ್ತುಪಡಿಸಲಾದ ದಿನವನ್ನು ಮತ್ತು ನಿಗದಿಪಡಿಸಲಾದ ವೇಳೆಯನ್ನು ತಾವು ಯುಕ್ತವೆಂದು ಭಾವಿಸಬಹುದಾಂಥ ರೀತಿಯಲ್ಲಿ ಅಧಿಸೂಚಿತಕ್ಕದ್ದು; ಅಥವಾ

(ಬಿ) ಆ ಮತಗಟ್ಟೆಯಲ್ಲಿ ಹೊಸದಾಗಿ ನಡೆಸಲಾದ ಮತದಾನದ ಫಲಿತಾಂಶವು ಯಾವುದೇ ರೀತಿಯಲ್ಲಿ ಆ ಚುನಾವಣೆಯ ಫಲಿತಾಂಶಕ್ಕೆ ಬಾಧಕವಾಗುವುದಿಲ್ಲವೆಂದು ಅಥವಾ ಚುನಾವಣಾ ವಿಧಿ ವಿಧಾನದಲ್ಲಿ ಉಂಟಾದ ತಪ್ಪು ಅಥವಾ ಆಕ್ರಮವು ಮುಖ್ಯವಾದುದಲ್ಲವೆಂದು ಆ ರಿಟರ್ನಿಂಗ್ ಆಫೀಸರ್‌ಗೆ ಮನದಟ್ಟಾದರೆ, ಅವನು ಆ ಚುನಾವಣೆಯನ್ನು ಮತ್ತೆ ನಡೆಸಲು ಅಥವಾ ಪೂರ್ಣಗೊಳಿಸಲು ಸೂಕ್ತವೆಂದು ತಾನು ಭಾವಿಸಬಹುದಾದಂಥ ನಿರ್ದೇಶನಗಳನ್ನು ಪ್ರಿಸ್ಯೈಡಿಂಗ್ ಆಫೀಸರ್ ನೀಡತಕ್ಕದ್ದು ಮತ್ತು ಆ ಕುರಿತು ಅಭ್ಯರ್ಥಿಗೆ ಅಥವಾ ಅವನ ಏಜೆಂಟರಿಗೆ ತಿಳಿಸತಕ್ಕದ್ದು.

(3) ಈ ಅಧಿನಿಯಮದ ಮತ್ತು ಈ ನಿಯಮಗಳ ಉಪಬಂಧಗಳು ಮೂಲ ಮತದಾನಕ್ಕೆ ಅನ್ವಯವಾಗುವಂತೆಯೇ ಹೊಸದಾಗಿ ನಡೆಸಲಾದಂಥ ಪ್ರತಿಯೊಂದು ಮತದಾನಕ್ಕೂ ಅನ್ವಯವಾಗತಕ್ಕದ್ದು.

**35. ಮತಗಳ ಎಣಿಕೆ.–** ಮತಗಳ ಎಣಿಕೆಗಾಗಿ 7ನೇ ನಿಯಮದ (ಎಫ್) ಖಂಡದ ಮೇರೆಗೆ ನಿಗದಿಪಡಿಸಿದ ದಿನದಂದು ಮತ್ತು ಆ ಸ್ಥಳದಲ್ಲಿ ಮತ್ತು ಸಮಯಕ್ಕೆ ಮತ್ತು ಹಾಜರಿರುವ ಅಭ್ಯರ್ಥಿಗಳು ಮತ್ತು ಅವರ ಏಜೆಂಟರ ಸಮ್ಮುಖದಲ್ಲಿ, ರಿಟರ್ನಿಂಗ್ ಆಫೀಸರ್ ಈ ಕೆಳಕಂಡಂತೆ ಕ್ರಮ ಕೈಗೊಳ್ಳತಕ್ಕದ್ದು:–

(1) ಎಣಿಕೆ ಮೇಜಿನ ಮೇಲೆ ಇರುವ ಯಾವುದೇ ಮತಪೆಟ್ಟಿಗೆಯನ್ನು ತೆರೆಯುವುದಕ್ಕೆ ಮುಂಚೆ ಅದರ ಮೇಲೆ ಹಾಕಿರಬಹುದಾದ ಕಾಗದದ ಮೊಹರನ್ನು ಅಥವಾ ಅಂಥ ಇತರ ಮೊಹರನ್ನು ಪರಿಶೀಲಿಸಲು ಮತ್ತು ಆ ಮೊಹರು ಭದ್ರವಾಗಿದೆಯೆಂದು ಮನದಟ್ಟು ಮಾಡಿಕೊಳ್ಳಲು ಅಭ್ಯರ್ಥಿಗಳಿಗೆ ಅಥವಾ ಅವರ ಏಜೆಂಟರಿಗೆ ಅವಕಾಶ ಕೊಡತಕ್ಕದ್ದು.

(2) ಯಾವುದೇ ಮತಪೆಟ್ಟಿಗೆಯಲ್ಲಿ ಹಸ್ತಕ್ಷೇಪವಾಗಿಲ್ಲವೆಂಬ ಬಗ್ಗೆ ರಿಟರ್ನಿಂಗ್ ಆಫೀಸರ್ ಮನದಟ್ಟು ಮಾಡಿಕೊಳ್ಳತಕ್ಕದ್ದು.

(3) ಯಾವುದೇ ಮತಪೆಟ್ಟಿಗೆಯಲ್ಲಿ ಹಸ್ತಕ್ಷೇಪವಾಗಿದೆ ಎಂದು ರಿಟರ್ನಿಂಗ್ ಆಫೀಸರ್‌ಗೆ ಮನದಟ್ಟಾದರೆ, ಅವನು ಆ ಮತಪೆಟ್ಟಿಗೆಯಲ್ಲಿರುವ ಮತಪತ್ರಗಳನ್ನು ಎಣಿಕೆ ಮಾಡತಕ್ಕದ್ದಲ್ಲ ಮತ್ತು ಆ ಬಗ್ಗೆ 34ನೇ ನಿಯಮದಲ್ಲಿ ಹೇಳಲಾದ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

(4) ಪ್ರತಿಯೊಂದು ಮತಗಟ್ಟೆಗೆ ಸಂಬಂಧಿಸಿದ ಮತಪೆಟ್ಟಿಗೆಯನ್ನು ಅಥವಾ ಮತ ಪೆಟ್ಟಿಗೆಗಳನ್ನು ಮತದಾನದ ಸ್ಥಳಗಳಿಗೆ ನೀಡಲಾದ ಕ್ರಮಸಂಖ್ಯೆಗನುಸಾರ ತೆರೆಯತಕ್ಕದ್ದು ಮತ್ತು ರಿಟರ್ನಿಂಗ್ ಆಫೀಸರ್ ಅವುಗಳಲ್ಲಿರುವ ಮತಪತ್ರಗಳನ್ನು ಹೊರತೆಗೆದು ಎಣಿಕೆ ಮಾಡತಕ್ಕದ್ದು ಅಥವಾ ಮಾಡಿಸತಕ್ಕದ್ದು ಮತ್ತು ಅವುಗಳ ಸಂಖ್ಯೆಯನ್ನು [1][23ನೇ][1] ನಮೂನೆಯಲ್ಲಿರುವ ವಿವರಣ ಪಟ್ಟಿಯಲ್ಲಿ ದಾಖಲ್ಮಾಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3.2.70ರ ಮೂಲಕ ಪ್ರತಿಯೋಜಿಸಲಾಗಿದೆ.

(5) ರಿಟರ್ನಿಂಗ್ ಆಫೀಸರ್ ಈ ಕೆಳಕಂಡ ಸಂದರ್ಭಗಳಲ್ಲಿ ಮತಪತ್ರವನ್ನು ತಿರಸ್ಕರಿಸತಕ್ಕದ್ದು:–

(ಎ) ಮತಪತ್ರವು ಮತದಾರರನ್ನು ಗುರುತಿಸಬಹುದಾದಂಥ ಯಾವುದೇ ಗುರುತನ್ನು ಅಥವಾ ಬರಹವನ್ನು ಹೊಂದಿದ್ದರೆ; ಅಥವಾ [1][(ಬಿ) ಅದು ಮತ ಹಾಕಿರುವುದಾಗಿ ಸೂಚಿಸುವ ಯಾವ ಗುರುತನ್ನೂ ಹೊಂದಿರದಿದ್ದರೆ ಅಥವಾ ಗುರುತು ಹಾಕುವ ಉದ್ದೇಶಕ್ಕಾಗಿ ಒದಗಿಸಿದ ಉಪಕರಣದಿಂದಲ್ಲದೆ ಇತರ ಉಪಕರಣದಿಂದ ಮಾಡಿದ ಗುರುತನ್ನು ಅದು ಹೊಂದಿದ್ದರೆ; ಅಥವಾ

(ಬಿಬಿ) ಮತಪತ್ರದ ಮೇಲಿರುವ ಮತನೀಡಿಕೆ ಸೂಚಿಸುವ ಗುರುತು ಯಾವ ಅಭ್ಯರ್ಥಿಗೆ ಆ ಮತ ನೀಡಲಾಗಿದೆಯೆಂಬ ಬಗ್ಗೆ ಸಂದೇಹವನ್ನು ಉಂಟು ಮಾಡುವಂಥ ರೀತಿಯಲ್ಲಿ ಇದ್ದರೆ; ಅಥವಾ][1]

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3.2.70ರ ಮೂಲಕ ಪ್ರತಿಯೋಜಿಸಲಾಗಿದೆ.

(ಸಿ) ಮತಪತ್ರದ ಮೇಲೆ ಎಷ್ಟು ಜನ ಅಭ್ಯರ್ಥಿಗಳ ಪರವಾಗಿ ಮತ ನೀಡಬೇಕಾಗಿದೆಯೋ ಅದಕ್ಕಿಂತ ಹೆಚ್ಚು ಅಭ್ಯರ್ಥಿಗಳ ಪರವಾಗಿ ಮತನೀಡಿಕೆ ಸೂಚಿಸುವ ಗುರುತನ್ನು ಹಾಕಿದ್ದರೆ; ಅಥವಾ

(ಡಿ) ಅದು ಖೋಟಾ ಮತಪತ್ರವಾಗಿದ್ದರೆ; ಅಥವಾ

(ಇ) ಮತಪತ್ರವು ನೈಜವಾದ ಮತಪತ್ರವೆಂದು ಗುರುತಿಸಲಾಗದಷ್ಟು ಹಾನಿಗೊಳಗಾಗಿದ್ದರೆ ಅಥವಾ ವಿರೂಪಗೊಂಡಿದ್ದರೆ; ಅಥವಾ

(ಎಫ್) ಮತಪತ್ರವು, ನಿರ್ದಿಷ್ಟ ಮತಗಟ್ಟೆಯಲ್ಲಿ ಉಪಯೋಗಿಸಲು ಅಧಿಕೃತಗೊಳಿಸಲಾದ ಮತಪತ್ರದ ಕ್ರಮಸಂಖ್ಯೆಗಿಂತ ಅಥವಾ ಸಂದರ್ಭಾನುಸಾರ ವಿನ್ಯಾಸಕ್ಕಿಂತ ಭಿನ್ನವಾದ ಕ್ರಮಸಂಖ್ಯೆಯನ್ನು ಅಥವಾ ವಿನ್ಯಾಸವನ್ನು ಹೊಂದಿದ್ದರೆ; ಅಥವಾ

(ಜಿ) ಅದು ಪೋಲಿಂಗ್ ಆಫೀಸರನ ಚಿಕ್ಕ ರುಜುವನ್ನು ಹೊಂದಿರದಿದ್ದರೆ:

ಪರಂತು, (ಎಫ್) ಖಂಡ ಅಥವಾ (ಜಿ) ಖಂಡದಲ್ಲಿ ಹೇಳಿದಂಥ ಯಾವುದೇ ನ್ಯೂನತೆಯು ಪ್ರಿಸೈಡಿಂಗ್ ಆಫೀಸರ್ ತಪ್ಪಿನಿಂದ ಅಥವಾ ದೋಷದಿಂದ ಉಂಟಾಗಿದೆಯೆಂದು ರಿಟರ್ನಿಂಗ್ ಆಫೀಸರ್‌ಗೆ ಮನದಟ್ಟಾದರೆ ಅವನು ಆ ಮತಪತ್ರವನ್ನು ಕೇವಲ ಅಂಥ ನ್ಯೂನತೆಯ ಆಧಾರದ ಮೇಲೆ ತಿರಸ್ಕರಿಸತಕ್ಕದ್ದಲ್ಲ:

ಮತ್ತೂ ಪರಂತು, ಮತಪತ್ರದ ಮೇಲೆ ಗುರುತು ಮಾಡಿರುವ ರೀತಿಯಿಂದ ನಿರ್ದಿಷ್ಟ ಅಭ್ಯರ್ಥಿಗೆ ಆ ಮತವು ಸೇರತಕ್ಕದ್ದೆಂಬ ಉದ್ದೇಶವು ಸ್ಪಷ್ಟವಾಗಿ ಕಂಡು ಬಂದರೆ ಮತನೀಡಿಕೆ ಸೂಚಿಸುವ ಗುರುತು ಅಸ್ಪಷ್ಟವಾಗಿದೆ ಅಥವಾ ಆ ಗುರುತನ್ನು ಒಂದಕ್ಕಿಂತ ಹೆಚ್ಚು ಬಾರಿ ಮಾಡಲಾಗಿದೆಯೆಂಬ ಕಾರಣ ಮಾತ್ರದಿಂದಲೇ ಆ ಮತಪತ್ರವನ್ನು ತಿರಸ್ಕರಿಸತಕ್ಕದ್ದಲ್ಲ.

(6) (5)ನೇ ಉಪನಿಯಮದ ಮೇರೆಗೆ ಯಾವುದೇ ಮತಪತ್ರವನ್ನು ತಿರಸ್ಕರಿಸುವುದಕ್ಕೆ ಮುಂಚೆ ರಿಟರ್ನಿಂಗ್ ಆಫೀಸರ್ ಅಲ್ಲಿ ಹಾಜರಿರುವ ಅಭ್ಯರ್ಥಿಗೆ ಅಥವಾ ಅವನ ಏಜೆಂಟನಿಗೆ ಆ ಮತಪತ್ರವನ್ನು ಪರಿಶೀಲಿಸಲು ಯುಕ್ತ ಅವಕಾಶವನ್ನು ನೀಡತಕ್ಕದ್ದು, ಆದರೆ ಆ ಮತಪತ್ರವನ್ನು ಅಥವಾ ಇತರ ಯಾವುದೇ ಮತಪತ್ರವನ್ನು ಬಳಸಲು ಅವನಿಗೆ ಅವಕಾಶ ನೀಡತಕ್ಕದ್ದಲ್ಲ.

(7) ರಿಟರ್ನಿಂಗ್ ಆಫೀಸರು ತಾನು ತಿರಸ್ಕರಿಸುವ ಪ್ರತಿಯೊಂದು ಮತಪತ್ರದ ಮೇಲೆ 'ತಿರಸ್ಕರಿಸಲಾಗಿದೆ' ಎಂಬ ಪದವನ್ನು ಮತ್ತು ತಿರಸ್ಕರಣೆಯ ಕಾರಣಗಳನ್ನು ಸಂಕ್ಷೇಪವಾಗಿ ದಾಖಲ್ಮಾಡತಕ್ಕದ್ದು.

(8) ಈ ನಿಯಮದ ಮೇರೆಗೆ ತಿರಸ್ಕರಿಸಲಾದ ಎಲ್ಲ ಮತಪತ್ರವನ್ನು ಒಟ್ಟಾಗಿ ಕಟ್ಟಿಡತಕ್ಕದ್ದು.

(9) (5)ನೇ ಉಪನಿಯಮದ ಮೇರೆಗೆ ತಿರಸ್ಕರಿಸದಿರುವ ಪ್ರತಿಯೊಂದು ಮತಪತ್ರದ ಮೇಲೆ ದಾಖಲು ಮಾಡಲಾದ ಮತಗಳನ್ನು ಎಣಿಕೆ ಮಾಡತಕ್ಕದ್ದು:

ಪರಂತು, ಟೆಂಡರ್ ಮತಗಳಿರುವ ಯಾವುದೇ ಲಕೋಟೆಯನ್ನು ತೆರೆಯತಕ್ಕದ್ದಲ್ಲ ಮತ್ತು ಯಾವುದೇ ಅಂಥ ಮತಪತ್ರವನ್ನು ಎಣಿಸತಕ್ಕದ್ದಲ್ಲ.

(10) ಕ್ರಮಬದ್ಧವಾದ ಮತಪತ್ರದ ಮೇಲೆ ದಾಖಲು ಮಾಡಲಾದ ಮತವನ್ನು ಅಥವಾ ಮತಗಳನ್ನು ಸೂಚಿಸುವ ಗುರುತನ್ನು ಯಾವ ಅಭ್ಯರ್ಥಿಯ ಪರವಾಗಿ ಆ ಮತವನ್ನು ಅಥವಾ ಮತಗಳನ್ನು ಚಲಾಯಿಸಲಾಗಿದೆ ಎಂಬ ಬಗ್ಗೆ ಸಂದೇಹ ಉಂಟಾಗುವ ರೀತಿಯಲ್ಲಿ ಮಾಡಿದ್ದರೆ ಅಂಥ ಮತವನ್ನು ತಿರಸ್ಕರಿಸತಕ್ಕದ್ದು:

ಪರಂತು, ಒಬ್ಬ ಮತದಾರನು ಒಂದಕ್ಕಿಂತ ಹೆಚ್ಚು ಮತಗಳನ್ನು ಹೊಂದಿರುವಲ್ಲಿ ಅವನು ಹಾಕಿದ ಮತಗಳ ಪೈಕಿ ತಿರಸ್ಕೃತವಾಗಿಲ್ಲದ ಇತರ ಮತವನ್ನು ಅಥವಾ ಮತಗಳನ್ನು ಯುಕ್ತವಾಗಿ ಎಣಿಕೆ ಮಾಡತಕ್ಕದ್ದು.

**36. ಎಣಿಕೆಯು ನಿರಂತರವಾಗಿ ನಡೆಯುವುದು.–** ರಿಟರ್ನಿಂಗ್ ಆಫೀಸರ್, ಎಣಿಕೆಯ ಕಾರ್ಯವನ್ನು ಸಾಧ್ಯವಾದಷ್ಟು ಮಟ್ಟಿಗೆ ನಿರಂತರವಾಗಿ ನಡೆಸತಕ್ಕದ್ದು ಮತ್ತು ಎಣಿಕೆ ಕಾರ್ಯವನ್ನು ತಡೆಹಿಡಿಯುವುದು ಅಗತ್ಯವಾದ ಯಾವುದೇ ಮಧ್ಯಂತರದಲ್ಲಿ ಚುನಾವಣೆಗೆ ಸಂಬಂಧಿಸಿದ ಮತಪತ್ರಗಳನ್ನು, ಲಕೋಟೆಗಳನ್ನು ಮತ್ತು ಇತರ ಎಲ್ಲ ಕಾಗದ ಪತ್ರಗಳನ್ನು ತನ್ನ ಸ್ವಂತ ಮೊಹರಿನಿಂದ ಮತ್ತು ತಮ್ಮ ಮೊಹರನ್ನು ಹಾಕಲು ಇಚ್ಛಿಸುವಂಥ ಅಭ್ಯರ್ಥಿಗಳ ಅಥವಾ ಅವರ ಏಜೆಂಟರ ಮೊಹರುಗಳಿಂದ ಮುದ್ರೆ ಹಾಕಿಸಿ ಭದ್ರವಾಗಿ ಮುಚ್ಚಿಡತಕ್ಕದ್ದು ಮತ್ತು ಸದರಿ ವಸ್ತುಗಳ ಸುರಕ್ಷಿತ ಅಭಿರಕ್ಷೆಗಾಗಿ ಸಾಕಷ್ಟು ಮುನ್ನೆಚ್ಚರಿಕೆಯನ್ನು ತೆಗೆದುಕೊಳ್ಳತಕ್ಕದ್ದು.

**37. ಚುನಾವಣಾ ಫಲಿತಾಂಶಗಳ ಘೋಷಣೆ.–** (1) ಮತಪತ್ರಗಳ ಪರಿಶೀಲನೆಯ ಮತ್ತು ಎಣಿಕೆಯ ಕಾರ್ಯವು ಮುಕ್ತಾಯವಾದ ತರುವಾಯ ರಿಟರ್ನಿಂಗ್ ಆಫೀಸರ್ [1][24ನೇ][1] ನಮೂನೆಯಲ್ಲಿ ಚುನಾವಣೆಯ ವಿವರ ಪಟ್ಟಿಕೆಯನ್ನು ಸಿದ್ಧಪಡಿಸಿ [1][22 ಮತ್ತು 23ನೇ][1] ನಮೂನೆಗಳಲ್ಲಿರುವ ಸಂಖ್ಯೆಯೊಂದಿಗೆ ಒಟ್ಟು ಮತಗಳ ಸಂಖ್ಯೆಯನ್ನು ಹೋಲಿಸಿ ಪರಿಶೀಲಿಸತಕ್ಕದ್ದು ಮತ್ತು ಆ ಚುನಾವಣಾ ಕ್ಷೇತ್ರದಲ್ಲಿನ ಸ್ಥಾನಗಳ ಸಂಖ್ಯೆಗೆ ಸಮವಾದ ಸಂಖ್ಯೆಯ ಮತ್ತು ಹೆಚ್ಚು ಮತಗಳನ್ನು ಪಡೆದುಕೊಂಡ ಅಭ್ಯರ್ಥಿಗಳನ್ನು ಕ್ರಮಬದ್ಧವಾಗಿ ಚುನಾಯಿತರಾದರೆಂದು ಅವರೋಹಣ ಕ್ರಮದಲ್ಲಿ ಘೋಷಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 44 ದಿನಾಂಕ 3.2.70ರ ಮೂಲಕ ಪ್ರತಿಯೋಜಿಸಲಾಗಿದೆ.

(2) ಯಾವನೇ ಅಭ್ಯರ್ಥಿಯು ಅಥವಾ ಅವನ ಏಜೆಂಟನು ಅರ್ಜಿ ಸಲ್ಲಿಸಿದ ಮೇಲೆ ಅವನಿಗೆ 1[24ನೇ]1 ನಮೂನೆಯಲ್ಲಿನ ವಿವರ ಪಟ್ಟಿಕೆಯ ಪ್ರತಿಯನ್ನು ಅಥವಾ ಅದರ ಉದ್ಧೃತ ಭಾಗವನ್ನು ಪಡೆಯಲು ಅನುಮತಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 44 ದಿನಾಂಕ 3.2.70ರ ಮೂಲಕ ಪ್ರತಿಯೋಜಿಸಲಾಗಿದೆ.

**38. ರಿಟರ್ನಿಂಗ್ ಆಫೀಸರ್ ಮೊಹರು ಮಾಡಿದ ಲಕೋಟೆಗಳನ್ನು ತೆರೆದಿರುವುದು.–** ರಿಟರ್ನಿಂಗ್ ಆಫೀಸರ್ ಟೆಂಡರ್ ಮತಪತ್ರಗಳು ಅಥವಾ ಮತದಾರರ ಪಟ್ಟಿಯ ಗುರುತು ಮಾಡಿದ ಪ್ರತಿಗಳು ಅಥವಾ ಮತಪತ್ರಗಳ ಪಕ್ಕ ಪ್ರತಿಗಳು – ಇವುಗಳನ್ನೊಳಗೊಂಡ ಮೊಹರು ಮಾಡಿದ ಲಕೋಟೆಗಳನ್ನು ತೆರೆಯತಕ್ಕದ್ದಲ್ಲ.

**39. ಸಮಾನ ಮತಗಳು ಬಂದಾಗ ಚುನಾವಣೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ.–** ಚುನಾವಣೆಯಲ್ಲಿ ಮತದಾನವು ನಡೆದ ತರುವಾಯ ಯಾರೇ ಒಬ್ಬರು ಅಥವಾ ಹೆಚ್ಚು ಅಭ್ಯರ್ಥಿಗಳ ನಡುವೆ ಸಮಾನ ಮತಗಳು ಇರುವುದು ಮತ್ತು ಒಂದು ಮತವನ್ನು ಸೇರಿಸುವುದರಿಂದ ಆ ಅಭ್ಯರ್ಥಿಗಳಲ್ಲಿ ಯಾರಾದರೊಬ್ಬರು ಚುನಾಯಿತರೆಂದು ಘೋಷಿಸಲ್ಪಡಲು ಹಕ್ಕುಳ್ಳವರಾಗುವರೆಂದು ಕಂಡುಬಂದರೆ ರಿಟರ್ನಿಂಗ್ ಆಫೀಸರ್ ಅಭ್ಯರ್ಥಿಗಳಿಗೆ ತಿಳಿಸಿದ ತರುವಾಯ ನಿರ್ಧರಿಸ ಬಹುದಾದಂಥ ರೀತಿಯಲ್ಲಿ, ಚೀಟಿ ಎತ್ತುವ ಮೂಲಕ ಆ ಅಭ್ಯರ್ಥಿಗಳ ಪೈಕಿ ಯಾರು ಆಯ್ಕೆಯಾಗಬೇಕೆಂಬುದನ್ನು ಆ ಕೂಡಲೆ ತೀರ್ಮಾನಿಸತಕ್ಕದ್ದು ಮತ್ತು ಯಾವ ಅಭ್ಯರ್ಥಿಯ ಪರವಾಗಿ ಚೀಟಿ ಏಳುವುದೋ ಅವನು ಒಂದು ಹೆಚ್ಚಿನ ಮತವನ್ನು ಪಡೆದಿದ್ದರೆ ಹೇಗೋ ಹಾಗೆ ಆ ಸಂಬಂಧದಲ್ಲಿ ಕ್ರಮ ಕೈಕೊಳ್ಳತಕ್ಕದ್ದು.

**40. ಚುನಾವಣೆಯ ಕಾಗದಪತ್ರಗಳನ್ನು ಡೆಪ್ಯುಟಿ ಕಮೀಷನರನಿಗೆ ಕಳುಹಿಸಿಕೊಡುವುದು.–** (1) ರಿಟರ್ನಿಂಗ್ ಆಫೀಸರ್ ಈ ಕೆಳಕಂಡವುಗಳು ಸೇರಿದಂತೆ ಚುನಾವಣೆಯ ಎಲ್ಲಾ ಕಾಗದ ಪತ್ರಗಳನ್ನು ಪ್ರತ್ಯೇಕವಾಗಿ ಮೊಹರು ಮಾಡಿದ ಲಕೋಟೆಗಳಲ್ಲಿ ಡೆಪ್ಯುಟಿ ಕಮೀಷನರನಿಗೆ ಕಳುಹಿಸತಕ್ಕದ್ದು:–

(ಎ) ಕ್ರಮಬದ್ಧವೆಂದು ಎಣಿಕೆಯಾದ ಮತಪತ್ರಗಳು;
(ಬಿ) ಕ್ರಮಬದ್ಧವಲ್ಲವೆಂದು ತಿರಸ್ಕರಿಸಿದ ಮತಪತ್ರಗಳು;
(ಸಿ) ಉಪಯೋಗಿಸಿರದ ಮತಪತ್ರಗಳು;
(ಡಿ) ಮತಪತ್ರಗಳ ಪಕ್ಕ ಪ್ರತಿಗಳು;
(ಇ) ಹಾಳಾದ ಮತಪತ್ರಗಳು;
(ಎಫ್) ಟೆಂಡರ್ ಮತಪತ್ರಗಳು;
(ಜಿ) ಹಿಂತಿರುಗಿಸಿದ ಮತಪತ್ರಗಳು;
(ಹೆಚ್) ಟೆಂಡರ್ ಮತದಾರರ ಪಟ್ಟಿ;
(ಐ) ಮತಪತ್ರಗಳ ಲೆಕ್ಕ;
(ಜೆ) ಆಕ್ಷೇಪಿತ ಮತಗಳ ಪಟ್ಟಿ; ಮತ್ತು
(ಕೆ) ಮತದಾರರ ಪಟ್ಟಿಯ ಗುರುತು ಮಾಡಿದ ಪ್ರತಿ.

(2) ಪ್ರತಿಯೊಂದು ಲಕೋಟೆಯ ಮೇಲೆ ಅದರ ಒಳಾಂಶಗಳ ಬಗ್ಗೆ ಒಂದು ಟಿಪ್ಪಣಿ ಇರತಕ್ಕದ್ದು.

**41. [1][ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳ ಮತ್ತು ಕೃಷಿ ಸಹಕಾರ ಸಂಸ್ಕರಣ ಸಂಘಗಳ][1] ಪ್ರತಿನಿಧಿಗಳ ಚುನಾವಣೆ.–**

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

[1][(1)............................][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ 88 ದಿನಾಂಕ 30.1.90 ರ ಮೂಲಕ ಬಿಟ್ಟು ಬಿಡಲಾಗಿದೆ.

[1][(1ಎ) ಮಾರುಕಟ್ಟೆ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಹಕಾರ ಮಾರುಕಟ್ಟೆ ವ್ಯವಹಾರ ಸಂಘ ಮತ್ತು ಕೃಷಿ ಸಹಕಾರ ಸಂಸ್ಕರಣಾ ಸಂಘ – ಇವುಗಳ ಆಡಳಿತ ಸಮಿತಿಯ ಸದಸ್ಯರು ತಮ್ಮ ಪರವಾಗಿ ಮಾರುಕಟ್ಟೆ ಸಮಿತಿಯಲ್ಲಿ ಸೇವೆ ಸಲ್ಲಿಸಲು, ಈ ಸಂಬಂಧದಲ್ಲಿ ಡೆಪ್ಯುಟಿಕಮಿಷನರನು ಗೊತ್ತುಪಡಿಸಿದ ದಿನಾಂಕದೊಳಗಾಗಿ ಪ್ರತಿಯೊಂದು ಸಂಘಕ್ಕೆ ಒಬ್ಬ ಪ್ರತಿನಿಧಿಯನ್ನು ಚುನಾಯಿಸತಕ್ಕದ್ದು:

125

ಪರಂತು, ಮಾರುಕಟ್ಟೆ ಪ್ರದೇಶದಲ್ಲಿ ಒಂದಕ್ಕಿಂತ ಹೆಚ್ಚು ಸಹಕಾರ ಮಾರುಕಟ್ಟೆ ಸಂಘಗಳು ಅಥವಾ ಕೃಷಿ ಸಹಕಾರ ಸಂಸ್ಕರಣಾ ಸಂಘಗಳು ಕಾರ್ಯನಿರ್ವಹಿಸುತ್ತಿದ್ದರೆ ಈ ಎರಡೂ ವರ್ಗಗಳ ಸಂಘಗಳ ಆಡಳಿತ ಸಮಿತಿಗಳ ಎಲ್ಲಾ ಸದಸ್ಯರು ಈ ಸಂಬಂಧದಲ್ಲಿ ಜಿಲ್ಲಾಧಿಕಾರಿಯು ಗೊತ್ತುಪಡಿಸಿದ ದಿನಾಂಕದೊಳಗಾಗಿ ಮಾರುಕಟ್ಟೆ ಸಮಿತಿಯಲ್ಲಿ ಸೇವೆ ಸಲ್ಲಿಸಲು ಆ ಎರಡೂ ವರ್ಗಗಳ ಸಂಘಗಳಿಂದ ಒಬ್ಬೊಬ್ಬ ಪ್ರತಿನಿಧಿಯನ್ನು ಚುನಾಯಿಸತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

[1][(2)............................][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ 88 ದಿನಾಂಕ 30.1.90 ರ ಮೂಲಕ ಬಿಟ್ಟು ಬಿಡಲಾಗಿದೆ.

[1][(3)............................][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್ಇ 88 ದಿನಾಂಕ 30.1.90 ರ ಮೂಲಕ ಬಿಟ್ಟು ಬಿಡಲಾಗಿದೆ.

**42. ಆಕಸ್ಮಿಕ ಖಾಲಿ ಸ್ಥಾನಗಳು.–** ಸಮಿತಿಯ ಸದಸ್ಯರ ಚುನಾವಣೆಗೆ ಅಥವಾ ನಾಮ ನಿರ್ದೇಶನಕ್ಕೆ ಸಂಬಂಧಿಸಿದ ಉಪಬಂಧಗಳು ಆಕಸ್ಮಿಕವಾಗಿ ಖಾಲಿಯಾದ ಸಮಿತಿಯ ಸದಸ್ಯರ ಸ್ಥಾನಗಳನ್ನು ಭರ್ತಿ ಮಾಡುವ ಉದ್ದೇಶಕ್ಕೂ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

**43. ಮತಪತ್ರಗಳನ್ನು ಅಭಿರಕ್ಷಿಸುವುದು ಮತ್ತು ನಾಶಪಡಿಸುವುದು.–** (1) (2)ನೇ ಉಪನಿಯಮದ ಉಪಬಂಧಗಳಿಗೊಳಪಟ್ಟು, ಡೆಪ್ಯುಟಿ ಕಮೀಷನರನು [1][40ನೇ ನಿಯಮದ][1] ಮೇರೆಗೆ ತಮಗೆ ಕಳುಹಿಸಿಕೊಡಲಾದ ಪ್ಯಾಕೆಟ್‌ಗಳನ್ನು ಮತ್ತು ಚುನಾವಣೆಗೆ ಸಂಬಂಧಿಸಿದ ಎಲ್ಲ ಇತರ ಕಾಗದ ಪತ್ರಗಳನ್ನು ಸುರಕ್ಷಿತ ಅಭಿರಕ್ಷೆಯಲ್ಲಿಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್ಇ 91 ದಿನಾಂಕ 27-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

(2) 27ನೇ ಪ್ರಕರಣದ ಮೇರೆಗೆ ಸಮಿತಿಯ ಚುನಾಯಿತ ಸದಸ್ಯರ ಹೆಸರುಗಳು ಪ್ರಕಟವಾದ ದಿನಾಂಕದಿಂದ ಮೂರು ತಿಂಗಳು ಮುಕ್ತಾಯವಾದ ಮೇಲೆ ಅಥವಾ ಚುನಾವಣಾ ಅರ್ಜಿ ಅಥವಾ ಅಪೀಲು ಯಾವುದಾದರೂ ಇದ್ದರೆ ಅದು ವಿಲೆಯಾದ ಒಂದು ತಿಂಗಳ ತರುವಾಯ ಇವುಗಳಲ್ಲಿ ಯಾವುದು ತರುವಾಯದ್ದೋ ಆ ಅವಧಿಯು ಮುಕ್ತಾಯವಾದ ಮೇಲೆ ಚುನಾವಣೆಗೆ ಸಂಬಂಧಿಸಿದ ಎಲ್ಲ ಕಾಗದ ಪತ್ರಗಳನ್ನು, ಡೆಪ್ಯುಟಿ ಕಮೀಷನರನು ಅಥವಾ ಈ ಸಂಬಂಧದಲ್ಲಿ ಡೆಪ್ಯುಟಿ ಕಮೀಷನರ್‌ನಿಂದ ಅಧಿಕೃತನಾದ ಯಾವನೇ ಇತರ ಅಧಿಕಾರಿಯು ಗೊತ್ತುಪಡಿಸಿದ ದಿನಾಂಕದಂದು ಅಧ್ಯಕ್ಷ ಅಥವಾ ಉಪಾಧ್ಯಕ್ಷ ಅಥವಾ ಈ ಸಂಬಂಧದಲ್ಲಿ ಸಮಿತಿಯು ನೇಮಕ ಮಾಡಿದಂಥ ಅಧಿಕಾರಿಗಳ ಸಮ್ಮುಖದಲ್ಲಿ ನಾಶಪಡಿಸತಕ್ಕದ್ದು.

## ಭಾಗ III

### ಸಮಿತಿಯ ಅಧ್ಯಕ್ಷ, ಉಪಾಧ್ಯಕ್ಷ, ಅಧಿಕಾರಿಗಳು ಮತ್ತು ನೌಕರರು ಹಾಗೂ ಅವರ ಪ್ರಕಾರ್ಯಗಳು ಮತ್ತು ಅಧಿಕಾರಗಳು

[1][**44. ಅಧ್ಯಕ್ಷ ಮುಂತಾದವರ ಚುನಾವಣೆಗೆ ನಿಯಮಿಸಲಾದ ಅಧಿಕಾರಿ.–** (1) ಯಾವ ತಾಲ್ಲೂಕಿನಲ್ಲಿ ಮಾರುಕಟ್ಟೆ ಪ್ರಾಂಗಣ ಇರುವುದೋ ಆ ತಾಲ್ಲೂಕಿನ ತಹಸೀಲ್ದಾರನು 41ನೇ ಪ್ರಕರಣದ ಉದ್ದೇಶಕ್ಕಾಗಿ ನಿಯಮಿಸಲಾದ ಅಧಿಕಾರಿಯಾಗಿರತಕ್ಕದ್ದು ಮತ್ತು ಪ್ರಿಸೈಡಿಂಗ್ ಆಫೀಸರ್ ಸಹ ಅಗಿರತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3.2.70ರ ಮೂಲಕ ಮತ್ತು ಆರ್‌ಡಿಸಿ 221 ಎಂಎಂಡಿ 76 ದಿನಾಂಕ 21-10-1976ರ ಮೂಲಕ ಪ್ರತಿಯೋಜಿಸಲಾಗಿದೆ.

[1][(2) ಮತ ನೀಡಬಯಸುವ ಪ್ರತಿಯೊಬ್ಬ ಸದಸ್ಯನಿಗೆ ನಮೂನೆ 25ರಲ್ಲಿ ಒಂದು ಮತಪತ್ರವನ್ನು ನೀಡತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್ಇ 88 ದಿನಾಂಕ 30-1-1990 ರ ಮೂಲಕ ಸೇರಿಸಲಾಗಿದೆ.

[1][**44ಎ.** (ಬಿಟ್ಟು ಬಿಡಲಾಗಿದೆ)

**44ಬಿ.** (ಬಿಟ್ಟು ಬಿಡಲಾಗಿದೆ)

**44ಸಿ.** (ಬಿಟ್ಟು ಬಿಡಲಾಗಿದೆ)

**44ಡಿ.** (ಬಿಟ್ಟು ಬಿಡಲಾಗಿದೆ)

**44ಇ.** (ಬಿಟ್ಟು ಬಿಡಲಾಗಿದೆ)

**44ಎಫ್.** (ಬಿಟ್ಟು ಬಿಡಲಾಗಿದೆ)

**44ಜಿ.** (ಬಿಟ್ಟು ಬಿಡಲಾಗಿದೆ)

**44ಹೆಚ್.** (ಬಿಟ್ಟು ಬಿಡಲಾಗಿದೆ)

**44ಐ.** (ಬಿಟ್ಟು ಬಿಡಲಾಗಿದೆ)

**44ಜೆ.** (ಬಿಟ್ಟು ಬಿಡಲಾಗಿದೆ)][1]

1. ಅಧಿಸೂಚನೆ ಸಂಖ್ಯೆ ಆರ್‌ಡಿಸಿ 221 ಎಂಎಂಡಿ 76 ದಿನಾಂಕ 21-10-76ರ ಮೂಲಕ ಬಿಟ್ಟುಬಿಡಲಾಗಿದೆ.

**45. ಚುನಾವಣೆಯ ಸಿಂಧುತ್ವ,–** (1) ಸಮಿತಿಯ ಯಾವನೇ ಸದಸ್ಯನು [1][41ನೆಯ ನಿಯಮದ ಮೇರೆಗೆ ಚುನಾವಣೆಯ ಫಲಿತಾಂಶವು ಘೋಷಣೆಯಾದ][1] ದಿನಾಂಕದಿಂದ ಏಳು ದಿನಗಳ ಒಳಗಾಗಿ ಚುನಾವಣಾ ಅರ್ಜಿಯನ್ನು ದಾಖಲು ಮಾಡುವ ಮೂಲಕ ಸಂದರ್ಭಾನುಸಾರ ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಚುನಾವಣೆಯ ಸಿಂಧುತ್ವವನ್ನು ಪ್ರಶ್ನಿಸಬಹುದು, ಮತ್ತು ಆ ಅರ್ಜಿಯನ್ನು ತಾನು ಆಧರಿಸಿರುವ ಸಂಗತಿಗಳ ಸಂಕ್ಷಿಪ್ತ ವಿವರಣೆಯನ್ನು ಒದಗಿಸಿರತಕ್ಕದ್ದು ಮತ್ತು ವೆಚ್ಚಗಳ ಬಗ್ಗೆ ಭದ್ರತೆಯೆಂದು ಎರಡುನೂರು ರೂಪಾಯಿಗಳ ಠೇವಣಿಯನ್ನು ಇಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್ಇ 88 ದಿನಾಂಕ 30-1-1990 ಮೂಲಕ ಪ್ರತಿಯೋಜಿಸಲಾಗಿದೆ.

(2) ಜಿಲ್ಲಾ ನ್ಯಾಯಾಧೀಶನು ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ ಮತ್ತು ಸದರಿ ವಿಷಯದ ಬಗ್ಗೆ ಅಹವಾಲು ಹೇಳಿಕೊಳ್ಳಲು ಪಕ್ಷಕಾರರಿಗೆ ಅವಕಾಶವನ್ನು ಕೊಟ್ಟ ತರುವಾಯ (i) ಅರ್ಜಿಯನ್ನು ವಜಾ ಮಾಡಿ, ಅಥವಾ (ii) ಚುನಾಯಿತ ಅಭ್ಯರ್ಥಿಯ ಆಯ್ಕೆಯು ರದ್ದಾಗಿರುವುದಾಗಿ ಘೋಷಿಸಿ, ಅಥವಾ (iii) ಚುನಾಯಿತ

ಅಭ್ಯರ್ಥಿಯ ಆಯ್ಕೆಯು ರದ್ದಾಗಿರುವುದೆಂದು ಮತ್ತು ಅರ್ಜಿದಾರನು ಅಥವಾ ಯಾವನೇ ಇತರ ಅಭ್ಯರ್ಥಿಯನ್ನು ಕ್ರಮಬದ್ಧವಾಗಿ ಆಯ್ಕೆಯಾಗಿರುವುದಾಗಿ ಘೋಷಿಸಿ ಆದೇಶವನ್ನು ಹೊರಡಿಸತಕ್ಕದ್ದು.

(3) ಜಿಲ್ಲಾ ನ್ಯಾಯಾಧೀಶನು 1958 ಸಿವಿಲ್ ಪ್ರಕ್ರಿಯಾ ಸಂಹಿತೆಯಲ್ಲಿ ಉಪಬಂಧಿಸಲಾದ ಕಾರ್ಯವಿಧಾನವನ್ನು ಚುನಾವಣಾ ಅರ್ಜಿಯ ವಿಚಾರಣೆ ಮತ್ತು ವಿಲೆಗೆ ಸಂಬಂಧಪಟ್ಟಂತೆ ಸಾಧ್ಯವಾದಷ್ಟು ಮಟ್ಟಿಗೆ ಅನ್ವಯವಾಗುವಂತೆ ಅನುಸರಿಸತಕ್ಕದ್ದು.

(4) ಜಿಲ್ಲಾ ನ್ಯಾಯಾಧೀಶನು, ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಚುನಾವಣೆಯನ್ನು ತಳ್ಳಿ ಹಾಕಿದರೆ, ಅವನು ಆ ಕೂಡಲೇ ಆ ಕುರಿತು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ತನ್ನ ಆದೇಶದ ಪ್ರತಿಯನ್ನು ಕಳುಹಿಸುವ ಮೂಲಕ ತಿಳಿಸತಕ್ಕದ್ದು ಮತ್ತು ಆ ಕೃಷಿ ಮಾರುಕಟ್ಟೆ ನಿರ್ದೇಶಕನು ಸಾಧ್ಯವಾದಷ್ಟು ಬೇಗನೆ ಹೊಸದಾಗಿ ಚುನಾವಣೆ ನಡೆಸಲು ಅಗತ್ಯವಾದ ಸೂಚನೆಗಳನ್ನು ನೀಡತಕ್ಕದ್ದು.

**46. ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ಅಧಿಕಾರವನ್ನು ವಹಿಸಿಕೊಳ್ಳುವುದು.–** ಸಂದರ್ಭಾನುಸಾರ ಅಧ್ಯಕ್ಷನಾಗಿ ಅಥವಾ ಉಪಾಧ್ಯಕ್ಷನಾಗಿ ಚುನಾಯಿತನಾದ ಸದಸ್ಯನು [1][41ನೇ ನಿಯಮದ ಮೇರೆಗೆ ಚುನಾವಣಾ ಫಲಿತಾಂಶವು ಘೋಷಣೆಯಾದ][1] ಕೂಡಲೇ ತನ್ನ ಕರ್ತವ್ಯವನ್ನು ವಹಿಸಿಕೊಳ್ಳತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ 88 ದಿನಾಂಕ 30-1-1990ರ ಮೂಲಕ ಪ್ರತಿಯೋಜಿಸಲಾಗಿದೆ.

[1][**46ಎ. ಮಾರುಕಟ್ಟೆ ಸಮಿತಿಯ ಅಧ್ಯಕ್ಷನಿಗೆ ಗೌರವಧನ ಸಂದಾಯ ಮಾಡುವುದು.–** ಮಾರುಕಟ್ಟೆ ಸಮಿತಿಯ ಅಧ್ಯಕ್ಷನಿಗೆ ಈ ಕೆಳಗೆ ನಿರ್ದಿಷ್ಟಪಡಿಸಿರುವ ದರಗಳಲ್ಲಿ ಗೌರವಧನವನ್ನು ಸಂದಾಯ ಮಾಡತಕ್ಕದ್ದು:

ಕಳೆದ ಮೂರು ವರ್ಷಗಳಲ್ಲಿ ಯಾವ ಮಾರುಕಟ್ಟೆ ಸಮಿತಿಯು ಮಾರುಕಟ್ಟೆ ಫೀಜು ಮತ್ತು ಲೈಸನ್ಸ್ ಫೀಜುಗಳ ರೂಪದಲ್ಲಿ ಪಡೆದ ಸರಾಸರಿ ನಿವ್ವಳ ಆದಾಯವು,–

(ಎ) ಇಪ್ಪತ್ತೈದು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಇದ್ದರೆ ತಿಂಗಳಿಗೆ 1000 ರೂ.

(ಬಿ) ಇಪ್ಪತ್ತೈದು ಲಕ್ಷ ರೂಪಾಯಿಗೆ ಮೇಲ್ಪಟ್ಟಿದ್ದು ಐವತ್ತು ಲಕ್ಷ ರೂಪಾಯಿಗಿಂತ ಕಡಿಮೆ ಇದ್ದರೆ ತಿಂಗಳಿಗೆ 1500 ರೂ.

(ಸಿ) ಐವತ್ತು ಲಕ್ಷ ರೂಪಾಯಿ ಮತ್ತು ಅದಕ್ಕೂ ಮೇಲ್ಪಟ್ಟು ಇದ್ದರೆ ತಿಂಗಳಿಗೆ 2500 ರೂ.

ಪರಂತು, 10ನೇಯ ಪ್ರಕರಣದ ಅಡಿಯಲ್ಲಿ ಹೊಸದಾಗಿ ರಚಿಸಲಾದ ಮಾರುಕಟ್ಟೆ ಸಮಿತಿಯ ಅಧ್ಯಕ್ಷನಿಗೆ ಸಂದಾಯವಾಗಬೇಕಾದ ಗೌರವಧನವು ಮೊದಲನೆಯ ವರ್ಷದಲ್ಲಿ ತಿಂಗಳಿಗೆ 1000 ರೂ. ಆಗಿರತಕ್ಕದ್ದು ಮತ್ತು ತದನಂತರ ಹಿಂದಿನ ವರ್ಷದ ಒಟ್ಟು ವಾರ್ಷಿಕ ವರಮಾನವನ್ನು ಆಧರಿಸಿ ಸದರಿ ಸಮಿತಿಯ ಅವಧಿಯು ಮುಗಿಯುವವರೆಗೆ ಗೌರವಧನವನ್ನು ಸಂದಾಯ ಮಾಡತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 324 ಎಂಎಂಡಿ 86 ದಿನಾಂಕ 7-3-88ರ ಮೂಲಕ ಸೇರಿಸಲಾಗಿದೆ ಮತ್ತು ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 15 ಎಂಆರ್‌ಇ 99 ದಿನಾಂಕ 5-2-2002ರ ಮೂಲಕ ಪ್ರತಿಯೋಜಿಸಲಾಗಿದೆ ಮತ್ತು 7-7-2002 ರಿಂದ ಜಾರಿಗೆ ಕೊಡಲಾಗಿದೆ.

**47. ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಪದವು ಆಕಸ್ಮಿಕವಾಗಿ ತೆರವಾಗುವುದು.–** ಸಮಿತಿಯ ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಚುನಾವಣೆಗೆ ಸಂಬಂಧಿಸಿದ ಉಪಬಂಧಗಳು 41ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಚುನಾವಣೆ ನಡೆಸುವ ಸಂಬಂಧದಲ್ಲಿ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

**48. ಆಕಸ್ಮಿಕವಾಗಿ ತೆರವಾದ ಸ್ಥಾನವನ್ನು ಭರ್ತಿ ಮಾಡಲು ಚುನಾಯಿತನಾದ ಅಧ್ಯಕ್ಷನ, ಉಪಾಧ್ಯಕ್ಷನ ಪದಾವಧಿ.–** ಆಕಸ್ಮಿಕವಾಗಿ ತೆರವಾದ ಸ್ಥಾನವನ್ನು ಭರ್ತಿ ಮಾಡಲು ಚುನಾಯಿತನಾದ ಮಾರುಕಟ್ಟೆ ಸಮಿತಿಯ ಪ್ರತಿಯೊಬ್ಬ ಅಧ್ಯಕ್ಷನು ಅಥವಾ ಉಪಾಧ್ಯಕ್ಷನು, [1][xxxx][1] ಯಾರ ಸ್ಥಾನವನ್ನು ಭರ್ತಿ ಮಾಡಲು ಚುನಾಯಿತನಾಗಿರುವನೋ ಆ ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ಆ ಸ್ಥಾನವು ತೆರವಾಗಿರದಿದ್ದರೆ ಅವನು ಎಷ್ಟು ಅವಧಿಯವರೆಗೆ ಪದಧಾರಣ ಮಾಡಬಹುದಾಗಿತ್ತೋ ಆ ಅವಧಿಯವರೆಗೆ ಮಾತ್ರ ಪದಧಾರಣ ಮಾಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3-2-1970ರ ಮೂಲಕ ಬಿಟ್ಟುಬಿಡಲಾಗಿದೆ.

**49. ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ವಿರುದ್ಧ ಅವಿಶ್ವಾಸ ಸೂಚನೆ.–** (1) ಸಮಿತಿಯ ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ವಿರುದ್ಧ ಮಂಡಿಸಲಾಗುವ ಅವಿಶ್ವಾಸ ಸೂಚನೆಯ ನೋಟೀಸನ್ನು, ಅದನ್ನು ಮಂಡಿಸಲು ಇಚ್ಛಿಸುವ ಸಮಿತಿಯ ಸದಸ್ಯನು ಸಹಿ ಮಾಡಿ[1][ನಮೂನೆ 27][1] ರಲ್ಲಿ ಕಾರ್ಯದರ್ಶಿಯ ಹೆಸರಿಗೆ ಬರೆದು ಅವನಿಗೆ ಕಳಿಸಿಕೊಡತಕ್ಕದ್ದು ಮತ್ತು ಸಮಿತಿಯ ಸದಸ್ಯರ ಒಟ್ಟು ಸಂಖ್ಯೆಯ ಮೂರನೆಯ ಒಂದು ಭಾಗದಷ್ಟು ಸದಸ್ಯರು ಆ ನೋಟೀಸನ್ನು ಸಮರ್ಥಿಸಿ ಅದಕ್ಕೆ ಸಹಿ ಹಾಕಿರತಕ್ಕದ್ದು. ಅವಿಶ್ವಾಸ ಸೂಚನೆಯನ್ನು ಅಧ್ಯಕ್ಷ ಮತ್ತು ಉಪಾಧ್ಯಕ್ಷ – ಇವರಿಬ್ಬರ ವಿರುದ್ಧ ಮಂಡಿಸುವ ಸಂದರ್ಭದಲ್ಲಿ ಅಧ್ಯಕ್ಷನ ಸಂಬಂಧದಲ್ಲಿ ಒಂದು ಮತ್ತು ಉಪಾಧ್ಯಕ್ಷನ ಸಂಬಂಧದಲ್ಲಿ ಇನ್ನೊಂದು ಹೀಗೆ ಎರಡು ಪ್ರತ್ಯೇಕ ನೋಟೀಸುಗಳನ್ನು ಮೇಲೆ ಹೇಳಿದ ರೀತಿಯಲ್ಲಿ ನೀಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್. 44 ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(2) (1)ನೇ ಉಪನಿಯಮದ ಮೇರೆಗೆ [1][ನೋಟೀಸ][1]ನ್ನು ಸ್ವೀಕರಿಸಿದ ಮೇಲೆ ಕಾರ್ಯದರ್ಶಿಯು ಆ ಕುರಿತು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ತಿಳಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿ.ಎಸ್.ಆರ್. 44 ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(3) ಅವಿಶ್ವಾಸ ಸೂಚನೆಯನ್ನು ಪರಿಶೀಲನೆಗೆ ತೆಗೆದುಕೊಳ್ಳಬೇಕಾಗಿರುವ ಸಮಿತಿಯ ಸಭೆಯಲ್ಲಿ ಹಾಗೆ ಸೂಚನೆಯು ಪರಿಶೀಲನೆಯಲ್ಲಿರುವಾಗ,-

(i) ಅವಿಶ್ವಾಸ ಸೂಚನೆಯನ್ನು ಅಧ್ಯಕ್ಷನ ವಿರುದ್ಧ ಮಂಡಿಸಲಾಗಿದ್ದರೆ, ಉಪಾಧ್ಯಕ್ಷನು;

(ii) ಅವಿಶ್ವಾಸ ಸೂಚನೆಯನ್ನು ಉಪಾಧ್ಯಕ್ಷನ ವಿರುದ್ಧ ಮಂಡಿಸಲಾಗಿದ್ದರೆ ಅಧ್ಯಕ್ಷನು; ಮತ್ತು

[1][(iii) ಅಧ್ಯಕ್ಷ ಮತ್ತು ಉಪಾಧ್ಯಕ್ಷ ಇವರಿಬ್ಬರ ವಿರುದ್ಧ ಅವಿಶ್ವಾಸ ಸೂಚನೆಯನ್ನು ಮಂಡಿಸಿದಾಗ ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಅವನಿಂದ ಅಧಿಕೃತನಾದ ಅಧಿಕಾರಿಯು ಅಧ್ಯಕ್ಷತೆ ವಹಿಸತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

(4) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, ಈ ನಿಯಮದ ಮೇರೆಗೆ ಸೂಚನೆಯನ್ನು ಪರಿಶೀಲಿಸುವ ಉದ್ದೇಶಕ್ಕಾಗಿ ಸಮಾವೇಶಗೊಳಿಸಲಾದ ಸಭೆಯನ್ನು ಯಾವುದೇ ಕಾರಣಕ್ಕಾಗಿ ಮುಂದೂಡತಕ್ಕದ್ದಲ್ಲ.

(5) ಕಾರ್ಯದರ್ಶಿಯು ಯಾವುದೇ ಅವಿಶ್ವಾಸ ಸೂಚನೆಯ ಮೇಲೆ ಸಮಿತಿಯು ಕೈಗೊಂಡ ತೀರ್ಮಾನವನ್ನು ಮತ್ತು ಸಭೆಯಲ್ಲಿ ಹಾಜರಿದ್ದ ಸಮಿತಿಯ ಎಲ್ಲಾ ಸದಸ್ಯರ ಹೆಸರುಗಳನ್ನು ಹಾಗೂ ಅಂಥ ಸೂಚನೆಯ ಪರವಾಗಿ ಅಥವಾ ವಿರುದ್ಧವಾಗಿ ಚಲಾಯಿಸಿದ ಮತಗಳ ಸಂಖ್ಯೆಯನ್ನು ಆ ಕೂಡಲೇ ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ತಿಳಿಸತಕ್ಕದ್ದು. ಅಲ್ಲದೆ ಕಾರ್ಯದರ್ಶಿಯು ಸಭೆಯಲ್ಲಿ ಹಾಜರಿರುವ ಪ್ರತಿಯೊಬ್ಬ ಸದಸ್ಯನಿಗೆ ಆ ಸೂಚನೆಯ ಒಂದು ಪ್ರತಿಯನ್ನು ಕಳಿಸತಕ್ಕದ್ದು ಮತ್ತು ಆ ಸೂಚನೆಯ ಮೇಲಿನ ಮತದಾನದ ಫಲಿತಾಂಶವನ್ನು ತಿಳಿಸತಕ್ಕದ್ದು.

**50. ಕಾರ್ಯದರ್ಶಿಯ ಕರ್ತವ್ಯಗಳು ಮತ್ತು ಅಧಿಕಾರಗಳು.-** (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಕಾರ್ಯದರ್ಶಿಯು ಸಮಿತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಯಾಗಿರತಕ್ಕದ್ದು ಮತ್ತು ಅವನು ಸಮಿತಿಯು ಕಾಲಕಾಲಕ್ಕೆ ಅಂಗೀಕರಿಸುವ ನಿರ್ಣಯಗಳನ್ನು ಮತ್ತು ನೀಡುವ ನಿರ್ದೇಶನಗಳನ್ನು ಕಾರ್ಯಗತಗೊಳಿಸತಕ್ಕದ್ದು.

(2) ಕಾರ್ಯದರ್ಶಿಯು ಸಮಿತಿಯ ಪರವಾಗಿ ಅಥವಾ ಅದರ ಹೆಸರಿನಲ್ಲಿ ಸ್ವೀಕರಿಸಿದ ಅಥವಾ ಖರ್ಚು ಮಾಡಿದ ಎಲ್ಲ ಹಣಗಳ ಬಗ್ಗೆ ಸರಿಯಾದ ಲೆಕ್ಕವನ್ನಿಡತಕ್ಕದ್ದು.

[1][(2ಎ) ಮಾರುಕಟ್ಟೆ ಸಮಿತಿಯ ನಿರ್ಣಯದ ಮೂಲಕ ಕಾರ್ಯದರ್ಶಿಗೆ ಸಾಮಾನ್ಯವಾಗಿ ಅಥವಾ ವಿಶೇಷವಾಗಿ ಅಧಿಕಾರ ನೀಡಿರುವ ವಿಷಯಗಳ ಸಂಬಂಧದಲ್ಲಿ ಕರಾರಿನ ಅಥವಾ ಒಪ್ಪಂದದ ಮೊತ್ತವು ಅಥವಾ ಮೌಲ್ಯವು ಒಂದು ಲಕ್ಷ ರೂಪಾಯಿಗಳನ್ನು ಮೀರದಿರುವಲ್ಲಿ ಕಾರ್ಯದರ್ಶಿಯು ಮಾರುಕಟ್ಟೆ ಸಮಿತಿಯ ಪರವಾಗಿ ಕರಾರನ್ನು ಅಥವಾ ಒಪ್ಪಂದವನ್ನು ಮಾಡಿಕೊಳ್ಳಬಹುದು.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಕ 27-1-1994ರ ಮೂಲಕ ಸೇರಿಸಲಾಗಿದೆ.

(3) ಕಾರ್ಯದರ್ಶಿಯು ಸಮಿತಿಯ ಎಲ್ಲ ಪತ್ರ ವ್ಯವಹಾರವನ್ನು ನಿರ್ವಹಿಸತಕ್ಕದ್ದು ಮತ್ತು ಕಚೇರಿಯ ಕಾರ್ಯಗಳನ್ನು ನೆರವೇರಿಸತಕ್ಕದ್ದು.

(4) ಕಾರ್ಯದರ್ಶಿಯು ಉಪವಿಧಿಗಳ ಮೂಲಕ ನಿಯಮಿಸಲಾದ ನಮೂನೆಯಲ್ಲಿ, ಮಧ್ಯಸ್ಥಗಾರರ ಮತ್ತು ವಿವಾದ ಪರಿಶೀಲನಾ ಸಮಿತಿಯ ಮುಂದೆ ತೀರ್ಮಾನಕ್ಕಾಗಿ ಬರುವ ಎಲ್ಲ ವಿವಾದಗಳ ದಾಖಲೆಗಳನ್ನು ಇಟ್ಟಿರತಕ್ಕದ್ದು.

(5) ಕಾರ್ಯದರ್ಶಿಯು, ಮಾರುಕಟ್ಟೆ ಪ್ರದೇಶದಲ್ಲಿನ ಕೃಷಿ ಉತ್ಪನ್ನದ ಮಾರುಕಟ್ಟೆ ವ್ಯವಹಾರಕ್ಕೆ ಸಂಬಂಧಿಸಿದಂತೆ ಸರಿಯಾದ ತೂಕ, ಬಟವಾಡೆ, ಸಂದಾಯ ಮತ್ತು ಎಲ್ಲಾ ಇತರ ವಿಷಯಗಳ ಬಗ್ಗೆ ಜವಾಬ್ದಾರನಾಗಿರತಕ್ಕದ್ದು.

(6) ಕಾರ್ಯದರ್ಶಿಯು ಸಮಿತಿಯ ಎಲ್ಲ ಅಧಿಕಾರಿಗಳಿಗೆ ಮತ್ತು ನೌಕರರಿಗೆ ಸಾಂದರ್ಭಿಕ ರಜೆಯನ್ನು ಮತ್ತು ಒಂದು ಸಲಕ್ಕೆ ಮೂವತ್ತು ದಿನಗಳಿಗೆ ಮೀರದ ಅವಧಿಯವರೆಗೆ ಗಳಿಕೆ ರಜೆಯನ್ನು ಮಂಜೂರು ಮಾಡುವ ಅಧಿಕಾರ ಹೊಂದಿರತಕ್ಕದ್ದು. ಮೂವತ್ತು ದಿನಗಳಿಗೆ ಮೀರಿದ ಗಳಿಕೆ ರಜೆಯನ್ನು ಮತ್ತು ಇತರ ಎಲ್ಲ ಬಗೆಯ ರಜೆಯನ್ನು ಕೃಷಿ ಮಾರುಕಟ್ಟೆ ಸಹಾಯಕ ನಿರ್ದೇಶಕನು ಅಥವಾ ಈ ಸಂಬಂಧದಲ್ಲಿ ಕೃಷಿ ಮಾರುಕಟ್ಟೆ ನಿರ್ದೇಶಕನಿಂದ ಅಧಿಕೃತರಾಗಬಹುದಾದಂಥ ಇತರ ಅಧಿಕಾರಿಯು ಮಂಜೂರು ಮಾಡತಕ್ಕದ್ದು.

(7) ಕಾರ್ಯದರ್ಶಿಯು ಅಧಿನಿಯಮದ, ನಿಯಮಗಳ, ಉಪವಿಧಿಗಳ ಮತ್ತು ಸಮಿತಿಯ ಹಿಂದಿನ ತೀರ್ಮಾನಗಳ ಅಥವಾ ನಿರ್ದೇಶನಗಳ ಉಪಬಂಧಗಳ ಹಿನ್ನೆಲೆಯಲ್ಲಿ ಸಮಿತಿಗೆ ಮತ್ತು ಅದರ ಅಧ್ಯಕ್ಷನಿಗೆ ಸಲಹೆ ನೀಡತಕ್ಕದ್ದು.

(8) ಕಾರ್ಯದರ್ಶಿಯು, ಮಾರುಕಟ್ಟೆ ಪ್ರಾಂಗಣದಲ್ಲಿ ನಡೆಯುವ ಎಲ್ಲ ನಿರ್ಮಾಣ ಕಾಮಗಾರಿಗಳ ತಾಂತ್ರಿಕ ಮೇಲ್ವಿಚಾರಣೆ ನೋಡಿಕೊಳ್ಳುವ ಇಂಜಿನಿಯರಿಂಗ್ ಸಿಬ್ಬಂದಿ ಯಾರಾದರೂ ಇದ್ದರೆ ಅವರು ನಡೆಸುವ ಆ ಮೇಲ್ವಿಚಾರಣೆಗೆ ಹೆಚ್ಚಿಗೆಯಾಗಿ ತಾನೂ ಸಹ ಮೇಲ್ವಿಚಾರಣೆ ನಡೆಸತಕ್ಕದ್ದು.

(9) ಸಮಿತಿಯ ಯಾವುವೇ ತೀರ್ಮಾನಗಳು ಅಥವಾ ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಯಾವುವೇ ನಿರ್ದೇಶನಗಳು ಅಧಿನಿಯಮಕ್ಕೆ, ನಿಯಮಗಳಿಗೆ ಮತ್ತು ಉಪವಿಧಿಗಳಿಗೆ ವಿರುದ್ಧವಾಗಿದೆಯೆಂದು ಕಂಡು ಬಂದರೆ, ಕಾರ್ಯದರ್ಶಿಯು, ಅವುಗಳನ್ನು ಜಾರಿಗೆ ತರುವುದಕ್ಕೆ ಮುಂಚೆ, ಆ ವಿಷಯವನ್ನು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅಥವಾ ಅವನು ಅಧಿಕೃತಗೊಳಿಸಿದ ಯಾವನೇ ಇತರ ಅಧಿಕಾರಿಗೆ ಆದೇಶಕ್ಕಾಗಿ ಒಪ್ಪಿಸತಕ್ಕದ್ದು.

ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಅಂಥ ಇತರ ಅಧಿಕಾರಿಯು, ಸಮಿತಿಗೆ ಅಥವಾ ಅಧ್ಯಕ್ಷನಿಗೆ ಅಥವಾ ಉಪಾಧ್ಯಕ್ಷನಿಗೆ ಅಹವಾಲು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ತರುವಾಯ ಆ ಕುರಿತು ತನ್ನ ತೀರ್ಮಾನವನ್ನು ನೀಡತಕ್ಕದ್ದು ಮತ್ತು ಅಂಥ ತೀರ್ಮಾನವು ಅಂತಿಮವಾಗಿರತಕ್ಕದ್ದು.

[1][(10) ಕಾರ್ಯದರ್ಶಿಯು, ವಿವಾದ ಪರಿಶೀಲನಾ ಸಮಿತಿಯ ಪದನಿಮಿತ್ತ ಕಾರ್ಯದರ್ಶಿ ಯಾಗಿರತಕ್ಕದ್ದು.

(11) ಕಾರ್ಯದರ್ಶಿಯು, ಮಾರುಕಟ್ಟೆ ಕಾರ್ಯನಿರ್ವಾಹಕನಿಂದ ಉಂಟಾದ ಅಧಿನಿಯಮದ, ನಿಯಮಗಳ ಅಥವಾ ಉಪವಿಧಿಗಳ ಉಪಬಂಧಗಳ ಉಲ್ಲಂಘನೆಗೆ ಸಂಬಂಧಪಟ್ಟ ವಿವರಗಳೇನಾದರೂ ಇದ್ದರೆ ಆ ವಿವರಗಳನ್ನು ಮತ್ತು ಅಂಥ ಉಲ್ಲಂಘನೆಯ ಬಗ್ಗೆ ಕೈಗೊಂಡ ಕ್ರಮವೇನಾದರೂ ಇದ್ದರೆ ಆ ಕ್ರಮವನ್ನು ಅಂಥ ಉಲ್ಲಂಘನೆಯ ತರುವಾಯ ಸಾಧ್ಯವಾದಷ್ಟು ಬೇಗನೆ ಸಮಿತಿಗೆ ತಿಳಿಸತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44 ದಿನಾಂಕ 3-2-70ರ ಮೂಲಕ ಸೇರಿಸಲಾಗಿದೆ

## ಭಾಗ IV

## ವ್ಯವಹಾರ ನಡೆಸುವುದು

**51. ಸಮಿತಿಯ ಸಭೆ.**– (1) 49ನೇ ನಿಯಮದಲ್ಲಿ ಉಲ್ಲೇಖಿತವಾದ ಸಭೆಗಳನ್ನು ಹೊರತುಪಡಿಸಿ ಸಮಿತಿಯ ಪ್ರತಿಯೊಂದು ಸಭೆಯು 48ನೇ ಪ್ರಕರಣದಲ್ಲಿ ಗೊತ್ತುಪಡಿಸಲಾದಂತೆ ಸಮಾವೇಶಗೊಳ್ಳತಕ್ಕದ್ದು.

(2) ಪ್ರತಿಯೊಂದು ಸಭೆಯ ನೋಟೀಸಿನ ಒಂದು ಪ್ರತಿಯನ್ನು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅಥವಾ ಈ ಸಂಬಂಧದಲ್ಲಿ ಅವನು ಅಧಿಕೃತಗೊಳಿಸಿದ ಯಾವನೇ ಇತರ ಅಧಿಕಾರಿಗೆ ಕಳುಹಿಸತಕ್ಕದ್ದು.

(3) ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಅವನು ಅಧಿಕೃತಗೊಳಿಸಿದ ಯಾವನೇ ಅಧಿಕಾರಿಯು ಸಮಿತಿಯ ಸಭೆಗೆ ಹಾಜರಾಗಲು ಹಕ್ಕುಳ್ಳವನಾಗಿರತಕ್ಕದ್ದು ಆದರೆ ಮತನೀಡುವ ಹಕ್ಕು ಹೊಂದಿರತಕ್ಕದ್ದಲ್ಲ.

**52. ಸಭೆಯ ವ್ಯವಹರಣೆಗಳ ಪ್ರತಿ.**– ಮಾರುಕಟ್ಟೆ ಸಮಿತಿಯ ಪ್ರತಿಯೊಂದು ಸಭೆಯ ವ್ಯವಹರಣೆಗಳ ಪ್ರತಿಯನ್ನು ಆ ಸಭೆ ನಡೆದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅಥವಾ ಈ ಸಂಬಂಧದಲ್ಲಿ ಅವನಿಂದ ಅಧಿಕೃತನಾದ ಅಧಿಕಾರಿಗೆ ಮತ್ತು ಸಮಿತಿಯ ಸದಸ್ಯರಿಗೆ ಕಳುಹಿಸತಕ್ಕದ್ದು.

**53. ಮಾರುಕಟ್ಟೆ ಸಮಿತಿಯ ದಸ್ತಾವೇಜುಗಳ ಪ್ರತಿಗಳನ್ನು ಅಥವಾ ಪುಸ್ತಕಗಳಲ್ಲಿನ ನಮೂದುಗಳ ಪ್ರತಿಗಳನ್ನು ಪ್ರಮಾಣೀಕರಿಸುವುದು.**– ರಹಸ್ಯ ಸ್ವರೂಪದವುಗಳಲ್ಲದ ಮತ್ತು ಸಮಿತಿಯ ಮುದ್ರೆ ಹಾಕಿ ಕಾರ್ಯದರ್ಶಿಯು ಪ್ರಮಾಣೀಕರಿಸಿದ ಸಮಿತಿಯ ದಸ್ತಾವೇಜುಗಳ ಪ್ರತಿಗಳನ್ನು ಅಥವಾ ಪುಸ್ತಕಗಳಲ್ಲಿನ ನಮೂದುಗಳ ಪ್ರತಿಗಳನ್ನು [1][ಕೆಳಗೆ ನಿರ್ದಿಷ್ಟಪಡಿಸಿರುವಂಥ ಫೀಜುಗಳನ್ನು ಸಂದಾಯ ಮಾಡಿದ ಮೇಲೆ ನೀಡತಕ್ಕದ್ದು:-

| | | |
|---|---|---|
| (ಎ) | ನೂರು ಪದಗಳ ಅಥವಾ ಅದರ ಭಾಗದ ನಕಲು ತೆಗೆಯಲು ಮತ್ತು ತಾಳೆ ನೋಡಲು | 30 ಪೈಸೆ |
| (ಬಿ) | ಕೋಷ್ಟಕ ರೂಪದಲ್ಲಿರುವ ದಸ್ತಾವೇಜುಗಳ ಪ್ರತಿಯೊಂದು ಪುಟದ ಅಥವಾ ಅದರ ಭಾಗದ ನಕಲು ತೆಗೆಯಲು ಮತ್ತು ತಾಳೆ ನೋಡಲು | 55 ಪೈಸೆ |
| (ಸಿ) | ಮುದ್ರಿತ ರೂಪದಲ್ಲಿರುವ ನಕಲುಗಳನ್ನು ಕೊಡಲು ಪ್ರತಿಯೊಂದು ಪುಟಕ್ಕೆ ಅಥವಾ ಅದರ ಭಾಗಕ್ಕೆ | 10 ಪೈಸೆ][1] |

1. ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 44 ದಿನಾಂಕ 3.2.70 ರ ಮೂಲಕ ಪ್ರತಿಯೋಜಿಸಲಾಗಿದೆ.

[1][**54. ಅಧಿನಿಯಮ, ನಿಯಮಗಳು ಮುಂತಾದವುಗಳ ತಹಲ್ವರೆಗಿನ ಪ್ರತಿಗಳನ್ನು ಇಟ್ಟುಕೊಂಡಿರುವುದು.**– (1) ಪ್ರತಿಯೊಂದು ಸಮಿತಿಯು, ಅಧಿನಿಯಮದ, ನಿಯಮಗಳ, ಉಪವಿಧಿಗಳ ಮತ್ತು ಅವುಗಳ ಅಡಿಯಲ್ಲಿ ಹೊರಡಿಸಲಾದ ಅಧಿಸೂಚನೆಗಳ ತಹಲ್ವರೆಗಿನ ಪ್ರತಿಗಳನ್ನು ಸಮಿತಿಯ ಕಚೇರಿಯಲ್ಲಿ ಇಟ್ಟುಕೊಂಡಿರತಕ್ಕದ್ದು ಮತ್ತು ಅವುಗಳು ಸಾರ್ವಜನಿಕರ ಪರಿಶೀಲನೆಗೆ ದೊರಕುವಂತೆ ವ್ಯವಸ್ಥೆ ಮಾಡತಕ್ಕದ್ದು.

(2) ಉಪವಿಧಿಗಳ ಮುದ್ರಿತ ಪ್ರತಿಗಳನ್ನು ಸಮಿತಿಯು ನಿಗದಿಪಡಿಸಬಹುದಾದಂಥ ಸೂಕ್ತ ಬೆಲೆಯಲ್ಲಿ ಮಾರಾಟ ಮಾಡತಕ್ಕದ್ದು, ಮತ್ತು ಸಮಿತಿಯು ಉಪವಿಧಿಗಳ ತಿದ್ದುಪಡಿಗಳ ಪ್ರಮಾಣಿತ ಪ್ರತಿಗಳನ್ನು ಪ್ರತಿ ನೂರು ಪದಕ್ಕೆ ಅಥವಾ ಅದರ ಭಾಗಕ್ಕೆ ಮೂವತ್ತು ಪೈಸೆ ಫೀಜು ಸಂದಾಯ ಮಾಡಿದ ಮೇಲೆ ನೀಡತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 44, ದಿನಾಂಕ 3-2-1970 ಮೂಲಕ ಪ್ರತಿಯೋಜಿಸಲಾಗಿದೆ.

**55. ವಿವಾದಗಳನ್ನು ಇತ್ಯರ್ಥಪಡಿಸುವುದು.-** [1][(1) (ಎ) 84ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ನೇಮಕಗೊಂಡ ಮಧ್ಯಸ್ಥಗಾರರ ಪಟ್ಟಿಯಲ್ಲಿ 40ಕ್ಕಿಂತ ಹೆಚ್ಚು ಜನ ಸದಸ್ಯರು ಇರತಕ್ಕದ್ದಲ್ಲ, ಮತ್ತು ಸಾಧ್ಯವಾದಷ್ಟು ಮಟ್ಟಿಗೆ, ಅವರಲ್ಲಿ ಶೇಕಡಾ ಐವತ್ತರಷ್ಟು ಸದಸ್ಯರು ಕೃಷಿಕರಾಗಿರತಕ್ಕದ್ದು, ಶೇಕಡಾ ಇಪ್ಪತ್ತೈದರಷ್ಟು ಸದಸ್ಯರು ವ್ಯಾಪಾರಸ್ಥರಾಗಿರತಕ್ಕದ್ದು ಮತ್ತು ಶೇಕಡಾ ಇಪ್ಪತ್ತೈದು ಸದಸ್ಯರು ಕಮಿಷನ್ ಏಜೆಂಟರಾಗಿರತಕ್ಕದ್ದು. ಈ ಸದಸ್ಯರ ಪದಾವಧಿಯು ಒಂದು ವರ್ಷವಾಗಿರತಕ್ಕದ್ದು, ಆದರೆ ಮಧ್ಯಸ್ಥಗಾರರ ಪಟ್ಟಿಯಲ್ಲಿರುವ ಸದಸ್ಯರು ಮಧ್ಯಸ್ಥಗಾರರ ಹೊಸ ಪಟ್ಟಿಯನ್ನು ರಚಿಸುವವರೆಗೆ ಅಧಿಕಾರದಲ್ಲಿ ಮುಂದುವರೆಯತಕ್ಕದ್ದು:

ಪರಂತು, ಸಮಿತಿಯು ಯಾವುದೇ ಕಾಲದಲ್ಲಿ, ಕಾರಣಗಳನ್ನು ದಾಖಲು ಮಾಡಿ ಪಟ್ಟಿಯಿಂದ ಯಾವನೇ ವ್ಯಕ್ತಿಯನ್ನು ತೆಗೆದುಹಾಕಬಹುದು ಮತ್ತು ಹಾಗೆ ತೆಗೆದುಹಾಕಲಾದ ವ್ಯಕ್ತಿಯ ಮುಕ್ತಾಯವಾಗದ ಪದಾವಧಿಯವರೆಗೆ ಅವನ ಸ್ಥಾನದಲ್ಲಿ ಮತ್ತೊಬ್ಬ ವ್ಯಕ್ತಿಯನ್ನು ನೇಮಕ ಮಾಡಬಹುದು.

(ಬಿ) ಸಮಿತಿಯು ಕೆಳಕಂಡ ಸದಸ್ಯರಿಂದ ಕೂಡಿದ ವಿವಾದ ಪರಿಶೀಲನಾ ಸಮಿತಿಯನ್ನು ನೇಮಕ ಮಾಡತಕ್ಕದ್ದು:-

(i) ಸಮಿತಿಯ ಉಪಾಧ್ಯಕ್ಷ;

(ii) ಅಧ್ಯಕ್ಷನ ಹೊರತಾಗಿ ಕೃಷಿಕರ ಮೂವರು ಪ್ರತಿನಿಧಿಗಳು;

(iii) ವ್ಯಾಪಾರಿಗಳ ಒಬ್ಬ ಪ್ರತಿನಿಧಿ;

(iv) ಕಮಿಷನ್ ಏಜೆಂಟರ ಒಬ್ಬ ಪ್ರತಿನಿಧಿ;

(v) ಸಹಕಾರ ಸಂಘಗಳ ಒಬ್ಬ ಪ್ರತಿನಿಧಿ;

(2) ಸಮಿತಿಯ ಉಪಾಧ್ಯಕ್ಷನು ವಿವಾದ ಪರಿಶೀಲನಾ ಸಮಿತಿಯ ಪದನಿಮಿತ್ತ ಅಧ್ಯಕ್ಷನಾಗಿರತಕ್ಕದ್ದು. ಉಪಾಧ್ಯಕ್ಷನ ಗೈರುಹಾಜರಿಯಲ್ಲಿ, [1][ವಿವಾದ ಪರಿಶೀಲನಾ ಸಮಿತಿಯು ತನ್ನ ಸದಸ್ಯರ ಪೈಕಿ ಆಯ್ಕೆ ಮಾಡಿದ ಒಬ್ಬ ವ್ಯಕ್ತಿಯು][1] ಸಭೆಯ ಅಧ್ಯಕ್ಷತೆಯನ್ನುವಹಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44, ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

[1][(3) (i) 84ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ವಿವಾದವು ಉದ್ಭವಿಸಿದಾಗ, ಕಾರ್ಯದರ್ಶಿಯ ಮಧ್ಯಸ್ಥಿಕೆ ವಹಿಸಿ ಆ ಪಕ್ಷಕಾರರು ಪರಸ್ಪರ ಒಪ್ಪಂದದ ಮೂಲಕ ವಿವಾದವನ್ನು ಇತ್ಯರ್ಥಪಡಿಸಿಕೊಳ್ಳಲು ಸಾಧ್ಯವೇ ಹೇಗೆ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು ಮತ್ತು ಅವರು ಹಾಗೆ ಇತ್ಯರ್ಥಕ್ಕೆ ಬಂದರೆ ಆ ವಿಷಯವನ್ನು ದಾಖಲು ಮಾಡತಕ್ಕದ್ದು ಮತ್ತು ಅದಕ್ಕೆ ಪಕ್ಷಕಾರರು ಸಹಿ ಹಾಕತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44, ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(ii) ಪಕ್ಷಕಾರರು ಪರಸ್ಪರ ಒಪ್ಪಂದಕ್ಕೆ ಬಾರದಿದ್ದರೆ, ದೂರು ನೀಡುವ ಪಕ್ಷಕಾರನು ಕಾರ್ಯದರ್ಶಿಯು ಈ ಸಂಬಂಧದಲ್ಲಿ ನೋಟೀಸನ್ನು ಜಾರಿ ಮಾಡಿದ ದಿನಾಂಕದ ತರುವಾಯ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಯೊಳಗೆ ಅಂಥ ಫೀಜನ್ನು ಸಮಿತಿಗೆ ಜಮೆ ಮಾಡತಕ್ಕದ್ದು. ಆ ಪಕ್ಷಕಾರನು ನಿರ್ದಿಷ್ಟಪಡಿಸಿದ ಅವಧಿಯೊಳಗೆ ಫೀಜನ್ನು ಜಮೆಮಾಡಲು ತಪ್ಪಿದರೆ, ಅವನ ಕ್ಲೇಮನ್ನು ನಿರಾಕರಿಸಿರುವುದಾಗಿ ಭಾವಿಸತಕ್ಕದ್ದು. ಮತ್ತು ಫೀಜು ಸಂದಾಯವಾದ ಕೂಡಲೇ, ಕಾರ್ಯದರ್ಶಿಯು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಯೊಳಗೆ ಮಧ್ಯಸ್ಥಗಾರರ ಪಟ್ಟಿಯಿಂದ ಮಧ್ಯಸ್ಥಗಾರನಾಗಿ ಕಾರ್ಯನಿರ್ವಹಿಸಲು ಇಚ್ಛಿಸುವ ಒಬ್ಬೊಬ್ಬ ಮಧ್ಯಸ್ಥಗಾರನನ್ನು ಆಯ್ಕೆ ಮಾಡಿಕೊಳ್ಳುವಂತೆ ನೋಟೀಸಿನ ಮೂಲಕ ವಿವಾದಕ್ಕೆ ಸಂಬಂಧಪಟ್ಟ ಪಕ್ಷಕಾರರನ್ನು ಅಗತ್ಯಪಡಿಸತಕ್ಕದ್ದು.

(iii) ಆಯ್ಕೆಯಾದ ಮಧ್ಯಸ್ಥಗಾರರಲ್ಲಿ ಯಾವನೇ ಒಬ್ಬನು ಕಾರ್ಯನಿರ್ವಹಿಸಲು ನಿರ್ಲಕ್ಷಿಸಿದರೆ ಅಥವಾ ನಿರಾಕರಿಸಿದರೆ, ಅಥವಾ ಕಾರ್ಯನಿರ್ವಹಿಸಲು ಅಸಮರ್ಥನಾದರೆ ಅಥವಾ ಮೃತನಾದರೆ, ಕಾರ್ಯದರ್ಶಿಯು ಮುಂಚಿನ ಮಧ್ಯಸ್ಥಗಾರನನ್ನು ಆಯ್ಕೆ ಮಾಡಿದ ಪಕ್ಷಕಾರನನ್ನು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಯೊಳಗೆ ಮಧ್ಯಸ್ಥಗಾರನಾಗಿ ಕಾರ್ಯನಿರ್ವಹಿಸಲು ಇಚ್ಛಿಸುವಂಥ ಮತ್ತು ಸಿದ್ಧನಿರುವ ಹೊಸ ಮಧ್ಯಸ್ಥಗಾರನನ್ನು ಆಯ್ಕೆ ಮಾಡುವಂತೆ ಅಗತ್ಯಪಡಿಸತಕ್ಕದ್ದು.

(iv) (vii) ನೇ ಖಂಡದಲ್ಲಿ ಉಪಬಂಧಿಸಿರುವುದನ್ನುಳಿದು, ವಿವಾದದ ಒಬ್ಬ ಪಕ್ಷಕಾರನು, ಉಪವಿಧಿಗಳ ಉದ್ದೇಶಕ್ಕಾಗಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಮೇಲೆ ಹೇಳಿದಂತೆ ಪ್ರಾರಂಭದ ಮಧ್ಯಸ್ಥಗಾರನನ್ನು ಅಥವಾ ಬದಲಿ ಮಧ್ಯಸ್ಥಗಾರನನ್ನು ಆಯ್ಕೆ ಮಾಡಲು ತಪ್ಪಿದರೆ,-

(ಎ) ಅಂಥ ಪಕ್ಷಕಾರನು ದೂರು ನೀಡುವ ಪಕ್ಷಕಾರನಾಗಿದ್ದರೆ, ಅವನ ಕ್ಲೇಮನ್ನು ತಿರಸ್ಕರಿಸಿರುವುದಾಗಿ ಭಾವಿಸತಕ್ಕದ್ದು;

(ಬಿ) ಅಂಥ ಪಕ್ಷಕಾರನು ಪ್ರತಿ ಪಕ್ಷಕಾರನಾಗಿದ್ದರೆ ಮತ್ತು ದೂರು ನೀಡುವ ಪಕ್ಷಕಾರನು ಉಪವಿಧಿಗಳ ಉದ್ದೇಶಕ್ಕಾಗಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಮಧ್ಯಸ್ಥಗಾರನನ್ನು ಆಯ್ಕೆ ಮಾಡಿದ್ದರೆ, ಆ ಮಧ್ಯಸ್ಥಗಾರನೇ ಏಕೈಕ ಮಧ್ಯಸ್ಥಗಾರನಾಗಿ ಕಾರ್ಯನಿರ್ವಹಿಸತಕ್ಕದ್ದು ಮತ್ತು ಅವನನ್ನು ಉಭಯ ಪಕ್ಷಕಾರರ ಸಮ್ಮತಿಯಿಂದ ನೇಮಕ ಮಾಡಿದ್ದರೆ ಹೇಗೋ ಹಾಗೆ ಅವನು ನೀಡುವ ಐತೀರ್ಪಿಗೆ ಆ ಪಕ್ಷಕಾರರು ಬದ್ಧರಾಗತಕ್ಕದ್ದು.

(v) ಕಾರ್ಯದರ್ಶಿಯು ಪಕ್ಷಕಾರನು ಆಯ್ಕೆ ಮಾಡಿದ ಮಧ್ಯಸ್ಥಗಾರನಿಗೆ ಅಥವಾ ಮಧ್ಯಸ್ಥಗಾರರಿಗೆ ವಿವಾದದ ಬಗ್ಗೆ ತಿಳಿಸತಕ್ಕದ್ದು ಮತ್ತು ಮಧ್ಯಸ್ಥಗಾರನು ಅಥವಾ ಮಧ್ಯಸ್ಥಗಾರರು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಯೊಳಗೆ ಐತೀರ್ಪು ನೀಡತಕ್ಕದ್ದು, ಮತ್ತು ಹಾಗೆ ನೀಡಲಾದ ಐತೀರ್ಪು (1)ನೇ ಖಂಡಕ್ಕೊಳಪಟ್ಟು ಅಂತಿಮವಾಗಿರತಕ್ಕದ್ದು.

(vi) ಮಧ್ಯಸ್ಥಗಾರನ ಅಥವಾ ಮಧ್ಯಸ್ಥಗಾರರ ಐತೀರ್ಪಿನ ವಿರುದ್ಧ ವಿವಾದ ಪರಿಶೀಲನಾ ಸಮಿತಿಗೆ ಅಪೀಲು ಸಲ್ಲಿಸಲು ಅವಕಾಶವಿರತಕ್ಕದ್ದು ಮತ್ತು ಅಂಥ ಅಪೀಲನ್ನು ಪಕ್ಷಕಾರರಿಗೆ ಐತೀರ್ಪಿನ ಮಾಹಿತಿಯನ್ನು ತಿಳಿಸಿದ ದಿನಾಂಕದಿಂದ ಏಳು ದಿನಗಳ ಅವಧಿಯೊಳಗಾಗಿ ಸಲ್ಲಿಸತಕ್ಕದ್ದು.

(vii) ಕಾರ್ಯದರ್ಶಿಯು, ಕೆಳಕಂಡ ಸಂದರ್ಭಗಳಲ್ಲಿ ವಿವಾದವನ್ನು ವಿವಾದ ಪರಿಶೀಲನಾ ಸಮಿತಿಗೆ ಒಪ್ಪಿಸತಕ್ಕದ್ದು,-

(ಎ) ಮಧ್ಯಸ್ಥಗಾರನಾಗಿ ಕಾರ್ಯನಿರ್ವಹಿಸಲು ಸಿದ್ಧವಿರುವ ಮತ್ತು ಇಚ್ಛಿಸುವಂಥ ಒಬ್ಬ ಮಧ್ಯಸ್ಥಗಾರನನ್ನು ಆಯ್ಕೆ ಮಾಡಲು ವಿವಾದಿಸುವ ಪಕ್ಷಕಾರರಲ್ಲಿ ಯಾವನೇ ಒಬ್ಬನು ತಾನು ಅಸಮರ್ಥನಾಗಿರುವುದಾಗಿ ಮಧ್ಯಸ್ಥಗಾರರ ಆಯ್ಕೆಗಾಗಿ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿರುವ ಅವಧಿಯೊಳಗೆ ಕಾರ್ಯದರ್ಶಿಗೆ ವರದಿ ಮಾಡಿದರೆ; ಅಥವಾ

(ಬಿ) ಮಧ್ಯಸ್ಥಗಾರರು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿರುವ ಅವಧಿಯೊಳಗೆ ಐತೀರ್ಪನ್ನು ನೀಡಲು ವಿಫಲರಾದರೆ; ಅಥವಾ

(ಸಿ) ಮಧ್ಯಸ್ಥಗಾರರು ತಮ್ಮಲ್ಲಿ ಪರಸ್ಪರ ಒಡಂಬಡಿಕೆ ಏರ್ಪಡಿಸುತ್ತಿಲ್ಲವೆಂದು ಲಿಖಿತದಲ್ಲಿ ಕಾರ್ಯದರ್ಶಿಗೆ ತಿಳಿಸಿದರೆ.

(viii) ವಿವಾದ ಪರಿಶೀಲನಾ ಸಮಿತಿಯ ಒಬ್ಬ ಸದಸ್ಯನು ವಿವಾದದ ಪಕ್ಷಕಾರನಾಗಿದ್ದರೆ, ಅಥವಾ ವಿವಾದ ಪರಿಶೀಲನಾ ಸಮಿತಿಯ ಮುಂದೆ ಇರುವ ವಿವಾದದ ಯಾವನೇ ಪಕ್ಷಕಾರನಲ್ಲಿ ಹಿತಾಸಕ್ತಿಯುಳ್ಳವನಾಗಿದ್ದರೆ ಅವನು, ಸದರಿ ವಿವಾದಕ್ಕೆ ಸಂಬಂಧಿಸಿದ ವ್ಯವಹರಣೆಗಳಲ್ಲಿ ಭಾಗವಹಿಸತಕ್ಕದ್ದಲ್ಲ, ಸದರಿ ವಿವಾದದ ಉದ್ದೇಶಕ್ಕಾಗಿ, ಸಮಿತಿಯು ವಿವಾದ ಪರಿಶೀಲನಾ ಸಮಿತಿಯ ಸದಸ್ಯನೆಂದು ಬೇರೊಬ್ಬ ವ್ಯಕ್ತಿಯನ್ನು ನೇಮಿಸಬಹುದು.

(ix) ವಿವಾದ ಪರಿಶೀಲನಾ ಸಮಿತಿಯು, ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಯೊಳಗೆ ತನ್ನ ಐತೀರ್ಪನ್ನು ನೀಡತಕ್ಕದ್ದು. ಅಂಥ ಅವಧಿಯೊಳಗೆ ಯಾವುದೇ ಐತೀರ್ಪನ್ನು ನೀಡಿದ್ದರೆ ಅಥವಾ ಪಕ್ಷಕಾರರು ತಮ್ಮ ಹಕ್ಕುಗಳನ್ನು ಸ್ಥಾಪಿಸುವುದಕ್ಕಾಗಿ ನ್ಯಾಯಾಲಯವನ್ನು ಸಂಪರ್ಕಿಸುವಂತೆ ಆ ಪಕ್ಷಕಾರರಿಗೆ ನಿರ್ದೇಶಿಸಬಹುದೆಂದು ವಿವಾದ ಪರಿಶೀಲನಾ ಸಮಿತಿಯು ಅಭಿಪ್ರಾಯಪಟ್ಟರೆ, ಕಾರ್ಯದರ್ಶಿಯು ಆ ವಿಷಯವನ್ನು ಸಮಿತಿಗೆ ವರದಿ ಮಾಡತಕ್ಕದ್ದು ಮತ್ತು ಆ ಸಮಿತಿಯು ತದನುಸಾರವಾಗಿ ನ್ಯಾಯಾಲಯವನ್ನು ಸಂಪರ್ಕಿಸಲು ಪಕ್ಷಕಾರರಿಗೆ ಅನುಮತಿ ನೀಡತಕ್ಕದ್ದು.

(x) ಸಂದರ್ಭಾನುಸಾರ, ಏಕೈಕ ಮಧ್ಯಸ್ಥಗಾರನು, ಮಧ್ಯಸ್ಥಗಾರರು ಅಥವಾ ವಿವಾದ ಪರಿಶೀಲನಾ ಸಮಿತಿಯು ನೀಡಿದ ಐತೀರ್ಪಿನಲ್ಲಿ ವ್ಯವಹರಣೆಗಳ ವೆಚ್ಚಗಳ ಬಗ್ಗೆ ವ್ಯವಸ್ಥೆ ಮಾಡತಕ್ಕದ್ದು ಮತ್ತು ಆ ಐತೀರ್ಪನ್ನು ನಾಲ್ಕು ಪ್ರತಿಗಳಲ್ಲಿ ಸಿದ್ಧಪಡಿಸತಕ್ಕದ್ದು ಮತ್ತು ಐತೀರ್ಪಿನ ಎಲ್ಲ ಪ್ರತಿಗಳಿಗೆ ಸಂದರ್ಭಾನುಸಾರ ಏಕೈಕ ಮಧ್ಯಸ್ಥಗಾರನು ಅಥವಾ ಮಧ್ಯಸ್ಥಗಾರರು ಸಹಿ ಹಾಕತಕ್ಕದ್ದು. ವಿವಾದ ಪರಿಶೀಲನಾ ಸಮಿತಿಯ ಸಭೆ ಅಥವಾ ಸಭೆಗಳಲ್ಲಿ ಅಧ್ಯಕ್ಷತೆ ವಹಿಸಿದ ಅಧ್ಯಕ್ಷನು ಅಥವಾ ಸಂದರ್ಭಾನುಸಾರ ಸದಸ್ಯನು ಸಹಿ ಹಾಕತಕ್ಕದ್ದು. ಐತೀರ್ಪಿನ ಒಂದೊಂದು ಪ್ರತಿಯನ್ನು ವಿವಾದದ ಪಕ್ಷಕಾರರಿಗೆ ಕಳುಹಿಸತಕ್ಕದ್ದು ಮತ್ತು ಉಳಿದ ಪ್ರತಿಗಳನ್ನು ದಾಖಲೆಗೆ ಸೇರಿಸತಕ್ಕದ್ದು.][1]

(4) ವಿವಾದ ಪರಿಶೀಲನಾ ಸಮಿತಿಯ ಸಭೆಯಲ್ಲಿ ಕೊನೆ ಪಕ್ಷ ಮೂವರು ಸದಸ್ಯರು ಹಾಜರಿರುವ ಹೊರತು ಆ ಸಮಿತಿಯು ಯಾವ ವ್ಯವಹಾರವನ್ನೂ ನಡೆಸತಕ್ಕದ್ದಲ್ಲ.

(5) ವಿವಾದ ಪರಿಶೀಲನಾ ಸಮಿತಿಯ ಯಾವುದೇ ಸಭೆಯಲ್ಲಿ ಬರಬಹುದಾದಂಥ ಎಲ್ಲ ಪ್ರಶ್ನೆಗಳು, ಹಾಜರಿದ್ದು ಮತ್ತು ಮತ ನೀಡುವ ಸದಸ್ಯರ ಬಹುಮತದಿಂದ ತೀರ್ಮಾನವಾಗತಕ್ಕದ್ದು. ಸಮಾನ ಮತಗಳು ಬಂದ ಸಂದರ್ಭದಲ್ಲಿ ಸಂದರ್ಭಾನುಸಾರ ವಿವಾದ ಪರಿಶೀಲನಾ ಸಮಿತಿಯ ಅಧ್ಯಕ್ಷನು ಅಥವಾ ಸಭೆಯ ಅಧ್ಯಕ್ಷತೆ ವಹಿಸುವ ಸದಸ್ಯನು ಒಂದು ಹೆಚ್ಚಿನ ಅಥವಾ ನಿರ್ಣಾಯಕ ಮತವನ್ನು ನೀಡತಕ್ಕದ್ದು.

(6) ವಿವಾದ ಪರಿಶೀಲನಾ ಸಮಿತಿಯ ತೀರ್ಮಾನವು ಅಂತಿಮವಾಗಿರತಕ್ಕದ್ದು.

[1][(7) 1940ರ ಮಧ್ಯಸ್ಥಗಾರಿಕೆ ಅಧಿನಿಯಮದ (1940ರ ಕೇಂದ್ರಾಧಿನಿಯಮ ಸಂಖ್ಯೆ 10) 14, 15, 16, 17, 18, 41 ಮತ್ತು 43ನೇ ಪ್ರಕರಣಗಳ ಉಪಬಂಧಗಳು, ಅಧಿನಿಯಮದ, ಈ ನಿಯಮಗಳ ಮತ್ತು ಉಪನಿಧಿಗಳ ಉಪಬಂಧಗಳಿಗೆ ಅಸಂಗತವಾಗದಿರುವಷ್ಟರ ಮಟ್ಟಿಗೆ 84ನೇ ಪ್ರಕರಣದ ಮೇರೆಗಿನ ಮಧ್ಯಸ್ಥಿಕೆಗೂ ಅನ್ವಯವಾಗತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44, ದಿನಾಂಕ 3-2-1970ರ ಮೂಲಕ ಸೇರಿಸಲಾಗಿದೆ.

**56. ಮನ್ನಾ ಮಾಡುವುದಕ್ಕೆ ಮಾರುಕಟ್ಟೆ ಸಮಿತಿಯ ಅಧಿಕಾರಗಳು.-** ಸಮಿತಿಯು, ತನಗೆ ಬರಬೇಕಾದ ಯಾವುದೇ ಫೀಜನ್ನು ಅಥವಾ ಇತರ ಮೊಬಲಗನ್ನು ಮನ್ನಾ ಮಾಡುವುದಕ್ಕೆ ಮುಂಚೆ,-

(i) ಅಂಥ ಫೀಜು ಅಥವಾ ಮೊಬಲಗು ಒಂದು ನೂರು ರೂಪಾಯಿಗೆ ಮೀರಿದ್ದು, ಐದುನೂರು ರೂಪಾಯಿಗೆ ಮೀರದಿದ್ದರೆ, ಕೃಷಿ ಮಾರುಕಟ್ಟೆ ನಿರ್ದೇಶಕನ ; ಮತ್ತು

(ii) ಅಂಥ ಫೀಜು ಅಥವಾ ಮೊಬಲಗು ಐದುನೂರು ರೂಪಾಯಿಗಳನ್ನು ಮೀರಿದ್ದರೆ ಸರ್ಕಾರದ

– ಮಂಜೂರಾತಿಯನ್ನು ಪಡೆಯತಕ್ಕದ್ದು.

**57. ಮಾರುಕಟ್ಟೆ ಸಮಿತಿಯ ಕರ್ತವ್ಯಗಳು.**– ಸಮಿತಿಯು, ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಈ ಸಂಬಂಧದಲ್ಲಿ ಅವನು ಯುಕ್ತವಾಗಿ ಅಧಿಕೃತಗೊಳಿಸಿದ ಯಾವನೇ ಇತರ ಅಧಿಕಾರಿಯು ಅಗತ್ಯಪಡಿಸಬಹುದಾದಂಥ ಎಲ್ಲಾ ಮಾಹಿತಿಗಳನ್ನು ಒದಗಿಸತಕ್ಕದ್ದು. ಸಮಿತಿಯು ಅಧಿನಿಯಮದ ಮೂಲಕ ನಿಯಮಿಸಲಾದ ಕರ್ತವ್ಯಗಳ ಜೊತೆಗೆ ಕೆಳಕಂಡವುಗಳ ಬಗ್ಗೆ ಹೊಣೆಯಾಗಿರತಕ್ಕದ್ದು:–

(1) ಜಮೆಗಳ ಮತ್ತು ಸಂದಾಯಗಳ ಮೇಲೆ ತನ್ನ ಅಧಿಕಾರಿಗಳು ಸೂಕ್ತ ನಿಗಾ ಇಡುವಂತೆ ನೋಡಿಕೊಳ್ಳುವುದು;

(2) ಮಾರುಕಟ್ಟೆ ಸಮಿತಿಯ ನಿಧಿಗಳಿಗೆ ಖರ್ಚು ಹಾಕಬಹುದಾದ ಎಲ್ಲಾ ಕಾಮಗಾರಿಗಳ ಯುಕ್ತ ನಿರ್ವಹಣೆಗೆ;

(3) ಮಾರುಕಟ್ಟೆಗೆ ಬರುವ ಸರಕುಗಳ ಬಗ್ಗೆ ರಿಜಿಸ್ಟರು ಇಡುವುದು;

(4) ವಸೂಲು ಮಾಡಿದ ಫೀಜುಗಳ ರಿಜಿಸ್ಟರು ಇಡುವುದು;

(5) ಸಮಿತಿಯ ಅಧಿಕಾರಿಗಳಿಂದ ಮತ್ತು ನೌಕರರಿಂದ ಭದ್ರತೆಗಳನ್ನು ಪಡೆದುಕೊಳ್ಳುವುದು;

(6) ಫೀಜುಗಳನ್ನು ವಸೂಲು ಮಾಡಲು ಅಧಿಕೃತರಾದ ವ್ಯಕ್ತಿಗಳಿಗೆ ಹಣದ ಪೆಟ್ಟಿಗೆಯನ್ನು ಮತ್ತು ಪಕ್ಕ ಪ್ರತಿ ಇರುವ ರಸೀದಿ ಪುಸ್ತಕಗಳನ್ನು ಒದಗಿಸುವುದು;

(7) ತೂಕ ಮಾಡುವವನಿಗೆ, ಹಮಾಲರಿಗೆ, ಗಾಡಿ ಎಳೆಯುವವರಿಗೆ ಮತ್ತು ಜವಾನರಿಗೆ ಬಿಲ್ಲೆಗಳನ್ನು ಒದಗಿಸುವುದು;

(8) ಕಾಮಗಾರಿಗಳ ಬಗ್ಗೆ ನಕ್ಷೆಗಳನ್ನು ಮತ್ತು ಅಂದಾಜುಗಳನ್ನು ಸಿದ್ಧಪಡಿಸಿಕೊಳ್ಳುವುದು;

(9) ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಅವನು ಅಧಿಕೃತಗೊಳಿಸಿದ ಅಧಿಕಾರಿಯು ನಿರ್ದೇಶಿಸಬಹುದಾದಂಥ ನಮೂನೆಗಳಲ್ಲಿ ಲೆಕ್ಕಗಳನ್ನಿಡುವುದು;

(10) ಆಸ್ತಿಗಳು ಮತ್ತು ಹೊಣೆಗಾರಿಕೆಗಳ ವಿವರ ಪಟ್ಟಿಯನ್ನು ಪ್ರಕಟಿಸುವುದು;

(11) ಜಮೆಗಳು ಮತ್ತು ಖರ್ಚುಗಳ ಮೇಲೆ ನಿಗಾ ಇಡುವಂತೆ ನೋಡಿಕೊಳ್ಳುವುದು;

(12) ಆಯವ್ಯಯಕ್ಕನುಸಾರ ವೆಚ್ಚಗಳನ್ನು ನಿಯಂತ್ರಿಸುವುದು;

(13) ಮುಂಬರುವ ವರ್ಷದ ಆಯವ್ಯಯವನ್ನು ಸಿದ್ಧಪಡಿಸುವುದು ಮತ್ತು ಅಂಗೀಕರಿಸುವುದು;

(14) ಮಾರುಕಟ್ಟೆ ವ್ಯವಹಾರಕ್ಕೆ ಸಂಬಂಧಿಸಿದ ಮಾಹಿತಿಯನ್ನು ಒದಗಿಸುವುದು;

(15) ಅಧಿಸೂಚಿತ ಬೆಳೆಗಳನ್ನು ತಾತ್ಕಾಲಿಕವಾಗಿ ದಾಸ್ತಾನಿಡಲು ಅಥವಾ ಸಂಗ್ರಹಿಸಿಡಲು ವ್ಯವಸ್ಥೆ ಮಾಡುವುದು;

(16) ಸಮಿತಿಯ ಕಾರ್ಯಕಲಾಪಗಳ ದಕ್ಷ ನಿರ್ವಹಣೆಗಾಗಿ ಕಾಲಕಾಲಕ್ಕೆ ಅಗತ್ಯವಾಗಬಹುದಾದಂಥ ಇತರ ಎಲ್ಲಾ ಕೆಲಸಗಳನ್ನು ಮಾಡುವುದು.

**58. ಪತ್ರವ್ಯವಹಾರ.**– ಸಮಿತಿಯು ಸರ್ಕಾರದೊಂದಿಗೆ ನಡೆಸುವ ಎಲ್ಲಾ ಪತ್ರ ವ್ಯವಹಾರವನ್ನು ಕೃಷಿ ಮಾರುಕಟ್ಟೆ ನಿರ್ದೇಶಕನ ಮೂಲಕ ನಡೆಸತಕ್ಕದ್ದು.

**59. ಸಮಿತಿಯ ಮತ್ತು ಅದರ ಅಧ್ಯಕ್ಷನ ಆದೇಶದ ವಿರುದ್ಧ ಅಪೀಲು.**– ಸಮಿತಿಯು ಅಥವಾ ಅಧ್ಯಕ್ಷನು ಹೊರಡಿಸಿದ ಆದೇಶದ ವಿರುದ್ಧ 89ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಸಲ್ಲಿಸುವ ಅಪೀಲನ್ನು ಅಂಥ ಆದೇಶವು ತಲುಪಿದ ದಿನಾಂಕದಿಂದ ಮೂವತ್ತು ದಿವಸಗಳೊಳಗಾಗಿ ಸಲ್ಲಿಸತಕ್ಕದ್ದು.

## ಭಾಗ – V

## ಮಾರುಕಟ್ಟೆ ನಿಧಿ, ವೆಚ್ಚ ಮತ್ತು ಲೆಕ್ಕಪತ್ರಗಳು

**60. ಮಾರುಕಟ್ಟೆ ನಿಧಿ.**– ಈ ಅಧಿನಿಯಮದ ಮೇರೆಗೆ ಅಥವಾ ಅದರ ಉದ್ದೇಶಗಳಿಗಾಗಿ ಸಮಿತಿಯು ವಹಿಸುವ ಎಲ್ಲಾ ವೆಚ್ಚಗಳನ್ನು ಮಾರುಕಟ್ಟೆ ನಿಧಿಯಿಂದ ಭರಿಸತಕ್ಕದ್ದು ಮತ್ತು ಅಂಥ ವೆಚ್ಚವನ್ನು ಭರಿಸಿದ ತರುವಾಯ ಪ್ರತಿಯೊಂದು ಮಾರುಕಟ್ಟೆ ವರ್ಷದ ಅಂತ್ಯದಲ್ಲಿ ಉಳಿಯುವ ಯಾವುದೇ ಹೆಚ್ಚುವರಿ ಹಣವನ್ನು ಮಾರುಕಟ್ಟೆ ವರ್ಷವು ಮುಕ್ತಾಯವಾದ ಮೂರು ತಿಂಗಳೊಳಗಾಗಿ ಸಮಿತಿಯ ಖಾಯಂ ನಿಧಿಗೆ ಜಮೆ ಮಾಡತಕ್ಕದ್ದು ಮತ್ತು ಆ ಹಣವನ್ನು ಅಧಿನಿಯಮದ 90(3)ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು ಕೃಷಿ ಮಾರುಕಟ್ಟೆ ನಿರ್ದೇಶಕನು ನಿರ್ದಿಷ್ಟಪಡಿಸಬಹುದಾದಂತೆ ಕಟ್ಟಡಗಳ ನಿರ್ಮಾಣ, ಭೂ ಆರ್ಜನೆ ಅಥವಾ ನಿವೇಶನಗಳ ಖರೀದಿ ಅಥವಾ ಇತರ ಉದ್ದೇಶಗಳಂಥ ಖಾಯಂ ಸ್ವರೂಪದ ವೆಚ್ಚವನ್ನು ಭರಿಸುವ ಸಲುವಾಗಿ ಮಾತ್ರ ಉಪಯೋಗಿಸತಕ್ಕದ್ದು.

[1][**60ಎ. ಉತ್ಪಾದಕ – ಮಾರಾಟಗಾರನಿಗೆ ಅಲ್ಪಾವಧಿ ಮುಂಗಡಗಳು.**– (1) ಮಾರುಕಟ್ಟೆ ಫೀಜು ಮತ್ತು ಲೈಸೆನ್ಸ್ ಫೀಜು ಇವುಗಳ ಮೂಲಕ ಐದು ಲಕ್ಷ ರೂಪಾಯಿಗಳಿಗಿಂತ ಹೆಚ್ಚು ವಾರ್ಷಿಕ ಆದಾಯ ಹೊಂದಿರುವ ಹಾಗೂ ತನ್ನದೇ ಆದ ಇಲಿ ನಿರೋಧಕ, ದಂಶಕ ನಿರೋಧಕ, ಸೋರಿಕೆ ಹಾಗೂ ತೇವ ನಿರೋಧಕ ಗೋದಾಮು ಸೌಲಭ್ಯಗಳನ್ನು ಹೊಂದಿರುವ ಮಾರುಕಟ್ಟೆ ಸಮಿತಿಯು, ಪ್ರಕರಣ 63ರ ಉಪಪ್ರಕರಣ (2)ರ ಖಂಡ (ಬಿ)ಯ ಉಪಖಂಡ (x)ರ ಮೇರೆಗೆ ಉತ್ಪಾದಕ ಮಾರಾಟಗಾರರಿಗೆ ಅಲ್ಪಾವಧಿ ಮುಂಗಡಗಳನ್ನು ನೀಡಬಹುದು:

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್ಇ 91 ದಿನಾಂಕ 27-1-1994ರ ಮೂಲಕ 60ಎ, 60ಬಿ, 60ಸಿ ನಿಯಮಗಳನ್ನು ಸೇರಿಸಲಾಗಿದೆ.

ಪರಂತು, ಮೇಲೆ ಉಲ್ಲೇಖಿಸಲಾದ ಉಪನಿಯಮ (1)ರಲ್ಲಿ ಹೇಳಿದ ಅಲ್ಪಾವಧಿ ಮುಂಗಡ ಯೋಜನೆಯನ್ನು ಕಾರ್ಯಗತಗೊಳಿಸುವುದಕ್ಕೆ ಮೊದಲು ಮಾರುಕಟ್ಟೆ ಸಮಿತಿಯು, ಆ ಬಗ್ಗೆ ಅನುಮೋದನೆ ಕೋರಿ ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅರ್ಜಿ ಸಲ್ಲಿಸತಕ್ಕದ್ದು, ಮತ್ತು ಕೃಷಿ ಮಾರುಕಟ್ಟೆ ನಿರ್ದೇಶಕನು ಅಂಥ ಮಾರುಕಟ್ಟೆ ಸಮಿತಿಯ ಬಳಿ ಅಗತ್ಯವಾದ ಹಣ ಇದೆ ಎಂಬುದನ್ನು ಹಾಗೂ ಅದು ಗೋದಾಮು ಸೌಲಭ್ಯಗಳನ್ನು ಹೊಂದಿದೆಯೆಂಬುದನ್ನು ಸ್ವತಃ ಖಾತರಿಪಡಿಸಿಕೊಂಡು ಅಂಥ ಮಾರುಕಟ್ಟೆ ಸಮಿತಿಗೆ ಅನುಮೋದನೆ ನೀಡಬಹುದು.

(2) ಮಾರುಕಟ್ಟೆ ಸಮಿತಿಯು ಪ್ರತಿಯೊಂದು ಮಾರುಕಟ್ಟೆ ವರ್ಷದ ಪ್ರಾರಂಭದ ಮೊದಲು ಸರಕುಗಳನ್ನು ದಾಸ್ತಾನು ಮಾಡಲು ತನ್ನ ಗೋದಾಮಿನ ಸಾಮರ್ಥ್ಯಕ್ಕೆ ಸಂಬಂಧಿಸಿದಂತೆ ಒಂದು ಪ್ರಮಾಣ ಪತ್ರವನ್ನು ಅಸಿಸ್ಟೆಂಟ್ ಎಕ್ಸಿಕ್ಯುಟೀವ್ ಇಂಜಿನಿಯರ್, ಮಾರುಕಟ್ಟೆ ಅಭಿವೃದ್ಧಿ ಯೋಜನೆ ಇವರಿಂದ ಪಡೆದುಕೊಳ್ಳತಕ್ಕದ್ದು.

(3) ಮಾರುಕಟ್ಟೆ ವರ್ಷದ ಅವಧಿಯಲ್ಲಿ ಅಂಥ ಮುಂಗಡ ನೀಡಲು ಮಾರುಕಟ್ಟೆ ಸಮಿತಿಯು ಮೀಸಲಿಡಬಹುದಾದ ಮೊತ್ತವು, ಹಿಂದಿನ ವರ್ಷದ ಅವಧಿಯಲ್ಲಿ ಮಾರುಕಟ್ಟೆ ಫೀಜು ಮತ್ತು ಲೈಸೆನ್ಸ್ ಫೀಜು – ಇವುಗಳಿಂದ ಪ್ರಾಪ್ತವಾಗುವ ಆದಾಯದ ಶೇಕಡಾ 10ಕ್ಕೆ ಮೀರತಕ್ಕದ್ದಲ್ಲ. ಹಾಗೆ ಮೀಸಲಿಟ್ಟ ಮೊತ್ತವನ್ನು 'ಉತ್ಪಾದಕ – ಮಾರಾಟಗಾರರಿಗೆ ನೀಡಲಾಗುವ ಅಲ್ಪಾವಧಿ ಮುಂಗಡ ನಿಧಿ' ಎಂದು ಕರೆಯಲಾಗುವ ಒಂದು ಪ್ರತ್ಯೇಕ ಖಾತೆಯಲ್ಲಿ ಇಡತಕ್ಕದ್ದು. ಈ ನಿಧಿಯ ಯಾವುದೇ ಮೊತ್ತವನ್ನು ಉತ್ಪಾದಕ – ಮಾರಾಟಗಾರರಿಗೆ ಅಲ್ಪಾವಧಿ ಮುಂಗಡಗಳ ಸಂದಾಯಕ್ಕಲ್ಲದೆ ಯಾವುದೇ ಇತರ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

(4) ಈ ನಿಯಮದ ಮೇರೆಗೆ ಮುಂಗಡವನ್ನು ಪಡೆಯಬಯಸುವ ಪ್ರತಿಯೊಬ್ಬ ಉತ್ಪಾದಕ – ಮಾರಾಟಗಾರನು [1][ಕರ್ನಾಟಕ ಕೃಷಿ ಸಾಲ ಪಾಸ್ ಪುಸ್ತಕ ಅಧಿನಿಯಮ, 1984 (1985ರ ಕರ್ನಾಟಕ ಅಧಿನಿಯಮ 2)ರ 4ನೇ ಪ್ರಕರಣದ ಮೇರೆಗೆ ನೀಡಿರುವ ಕೃಷಿ ಸಾಲ ಪಾಸ್ ಪುಸ್ತಕದ][1] ಸಹಿತ ನಮೂನೆ 27ಎ ಯಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 135 ಎಂಆರ್‌ಇ 95 ದಿನಾಂಕ 8–2–1996ರ ಮೂಲಕ ಪ್ರತಿಯೋಜಿಸಲಾಗಿದೆ.

[1][xxxx][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 135 ಎಂಆರ್‌ಇ 95 ದಿನಾಂಕ 19–10–1995ರ ಮೂಲಕ ಬಿಟ್ಟುಬಿಡಲಾಗಿದೆ.

(5) ಮುಂಗಡ ಮೊತ್ತವು, ಪ್ರತಿಯೊಂದು ಸಂದರ್ಭದಲ್ಲಿ [1][ಐವತ್ತು ಸಾವಿರ ರೂಪಾಯಿಗಳ][1] ಗರಿಷ್ಠ ಮಿತಿಗೊಳಪಟ್ಟು, ಮಾರುಕಟ್ಟೆ ಸಮಿತಿಗೆ ಒತ್ತೆ ಇಡುವ ಕೃಷಿ ಉತ್ಪನ್ನದ ಚಾಲ್ತಿ ಮಾರುಕಟ್ಟೆ ಮೌಲ್ಯದ ಶೇಕಡಾ ಅರವತ್ತಕ್ಕೆ ಮೀರತಕ್ಕದ್ದಲ್ಲ.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 135 ಎಂಆರ್‌ಇ 95 ದಿನಾಂಕ 8–2–1996ರ ಮೂಲಕ ಪ್ರತಿಯೋಜಿಸಲಾಗಿದೆ.

(6) ಮುಂಗಡಗಳ ರಿಜಿಸ್ಟ್ರರನ್ನು ಇಡತಕ್ಕದ್ದು ಮತ್ತು ಈ ನಿಯಮದ ಮೇರೆಗೆ ನೀಡಲಾದ ಪ್ರತಿಯೊಂದು ಮುಂಗಡವನ್ನು ಮತ್ತು ಅದನ್ನು ಮಂಜೂರು ಮಾಡುವ ಪ್ರಾಧಿಕಾರದ ಆದೇಶವನ್ನು ದಾಖಲಿಸತಕ್ಕದ್ದು.

(7) ಮಾರುಕಟ್ಟೆ ಸಮಿತಿಯು, ಈ ನಿಯಮದ ಮೇರೆಗೆ ಮುಂಗಡ ನೀಡುವಾಗ ಕಂದಾಯ ಪ್ರಾಧಿಕಾರವು ಅಥವಾ ಜಿಲ್ಲಾ ಪರಿಷತ್‌ಗಳು ಸಣ್ಣ ಹಾಗೂ ಅತಿ ಸಣ್ಣ ರೈತರೆಂದು ಗುರುತಿಸಿದ ರೈತರಿಗೆ ಆದ್ಯತೆ ನೀಡತಕ್ಕದ್ದು.

(8) ಮುಂಗಡದ ಅವಧಿಯು ಕೃಷಿ ಉತ್ಪನ್ನವನ್ನು ಒತ್ತೆ ಇಟ್ಟ ದಿನಾಂಕದಿಂದ ತೊಂಬತ್ತು ದಿನಗಳಿಗೆ ಮೀರತಕ್ಕದ್ದಲ್ಲ.

(9) ಉಪನಿಯಮ (1)ರ ಮೇರೆಗೆ ಮುಂಗಡ ವಿತರಣೆ ಮಾಡಿದ ದಿನಾಂಕದಿಂದ ಮೊದಲ ಮೂವತ್ತು ದಿನಗಳಿಗೆ ಯಾವುದೇ ಬಡ್ಡಿಯನ್ನು ವಿಧಿಸತಕ್ಕದ್ದಲ್ಲ, ಮತ್ತು ಆ ತರುವಾಯ ಆ ಕೃಷಿ ಉತ್ಪನ್ನವನ್ನು ಉಪನಿಯಮ (10)ರ ಮೇರೆಗೆ ಬಿಡಿಸಿಕೊಳ್ಳುವ ಅಥವಾ ಉಪನಿಯಮ (16)ರಮೇರೆಗೆ ವಿಲೇ ಮಾಡುವ ದಿನಾಂಕದವರೆಗೆ [1][ಈ ಕೆಳಕಂಡ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಿರುವ ದರಗಳಲ್ಲಿ][1] ಬಡ್ಡಿಯನ್ನು ವಿಧಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 135 ಎಂಆರ್‌ಇ 95 ದಿನಾಂಕ 8–2–1996ರ ಮೂಲಕ ಪ್ರತಿಯೋಜಿಸಲಾಗಿದೆ.

**[1][ಕೋಷ್ಟಕ**

| ಕ್ರಮ ಸಂಖ್ಯೆ | ಮೊಬಲಗು | ಬಡ್ಡಿಯ ದರ |
|---|---|---|
| 1 | 10,000 ರೂಪಾಯಿಯವರೆಗೆ | ಒಂದು ವರ್ಷಕ್ಕೆ ಶೇ. 8 |
| 2 | 10,000 ರೂಪಾಯಿ ಹಾಗೂ ಅದಕ್ಕಿಂತ ಹೆಚ್ಚು, ಆದರೆ,25,000 ರೂಪಾಯಿಗಿಂತ ಕಡಿಮೆ | ಒಂದು ವರ್ಷಕ್ಕೆ ಶೇ.10 |
| 3 | 25,001 ರೂಪಾಯಿ ಹಾಗೂ ಅದಕ್ಕಿಂತ ಹೆಚ್ಚು ಆದರೆ50,000 ರೂಪಾಯಿಗಿಂತ ಕಡಿಮೆ | ಒಂದು ವರ್ಷಕ್ಕೆ ಶೇ.12.5][1] |

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 135 ಎಂಆರ್‌ಇ 95 ದಿನಾಂಕ 8–2–1996ರ ಮೂಲಕ ಸೇರಿಸಲಾಗಿದೆ.

[1][9(ಎ) ಈ ನಿಯಮದ ಮೇರೆಗೆ ಮುಂಗಡ ನೀಡುವ ಉದ್ದೇಶಕ್ಕಾಗಿ, ಮಾರುಕಟ್ಟೆ ಸಮಿತಿಯು ಕೃಷಿ ಮಾರುಕಟ್ಟೆ ನಿರ್ದೇಶಕರಿಂದ ಮುಂಚಿತವಾಗಿಯೇ ಅನುಮೋದನೆ ಪಡೆದು, ಯಾವುದೇ ಅನುಸೂಚಿತ ಬ್ಯಾಂಕಿನಿಂದ ಅಥವಾ ಜಿಲ್ಲಾ ಕೇಂದ್ರೀಯ ಸಹಕಾರಿ ಬ್ಯಾಂಕ್‌ಗಳಿಂದ ಹಣ ಸಾಲ ತೆಗೆದುಕೊಳ್ಳಬಹುದು. ಇದಕ್ಕೆ ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯು ಖಾತರಿ ನೀಡತಕ್ಕದ್ದು:

ಪರಂತು, ಅನುಸೂಚಿತ ಬ್ಯಾಂಕುಗಳು ಅಥವಾ ಜಿಲ್ಲಾ ಕೇಂದ್ರೀಯ ಬ್ಯಾಂಕುಗಳಿಂದ ಹಣ ಸಾಲ ತೆಗೆದುಕೊಂಡ ಸಂದರ್ಭದಲ್ಲಿ, ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಳಿಯು, ಚಾಲ್ತಿಯಲ್ಲಿರುವ ಬ್ಯಾಂಕ್ ಬಡ್ಡಿ ದರದ ಹಾಗೂ (9)ನೇ ಉಪನಿಯಮದಲ್ಲಿ ನಿರ್ದಿಷ್ಟಪಡಿಸಿರುವ ಬಡ್ಡಿ ದರದ ನಡುವಿನ ಬಡ್ಡಿಯ ವ್ಯತ್ಯಸ್ತ ಹಣವನ್ನು ವಹಿಸತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 135 ಎಂಆರ್‌ಇ 95 ದಿನಾಂಕ 8-2-1996ರ ಮೂಲಕ ಸೇರಿಸಲಾಗಿದೆ.

(10) ಕೃಷಿ ಉತ್ಪನ್ನವನ್ನು ಒತ್ತೆ ಇಟ್ಟಿರುವ ಉತ್ಪಾದಕ-ಮಾರಾಟಗಾರನು, ಅದನ್ನು ಒತ್ತೆ ಇಟ್ಟ ದಿನಾಂಕದಿಂದ ತೊಂಬತ್ತು ದಿನಗಳೊಳಗಾಗಿ ಮುಂಗಡವನ್ನು ಅದರ ಮೇಲಿನ ಬಡ್ಡಿ ಸಹಿತ ಮರುಪಾವತಿ ಮಾಡಿ ಉತ್ಪನ್ನವನ್ನು ಬಿಡಿಸಿಕೊಳ್ಳತಕ್ಕದ್ದು ಹಾಗೆ ಬಿಡಿಸಿಕೊಳ್ಳಲು ತಪ್ಪಿದಲ್ಲಿ, ಮಾರುಕಟ್ಟೆ ಸಮಿತಿಯು, ಆ ಉತ್ಪನ್ನವನ್ನು ಹರಾಜು ಅಥವಾ ಟೆಂಡರಿನ ಮೂಲಕ ಮಾರಾಟ ಮಾಡಿ ಮುಂಗಡದ ಮೊತ್ತ ಮತ್ತು ಅದರ ಮೇಲೆ ಸಂದಾಯ ಮಾಡಬೇಕಾದ ಬಡ್ಡಿಯನ್ನು ಮತ್ತು ಇತರ ಖರ್ಚುಗಳೇನಾದರೂ ಇದ್ದರೆ ಅವುಗಳನ್ನು ಮುರಿದುಕೊಂಡು ಮಾರಾಟದಿಂದ ಬಂದ ಹಣದಲ್ಲಿ ಉಳಿದ ಹಣವನ್ನು ಉತ್ಪಾದಕ-ಮಾರಾಟಗಾರನಿಗೆ ಸಂದಾಯ ಮಾಡಬಹುದು.

(11) ರಾಜ್ಯ ಉಗ್ರಾಣ ನಿಗಮವು ಮತ್ತು ಕೇಂದ್ರೀಯ ಉಗ್ರಾಣ ನಿಗಮವು ನೀಡುವ ದರದಲ್ಲಿಯೇ ಮಾರುಕಟ್ಟೆ ಸಮಿತಿಯು, ಒಣಗುವಿಕೆಯ ಸಂಬಂಧದಲ್ಲಿ ರಿಯಾಯಿತಿಯನ್ನು ನೀಡತಕ್ಕದ್ದು.

(12) ಅರ್ಜಿದಾರನು ನಮೂನೆ 27ಬಿನಲ್ಲಿ ಒಪ್ಪಂದ ಪತ್ರವನ್ನು ಬರೆದುಕೊಟ್ಟ ಮೇಲೆ ಮತ್ತು ಒತ್ತೆ ಇಟ್ಟ ಉತ್ಪನ್ನದ ದಾಸ್ತಾನಿನ ಪರಿಶೀಲನೆಯಾದ ತರುವಾಯ ಮಂಜೂರಾದ ಮುಂಗಡದ ಮೊತ್ತವನ್ನು ಅವನಿಗೆ ಚೆಕ್ ಮೂಲಕ ಬಟವಾಡೆ ಮಾಡತಕ್ಕದ್ದು.

(13) ಮಾರುಕಟ್ಟೆ ಸಮಿತಿಯು ಈ ನಿಯಮದ ಮೇರೆಗೆ ಒತ್ತೆ ಇಡಲಾದ ಉತ್ಪನ್ನವನ್ನು ತನ್ನ ವೆಚ್ಚದಲ್ಲಿ ವಿಮೆ ಮಾಡಿಸತಕ್ಕದ್ದು. ಕೃಷಿ ಉತ್ಪನ್ನವನ್ನು ಒತ್ತೆ ಇಟ್ಟಿರುವ ಉತ್ಪಾದಕ-ಮಾರಾಟಗಾರನು, ಅದರ ದಾಸ್ತಾನಿಗೆ ಸಂಬಂಧಪಟ್ಟಂತೆ ಗೋದಾಮು ಬಾಡಿಗೆಯನ್ನು, ಹೊಗೆ ಹಾಯಿಸುವ ವೆಚ್ಚವನ್ನು ಮತ್ತು ಅಂಥ ಇತರ ವೆಚ್ಚಗಳನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದಲ್ಲ.

(14) ಕಾರ್ಯದರ್ಶಿಯು ಅಥವಾ ಆತನು ಅಧಿಕೃತಗೊಳಿಸಿದ ಯಾವನೇ ಇತರ ಅಧಿಕಾರಿಯು ಅಥವಾ ನೌಕರನು, ಗೋದಾಮಿನ ಪ್ರಭಾರ ಹೊಂದಿರತಕ್ಕದ್ದು. ಗೋದಾಮಿನ ಪ್ರಭಾರ ಹೊಂದಿರುವ ವ್ಯಕ್ತಿಯು, ದಾಸ್ತಾನಿಗಾಗಿ ತಂದ ಕೃಷಿ ಉತ್ಪನ್ನದ ತಲಾ 250 ಗ್ರಾಂ ತೂಕದ ಎರಡು ಪ್ರಾತಿನಿಧಿಕ ಮಾದರಿಗಳನ್ನು ತೆಗೆದುಕೊಳ್ಳತಕ್ಕದ್ದು ಮತ್ತು ಆ ಮಾದರಿಗಳನ್ನು ಉತ್ಪಾದಕ - ಮಾರಾಟಗಾರನ ಸಮಕ್ಷಮದಲ್ಲಿ ಮೊಹರು ಮಾಡತಕ್ಕದ್ದು ಮತ್ತು ಮಾದರಿ ಇರುವ ಚೀಲದ ಅಥವಾ ಗಂಟಿನ ಮೇಲೆ ಆತನ ಸಹಿಯನ್ನು ಪಡೆದುಕೊಳ್ಳತಕ್ಕದ್ದು ಮತ್ತು ಆ ಸಹಿಯನ್ನು ಕಾರ್ಯದರ್ಶಿಯು ಧೃಢೀಕರಿಸತಕ್ಕದ್ದು. ಮೊಹರು ಮಾಡಿದ ಮಾದರಿಯನ್ನು ಕಾರ್ಯದರ್ಶಿಯ ಅಥವಾ ಆತನು ಅಧಿಕೃತಗೊಳಿಸಿದ ಯಾವನೇ ಇತರ ಅಧಿಕಾರಿಯ ಅಭಿರಕ್ಷೆಯಲ್ಲಿ ಇಡತಕ್ಕದ್ದು.

(15) ಗೋದಾಮಿನಲ್ಲಿ ಇಟ್ಟಿರುವ ಉತ್ಪನ್ನವನ್ನು ಸೂಕ್ತವಾಗಿ ಪರಿಶೀಲಿಸಿದ ತರುವಾಯ ಆ ಬಗ್ಗೆ ಕಾರ್ಯದರ್ಶಿಯು, ಉತ್ಪಾದಕ ಮಾರಾಟಗಾರನಿಗೆ ನಮೂನೆ '27 ಸಿ' ಯಲ್ಲಿ ರಸೀದಿ ನೀಡತಕ್ಕದ್ದು.

(16) ಉತ್ಪಾದಕ- ಮಾರಾಟಗಾರನು ತನ್ನ ಕೃಷಿ ಉತ್ಪನ್ನವನ್ನು ನೇರವಾಗಿ ಅಥವಾ ತಾನು ಆಯ್ಕೆ ಮಾಡಿದ ಯಾವನೇ ಕಮೀಷನ್ ಏಜೆಂಟನ ಮೂಲಕ ಮಾರಾಟ ಮಾಡುವ ವ್ಯವಸ್ಥೆ ಮಾಡಬೇಕೆಂದು ಮಾರುಕಟ್ಟೆ ಸಮಿತಿಯನ್ನು ಕೋರಿದಲ್ಲಿ, ಸಮಿತಿಯು ಆ ಪ್ರಕಾರ ಮಾರಾಟದ ವ್ಯವಸ್ಥೆಮಾಡತಕ್ಕದ್ದು ಮತ್ತು ಮಾರಾಟದಿಂದ ಬಂದ ಹಣದಲ್ಲಿ ತನಗೆ ಬರಬೇಕಾದ ಬಾಕಿಯನ್ನು ವಜಾ ಮಾಡಿಕೊಂಡು ಉಳಿದ ಹಣವನ್ನು ಆತನಿಗೆ ಸಂದಾಯ ಮಾಡತಕ್ಕದ್ದು.

(17) ಯಾವನೇ ಉತ್ಪಾದಕ-ಮಾರಾಟಗಾರನು ಹಿಂದಿನ ಮುಂಗಡವನ್ನು ಅದರ ಮೇಲೆ ಬಡ್ಡಿ ಏನಾದರೂ ಇದ್ದರೆ, ಅದೂ ಸೇರಿ ಮರು ಸಂದಾಯ ಮಾಡುವ ಹೊರತು ಅವನಿಗೆ ಯಾವುದೇ ಎರಡನೇ ಮುಂಗಡ ಮಂಜೂರು ಮಾಡತಕ್ಕದ್ದಲ್ಲ.

(18) ಒತ್ತೆ ಇಡಲಾದ ಕೃಷಿ ಉತ್ಪನ್ನವನ್ನು ಬೆಂಕಿ, ಕಳವು ಮತ್ತು ಇತರ ಹಾನಿಗಳಿಂದ ರಕ್ಷಿಸಲು ಮಾರುಕಟ್ಟೆ ಸಮಿತಿಯು ಸೂಕ್ತ ಕ್ರಮಕೈಗೊಳ್ಳತಕ್ಕದ್ದು ಮತ್ತು ತನ್ನ ವೆಚ್ಚದಲ್ಲಿ ಕಾಲಕಾಲಕ್ಕೆ ಹೊಗೆ ಹಾಯಿಸಲು ವ್ಯವಸ್ಥೆ ಮಾಡತಕ್ಕದ್ದು.

(19) ಕರ್ನಾಟಕ ರಾಜ್ಯ ಉಗ್ರಾಣ ನಿಗಮವು ಅಥವಾ ಕೇಂದ್ರೀಯ ಉಗ್ರಾಣ ನಿಗಮವು ಉತ್ಪಾದಕ ಮಾರಾಟಗಾರನಿಗೆ ನೀಡಿದ ಉಗ್ರಾಣ ರಸೀದಿಗಳನ್ನೂ ಸಹ ಮಾರುಕಟ್ಟೆ ಸಮಿತಿಯು ಅಂಗೀಕರಿಸಬಹುದು ಮತ್ತು ಪ್ರತಿಯೊಂದು ಪ್ರಕರಣದಲ್ಲಿ ಹತ್ತು ಸಾವಿರ ರೂಪಾಯಿಗಳ ಗರಿಷ್ಠ ಮಿತಿಗೊಳಪಟ್ಟು ಅಂಥ ರಸೀತಿಯನ್ನು ಒತ್ತೆ ಇಟ್ಟುಕೊಂಡು ಒತ್ತೆ ಇಟ್ಟಿರುವ ಆ ಕೃಷಿ ಉತ್ಪನ್ನದ ಮಾರುಕಟ್ಟೆ ಮೌಲ್ಯದ ಶೇಕಡ ಅರವತ್ತರಷ್ಟು ಮೊತ್ತದ ಅಲ್ಪಾವಧಿ ಮುಂಗಡವನ್ನು ನೀಡಬಹುದು.

(20) ಈ ನಿಯಮದ ಮೇರೆಗೆ ನೀಡಲಾದ ಅಲ್ಪಾವಧಿ ಮುಂಗಡ ಅಥವಾ ಮುಂಗಡವಾಗಿ ನೀಡಿರುವ ಹಣದ ವಸೂಲಿ ಅಥವಾ ಅವುಗಳಿಗೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ಮಾರುಕಟ್ಟೆ ಸಮಿತಿ ಮತ್ತು ಉತ್ಪಾದಕ–ಮಾರಾಟಗಾರ–ಇವರ ನಡುವೆ ಯಾವುದೇ ವಿವಾದ ಉಂಟಾದಲ್ಲಿ, ಅದನ್ನು ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಈ ಸಂಬಂಧದಲ್ಲಿ ಅವನು ಅಧಿಕೃತಗೊಳಿಸಿದ ಯಾವನೇ ಅಧಿಕಾರಿಗೆ ಒಪ್ಪಿಸತಕ್ಕದ್ದು ಹಾಗೂ ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಅವನಿಂದ ಅಧಿಕೃತನಾದ ಅಧಿಕಾರಿಯು ಕೈಕೊಂಡ ನಿರ್ಣಯವೇ ಅಂತಿಮವಾಗಿರತಕ್ಕದ್ದು.

**60ಬಿ. ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳು ಮತ್ತು ಕೃಷಿ ಸಂಸ್ಕರಣಾ ಸಹಕಾರ ಸಂಘಗಳು–ಇವುಗಳಿಗೆ ಸಾಲ ನೀಡುವುದು.–** (1) ಮಾರುಕಟ್ಟೆ ಸಮಿತಿಯು, 63ನೇ ಪ್ರಕರಣದ (2)ನೇ ಉಪಪ್ರಕರಣದ (ಬಿ) ಖಂಡದ (viii–ಎ) ಉಪಖಂಡದ ಮೇರೆಗೆ ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳಿಗೆ ಮತ್ತು ಕೃಷಿ ಸಂಸ್ಕರಣಾ ಸಹಕಾರ ಸಂಘಗಳಿಗೆ, ಅಂಥ ಸಂಘಗಳ ವಿಲೆಮಾಡಬಹುದಾದ ನಿವ್ವಳ ಸಂಪನ್ಮೂಲಗಳ (ವಿ.ನಿ.ಸಂ) ಮೂರರಷ್ಟನ್ನು ಮೀರದಂತೆ, ಆದರೆ, ಮಾರುಕಟ್ಟೆ ಫೀಜು ಮತ್ತು ಲೈಸನ್ಸ್ ಫೀಜು– ಇವುಗಳ ಮೂಲಕ ಮಾರುಕಟ್ಟೆ ಸಮಿತಿಗೆ ಹಿಂದಿನ ವರ್ಷದ ಅವಧಿಯಲ್ಲಿ ಬಂದಿರುವ ವರಮಾನದ ಶೇಕಡಾ ಐದರ ಗರಿಷ್ಠ ಪ್ರಮಾಣಕ್ಕೆ ಒಳಪಟ್ಟು ಸಾಲಗಳನ್ನು ನೀಡಬಹುದು. ಸಾಲದ ಅವಧಿಯು ಒಂದು ವರ್ಷವನ್ನು ಮೀರತಕ್ಕದ್ದಲ್ಲ.

**ವಿವರಣೆ.–** (1)ನೇ ಉಪನಿಯಮದ ಉದ್ದೇಶಕ್ಕಾಗಿ ವಿಲೇ ಮಾಡಬಹುದಾದ ನಿವ್ವಳ ಸಂಪನ್ಮೂಲಗಳನ್ನು, ಸಂಘದ ಇತ್ತೀಚಿನ ಜಮಾಖರ್ಚು ಪಟ್ಟಿಯಲ್ಲಿ ಅಥವಾ ಲೆಕ್ಕಪರಿಶೋಧನಾ ವರದಿಯಲ್ಲಿ ಒದಗಿಸಲಾದ ವಿವರಗಳಿಂದ ಈ ಕೆಳಕಂಡಂತೆ ಲೆಕ್ಕಹಾಕತಕ್ಕದ್ದು.

| ಆಂತರಿಕ ಸಂಪನ್ಮೂಲಗಳು ಭಾದ್ಯತೆಗಳು | | | |
|---|---|---|---|
| 1) | ಸಂದಾಯಿತ ಬಂಡವಾಳ (ಸರ್ಕಾರದ ಷೇರು ಬಂಡವಾಳದ ಪಾಲು ಸೇರಿದಂತೆ. ಸರ್ಕಾರದ ಷೇರು ಬಂಡವಾಳದ ವಂತಿಗೆಯು ಸ್ಥಿರಾಸ್ತಿಗಳ ಆರ್ಜನೆಗಾಗಿ ಮಾತ್ರ ಇರುವ ಸಂದರ್ಭದಲ್ಲಿ, ಅದನ್ನು ಸಂಘದ ಆಂತರಿಕ ಸಂಪನ್ಮೂಲಗಳಲ್ಲಿ ಸೇರಿಸತಕ್ಕದ್ದಲ್ಲ.) | 1. | ಕನಿಷ್ಠ ನಗದು ಮತ್ತು ಬ್ಯಾಂಕ್‌ಶಿಲ್ಕು |
| 2) | ರೆವಿನ್ಯೂ | 2. | ಖಾಯಂ ಭದ್ರತಾ ಠೇವಣಿಗಳು |
| 3) | ಠೇವಣಿಗಳು ಯಾವುವಾದರೂ ಇದ್ದರೆ, ಅವು | 3. | ಬ್ಯಾಂಕ್ ಮತ್ತು ಇತರ ಸಹಕಾರಿ ಸಂಸ್ಥೆಗಳಲ್ಲಿ ಷೇರು |
| 4) | ಲಾಭ ನಷ್ಟ ಲೆಕ್ಕದಲ್ಲಿ ಹೆಚ್ಚುವರಿ ಏನಾದರೂ ಇದ್ದರೆ ಅವು. | 4. | ಸ್ವಂತ ಸಂಪನ್ಮೂಲಗಳಿಂದ ಸ್ಥಿರಾಸ್ತಿಗಳಲ್ಲಿ ಹೂಡಿಕೆಗಳು |
| | | 5. | ಅಮೂರ್ತ ಆಸ್ತಿಗಳು ಯಾವುದಾದರೂ ಇದ್ದರೆ ಅವು |
| | | 6. | ಸಂಚಿತ ನಷ್ಟಗಳು ಯಾವು ವಾದರೂ ಇದ್ದರೆ, ಅವು |
| ಒಟ್ಟು ಎ | | ಒಟ್ಟು ಬಿ | |

ವಿಲೆ ಮಾಡಬಹುದಾದ ನಿವ್ವಳ ಸಂಪನ್ಮೂಲಗಳು (ವಿ ನಿ ಸಂ) = (ಎ) – (ಬಿ) (2) ಈ ನಿಯಮದ ಮೇರೆಗೆ ಸಾಲಕ್ಕಾಗಿ ಸಲ್ಲಿಸಬೇಕಾದ ಅರ್ಜಿಯನ್ನು 27 ಡಿ ನಮೂನೆಯಲ್ಲಿ ಈ ಕೆಳಕಂಡ ದಸ್ತಾವೇಜುಗಳೊಂದಿಗೆ ಸಲ್ಲಿಸತಕ್ಕದ್ದು, ಎಂದರೆ:–

(ಎ) ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನು ಅಥವಾ ಅವನು ಅಧಿಕೃತಗೊಳಿಸಿದ ಯಾವನೇ ಅಧಿಕಾರಿಯು ಪರಿಶೋಧಿಸಿದ ಸಂಘದ ಲೆಕ್ಕಪತ್ರಗಳ ಇತ್ತೀಚಿನ ಲೆಕ್ಕಪರಿಶೋಧನಾ ವರದಿ;

(ಬಿ) ಇತ್ತೀಚಿನ ಲೆಕ್ಕಪರಿಶೋಧಿತ ಜಮಾಖರ್ಚು ಪಟ್ಟಿ, ವ್ಯಾಪಾರದ ಮತ್ತು ಲಾಭ ಮತ್ತು ನಷ್ಟದ ಲೆಕ್ಕಪತ್ರಗಳು;

(ಸಿ) ಸಹಕಾರ ಮಾರುಕಟ್ಟೆ ವ್ಯವಹಾರ ಸಂಘ ಅಥವಾ ಕೃಷಿ ಸಂಸ್ಕರಣಾ ಸಹಕಾರ ಸಂಘ ಇವುಗಳು ಅಧಿಸೂಚಿತ ಕೃಷಿ ಉತ್ಪನ್ನಗಳ ಸಂಬಂಧದಲ್ಲಿ ಕಳೆದ ಸಹಕಾರ ವರ್ಷದಲ್ಲಿ ಮಾಡಿದ ಹಣಕಾಸು ವಹಿವಾಟಿನ ಹಾಗೂ ದಾಸ್ತಾನು ವಹಿವಾಟಿನ ಸಂಕ್ಷಿಪ್ತ ವಿವರಣೆ;

(ಡಿ) ಸಂಘವು ಪ್ರತಿಯೊಂದು ಅಧಿಸೂಚಿತ ಕೃಷಿ ಉತ್ಪನ್ನದ ಸಂಬಂಧದಲ್ಲಿ ವ್ಯವಹರಿಸಿದ ದಾಸ್ತಾನಿನ ಇತ್ತೀಚಿನ ಸ್ಥಿತಿಗತಿಯ ಸಂಕ್ಷಿಪ್ತ ವಿವರಣೆ.

(3) ಮಾರುಕಟ್ಟೆ ಸಮಿತಿಯು, ಜಿಲ್ಲಾ ಕೇಂದ್ರೀಯ ಸಹಕಾರ ಬ್ಯಾಂಕು ಮತ್ತು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ – ಇವುಗಳು ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳಿಗೆ ಅಥವಾ ಸಂಸ್ಕರಣಾ ಸಹಕಾರ ಸಂಘಗಳಿಗೆ ಮಂಜೂರು ಮಾಡುವ ಕಾರ್ಯನಿರ್ವಹಣಾ ಬಂಡವಾಳದ ಮೇಲೆ ವಿಧಿಸುವ ಬಡ್ಡಿ ದರವನ್ನು ಮೀರದ ದರದಲ್ಲಿ ಸಾಲಗಳ ಮೇಲೆ ಬಡ್ಡಿಯನ್ನು ವಿಧಿಸಬಹುದು.

(4) ಸಾಲವನ್ನು ಮರುಪಾವತಿ ಮಾಡಲು ತಪ್ಪಿದರೆ (3)ನೇ ಉಪನಿಯಮದ ಮೇರೆಗೆ ವಿಧಿಸಲಾಗುವ ಬಡ್ಡಿಯಲ್ಲದೆ ಶೇಕಡಾ 2ರ ದರದಲ್ಲಿ ಸುಸ್ತಿ ಬಡ್ಡಿಯನ್ನು ಸಹ ವಿಧಿಸತಕ್ಕದ್ದು.

(5) ಈ ನಿಯಮದ ಮೇರೆಗೆ ಮಂಜೂರಾದ ಸಾಲವನ್ನು ಯಾವ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿತ್ತೋ ಆ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕಾಗಿ ಬಳಸಿದುದು ಕಂಡುಬಂದರೆ, ಮಾರುಕಟ್ಟೆ ಸಮಿತಿಯು, ಸಾಲದ ಪೂರ್ಣ ಮೊಬಲಗನ್ನು ಬಡ್ಡಿ ಸಹಿತ ಹಿಂತಿರುಗಿಸುವಂತೆ ಕೇಳಬಹುದು.

(6) ಅಂಥ ಸಾಲ ಕೋರಿ ಅರ್ಜಿಸಲ್ಲಿಸಿರುವ ಸಂಘವು, ಮಾರುಕಟ್ಟೆ ಸಮಿತಿಯ ಹೆಸರಿನಲ್ಲಿ ಸಾಲದ ಮೊಬಲಗು ಮತ್ತು ಅದರ ಶೇಕಡಾ 40ರಷ್ಟು ಮೊಬಲಗು ಇವೆರಡರ ಒಟ್ಟು ಮೊತ್ತಕ್ಕೆ ಕಡಿಮೆಯಿಲ್ಲದಷ್ಟು ಮೌಲ್ಯದ ತನ್ನ ಸ್ವತ್ತನ್ನು ಅಡಮಾನ ಮಾಡಿದ ಹೊರತು ಈ ನಿಯಮದ ಮೇರೆಗೆ ಮಾರುಕಟ್ಟೆ ಸಮಿತಿಯು ಸಾಲವನ್ನು ಮಂಜೂರು ಮಾಡತಕ್ಕದ್ದಲ್ಲ:

ಪರಂತು, ಅಂಥ ಸಾಲವನ್ನು ಬಡ್ಡಿ ಸಹಿತ ಮರುಪಾವತಿ ಮಾಡುವ ಬಗ್ಗೆ ರಾಜ್ಯ ಸರ್ಕಾರವು, ಖಾತರಿ ನೀಡಿದರೆ, ಮಾರುಕಟ್ಟೆ ಸಮಿತಿಯು ಸಂಘದ ಸ್ವತ್ತನ್ನು ಅಡಮಾನ ಮಾಡುವಂತೆ ಒತ್ತಾಯಿಸದೆ ಈ ನಿಯಮದ ಮೇರೆಗೆ ಸಾಲವನ್ನು ನೀಡಬಹುದು.

(7) ಈ ಮುಂಚಿನ ಮುಂಗಡವನ್ನು ಪೂರ್ಣವಾಗಿ ಮರುಸಂದಾಯ ಮಾಡಿದ ಹೊರತು ಎರಡನೇ ಮುಂಗಡವನ್ನು ನೀಡತಕ್ಕದ್ದಲ್ಲ.

**60ಸಿ. ಮಾರುಕಟ್ಟೆ ಪ್ರಾಂಗಣ, ಉಪಮಾರುಕಟ್ಟೆ ಪ್ರಾಂಗಣ ಮತ್ತು ಮಾರುಕಟ್ಟೆ ಉಪಪ್ರಾಂಗಣ ಇವುಗಳ ಹೊರಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು.**– ಮಾರುಕಟ್ಟೆ ಸಮಿತಿಯು, ಮಾರುಕಟ್ಟೆ ಪ್ರದೇಶದಲ್ಲಿ ಈ ಕೆಳಕಂಡ ಮೂಲಭೂತ ಸೌಲಭ್ಯಗಳನ್ನು ಒದಗಿಸಬಹುದು:–

(1) ಮಾರುಕಟ್ಟೆ ಪ್ರಾಂಗಣ, ಉಪಮಾರುಕಟ್ಟೆ ಪ್ರಾಂಗಣ ಮತ್ತು ಮಾರುಕಟ್ಟೆ ಉಪಪ್ರಾಂಗಣ – ಇವುಗಳಿಗೆ ಕೂಡು ದಾರಿ.

(2) ಸೂರು ಹಾಕಿದ ಹರಾಜು ಕಟ್ಟೆ ಅಥವಾ ಮಾರಾಟ ಕಟ್ಟೆಗಳು.

(3) ಗ್ರಾಮೀಣ ಮಾರುಕಟ್ಟೆಗಳಲ್ಲಿ ಸರಕು ಒಣಗಿಸುವ ಕಟ್ಟೆಗಳು.

(4) ಗ್ರಾಮೀಣ ಮಾರುಕಟ್ಟೆಗಳಲ್ಲಿ ಕುಡಿಯುವ ನೀರಿನ ಸೌಕರ್ಯ.

(5) ಮಾರುಕಟ್ಟೆ ಪ್ರದೇಶದಲ್ಲಿ ಗೋದಾಮುಗಳು.

(6) ಗ್ರಾಮೀಣ ಮಾರುಕಟ್ಟೆಗಳಲ್ಲಿ ದನಗಳನ್ನು ಕಟ್ಟಲು ಕಲ್ಲು ಗೂಟಗಳು.

(7) ಸ್ವಚ್ಛತೆಗೆ, ವರ್ಗೀಕರಣಕ್ಕೆ ಮತ್ತು ಕೊಯ್ಲಿನ ನಂತರದ ಇತರ ಕಾರ್ಯಾಚರಣೆಗಳಿಗೆ ಬೇಕಾಗುವ ಯಂತ್ರೋಪಕರಣಗಳನ್ನು ಇಡುವ ಸಲುವಾಗಿ ಸಾಮಾನ್ಯ ಸೌಕರ್ಯ ಕೇಂದ್ರಗಳು.

[1][(8) ಲೋಕೋಪಯೋಗಿ ಇಲಾಖೆ, ಜಿಲ್ಲಾ ಪಂಚಾಯತ್‌ಗಳಿಗೆ, ಮತ್ತು ತಾಲ್ಲೂಕು ಪಂಚಾಯತ್‌ಗಳಿಗೆ, ಗ್ರಾಮ ಪಂಚಾಯತ್‌ಗಳಿಗೆ, ಸಿಟಿ ಮುನಿಸಿಪಲ್ ಕಾರ್ಪೋರೇಷನ್‌ಗಳಿಗೆ, ಮುನಿಸಿಪಲ್ ಕೌನ್ಸಿಲ್‌ಗಳಿಗೆ ಮತ್ತು ಟೌನ್ ಪಂಚಾಯತ್‌ಗಳಿಗೆ ಸೇರಿದ ರಸ್ತೆಗಳನ್ನು ಬಿಟ್ಟು, ಮಾರುಕಟ್ಟೆ ಪ್ರದೇಶದಲ್ಲಿರುವ ಎಲ್ಲ ಗ್ರಾಮಾಂತರ ರಸ್ತೆಗಳ ಅಭಿವೃದ್ಧಿ ಮತ್ತು ನಿರ್ವಹಣೆ:

ಪರಂತು, ಮಾರುಕಟ್ಟೆ ಸಮಿತಿಯು, ನಗರದ, ಪಟ್ಟಣದ ಅಥವಾ ಗ್ರಾಮ ಪರಿಮಿತಿಗಳ ಒಳಗಿರುವ, ಪ್ರಾಂಗಣಕ್ಕೆ ಹೋಗುವ, ಐದು ಕಿಲೋಮೀಟರುವರೆಗಿನ ಕೂಡುರಸ್ತೆಯನ್ನು ಅಭಿವೃದ್ಧಿಪಡಿಸಬಹುದು.

(9) 63ನೆಯ ಪ್ರಕರಣದ (2)ನೆಯ ಉಪ ಪ್ರಕರಣದ (ಬಿ) ಖಂಡದ(viii ಡ)ಉಪ-ಖಂಡದ ಉಪಬಂಧಗಳಿಗೆ ಒಳಪಟ್ಟು, ಮಾರುಕಟ್ಟೆ ಸಮಿತಿಯು, (8)ನೆಯ ಖಂಡದ ಮೇರೆಗೆ ಆದು ಗುರುತಿಸಿದ ಗ್ರಾಮಾಂತರ ರಸ್ತೆಗಳ ಅಭಿವೃದ್ಧಿ ಉದ್ದೇಶಕ್ಕಾಗಿ, ಈ ಕೆಳಗಿನ ತ:ಖ್ತೆಯಲ್ಲಿ ನಿರ್ಧಿಷ್ಟಪಡಿಸಿರುವಷ್ಟರಮಟ್ಟಿಗೆ ಗರಿಷ್ಠ ಮೊತ್ತವನ್ನು ಖರ್ಚು ಮಾಡಬಹುದು.

**ತಃಖ್ತೆ**

| ಮಾರುಕಟ್ಟೆ ಸಮಿತಿಗಳ ಪ್ರವರ್ಗಗಳು | ಕಾಮಗಾರಿಗಳ ಅಂದಾಜು ವೆಚ್ಚದ ಗರಿಷ್ಠ ಮೊತ್ತ |
|---|---|
| 1 | 2 |
| ಮಾರುಕಟ್ಟೆ ಶುಲ್ಕ ಮತ್ತು ಲೈಸೆನ್ಸ್ ಫೀಜು ರೂಪದಲ್ಲಿ ಹಿಂದಿನ ಮಾರುಕಟ್ಟೆ ವರ್ಷದಲ್ಲಿ ಯಾವ ಮಾರುಕಟ್ಟೆ ಸಮಿತಿಯ ವಾರ್ಷಿಕ ಆದಾಯವು ಈ ಮುಂದೆ ಹೇಳಿರುವಂತೆ ಇರುವುದೋ ಅಂತಹ ಮಾರುಕಟ್ಟೆ ಸಮಿತಿ: | |
| (1) 1.50 ಕೋಟಿ ರೂ.ಗೆ ಮೇಲ್ಪಟ್ಟು ಇದ್ದರೆ | ವಾರ್ಷಿಕ 30-00 ಲಕ್ಷ ರೂ. |
| (2) 1.00 ಕೋಟಿ ರೂ. ಮೇಲ್ಪಟ್ಟು ಮತ್ತು 1.50 ಕೋಟಿ ರೂ.ವರೆಗೆ ಇದ್ದರೆ | ವಾರ್ಷಿಕ 15.00 ಲಕ್ಷ ರೂ. |
| (3) 50.00 ಲಕ್ಷ ರೂ.ಗೆ ಮೇಲ್ಪಟ್ಟು ಮತ್ತು 1.00 ಕೋಟಿ ರೂ.ವರೆಗೆ ಇದ್ದರೆ | ವಾರ್ಷಿಕ 10.00 ಲಕ್ಷ ರೂ. |
| (4) 50.00 ಲಕ್ಷ ರೂ. ಮತ್ತು ಅದಕ್ಕೂ ಕಡಿಮೆ ಇದ್ದರೆ | ವಾರ್ಷಿಕ 5.00 ಲಕ್ಷ ರೂ. |

**ವಿವರಣೆ:** ಮಾರುಕಟ್ಟೆ ಸಮಿತಿಯು, ತಾನು ಅಭಿವೃದ್ಧಿಪಡಿಸಿದ ರಸ್ತೆಗಳ ನಿರ್ವಹಣೆ ಉದ್ದೇಶಕ್ಕಾಗಿ, ಮೇಲಿನ ತ:ಖ್ತೆಯಲ್ಲಿ ನಿರ್ದಿಷ್ಟಪಡಿಸಿರುವ ಮೊತ್ತದ ಶೇಕಡಾ ಮೂವತ್ತೈದರಷ್ಟು ಮೊತ್ತವನ್ನು ಖರ್ಚು ಮಾಡತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 214 ಎಂಆರ್‌ಇ 97 ದಿನಾಂಕ 29-1-2001ರ ಮೂಲಕ ಸೇರಿಸಲಾಗಿದೆ.

**61. ವೆಚ್ಚ:-** (1) ಕೈ ಹಣವನ್ನು ಹೊರತುಪಡಿಸಿ ಎಲ್ಲಾ ಸಂದಾಯಗಳನ್ನು ಚೆಕ್ಕುಗಳ ಮೂಲಕ ಸಂದಾಯ ಮಾಡತಕ್ಕದ್ದು.

(2) ಐದುನೂರು ರೂಪಾಯಿ ಮತ್ತು ಅದಕ್ಕೂ ಕಡಿಮೆ ಮೌಲ್ಯದ ಚೆಕ್ಕುಗಳಿಗೆ ಅಕೌಂಟೆಂಟ್ ಅಥವಾ ಲೆಕ್ಕಪತ್ರ ಗುಮಾಸ್ತ ಮತ್ತು ಕಾರ್ಯದರ್ಶಿ

– ಇವರು ಜಂಟಿಯಾಗಿ ಸಹಿ ಮಾಡತಕ್ಕದ್ದು ಮತ್ತು ಇನ್ನುಳಿದ ಎಲ್ಲಾ ಚೆಕ್ಕುಗಳಿಗೆ ಕಾರ್ಯದರ್ಶಿ ಮತ್ತು ಅಧ್ಯಕ್ಷ ಅಥವಾ ಅಧ್ಯಕ್ಷನ ಗೈರುಹಾಜರಿಯಲ್ಲಿ ಉಪಾಧ್ಯಕ್ಷ – ಇವರು ಜಂಟಿಯಾಗಿ ಸಹಿ ಮಾಡತಕ್ಕದ್ದು:

ಪರಂತು, ಕಾರ್ಯದರ್ಶಿಯು ಗೆಜೆಟೆಡ್ ಅಧಿಕಾರಿಯಾಗಿರುವಲ್ಲಿ, ಅಕೌಂಟೆಂಟ್ ಮತ್ತು ಕಾರ್ಯದರ್ಶಿ – ಇವರು ಒಂದು ಸಾವಿರ ರೂಪಾಯಿಗಳ ಮೌಲ್ಯದವರೆಗಿನ ಚೆಕ್ಕುಗಳಿಗೆ ಸಹಿಮಾಡಲು ಸಕ್ಷಮರಾಗಿರತಕ್ಕದ್ದು

[1][xxxx][1]

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3-2-1970ರ ಮೂಲಕ ಕೆಲವು ಪದಗಳನ್ನು ಬಿಟ್ಟುಬಿಡಲಾಗಿದೆ.

(3) ಮಾರುಕಟ್ಟೆ ನಿಧಿಯ ಲೆಕ್ಕಕ್ಕೆ ಖರ್ಚು ಹಾಕಲಾದ ಪ್ರತಿಯೊಂದು ಸಂದಾಯದ ಬಗ್ಗೆ ಆಧಾರವಾಗಿ ಒಂದು ಬಿಲ್ಲನ್ನು ಮತ್ತು ಸಂದಾಯ ಮೊತ್ತವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ನಮೂದಿಸಿರುವ ಸಂದಾಯದ ಆದೇಶವನ್ನು ಸಲ್ಲಿಸಿರತಕ್ಕದ್ದು ಮತ್ತು ಸಂದಾಯದ ಅಂಥ ಪ್ರತಿಯೊಂದು ಆದೇಶಕ್ಕೆ ಕೆಳಕಂಡ ಸಂದರ್ಭಗಳನ್ನು ಹೊರತುಪಡಿಸಿ ಸಮಿತಿಯ ಅನುಮೋದನೆ ಪಡೆದು ಕಾರ್ಯದರ್ಶಿಯು ಸಹಿ ಹಾಕತಕ್ಕದ್ದು: –

(i) ಸಮಿತಿಯ ಅಧಿಕಾರಿಗಳು ಮತ್ತು ನೌಕರರ ವೇತನ ಮತ್ತು ಭತ್ಯೆಗಳ ಸಂದಾಯ:

ಪರಂತು, ಕಾರ್ಯದರ್ಶಿಯು ಗೆಜೆಟೆಡ್ ಅಧಿಕಾರಿಯಾಗಿರುವಲ್ಲಿ ಅವನು ತನ್ನ ಸಂಬಳವನ್ನು ತೆಗೆಯುವುದಷ್ಟೇ ಅಲ್ಲದೆ ಸಮಿತಿಯ ಇಡೀ ಸಿಬ್ಬಂದಿಯ ಸಂಬಳವನ್ನು ತೆಗೆಯಲು ಸಕ್ಷಮನಾಗಿರತಕ್ಕದ್ದು.

(ii) ಕೃಷಿ ಮಾರುಕಟ್ಟೆ ನಿರ್ದೇಶಕನು ಕ್ರಮಬದ್ಧವಾಗಿ ಮಂಜೂರು ಮಾಡಿದ ಕಾಮಗಾರಿಗಳ ಮತ್ತು ದುರಸ್ತಿಗಳ ಬಗ್ಗೆ ಸಂದಾಯ;

(iii) ಆಯವ್ಯಯದಲ್ಲಿ ಏರ್ಪಾಡು ಮಾಡಿದ್ದು ಎರಡನೂರು ರೂಪಾಯಿಗಳಿಗೆ ಮೀರದ ತುರ್ತು ವೆಚ್ಚಗಳನ್ನು ಭರಿಸಲು ಮಾಡಿದ ಸಂದಾಯ.

**62. ಖಜಾನೆ ಅಥವಾ ಬ್ಯಾಂಕಿಗೆ ಇರಸಾಲು ಮಾಡುವುದು.-** ಖಜಾನೆಗೆ ಅಥವಾ ಬ್ಯಾಂಕಿಗೆ ಮಾಡಲಾಗುವ ಎಲ್ಲ ಇರಸಾಲುಗಳ ಜೊತೆ [1][ನಮೂನೆ 28][1] ರಲ್ಲಿರುವ ಇರಸಾಲು ರಿಜಿಸ್ಟರು ದ್ವಿಪತ್ರಿಯಲ್ಲಿ ಚಲನ್‌ಗಳು ಅಥವಾ ರೇವಣಿ ಚೀಟಿಗಳು ಇರತಕ್ಕದ್ದು. ಸಂದರ್ಭಾನುಸಾರ ಖಜಾನೆಯು ಅಥವಾ ಬ್ಯಾಂಕು ಒದಗಿಸುವ ಲೆಕ್ಕಪತ್ರಗಳ ಮಾಸಿಕ ಅಥವಾ ನಿಯತಕಾಲಿಕ ವಿವರಣ ಪತ್ರಗಳನ್ನು ನಿಯತವಾಗಿ ಕಡತಕ್ಕೆ ಸೇರಿಸತಕ್ಕದ್ದು. ಮತ್ತು ಅವುಗಳನ್ನು ಲೆಕ್ಕಪರಿಶೋಧನೆಗೆ ಮತ್ತು ತಪಾಸಣೆಗೆ ದೊರೆಯುವಂತೆ ಇಟ್ಟಿರತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44. ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

**63. ಪಾಸ್‌ಬುಕ್.-** ಯಾವ ಖಜಾನೆಯಲ್ಲಿ ಅಥವಾ ಬ್ಯಾಂಕಿನಲ್ಲಿ ಖಾತೆಯನ್ನು ಇಡಲಾಗಿದೆಯೋ ಆ ಖಜಾನೆ ಅಥವಾ ಬ್ಯಾಂಕು ಕಡೇ ಪಕ್ಷ ತಿಂಗಳಿಗೊಮ್ಮೆಯಾದರೂ ಪಾಸ್‌ಬುಕ್‌ನಲ್ಲಿ ತಹಲ್‌ವರೆಗಿನ ನಮೂದುಗಳನ್ನು ಬರೆದಿಡುವ ವ್ಯವಸ್ಥೆ ಮಾಡತಕ್ಕದ್ದು.

**64. ಆಯವ್ಯಯ ಮಂಡನೆ.-** (1) ಕಾರ್ಯದರ್ಶಿಯು ಸಮಿತಿಯ ಮುಂಬರುವ ಮಾರುಕಟ್ಟೆ ವರ್ಷದ ಆದಾಯ ಮತ್ತು ವೆಚ್ಚಗಳ ಬಗ್ಗೆ ವಾರ್ಷಿಕ ಆಯವ್ಯಯ ಅಂದಾಜನ್ನು 29-ಎ ಮತ್ತು 29-ಬಿ ನಮೂನೆಗಳಲ್ಲಿ ಸಿದ್ಧಪಡಿಸಿ ಸಮಿತಿಯ ಮುಂದೆ ಮಂಡಿಸತಕ್ಕದ್ದು. ಸಮಿತಿಯು ಆಯವ್ಯಯ ಪತ್ರವನ್ನು ಪರಿಶೀಲಿಸಲು [1][ಪ್ರತಿ ವರ್ಷ ಜನವರಿ ತಿಂಗಳ][1] ಮೊದಲ ವಾರದಲ್ಲಿ ಸಭೆ ಸೇರತಕ್ಕದ್ದು ಮತ್ತು ಆಯವ್ಯಯ ಪತ್ರವನ್ನು ಪರಿಶೀಲಿಸಿ ಅನುಮೋದಿಸಿದ ತರುವಾಯ ಸಮಿತಿಯು ಅದನ್ನು [1][ಪ್ರತಿವರ್ಷ ಜನವರಿ15ನೇ][1] ದಿನಾಂಕದೊಳಗೆ ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಕಳುಹಿಸಿಕೊಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 22-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

(2) ಕಾಮಗಾರಿಗಳ ಮತ್ತು ದುರಸ್ತಿಗಳ ಅಂದಾಜು ವೆಚ್ಚವು [1][71ನೇ ನಿಯಮದ ಕೋಷ್ಟಕದ 2][1] ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಗರಿಷ್ಠ ಮೊತ್ತ ವನ್ನು ಮೀರಿದರೆ, ಕೃಷಿ ಮಾರುಕಟ್ಟೆ ನಿರ್ದೇಶಕರ ಪೂರ್ವಾನುಮೋದನೆ ಪಡೆಯದೆ ಅವುಗಳಿಗೆ ಆಯವ್ಯಯದಲ್ಲಿ ಯಾವುದೇ ಏರ್ಪಾಡು ಮಾಡತಕ್ಕದ್ದಲ್ಲ.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 22-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

(3) ಆಯವ್ಯಯದ ಜೊತೆ ಗೊತ್ತುಪಡಿಸಿದ ನಮೂನೆಗಳಲ್ಲಿ ಈ ಕೆಳಕಂಡ ವಿವರಣೆ ಇರತಕ್ಕದ್ದು:-

(ಎ) ಆಯವ್ಯಯ ಪತ್ರದಲ್ಲಿ ಏರ್ಪಾಟು ಮಾಡಿರುವಂತೆ ಸಮಿತಿಯ ಸಿಬ್ಬಂದಿಯ ವೇತನ ಶ್ರೇಣಿ ಮತ್ತು ಸಂಬಳಗಳ ವಿವರಗಳನ್ನು ಸೂಚಿಸುವ ಮತ್ತು ನಮೂನೆ 30ರಲ್ಲಿ ಒದಗಿಸಿದ ವಿವರಣೆ;

(ಬಿ) ವರ್ಷಾವಧಿಯಲ್ಲಿ ಕೈಗೊಳ್ಳಬೇಕೆಂದು ಪ್ರಸ್ತಾವಿಸಿದ ಕಾಮಗಾರಿಗಳ ಅಂದಾಜು ವೆಚ್ಚದ ವಿವರಗಳನ್ನು ಸೂಚಿಸುವ ನಮೂನೆ 31ರಲ್ಲಿ ಒದಗಿಸಿದ ವಿವರಣೆ, ಯಾವ ಕಾಮಗಾರಿಗಳ ಬಗ್ಗೆ ಮುಂಚಿತವಾಗಿಯೇ ಯೋಜನೆಗಳನ್ನು ಮತ್ತು ಅಂದಾಜುಗಳನ್ನು ಸಿದ್ಧಪಡಿಸಿಲ್ಲವೊ ಹಾಗೂ ಅವುಗಳಿಗೆ ಮಂಜೂರಾತಿ ಪಡೆದಿಲ್ಲವೋ ಆ ಕಾಮಗಾರಿಗಳನ್ನು ಆಯವ್ಯಯದಲ್ಲಿ ಸೇರಿಸತಕ್ಕದ್ದಲ್ಲ;

(ಸಿ) ಪಡೆದ ಸಾಲಗಳು, ಪ್ರತಿಯೊಂದು ಸಾಲದ ಸಂಬಂಧದಲ್ಲಿ ಬಾಕಿ ನಿಂತಿರುವ ಮೊತ್ತ ಮತ್ತು ಅಸಲಿನ ಮರುಪಾವತಿ ಮತ್ತು ಬಡ್ಡಿ ಸಂದಾಯದ ಬಗ್ಗೆ ಆಯವ್ಯಯ ವರ್ಷದಲ್ಲಿ ಬಿಡುಗಡೆ ಮಾಡಬೇಕಾದ ಮೊತ್ತ ಇವುಗಳನ್ನು ಸೂಚಿಸುವ ಮತ್ತು ನಮೂನೆ 32ರಲ್ಲಿ ಒದಗಿಸಿರುವ ವಿವರಣಾ ಪಟ್ಟಿ;

(ಡಿ) ಸಮಿತಿಯು ಸಂಚಿತ ನಿಧಿಗೆ ಸಂದಾಯ ಮಾಡಬೇಕಾದ ನಿಗದಿತ ವಂತಿಕೆಗಳನ್ನು ಸೂಚಿಸುವ ಮತ್ತು ನಮೂನೆ 33ರಲ್ಲಿ ಒದಗಿಸಿದ ವಿವರಣಾ ಪಟ್ಟಿ.

(4) ಸಮಿತಿಯು (1)ನೇ ಉಪನಿಯಮದ ಮೇರೆಗೆ ನಿಯಮಿಸಲಾದ ಸಮಯಕ್ಕೆ ಅಥವಾ ಅದಕ್ಕೂ ಮುಂಚೆ ಆಯವ್ಯಯ ಅಂದಾಜನ್ನು ಅಂಗೀಕರಿಸಿ ಅದನ್ನು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಒಪ್ಪಿಸಲು ತಪ್ಪಿದರೆ ಕಾರ್ಯದರ್ಶಿಯು (3)ನೇ ಉಪನಿಯಮದಲ್ಲಿ ಉಲ್ಲೇಖಿಸಲಾದ ವಿವರಣಾ ಪಟ್ಟಿಗಳು ಸೇರಿದಂತೆ ಆಯವ್ಯಯ ಪತ್ರವನ್ನು ಸಿದ್ಧಪಡಿಸಿ ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಕಳುಹಿಸತಕ್ಕದ್ದು. ಮತ್ತು ಅಂಥ ಆಯವ್ಯಯ ಪತ್ರವನ್ನು ಸಮಿತಿಯು ಯುಕ್ತವಾಗಿ ಅಂಗೀಕರಿಸಿದೆ ಎಂದು ಭಾವಿಸತಕ್ಕದ್ದು.

(5) ಕಳೆದ ಮಾರುಕಟ್ಟೆ ವರ್ಷದ ಜಮೆಗಳ ಮತ್ತು ವೆಚ್ಚಗಳ ವಿವರಣಾ ಪಟ್ಟಿಯನ್ನು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅಥವಾ ಈ ಸಂಬಂಧದಲ್ಲಿ ಅವನು ಅಧಿಕೃತಗೊಳಿಸಿದ ಯಾವನೇ ಅಧಿಕಾರಿಗೆ [1][ಪ್ರತಿವರ್ಷ ಏಪ್ರಿಲ್ 30][1] ನೇ ದಿನಾಂಕದ ಒಳಗಾಗಿ ಒಪ್ಪಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್ಇ 91 ದಿನಾಂಕ 27-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

(6) ಯಾವ ವೆಚ್ಚದ ಬಗ್ಗೆ ಆಯವ್ಯಯದಲ್ಲಿ ಏರ್ಪಾಡು ಮಾಡಿಲ್ಲವೋ ಅಥವಾ ಅದನ್ನು ಇತರ ಶೀರ್ಷಿಕೆಗಳ ಅಡಿಯಲ್ಲಿನ ಉಳಿತಾಯದಿಂದ ಪುನರ್ ವಿನಿಯೋಗದ ಮೂಲಕ ಭರಿಸಲು ಸಾಧ್ಯವಿಲ್ಲವೋ ಅಥವಾ ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಅವನು ಅಧಿಕೃತಗೊಳಿಸಿದ ಯಾವನೇ ಅಧಿಕಾರಿಯು ಅನುಮೋದಿಸಿದಂತೆ ಮೀಸಲು ನಿಧಿಯಿಂದ ಲಭ್ಯವಿರುವ ಪೂರಕ ಅನುದಾನಗಳ ಮೂಲಕ ಭರಿಸಲು ಸಾಧ್ಯವಿಲ್ಲವೋ ಅಂಥ ಯಾವುದೇ ವೆಚ್ಚವನ್ನು ವಹಿಸತಕ್ಕದ್ದಲ್ಲ:

ಪರಂತು, ಹೊಸ ಮಾರುಕಟ್ಟೆ ವರ್ಷವು ಪ್ರಾರಂಭವಾಗುವುದಕ್ಕೆ ಮುಂಚೆ ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಈ ಸಂಬಂಧದಲ್ಲಿ ಅವನು ಅಧಿಕೃತಗೊಳಿಸಿದ ಅಧಿಕಾರಿಯು ಯುಕ್ತವಾಗಿ ಮಂಜೂರು ಮಾಡಿದ ಆಯವ್ಯಯ ಪತ್ರವು ಸಮಿತಿಗೆ ತಲುಪದೆ ಇದ್ದ ಸಂದರ್ಭದಲ್ಲಿ ಸಮಿತಿಯು ಅದರ ಸಿಬ್ಬಂದಿಯ ವೇತನ ಮತ್ತು ಇತರ ಭತ್ಯೆಗಳು ಹಾಗೂ ಇತರ ದಿನನಿತ್ಯದ ವೆಚ್ಚಗಳ ಸಂಬಂಧದಲ್ಲಿ ಆಯವ್ಯಯದಲ್ಲಿ ಏರ್ಪಾಡು ಮಾಡಲಾದಂತೆ ವೆಚ್ಚವನ್ನು ಭರಿಸತಕ್ಕದ್ದು ಮತ್ತು ಮಾರುಕಟ್ಟೆ ವರ್ಷವು ಪ್ರಾರಂಭವಾದ ದಿನಾಂಕದಿಂದ ಒಂದು ತಿಂಗಳೊಳಗಾಗಿ ಆಯವ್ಯಯ ಪತ್ರಕ್ಕೆ ಅನುಮೋದನೆ ದೊರೆಯದಿದ್ದರೆ, ಅದನ್ನು ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಅವನು ಅಧಿಕೃತಗೊಳಿಸಿದ ಯಾವನೇ ಇತರ ಅಧಿಕಾರಿಯು ಯುಕ್ತವಾಗಿ ಅನುಮೋದಿಸಿದ್ದಾನೆಂದು ಭಾವಿಸತಕ್ಕದ್ದು.

**65. ಲೆಕ್ಕಪತ್ರಗಳು, ಲೆಕ್ಕಪರಿಶೋಧನೆ ಮತ್ತು ಪರಿಶೀಲನೆ.-** ಸಮಿತಿಯ ಲೆಕ್ಕಪತ್ರಗಳನ್ನು ಮತ್ತು ದಾಖಲೆಗಳನ್ನು ಈ ನಿಯಮಗಳಿಗೆ ಲಗತ್ತಿಸಿರುವ ನಮೂನೆಗಳಲ್ಲಿ ಕನ್ನಡದಲ್ಲಿ ಅಥವಾ ಇಂಗ್ಲೀಷ್‌ನಲ್ಲಿ ಇಡತಕ್ಕದ್ದು. ಆದರೆ ಯಾವುದೇ ಇತರ ಭಾಷೆಯಲ್ಲಿ ಇಡತಕ್ಕದ್ದಲ್ಲ.

(2) ಸಮಿತಿಯ ಲೆಕ್ಕಪತ್ರಗಳನ್ನು ಪ್ರತಿವರ್ಷ ಮಾರುಕಟ್ಟೆ ಇಲಾಖೆಯ ಲೆಕ್ಕ ಪರಿಶೋಧಕರು ಪರಿಶೋಧನೆ ಮಾಡತಕ್ಕದ್ದು.

(3) ಲೆಕ್ಕಪರಿಶೋಧನೆಯ ಕಾಲದಲ್ಲಿ, ಲೆಕ್ಕಪರಿಶೋಧನೆಯ ಉದ್ದೇಶಕ್ಕಾಗಿ ಲೆಕ್ಕ ಪರಿಶೋಧನಾಧಿಕಾರಿಯು ಅಗತ್ಯಪಡಿಸಬಹುದಾದ ಎಲ್ಲ ಲೆಕ್ಕಪತ್ರಗಳನ್ನು, ರಿಜಿಸ್ಟರುಗಳನ್ನು, ದಸ್ತಾವೇಜುಗಳು ಮತ್ತು ಸಂಬಂಧಪಟ್ಟ ಇತರ ಕಾಗದಪತ್ರಗಳನ್ನು ಕಾರ್ಯದರ್ಶಿಯು ಅಥವಾ ಈ ಸಂಬಂಧದಲ್ಲಿ ಅಧ್ಯಕ್ಷರಿಂದ ಅಧಿಕೃತನಾದ ಯಾವನೇ ಇತರ ವ್ಯಕ್ತಿಯು ಹಾಜರುಪಡಿಸುವ ವ್ಯವಸ್ಥೆ ಮಾಡತಕ್ಕದ್ದು. ಯಾವುದೇ ವ್ಯತ್ಯಾಸವನ್ನು ಸರಿಪಡಿಸಲು ಅಂಥ ಲೆಕ್ಕಪರಿಶೋಧಕನು ಕೇಳುವ ಯಾವುದೇ ವಿವರಣೆಯನ್ನು ಕೂಡಲೇ ಅವನಿಗೆ ಒದಗಿಸತಕ್ಕದ್ದು.

(4) ಲೆಕ್ಕಪರಿಶೋಧನೆಯ ವರದಿಯನ್ನು ಸ್ವೀಕರಿಸಿದ ಮೇಲೆ ಸಮಿತಿಯು ವರದಿಯಲ್ಲಿ ಎತ್ತಿ ತೋರಿಸಿರುವ ನ್ಯೂನತೆಗಳನ್ನು ಅಥವಾ ಅಕ್ರಮಗಳನ್ನು ಸರಿಪಡಿಸಿ, ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಈ ಸಂಬಂಧದಲ್ಲಿ ಅವನು ಅಧಿಕೃತಗೊಳಿಸಿದ ಅಧಿಕಾರಿಗೆ, ಮೂರು ತಿಂಗಳೊಳಗಾಗಿ ಹಾಗೆ ಸರಿಪಡಿಸಿದ ಬಗ್ಗೆ ಅಥವಾ ನ್ಯೂನತೆಗಳ ಅಥವಾ ಅಕ್ರಮಗಳ ಸಂಬಂಧದಲ್ಲಿ ತಾನು ನೀಡಬಯಸುವ ಯಾವುದೇ ವಿವರಣೆಯ ಬಗ್ಗೆ ಒಂದು ವರದಿಯನ್ನು ಸಲ್ಲಿಸತಕ್ಕದ್ದು.

(5) ಅಂಥ ವರದಿಯನ್ನು ಅಥವಾ ವಿವರಣೆಯನ್ನು ಸ್ವೀಕರಿಸಿದ ಮೇಲೆ ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಅಧಿಕೃತ ಅಧಿಕಾರಿಯು, ಲೆಕ್ಕಪರಿಶೋಧನೆಯ ವರದಿಯಲ್ಲಿ ಚರ್ಚಿಸಲಾದ ಎಲ್ಲ ಅಥವಾ ಯಾವುದೇ ವಿಷಯಗಳ ಸಂಬಂಧದಲ್ಲಿ,–

(ಎ) ಸಮಿತಿಯು ಒಪ್ಪಿಸಿದ ವರದಿಯನ್ನು ಅಥವಾ ನೀಡಿದ ವರದಿಯನ್ನು ಅಂಗೀಕರಿಸಬಹುದು ಮತ್ತು ಆಕ್ಷೇಪಣೆಯನ್ನು ಹಿಂತೆಗೆದುಕೊಳ್ಳುವಂತೆ ಆದೇಶಿಸಬಹುದು; ಅಥವಾ

(ಬಿ) ಮುಂದಿನ ಲೆಕ್ಕಪರಿಶೋಧನೆಯ ಕಾಲಕ್ಕೆ ಅಥವಾ ಅದಕ್ಕೂ ಮುಂಚೆ ಆ ವಿಷಯದ ಮರುಪರಿಶೀಲನೆಯಾಗಬೇಕೆಂದು ನಿರ್ದೇಶಿಸಬಹುದು;

(ಸಿ) ಲೆಕ್ಕಪರಿಶೋಧನೆಯ ವರದಿಯಲ್ಲಿ ಎತ್ತಿ ತೋರಿಸಿರುವ ಎಲ್ಲ ನ್ಯೂನತೆಗಳನ್ನು ಅಥವಾ ಅಕ್ರಮಗಳನ್ನು ಅಥವಾ ಅವುಗಳ ಪೈಕಿ ಯಾವುದನ್ನಾದರೂ ಸಮಿತಿಯು ಸರಿಪಡಿಸತಕ್ಕುದೆಂದು ನಿರ್ದೇಶಿಸಬಹುದು.

(6) ಸಮಿತಿಯು ಕೃಷಿ ಮಾರುಕಟ್ಟೆ ನಿರ್ದೇಶಕನು ಕಾಲಕಾಲಕ್ಕೆ ನಿಗದಿಪಡಿಸುವ ದರದಲ್ಲಿ ಲೆಕ್ಕಪರಿಶೋಧನೆಗೆ ಆದ ವೆಚ್ಚಗಳನ್ನು ಸಂದಾಯ ಮಾಡತಕ್ಕದ್ದು.

(7) ಸಮಿತಿಯ ಪ್ರತಿ ವರ್ಷದ ಲೆಕ್ಕಪತ್ರಗಳ ಪರಿಶೋಧನೆಯು ಪೂರ್ಣಗೊಂಡ ಕೂಡಲೇ, ಲೆಕ್ಕಪರಿಶೋಧನೆಗೆ ಆದ ವೆಚ್ಚದ ಮೊಬಲಗನ್ನು ಕೃಷಿ ಮಾರುಕಟ್ಟೆ ನಿರ್ದೇಶಕನು ಸಮಿತಿಗೆ ತಿಳಿಸತಕ್ಕದ್ದು. ಹಾಗೆ ತಿಳಿಸಿದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ಸಮಿತಿಯ ಕಾರ್ಯದರ್ಶಿಯು:–

[1][(i) ಬ್ಯಾಂಕಿಂಗ್ ಖಜಾನೆಗಳಿರುವ ಸ್ಥಳಗಳ, ರಾಜ್ಯದ ಸಂಚಿತ ನಿಧಿಗೆ ಜಮೆ ಹೊಂದಾಣಿಕೆ ಮಾಡುವ ಸಲುವಾಗಿ ಬ್ಯಾಂಕಿನ ಮ್ಯಾನೇಜರ್ ಹೆಸರಿಗೆ ಕ್ರಾಸ್ ಮಾಡಿದ ಚೆಕ್ ಬರೆದು ಸಂದಾಯ ಮಾಡತಕ್ಕದ್ದು;

1. ಅಧಿಸೂಚನೆ ಸಂಖ್ಯೆ ಆರ್‌ಡಿಸಿ 464 ಸಿಎಂಡಿ 74 ದಿನಾಂಕ 28.1.77ರ ಮೂಲಕ ಪ್ರತಿಯೋಜಿಸಲಾಗಿದೆ.

(ii) ಇತರೆ ಸ್ಥಳಗಳಲ್ಲಿ ಆ ವೆಚ್ಚವನ್ನು ಖಜಾನೆಗೆ ನಗದಾಗಿ ಕಟ್ಟತಕ್ಕದು

– ಹಾಗೂ ಈ ಸಂಗತಿಯನ್ನು ಕೃಷಿ ಮಾರಾಟ ನಿರ್ದೇಶಕನಿಗೆ ತಿಳಿಸತಕ್ಕದ್ದು.

**66. ಲೆಕ್ಕಪರಿಶೋಧಕನು ಎದ್ದು ಕಾಣುವಂಥ ಅನೌಚಿತ್ಯ ಅಥವಾ ಅಕ್ರಮ, ನಷ್ಟ, ಪೋಲು ಅಥವಾ ದುರುಪಯೋಗ – ಇವುಗಳ ಬಗ್ಗೆ ವರದಿ ಮಾಡುವುದು.–** (1) ಲೆಕ್ಕ ಪರಿಶೋಧಕನು,– (ಎ) ಸಮಿತಿಯು ಮಾಡಿರುವ ವೆಚ್ಚದಲ್ಲಿ ಅಥವಾ ಸಮಿತಿಗೆ ಬಾಕಿ ಇರುವ ಹಣದ ವಸೂಲಿಯಲ್ಲಿ [1][xxxx][1] ಅಥವಾ ಸಮಿತಿಯ ಲೆಕ್ಕಗಳಲ್ಲಿ ತಾನು ಗಮನಿಸಿದ ಎದ್ದುಕಾಣುವಂಥ ಯಾವುದೇ ನ್ಯೂನತೆ ಅಥವಾ ಅಕ್ರಮ – ಇವುಗಳ ಬಗ್ಗೆ ಸಮಿತಿಗೆ ವರದಿ ಮಾಡತಕ್ಕದ್ದು;

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3–2–1970ರ ಮೂಲಕ ಕೆಲವು ಪದಗಳನ್ನು ಬಿಟ್ಟುಬಿಡಲಾಗಿದೆ.

(ಬಿ) ಸಮಿತಿಯ ಸ್ವಾಮ್ಯದಲ್ಲಿರುವ ಅಥವಾ ಅದರಲ್ಲಿ ನಿಹಿತವಾಗಿರುವ ಹಣದ ಅಥವಾ ಇತರ ಸ್ವತ್ತಿನ ಯಾವುದೇ ನಷ್ಟ, ಪೋಲು ಅಥವಾ ದುರ್ವಿನಿಯೋಗ ಇವುಗಳನ್ನು ಮತ್ತು ಅಂಥ ನಷ್ಟ, ಪೋಲು ಅಥವಾ ದುರ್ವಿನಿಯೋಗವು ಉಪೇಕ್ಷೆ ಅಥವಾ ದುರ್ನಡತೆಯ ನೇರ ಪರಿಣಾಮವಾಗಿ ಉಂಟಾಗಿದ್ದರೆ ಅಂಥ ನಷ್ಟ, ಪೋಲು ಅಥವಾ ದುರ್ವಿನಿಯೋಗಕ್ಕೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಜವಾಬ್ದಾರರಾದ ವ್ಯಕ್ತಿಯ ಅಥವಾ ವ್ಯಕ್ತಿಗಳ ಹೆಸರುಗಳನ್ನು ಸಹ ಸಮಿತಿಗೆ ವರದಿ ಮಾಡತಕ್ಕದ್ದು.

(2) ನ್ಯೂನತೆಗಳು ಅಥವಾ ಅಕ್ರಮಗಳು ಯಾವುದಾದರೂ ಇದ್ದರೆ ಅವುಗಳನ್ನು ಕಾರ್ಯದರ್ಶಿಯು ಆ ಕೂಡಲೇ ಸರಿಪಡಿಸತಕ್ಕದ್ದು.

**67. ವಾರ್ಷಿಕ ವರದಿ.–** ಪ್ರತಿಯೊಂದು ಮಾರುಕಟ್ಟೆ ವರ್ಷದ ಅಂತ್ಯದಲ್ಲಿ, ಸಮಿತಿಯು, [1][ನಮೂನೆ 34][1] ರಲ್ಲಿ ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದರ ಪತ್ರಿಗಳನ್ನು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಅಥವಾ ಈ ಸಂಬಂಧದಲ್ಲಿ ಅವನು ನಿರ್ದೇಶಿಸಬಹುದಾಂಥ ಇತರ ಅಧಿಕಾರಿಗೆ ಸಲ್ಲಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3–2–1970ರ ಮೂಲಕ ಪ್ರತಿಯೋಜಿಸಲಾಗಿದೆ.

**68. ಸಂಚಿತ ನಿಧಿಗೆ ವಂತಿಗೆ.–** ಪ್ರತಿಯೊಂದು ಸಮಿತಿಯು, 91 (2)ನೇ ಪ್ರಕರಣದ ಮೇರೆಗೆ ಹಿಂದಿನ ತಿಂಗಳಲ್ಲಿನ ತನ್ನ ಒಟ್ಟು ಜಮೆಗಳ ಸಂಬಂಧದಲ್ಲಿ ಕೃಷಿ ಮಾರುಕಟ್ಟೆ ನಿರ್ದೇಶಕನು ನಿಗದಿಪಡಿಸಬಹುದಾದಂಥ ಶೇಕಡಾವಾರು ಮೊಬಲಗನ್ನು ರಾಜ್ಯದ ಸಂಚಿತ ನಿಧಿಗೆ ಪ್ರತಿ ತಿಂಗಳು 15ನೇ ದಿನಾಂಕಕ್ಕೆ ಮುಂಚೆ ಸಲ್ಲಿಸತಕ್ಕದ್ದು ಮತ್ತು ಆ ಸಂದಾಯಕ್ಕೆ ಸಂಬಂಧಿಸಿದಂತೆ ದ್ವಿಪ್ರತಿ ಚಲನನ್ನು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಕಳುಹಿಸತಕ್ಕದ್ದು.

**69. ರಾಜ್ಯ ಕೃಷಿ ಮಾರುಕಟ್ಟೆ ಮಂಡಳಿಗೆ ವಂತಿಗೆ.–** (1) ರಾಜ್ಯದಲ್ಲಿರುವ ಪ್ರತಿಯೊಂದು ಸಮಿತಿಯು, ಹಿಂದಿನ ತಿಂಗಳಿನ ಅವಧಿಯ ಅದರ ಒಟ್ಟು ಜಮೆಗಳ ಶೇಕಡಾ ಐದರಷ್ಟು ಮೊತ್ತವನ್ನು ಪ್ರತಿ ತಿಂಗಳು 15ನೇ ದಿನಾಂಕಕ್ಕೆ ಮುಂಚೆ ರಾಜ್ಯ ಕೃಷಿ ಮಾರುಕಟ್ಟೆ ಮಂಡಳಿಗೆ ಸಂದಾಯ ಮಾಡತಕ್ಕದ್ದು ಮತ್ತು ಆ ಕುರಿತು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ತಿಳಿಸತಕ್ಕದ್ದು.

(2) ಪ್ರತಿಯೊಂದು ಸಮಿತಿಯು, ಪ್ರತಿ ತಿಂಗಳು, ಮಾರುಕಟ್ಟೆ ಫೀಜು ಮತ್ತು ಲೈಸನ್ಸ್ ಫೀಜುಗಳ ರೂಪದಲ್ಲಿ ಪ್ರತಿಯೊಂದು ಕ್ಯಾಲೆಂಡರ್ ತಿಂಗಳಲ್ಲಿ ಪ್ರಾಪ್ತವಾದ ಒಟ್ಟು ಜಮೆಗಳನ್ನು ಮತ್ತು (1)ನೇ ಉಪನಿಯಮದ ಮೇರೆಗೆ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಗೆ ಮಾಡಲಾದ ಸಂದಾಯಗಳನ್ನು ತೋರಿಸುವ ಒಂದು ಪ್ರತ್ಯೇಕ ರಿಜಿಸ್ಟರನ್ನು ಇಡತಕ್ಕದ್ದು.

[1][(3) xxx][1]

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44, ದಿನಾಂಕ 3-2-1970ರ ಮೂಲಕ ಕೆಲವು ಪದಗಳನ್ನು ಬಿಟ್ಟುಬಿಡಲಾಗಿದೆ.

**70. ನಕ್ಷೆಗಳನ್ನು ತಯಾರಿಸುವುದು.-** ಸಮಿತಿಯ ವೆಚ್ಚದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳ ನಕ್ಷೆಗಳನ್ನು ಹಾಗೂ ಅಂದಾಜುಗಳನ್ನು ಮತ್ತು ಈಗಿರುವ ಕಟ್ಟಡಗಳ ದುರಸ್ತಿಗಾಗಿ ಅಂದಾಜುಗಳನ್ನು ಲೋಕೋಪಯೋಗಿ ಇಲಾಖೆಯ ಸೂಪರ್‌ವೈಸರ್‌ಗಳು, ಮತ್ತು [1][ಅಸಿಸ್ಟೆಂಟ್ ಎಕ್ಸಿಕ್ಯುಟೀವ್ ಇಂಜಿನಿಯರ್‌ಗಳು ಅಥವಾ ಮಾರುಕಟ್ಟೆ ಇಲಾಖೆಯ ಇಂಜಿನಿಯರಿಂಗ್ ವಿಭಾಗದವರು][1] ಸಿದ್ಧಪಡಿಸುತ್ತಾರೆ.

1. ಅಧಿಸೂಚನೆ ಸಂಖ್ಯೆ ಆರ್‌ಡಿಸಿ. 253 ಎಂಎಂಡಿ. 78 ದಿನಾಂಕ 18-5-1979ರ ಮೂಲಕ ಪ್ರತಿಯೋಜಿಸಲಾಗಿದೆ.

[1][**71. ನಕ್ಷೆಗಳ ಮತ್ತು ಅಂದಾಜುಗಳ ಅನುಮೋದನೆ.-**][1] ಮಾರುಕಟ್ಟೆ ಸಮಿತಿಯು ಯಾವ ಕಾಮಗಾರಿಗಳ ಅಂದಾಜು ವೆಚ್ಚವು ಈ ಕೆಳಕಂಡ ಕೋಷ್ಟಕದ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಗರಿಷ್ಠ ಮೊತ್ತವನ್ನು ಮೀರುವುದಿಲ್ಲವೋ ಅಂಥ ಕಾಮಗಾರಿಗಳ ನಕ್ಷೆಗಳನ್ನು ಮತ್ತು ಅಂದಾಜುಗಳನ್ನು ಕೃಷಿ ಮಾರುಕಟ್ಟೆ ಇಲಾಖೆಯ ಇಂಜನಿಯರಿಂಗ್ ವಿಭಾಗದ ಸಹಾಯಕ ಕಾರ್ಯನಿರ್ವಾಹಕ ಇಂಜನಿಯರ್ ಅಥವಾ ಕಾರ್ಯನಿರ್ವಾಹಕ ಇಂಜನಿಯರ್ - ಇವರ ಕಡೆಯಿಂದ ತಾಂತ್ರಿಕವಾಗಿ ಪರೀಕ್ಷಿಸಿ ಅನುಮೋದಿಸಿಕೊಂಡ ತರುವಾಯ ಅವುಗಳನ್ನು ಮಂಜೂರು ಮಾಡಬಹುದು ಮತ್ತು ಅಂದಾಜು ವೆಚ್ಚವು ಗರಿಷ್ಠ ಮೊತ್ತವನ್ನು ಮೀರಿದರೆ ಅದನ್ನು ಕೃಷಿ ಮಾರುಕಟ್ಟೆ ನಿರ್ದೇಶಕನು ಅಥವಾ ಈ ಬಗ್ಗೆ ಅವನು ಅಧಿಕೃತಗೊಳಿಸಿದ ಯಾವೊಬ್ಬ ಅಧಿಕಾರಿಯು, ಸಂದರ್ಭಾನುಸಾರ ಕೃಷಿ ಮಾರುಕಟ್ಟೆ ಇಲಾಖೆಯ ಇಂಜಿನಿಯರಿಂಗ್ ವಿಭಾಗದ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರು ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್ - ಇವರ ಕಡೆಯಿಂದ ತಾಂತ್ರಿಕವಾಗಿ ಪರೀಕ್ಷಿಸಿ ಅನುಮೋದಿಸಿಕೊಂಡ ತರುವಾಯ ಮಂಜೂರು ಮಾಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

**ಕೋಷ್ಟಕ**

| ಮಾರುಕಟ್ಟೆ ಸಮಿತಿಯ ಪ್ರವರ್ಗಗಳು | ಕಾಮಗಾರಿಗಳ ಅಂದಾಜು ವೆಚ್ಚದ ಗರಿಷ್ಠ ಮೊಬಲಗು |
|---|---|
| 1 | 2 |
| ಮಾರುಕಟ್ಟೆ ಫೀಜು ಹಾಗೂ ಲೈಸನ್ಸ್ ಫೀಜು - ಇವುಗಳ ಮೂಲಕ ಕಳೆದ ಮಾರುಕಟ್ಟೆ ವರ್ಷದಲ್ಲಿ ಪ್ರಾಪ್ತವಾದ ಮಾರುಕಟ್ಟೆ ಸಮಿತಿಯ ವಾರ್ಷಿಕ ವರಮಾನವು - | |
| (i) 5 ಲಕ್ಷ ಮತ್ತು ಅದಕ್ಕಿಂತ ಕಡಿಮೆ ಇದ್ದರೆ | ವರ್ಷವೊಂದಕ್ಕೆ 25,000 ರೂ. ಗರಿಷ್ಠ ಮೊತ್ತಕ್ಕೆ ಒಳಪಟ್ಟು ಪ್ರತಿಯೊಂದು ಕಾಮಗಾರಿಗೆ 5000 ರೂ |
| (ii) 5 ಲಕ್ಷ ರೂ. ಮೇಲ್ಪಟ್ಟು ಆದರೆ 20 ಲಕ್ಷ ರೂ. ವರೆಗೆ ಇದ್ದರೆ | ವರ್ಷವೊಂದಕ್ಕೆ 50,000 ರೂ ಗರಿಷ್ಠ ಮೊತ್ತಕ್ಕೆ ಒಳಪಟ್ಟು ಪ್ರತಿಯೊಂದು ಕಾಮಗಾರಿಗೆ 10,000 ರೂ. |
| (iii) 20 ಲಕ್ಷ ರೂ.ಗಳಿಗೆ ಮೇಲ್ಪಟ್ಟು ಆದರೆ 40 ಲಕ್ಷ ರೂ.ವರೆಗೆ ಇದ್ದರೆ | ವರ್ಷವೊಂದಕ್ಕೆ 1ಲಕ್ಷ ರೂ. ಗರಿಷ್ಠ ಮೊತ್ತಕ್ಕೆ ಒಳಪಟ್ಟು ಪ್ರತಿಯೊಂದು ಕಾಮಗಾರಿಗೆ 15,000 ರೂ. |
| (iv) 40 ಲಕ್ಷ ರೂ. ಗಳಿಗೆ ಮೇಲ್ಪಟ್ಟು ಇದ್ದರೆ | ವರ್ಷವೊಂದಕ್ಕೆ 1 ಲಕ್ಷ ರೂ. ಗರಿಷ್ಠ ಮೊತ್ತಕ್ಕೆ ಒಳಪಟ್ಟು ಪ್ರತಿಯೊಂದು ಕಾಮಗಾರಿಗೆ 20,000 ರೂ. |

(2) ಮಾರುಕಟ್ಟೆ ಸಮಿತಿಯು, (1)ನೇ ಉಪನಿಯಮದ ಮೇರೆಗೆ ಮಂಜೂರು ಮಾಡಲಾದ ನಕ್ಷೆ ಮತ್ತು ಅಂದಾಜುಗಳಿಗೆ ಸಂಬಂಧಪಟ್ಟ ಕಾಮಗಾರಿಯನ್ನು ಕೈಗೆತ್ತಿಕೊಳ್ಳುವುದಕ್ಕೆ ಮುಂಚೆ ಆ ನಕ್ಷೆಗಳ ಮತ್ತು ಅಂದಾಜುಗಳ ಪ್ರತಿಗಳನ್ನು ಜಿಲ್ಲೆಯ ಸಹಾಯಕ ನಿರ್ದೇಶಕನಿಗೆ ಮತ್ತು ವಿಭಾಗದ ಜಂಟಿ ನಿರ್ದೇಶಕನಿಗೆ ಕಳುಹಿಸತಕ್ಕದ್ದು ಮತ್ತು (1)ನೇ ಉಪನಿಯಮದ ಮೇರೆಗೆ ಕೈಗೊಳ್ಳಲಾದ ಕಾಮಗಾರಿಯ ಅಗತ್ಯತೆಯ ಬಗ್ಗೆ ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಪ್ರತ್ಯೇಕ ವರದಿಯೊಂದನ್ನು ಕಳುಹಿಸತಕ್ಕದ್ದು.][1]

**72. ಕಾಮಗಾರಿಗಳ ಮೇಲ್ವಿಚಾರಣೆ.-** ಎಲ್ಲ ಕಾಮಗಾರಿಗಳು ಸಮಿತಿಯ ಕಾರ್ಯದರ್ಶಿಯ ಮತ್ತು ಅಧ್ಯಕ್ಷನ ಮೇಲ್ವಿಚಾರಣೆಯಲ್ಲಿ ನಡೆಯತಕ್ಕದ್ದು.

## ಭಾಗ - VI

## ಫೀಜುಗಳನ್ನು ವಿಧಿಸುವುದು ಮತ್ತು ವಸೂಲು ಮಾಡುವುದು

**73. ಫೀಜುಗಳ ವಸೂಲಿ.-** ಸಮಿತಿಯು ಯಾವ ಫೀಜುಗಳನ್ನು ವಸೂಲು ಮಾಡಲು ಹಕ್ಕು ಹೊಂದಿರುವುದೋ ಆ ಫೀಜುಗಳನ್ನು ವಸೂಲು ಮಾಡುವಂತೆ ಅದು [1][ಯಾರೇ ಮಾರುಕಟ್ಟೆ ಕಾರ್ಯ ನಿರ್ವಾಹಕನನ್ನು ಅಗತ್ಯಪಡಿಸಿದಾಗ ಅವನು ಹಾಗೆ ವಸೂಲು ಮಾಡತಕ್ಕದ್ದು ಮತ್ತು ಆ ಫೀಜುಗಳನ್ನು ಸಮಿತಿಯು ಯುಕ್ತವಾಗಿ ಅಧಿಕೃತಗೊಳಿಸಿದ ಸಂಬಳ ಪಡೆಯುವ ನೌಕರರು ಸಹ ವಸೂಲು ಮಾಡಬಹುದು][1] ಮತ್ತು ವಸೂಲಿ ಮಾಡುವ ಹಕ್ಕನ್ನು ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44, ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

**74. ರಸೀತಿ.**– (1) ಸಮಿತಿಯ ಪರವಾಗಿ ಸ್ವೀಕರಿಸಲಾದ ಎಲ್ಲಾ ಹಣದ ಸಂದರ್ಭದಲ್ಲಿ ಹಾಗೆ ಹಣ ಸ್ವೀಕರಿಸಿದ ಬಗ್ಗೆ ಕಾರ್ಯದರ್ಶಿಯು ಅಥವಾ ಯಾರೇ ಇತರ ಅಧಿಕಾರಿಯು, ನೌಕರನು ಅಥವಾ ಈ ಸಂಬಂಧದಲ್ಲಿ ಸಮಿತಿಯು ಯುಕ್ತವಾಗಿ ಅಧಿಕೃತಗೊಳಿಸಿದ ಸಮಿತಿಯ ಏಜೆಂಟನು [1][ನಮೂನೆ 35][1] ರಲ್ಲಿ, ಕಾರ್ಬನ್ ದ್ವಿಪ್ರತಿಯಲ್ಲಿ ರಸೀತಿಯನ್ನು ಕೊಡತಕ್ಕದ್ದು ಮತ್ತು ಆ ರಸೀತಿಯನ್ನು ಹಣ ಸಂದಾಯ ಮಾಡುವ ಪಕ್ಷಕಾರನಿಗೆ ಕೊಡತಕ್ಕದ್ದು ಮತ್ತು ಕಾರ್ಬನ್ ಪ್ರತಿಯನ್ನು ಕಚೇರಿ ಪ್ರತಿಯಾಗಿ ಇಟ್ಟುಕೊಂಡಿರತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44, ದಿನಾಂಕ 3–2–1970ರ ಮೂಲಕ ಪ್ರತಿಯೋಜಿಸಲಾಗಿದೆ.

(2) ಹಣ ಸಂದಾಯವನ್ನು ಸ್ವೀಕರಿಸಲು ಅಧಿಕೃತನಾದ ಪ್ರತಿಯೊಬ್ಬ ಅಧಿಕಾರಿಯು, ನೌಕರನು ಅಥವಾ ಏಜೆಂಟನು ಪ್ರತಿದಿನ ತಾನು ಸ್ವೀಕರಿಸಿದ ಹಣದ ಎಲ್ಲಾ ಲೆಕ್ಕಗಳನ್ನು, ಕಾರ್ಯದರ್ಶಿಗೆ ಅಥವಾ ಆ ಸಂಬಂಧದಲ್ಲಿ ಆತನು ಯುಕ್ತವಾಗಿ ಅಧಿಕೃತಗೊಳಿಸಿದ ಅಧಿಕಾರಿಗೆ ಸಲ್ಲಿಸತಕ್ಕದ್ದು ಮತ್ತು ಹಾಗೆ ಸ್ವೀಕರಿಸಲಾದ ಎಲ್ಲಾ ಹಣವನ್ನು ಲೆಕ್ಕಕ್ಕೆ ಸೇರಿಸತಕ್ಕದ್ದು.

[1][**74ಎ. 65ನೇ ಪ್ರಕರಣದ (3)ನೇ ಉಪ ಪ್ರಕರಣದ ಅಡಿಯ ಪ್ರಮಾಣಪತ್ರ.**– 65ನೇ ಪ್ರಕರಣದ (3)ನೇ ಉಪ ಪ್ರಕರಣದ ಉದ್ದೇಶಕ್ಕಾಗಿ, ಮಾರುಕಟ್ಟೆ ಫೀಜನ್ನು ಸಂಗ್ರಹಿಸಿದ್ದಕ್ಕಾಗಿ 35ಎ ನಮೂನೆಯಲ್ಲಿ ಪ್ರಮಾಣ ಪತ್ರ ನೀಡತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಒಎಪಿ 10 ಎಂಆರ್‌ಇ 2001, ದಿನಾಂಕ 30.10.2001ರ ಮೂಲಕ ಸೇರಿಸಲಾಗಿದೆ.

**75. ಭದ್ರತೆ.**– ಪ್ರತಿಯೊಂದು ಸಮಿತಿಯು, ನಗದನ್ನು ನಿರ್ವಹಿಸಬೇಕಾದ ತನ್ನ ನೌಕರರಿಂದ, ತಾನು ಅವಶ್ಯಕವೆಂದು ಯೋಚಿಸುವಂಥ ಭದ್ರತೆಯನ್ನು ತೆಗೆದುಕೊಳ್ಳತಕ್ಕದ್ದು.

**76. ಲೈಸನ್ಸ್ ಪಡೆದ ವ್ಯಾಪಾರಿಗಳು, [1][ಕಮೀಷನ್ ಏಜೆಂಟರು ಮುಂತಾದವರು][1]** .– (1)ಯಾವನೇ ವ್ಯಕ್ತಿಯು ಈ ನಿಯಮದ ಮೇರೆಗೆ ಸಮಿತಿಯು ನೀಡಿದ ಲೈಸನ್ಸ್‌ನ ಮೇರೆಗೆ ಮತ್ತು ಅದಕ್ಕನುಸಾರವಾಗಿ ಹೊರತು, ಮಾರುಕಟ್ಟೆ ಪ್ರದೇಶದಲ್ಲಿ, [1][ವ್ಯಾಪಾರಿಯಾಗಿ, ಕಮಿಷನ್ ಏಜೆಂಟ್‌ನಾಗಿ, ಬ್ರೋಕರ್‌ನಾಗಿ, ಸಂಸ್ಕರಣಕಾರನಾಗಿ, ರಫ್ತುದಾರನಾಗಿ, ಆಮದುದಾರನಾಗಿ, ಜಿನ್ನರ್‌ನಾಗಿ, ಪ್ರೆಸರ್‌ನಾಗಿ, ಕ್ರಷರ್‌ನಾಗಿ, ದಾಸ್ತಾನುದಾರನಾಗಿ, [2][ಉಗ್ರಾಣಪಾಲಕನಾಗಿ][2] ಅಥವಾ ಚಿಲ್ಲರೆ ವ್ಯಾಪಾರಿಯಾಗಿ][1] ಅಧಿಸೂಚಿತ ಕೃಷಿ ಉತ್ಪನ್ನದ ವ್ಯವಹಾರವನ್ನು ನಡೆಸತಕ್ಕದ್ದಲ್ಲ.

1. ಅಧಿಸೂಚನೆ ಸಂಖ್ಯೆ ಆರ್‌ಡಿಸಿ 265 ಎಂಎಂಡಿ, 84 ದಿನಾಂಕ 7–4–1988ರ ಮೂಲಕ ಪ್ರತಿಯೋಜಿಸಲಾಗಿದೆ.

2. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27–1–1994ರ ಮೂಲಕ ಸೇರಿಸಲಾಗಿದೆ.

[1][(1ಎ) ಮತ್ತೊಬ್ಬ ವ್ಯಕ್ತಿಯ ಸೇವೆಯಲ್ಲಿ ಅಥವಾ ಫರ್ಮಿನ ಸೇವೆಯಲ್ಲಿರುವ ಯಾವನೇ ವ್ಯಕ್ತಿಯು ಸಮಿತಿಯು ನೀಡಿದ ಯಾವುದೇ ಲೈಸನ್ಸನ್ನು ಹೊಂದಿರಲಿ ಅಥವಾ ಹೊಂದಿಲ್ಲದಿರಲಿ, ದಲ್ಲಾಳಿಯಾಗಿ ಲೈಸನ್ಸ್ ಪಡೆಯಲು ಹಕ್ಕುಳ್ಳವನಾಗತಕ್ಕದ್ದಲ್ಲ. ಲೈಸನ್ಸ್ ಪಡೆದಿರುವ ಯಾವನೇ ದಲ್ಲಾಳಿಯು ಅಂಥ ಸೇವೆಗೆ ಸೇರಿದಲ್ಲಿ ಅಥವಾ ಅವನು ಯಾವ ವ್ಯವಹಾರದ ಬಗ್ಗೆ ಲೈಸನ್ಸ್ ಹೊಂದಿರುವನೋ ಅದಕ್ಕೆ ಹೊರತಾದ ವ್ಯವಹಾರವನ್ನು ಮಾಡಿದಲ್ಲಿ, ಅವನು ಲೈಸನ್ಸ್‌ನ ಷರತ್ತುಗಳನ್ನು ಉಲ್ಲಂಘಿಸಿದ್ದಾನೆಂದು ಭಾವಿಸತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಆರ್‌ಡಿಸಿ 265 ಎಂಎಂಡಿ, 84 ದಿನಾಂಕ 7–4–1988ರ ಮೂಲಕ ಪ್ರತಿಯೋಜಿಸಲಾಗಿದೆ.

[1][(2) ಮಾರುಕಟ್ಟೆ ಪ್ರದೇಶದಲ್ಲಿ –

(i) ವ್ಯಾಪಾರಿಯಾಗಿ, ಕಮಿಷನ್ ಏಜೆಂಟ್‌ನಾಗಿ, ದಲ್ಲಾಳಿಯಾಗಿ, ರಫ್ತುದಾರನಾಗಿ, ಆಮದುದಾರನಾಗಿ, ದಾಸ್ತಾನುದಾರನಾಗಿ, ಉಗ್ರಾಣಪಾಲಕನಾಗಿ, ಜಿನ್ನರ್‌ನಾಗಿ, ಪ್ರೆಸರ್‌ನಾಗಿ, ಕ್ರಷರ್‌ನಾಗಿ ಅಥವಾ ಸಂಸ್ಕರಣಕಾರನಾಗಿ ಕಾರ್ಯನಿರ್ವಹಿಸಲು ಲೈಸನ್ಸ್ ನೀಡಿಕೆಗಾಗಿ ಅಥವಾ ಲೈಸನ್ಸ್ ನವೀಕರಣಕ್ಕಾಗಿ ಸಲ್ಲಿಸಲಾಗುವ ಪ್ರತಿಯೊಂದು ಅರ್ಜಿಯು ನಮೂನೆ 41ರಲ್ಲಿ ಇರತಕ್ಕದ್ದು.

(ii) ಚಿಲ್ಲರೆ ವ್ಯಾಪಾರಿಯಾಗಿ ಕಾರ್ಯನಿರ್ವಹಿಸಲು ಲೈಸನ್ಸ್ ನೀಡಿಕೆಗಾಗಿ ಅಥವಾ ಲೈಸನ್ಸ್ ನವೀಕರಣಕ್ಕಾಗಿ ಸಲ್ಲಿಸಲಾಗುವ ಅರ್ಜಿಯು ನಮೂನೆ 42ರಲ್ಲಿ ಇರತಕ್ಕದ್ದು.

(iii) ತಾತ್ಕಾಲಿಕ ವ್ಯಾಪಾರಿಯಾಗಿ ಕಾರ್ಯನಿರ್ವಹಿಸಲು ಲೈಸೆನ್ಸ್ ನೀಡಿಕೆಗಾಗಿ ಅಥವಾ ನವೀಕರಣಕ್ಕಾಗಿ ಸಲ್ಲಿಸಲಾಗುವ ಅರ್ಜಿಯು ನಮೂನೆ 43 ರಲ್ಲಿ ಇರತಕ್ಕದ್ದು.

ಮತ್ತು ಅಂಥ ಎಲ್ಲ ಅರ್ಜಿಗಳೊಂದಿಗೆ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಫೀಜನ್ನು ಸಂದಾಯ ಮಾಡತಕ್ಕದ್ದು ಮತ್ತು ಸಮಿತಿಯು ಲೈಸನ್ಸು ನೀಡಲು ಅಥವಾ ನವೀಕರಿಸಲು ನಿರಾಕರಿಸಿದರೆ ಅರ್ಜಿದಾರನಿಗೆ ಅವನು ಸಂದಾಯ ಮಾಡಿದ್ದ ಫೀಜನ್ನು ಹಿಂದಿರುಗಿಸತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27–1–1994ರ ಮೂಲಕ ಸೇರಿಸಲಾಗಿದೆ.

(3) ಕೆಳಕಂಡ ಕೋಷ್ಟಕದ (2)ನೆಯ ಅಂಕಣದಲ್ಲಿ ನಿರ್ದಿಷ್ಟಪಡಿಸಿರುವಂತೆ ವ್ಯಾಪಾರಿಯಾಗಿ, ಕಮಿಷನ್ ಏಜೆಂಟ್‌ನಾಗಿ, ದಲ್ಲಾಳಿಯಾಗಿ, ಸಂಸ್ಕರಣಕಾರನಾಗಿ, ರಫ್ತುದಾರನಾಗಿ, ಆಮದುದಾರನಾಗಿ ಜಿನ್ನರ್‌ನಾಗಿ, ಪ್ರೆಸೆರ್‌ನಾಗಿ, ಕ್ರಷರ್‌ನಾಗಿ, ದಾಸ್ತಾನುದಾರನಾಗಿ, [1][ಉಗ್ರಾಣಪಾಲಕನಾಗಿ][1] ಅಥವಾ ಚಿಲ್ಲರೆ ವ್ಯಾಪಾರಿಯಾಗಿ ವ್ಯವಹಾರ ನಡೆಸಲು ಅಗತ್ಯವಾದ ಲೈಸನ್ಸ್ ನೀಡಿಕೆಗೆ ಸಂದಾಯವಾಗಬೇಕಾದ ಗರಿಷ್ಠ [2][ಲೈಸನ್ಸ್ ಫೀಜು][2] ಆ ಕೋಷ್ಟಕದ (3)ನೇ ಅಂಕಣದ ಸಂವಾದಿ ನಮೂದುಗಳಲ್ಲಿ ನಿರ್ದಿಷ್ಟಪಡಿಸಿದಂತಿರತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174, ಎಂಆರ್‌ಇ 91 ದಿನಾಂಕ 27–1–1994ರ ಮೂಲಕ ಸೇರಿಸಲಾಗಿದೆ.

2. ಅಧಿಸೂಚನೆ ಸಂಖ್ಯೆ ಆರ್‌ಡಿಸಿ, 265 ಎಂಎಂಡಿ 84 ದಿನಾಂಕ 16–4–1988ರ ಮೂಲಕ ಪ್ರತಿಯೋಜಿಸಲಾಗಿದೆ.

**ಕೋಷ್ಟಕ**

| ಕ್ರಮ.ಸಂಖ್ಯೆ | ಪ್ರವರ್ಗ | ವರ್ಷಕ್ಕೆ ವಿಧಿಸಬಹುದಾದ ಗರಿಷ್ಠ ಫೀಜು |
|---|---|---|
| 1. | ವ್ಯಾಪಾರಿ | 200 |
| 2 | ಕಮಿಷನ್ ಏಜೆಂಟ್ | 200 |
| 3 | ದಲ್ಲಾಳಿ (ಬ್ರೋಕರ್) | 100 |
| 4 | ಸಂಸ್ಕರಣಕಾರ | 100 |
| 5 | ರಫ್ತುದಾರ | 100 |
| 6 | ಆಮದುದಾರ | 100 |
| 7 | ಜಿನ್ನರ್ | 100 |
| 8 | ಪ್ರೆಸ್ಸರ್ | 100 |
| 9 | ಕ್ರಷರ್ | 100 |
| 10 | ದಾಸ್ತಾನುದಾರ | 100 |
| 11 | ಚಿಲ್ಲರೆ ವ್ಯಾಪಾರಿ | 25 |
| [1][12 | ಉಗ್ರಾಣ ಪಾಲಕ | 100]1 |

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174, ಎಂಆರ್‌ಇ 91 ದಿನಾಂಕ 27-1-1994ರ ಮೂಲಕ ಸೇರಿಸಲಾಗಿದೆ.

**ವಿವರಣೆ.-** ಮೇಲಿನ ಕೋಷ್ಟಕದ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿರುವ ಎರಡು ಅಥವಾ ಹೆಚ್ಚು ಪ್ರವರ್ಗಗಳ ಸಂಬಂಧದಲ್ಲಿ ಲೈಸೆನ್ಸ್ ನೀಡಿಕೆಗೆ ಅರ್ಜಿ ಸಲ್ಲಿಸಿರುವ ವ್ಯಕ್ತಿಯು ಅಂತಹ ಪ್ರತಿಯೊಂದು ಪ್ರವರ್ಗದ ಬಗ್ಗೆ ಪ್ರತ್ಯೇಕವಾಗಿ ಫೀಜನ್ನು ಸಂದಾಯ ಮಾಡಿದ ಮೇಲೆ ಅಂಥ ಎಲ್ಲಾ ಪ್ರವರ್ಗಗಳ ಸಂಬಂಧದಲ್ಲಿ ಅವನಿಗೆ ಸಂಯೋಜಿತ ಲೈಸೆನ್ಸನ್ನು ನೀಡಬಹುದು.][2]

(4) ಅಂಥ ಅರ್ಜಿಯನ್ನು ಸ್ವೀಕರಿಸಿದ ಮೇಲೆ ಸಮಿತಿಯು ತಾನು ಅವಶ್ಯವೆಂದು ಭಾವಿಸಬಹುದಾದಂಥ ವಿಚಾರಣೆಗಳನ್ನು ನಡೆಸಿದ ತರುವಾಯ [1][ನಮೂನೆ 36][1] ರಲ್ಲಿ ಲೈಸೆನ್ಸ್ ನೀಡಿಕೆಗೆ ಸಲ್ಲಿಸಿರುವ ಅರ್ಜಿಯಲ್ಲಿ ಕೋರಿರುವ ಲೈಸೆನ್ಸನ್ನು ನಿರಾಕರಿಸಲು ಯಾವುದೇ ಆಧಾರಗಳಿಲ್ಲವೆಂದು ಕಂಡುಬಂದಲ್ಲಿ ಆತನಿಗೆ ಲೈಸೆನ್ಸ್‌ನ್ನು ನೀಡಬಹುದು. ಮತ್ತು ಅಂಥ ಲೈಸೆನ್ಸ ನೀಡಿದ ಮೇಲೆ, ಅವನು ಈ ನಿಯಮಗಳಿಗೆ ಮತ್ತು ಉಪವಿಧಿಗಳಿಗೆ ಬದ್ಧನಾಗಿರುವುದಕ್ಕೆ ಒಪ್ಪಿ, ಸಮಿತಿಯು ನಿರ್ಧರಿಸಿದಂಥ ನಮೂನೆಯಲ್ಲಿ ಒಂದು ಒಪ್ಪಂದ ಪತ್ರವನ್ನು ಬರೆದುಕೊಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(5) ಅರ್ಜಿದಾರನು ದಿವಾಳಿಯಾಗಿದ್ದರೆ ಅಥವಾ ಅಧಿನಿಯಮದ, ನಿಯಮಗಳ ಅಥವಾ ಉಪಬಂಧಗಳ ಮೇರೆಗೆ ಅನ್ಯಥಾ [1][ಅನರ್ಹನಾಗಿದ್ದರೆ][1] ಅಥವಾ ಸಮಿತಿಯ ನಿಯಂತ್ರಣದ ಮೇರೆಗೆ ಮಾರುಕಟ್ಟೆ ಪ್ರದೇಶದಲ್ಲಿ ನಡೆಯುವ ದಕ್ಷ ಕಾರ್ಯನಿರ್ವಹಣೆಗೆ, ಅವನ ಕಾರ್ಯನಿರ್ವಹಣೆಯಿಂದಾಗಿ ಅನುಕೂಲವಾಗುವ ಸಂಭವ ಇಲ್ಲದಿದ್ದರೆ ಸಮಿತಿಯು ಅವನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ ಕಾರಣಗಳನ್ನು ದಾಖಲ್ಮಾಡಿ ಅವನಿಗೆ ಲೈಸೆನ್ಸ್ ನೀಡಲು ನಿರಾಕರಿಸಬಹುದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(6) (4)ನೇ ಉಪನಿಯಮದ ಮೇರೆಗೆ ನೀಡಲಾದ ಲೈಸೆನ್ಸನ್ನು ನವೀಕರಿಸಿದ ಹೊರತು, ಯಾವ ಮಾರುಕಟ್ಟೆ ವರ್ಷಕ್ಕೆ ಅದನ್ನು ನೀಡಲಾಗಿತ್ತೋ ಆ ವರ್ಷದ ಕೊನೆಯವರೆಗೆ ಅದು ಜಾರಿಯಲ್ಲಿರತಕ್ಕದ್ದು.

(7) ಲೈಸೆನ್ಸ್‌ನ ನವೀಕರಣಕ್ಕಾಗಿ ಸಲ್ಲಿಸುವ ಪ್ರತಿಯೊಂದು ಅರ್ಜಿಯನ್ನು ಅದರ ಅವಧಿ ಮುಗಿಯುವ ಒಂದು ತಿಂಗಳ ಮೊದಲು ಸಲ್ಲಿಸತಕ್ಕದ್ದು.

(8) ಲೈಸೆನ್ಸಿನ ನವೀಕರಣಕ್ಕಾಗಿ ಸಲ್ಲಿಸುವ ಅರ್ಜಿಯನ್ನು, (1)ನೇ ಉಪನಿಯಮದ ಅನುಸಾರವಾಗಿ ಸಲ್ಲಿಸಿರುವಲ್ಲಿ ಅರ್ಜಿಯ ಸಂಬಂಧದಲ್ಲಿ ಆದೇಶವಾಗುವವರೆಗೆ ಅರ್ಜಿದಾರನ ಲೈಸೆನ್ಸು ಅವಧಿಯು ಯುಕ್ತವಾಗಿ ಮುಂದುವರಿದಿದೆಯೆಂದು ಭಾವಿಸತಕ್ಕದ್ದು.

(9) ಲೈಸೆನ್ಸ್ ಪಡೆದ ಎಲ್ಲಾ [1][ವ್ಯಾಪಾರಿಗಳ, ಕಮಿಷನ್ ಏಜೆಂಟರ, ದಲ್ಲಾಳಿಗಳ, ಸಂಸ್ಕರಣಕಾರರ, ರಫ್ತುದಾರರ, ಆಮದುದಾರರ, ಜಿನ್ನರ್‌ಗಳ, ಪ್ರೆಸ್ಸರ್‌ಗಳ, ಕ್ರಷರ್‌ಗಳ, ದಾಸ್ತಾನುದಾರರ ಮತ್ತು ಚಿಲ್ಲರೆ ವ್ಯಾಪಾರಿಗಳ][1] ಹೆಸರುಗಳನ್ನು ಈ ಉದ್ದೇಶಕ್ಕಾಗಿ ಇಡಲಾಗಿರುವ ರಿಜಿಸ್ಟರ್‌ನಲ್ಲಿ ಪ್ರತ್ಯೇಕವಾಗಿ ನಮೂದಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಆರ್‌ಡಿಸಿ. 265, ಎಂಎಂಡಿ 84 ದಿನಾಂಕ 7-4-1988ರ ಮೂಲಕ ಪ್ರತಿಯೋಜಿಸಲಾಗಿದೆ.

**77. ವ್ಯಾಪಾರಿಗಳಾಗಿ ಕಾರ್ಯ ನಿರ್ವಹಿಸುವ ಬಗ್ಗೆ ಲೈಸೆನ್ಸ್ ಪಡೆಯುವ ಸಂಬಂಧದಲ್ಲಿ ಅನರ್ಹತೆಗಳು.-** ಯಾವನೇ ವ್ಯಕ್ತಿಗೆ, ಉಪವಿಧಿಗಳಲ್ಲಿ ಉಪಬಂಧಿಸಬಹುದಾದಂಥ ವಿಚಾರಣೆಯ ತರುವಾಯ ಯಾವನೇ ವ್ಯಕ್ತಿಯು,-

(i) ದಿವಾಳಿಯಾಗಿಲ್ಲವೆಂದು;

(ii) ಯಾವನೇ ಉತ್ಪಾದಕನಿಗೆ ಅಥವಾ ಯಾವನೇ ಕಮಿಷನ್ ಏಜೆಂಟನಿಗೆ ತನ್ನ ವ್ಯವಹಾರದ ಸಂಬಂಧದಲ್ಲಿ ಯಾವುವೇ ಬಾಕಿಗಳನ್ನು ಅಥವಾ ಸುಸ್ತಿ ಬಾಕಿಗಳನ್ನು ತೀರಿಸಬೇಕಾಗಿಲ್ಲವೆಂದು; ಮತ್ತು

(iii) ಈ ಅಧಿನಿಯಮದ 85ನೇ ಪ್ರಕರಣದ (2)ನೇ ಉಪಪ್ರಕರಣದ ಮತ್ತು ಉಪವಿಧಿಗಳ ಮೇರೆಗೆ ನಗದು ಭದ್ರತೆಯನ್ನು ಠೇವಣಿ ಇಟ್ಟಿರುವನೆಂದು ಅಥವಾ ಬ್ಯಾಂಕ್ ಖಾತರಿಯನ್ನು ಸಮಿತಿಗೆ ಒದಗಿಸಿರುವನೆಂದು – ಸಮಿತಿಗೆ ಮನದಟ್ಟಾದ ಹೊರತು ಮಾರುಕಟ್ಟೆ ಪ್ರದೇಶದಲ್ಲಿ ವ್ಯಾಪಾರಿಯಾಗಿ ಕಾರ್ಯನಿರ್ವಹಿಸಲು ಅದು ಆ ವ್ಯಕ್ತಿಗೆ ಲೈಸನ್ಸ್ ನೀಡತಕ್ಕದ್ದಲ್ಲ ಅಥವಾ ಆ ವ್ಯಕ್ತಿಯ ಲೈಸನ್ಸನ್ನು ನವೀಕರಿಸತಕ್ಕದ್ದಲ್ಲ ಅಥವಾ ಮುಂದುವರಿಸತಕ್ಕದ್ದಲ್ಲ.

(2) ಯಾವನೇ ವ್ಯಕ್ತಿಯ ಬಗ್ಗೆ ಕೆಳಕಂಡ ಸಂಗತಿಗಳಿಗೆ ಸಂಬಂಧಿಸಿದಂತೆ ಸಮಿತಿಗೆ ಮನದಟ್ಟಾದರೆ ಅದು ಉಪವಿಧಿಗಳಲ್ಲಿ ಉಪಬಂಧಿಸಬಹುದಾದಂಥ ವಿಚಾರಣೆಯ ತರುವಾಯ, ಮಾರುಕಟ್ಟೆ ಪ್ರದೇಶದಲ್ಲಿ ವ್ಯಾಪಾರಿಯಾಗಿ ಕಾರ್ಯನಿರ್ವಹಿಸಲು ಆ ವ್ಯಕ್ತಿಗೆ ಲೈಸನ್ಸ್ ನೀಡಲು ಅಥವಾ ನವೀಕರಿಸಲು ನಿರಾಕರಿಸಬಹುದು.–

(i) ಆ ವ್ಯಕ್ತಿಯ ಲೈಸನ್ಸನ್ನು ಕೆಲವು ದಿವಸಗಳ ಹಿಂದೆ ರದ್ದುಗೊಳಿಸಲಾಗಿದ್ದು ಅಂಥ ರದ್ದಿಯಾತಿಯ ದಿನಾಂಕದಿಂದ ಆರು ತಿಂಗಳುಗಳು ಗತಿಸಿಲ್ಲ;

(ii) ಅವನು, ಯಾವುದೇ ನಿಯಂತ್ರಿತ ಮಾರುಕಟ್ಟೆಯಲ್ಲಿ ಯಾವುದೇ ಅಪರಾಧದ ಅಥವಾ ದುರ್ನಡತೆಯ ತಪ್ಪಿತಸ್ಥನಾಗಿದ್ದಾನೆ;

(iii) ಯಾವ ವ್ಯಕ್ತಿಗೆ ಲೈಸನ್ಸನ್ನು ನಿರಾಕರಿಸಲಾಗಿದೆಯೋ ಅಂಥ ವ್ಯಕ್ತಿಯೊಡನೆ ಅವನು ಪಾಲುದಾರನಾಗಿದ್ದಾನೆ;

(iv) ಅವನು [1][ಮಧ್ಯಸ್ಥಗಾರನ ಅಥವಾ ಮಧ್ಯಸ್ಥಗಾರರ][1] ಯಾವುದೇ ಐತೀರ್ಪನ್ನು ಅಥವಾ ವಿವಾದ ಪರಿಶೀಲನಾ ಸಮಿತಿಯ ನಿರ್ಣಯವನ್ನು ಅಥವಾ ಆದೇಶವನ್ನು ಪಾಲಿಸಲು ಉಪೇಕ್ಷಿಸಿದ್ದಾನೆ ಅಥವಾ ನಿರಾಕರಿಸಿದ್ದಾನೆ;

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44, ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(v) ಯಾವುದೇ ಸರಿಯಾದ ಕಾರಣವಿಲ್ಲದೆ ವ್ಯಾಪಾರದ ಕರಾರನ್ನು ನೆರವೇರಿಸಲು ನಿರಾಕರಿಸಿದ್ದಾನೆ ಅಥವಾ ಅವನು ಸಂದಾಯಮಾಡಬೇಕಾದ ಯಾವುದೇ ಜುಲ್ಮಾನೆಯನ್ನು ಅಥವಾ ಯಾವುದೇ ಮೊಬಲಗನ್ನು, ಸಕಾಲದಲ್ಲಿ ಸಮಿತಿಗೆ ಸಂದಾಯ ಮಾಡಲು ತಪ್ಪಿದ್ದಾನೆ ಅಥವಾ ಉಪವಿಧಿಗಳಲ್ಲಿ ಉಪಬಂಧಿಸಲಾದಂತೆ ಸೂಕ್ತ ಸಮಯದಲ್ಲಿ ನಗದು ಭದ್ರತೆಯನ್ನು ಠೇವಣಿ ಇಡಲು ಅಥವಾ ಬ್ಯಾಂಕ್ ಖಾತರಿಯನ್ನು ಒದಗಿಸಲು ತಪ್ಪಿದ್ದಾನೆ;

(vi) ಸಮಿತಿಗೆ ಅಥವಾ ಉಪಸಮಿತಿಗೆ ಅಥವಾ ಈ ಸಂಬಂಧದಲ್ಲಿ ಅಧಿಕೃತನಾದ ಅದರ ಯಾವನೇ ಅಧಿಕಾರಿಗೆ ಪರಿಶೀಲನೆಗಾಗಿ ತನ್ನ ಲೆಕ್ಕದ ಪುಸ್ತಕವನ್ನು ಒಪ್ಪಿಸಲು ನಿರಾಕರಿಸಿದ್ದಾನೆ ಅಥವಾ ಸಮಿತಿಯ ಯಾವುದೇ ಸಭೆಗೆ ಹಾಜರಾಗಲು ಕೊಡಲಾದ ನೋಟೀಸಿನ ಅಥವಾ ಮಾಡಲಾದ ವಿನಂತಿಯ ಮೇರೆಗೆ ಸಭೆಗೆ ಹಾಜರಾಗಲು ತಪ್ಪಿದ್ದಾನೆ;

(vii) ಈ ನಿಯಮಗಳಲ್ಲಿ ಮತ್ತು ಉಪಬಂಧಗಳಲ್ಲಿ ಗೊತ್ತುಪಡಿಸಲಾದಂತೆ ಅಥವಾ ಸಮಿತಿಯ ಆದೇಶಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಸೂಕ್ತ ಸಮಯದಲ್ಲಿ ಸಮಿತಿಗೆ ವರದಿಗಳನ್ನು ಅಥವಾ ವಿವರ ಪಟ್ಟಿಕೆಗಳನ್ನು ಅಥವಾ ವಿವರಣೆಗಳನ್ನು ಸಲ್ಲಿಸಲು ತಪ್ಪಿದ್ದಾನೆ;

(viii) ಮಾರುಕಟ್ಟೆಯ ಕೆಲಸ ಕಾರ್ಯಗಳು ಸುಗಮವಾಗಿ ನಡೆಯದಂತೆ ಅಥವಾ ಅಧಿನಿಯಮದ, ನಿಯಮಗಳ ಅಥವಾ ಉಪವಿಧಿಗಳ ಉಪಬಂಧಗಳನ್ನು ಜಾರಿಗೊಳಿಸಲಾಗದಂತೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಮುಷ್ಕರ ಹೂಡಿದ್ದಾನೆ ಅಥವಾ ಬಹಿಷ್ಕಾರ ಹಾಕಿದ್ದಾನೆ ಅಥವಾ ಹಾಗೆ ಮಾಡುವಂತೆ ಪ್ರೇರೇಪಿಸುತ್ತಿದ್ದಾನೆ;

(ix) ಅವನು ಮಿತಿಮೀರಿ ವ್ಯಾಪಾರ ಮಾಡಿದ್ದಾನೆ;

(x) ಅವನು ಈ ಅಧಿನಿಯಮದ, ನಿಯಮಗಳ ಅಥವಾ ಉಪವಿಧಿಗಳ ಉಪಬಂಧಗಳನ್ನು ಅಥವಾ ಸಮಿತಿಯು ನೀಡುವ ಕಾನೂನು ಸಮ್ಮತ ನಿರ್ದೇಶನಗಳನ್ನು ರೂಢಿಗತವಾಗಿ ಉಲ್ಲಂಘಿಸುತ್ತಾನೆ;

(xi) ಅವನ ಹಿಂದಿನ ನಡತೆಯು ಸುಭದ್ರ ಮತ್ತು ಸುವ್ಯವಸ್ಥಿತವಾದ ಮಾರುಕಟ್ಟೆಯ ಕಾರ್ಯನಿರ್ವಹಣೆಗೆ ಭಂಗಬರುವಂಥದ್ದಾಗಿದೆ ಅಥವಾ ಅವನು ಯಾವನೇ ವ್ಯಕ್ತಿಯೊಂದಿಗೆ ಯಾವುದೇ ಅಪಕೀರ್ತಿ ತರುವಂಥ ಅಥವಾ ಮೋಸದ ವ್ಯವಹಾರಗಳಲ್ಲಿ ತೊಡಗಿದ್ದಾನೆ;

(xii) ಅವನು ಲೈಸನ್ಸ್ ಅವಧಿಯಲ್ಲಿ ಅಧಿಸೂಚಿತ ಕೃಷಿ ಸರಕುಗಳ ಯಾವುದೇ ವ್ಯಾಪಾರವನ್ನು ಮಾಡಿಲ್ಲ ಅಥವಾ ಅವನು ನಿಜವಾದ ವ್ಯಾಪಾರಿಯಾಗಿರದೆ ಲೈಸನ್ಸ್‌ನಿಂದ ಪಡೆಯಬಹುದಾದ ಅನುಕೂಲಗಳ ಸಲುವಾಗಿ ಮಾತ್ರ ವ್ಯಾಪಾರಿಯಾಗಿದ್ದಾನೆ;

**78. ಕಮಿಷನ್ ಏಜೆಂಟನಾಗಿ ಕಾರ್ಯನಿರ್ವಹಿಸಲು ಅಗತ್ಯವಾದ ಲೈಸನ್ಸ್ ಪಡೆಯುವ ಸಂಬಂಧದಲ್ಲಿ ಅನರ್ಹತೆ.–** (1) ಮಾರುಕಟ್ಟೆ ಪ್ರದೇಶದಲ್ಲಿ ಕಮಿಷನ್ ಏಜೆಂಟನಾಗಿ ಕಾರ್ಯ ನಿರ್ವಹಿಸಲು ಯಾವನೇ ವ್ಯಕ್ತಿಯು:–

(i) ಧನಾನುಕೂಲ ಉಳ್ಳವನೆಂದು;

(ii) ತನ್ನ ಉತ್ಪನ್ನದ ಮಾರಾಟದ ಅನಂತರ ಬಂದ ಹಣವನ್ನು ಉತ್ಪನ್ನದ ಮಾಲೀಕನು ಸಂದಾಯ ಮಾಡುವಂತೆ ತಗಾದೆ ಮಾಡಿದಾಗ ಅದನ್ನು ಸಂದಾಯ ಮಾಡಲು ತಪ್ಪಿದ ಸುಸ್ತಿದಾರನಲ್ಲವೆಂದು; ಮತ್ತು

(iii) ಉಪವಿಧಿಗಳಲ್ಲಿ ಗೊತ್ತುಪಡಿಸಬಹುದಾದಂಥ ನಗದು ಭದ್ರತೆಯನ್ನು ಸಮಿತಿಯಲ್ಲಿ ಠೇವಣಿ ಇಟ್ಟಿದ್ದಾನೆಂದು ಅಥವಾ ಬ್ಯಾಂಕ್ ಖಾತರಿಯನ್ನು ಸಮಿತಿಗೆ ಒದಗಿಸಿದ್ದಾನೆಂದು ಉಪವಿಧಿಗಳಲ್ಲಿ ಗೊತ್ತುಪಡಿಸಬಹುದಾದಂಥ ವಿಚಾರಣೆಯ ತರುವಾಯ ಸಮಿತಿಗೆ ಮನದಟ್ಟಾದ ಹೊರತು, ಸಮಿತಿಯು ಆ ಯಾವನೇ ವ್ಯಕ್ತಿಗೆ ಲೈಸನ್ಸನ್ನು ನೀಡತಕ್ಕದ್ದಲ್ಲ ಅಥವಾ ಲೈಸನ್ಸನ್ನು ಮುಂದುವರೆಸತಕ್ಕದ್ದಲ್ಲ ಅಥವಾ ನವೀಕರಿಸತಕ್ಕದ್ದಲ್ಲ.

(2) ಮಾರುಕಟ್ಟೆ ಪ್ರದೇಶದಲ್ಲಿ ಕಮಿಷನ್ ಏಜೆಂಟನಾಗಿ ಕಾರ್ಯನಿರ್ವಹಿಸಲು ಇಚ್ಛಿಸುವ ಯಾವನೇ ವ್ಯಕ್ತಿಯ ಸಂಬಂಧದಲ್ಲಿ ಉಪವಿಧಿಗಳಲ್ಲಿ ಗೊತ್ತುಪಡಿಸಬಹುದಾದಂಥ ವಿಚಾರಣೆಯ ತರುವಾಯ ಸಮಿತಿಗೆ ಕೆಳಕಂಡ ಅಂಶಗಳ ಬಗ್ಗೆ ಮನದಟ್ಟಾದರೆ ಅದು ಲೈಸನ್ಸನ್ನು ನೀಡಲು ಅಥವಾ ನವೀಕರಿಸಲು ನಿರಾಕರಿಸಬಹುದು:–

(i) ಅವನ ಲೈಸನ್ಸ್ ಕೆಲವು ದಿವಸಗಳ ಹಿಂದೆ ರದ್ದಾಗಿದ್ದು ಆ ರದ್ದಿಯಾತಿಯ ದಿನಾಂಕದಿಂದ ಆರು ತಿಂಗಳ ಅವಧಿಯು ಪೂರ್ಣಗೊಂಡಿಲ್ಲ;

(ii) ಯಾವುದೇ ನಿಯಂತ್ರಿತ ಮಾರುಕಟ್ಟೆಯಲ್ಲಿ ಅವನು ಯಾವುದೇ ಅಪರಾಧದ ಅಥವಾ ದುರ್ನಡತೆಯ ಸಂಬಂಧದಲ್ಲಿ ತಪ್ಪಿತಸ್ಥನಾಗಿದ್ದಾನೆ;

(iii) ಯಾವ ವ್ಯಕ್ತಿಗೆ ಲೈಸನ್ಸನ್ನು ನಿರಾಕರಿಸಲಾಗಿದೆಯೋ ಅಂಥ ವ್ಯಕ್ತಿಯೊಂದಿಗೆ ಅವನು ಪಾಲುದಾರನಾಗಿದ್ದಾನೆ;

(iv) [1][ಮಧ್ಯಸ್ಥಗಾರನ ಅಥವಾ ಮಧ್ಯಸ್ಥಗಾರರ][1] ಯಾವುದೇ ಐತೀರ್ಪನ್ನು ಅಥವಾ ವಿವಾದ ಪರಿಶೀಲನಾ ಸಮಿತಿಯ ನಿರ್ಣಯವನ್ನು ಅಥವಾ ಆದೇಶವನ್ನು ಪಾಲಿಸಲು ಉಪೇಕ್ಷಿಸಿದ್ದಾನೆ ಅಥವಾ ಅದನ್ನು ಒಪ್ಪಿಕೊಳ್ಳಲು ಅಥವಾ ಅದಕ್ಕೆ ಬದ್ಧನಾಗಲು ನಿರಾಕರಿಸಿದ್ದಾನೆ;

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44, ದಿನಾಂಕ 3–2–1970 ರ ಮೂಲಕ ಪ್ರತಿಯೋಜಿಸಲಾಗಿದೆ.

(v) ಅವನು ಸಮಿತಿಗೆ ಸಂದಾಯ ಮಾಡಬೇಕಾದ ಯಾವುದೇ ಮೊಬಲಗನ್ನು ಯುಕ್ತ ಕಾಲದಲ್ಲಿ ಸಂದಾಯ ಮಾಡಲು ತಪ್ಪಿದ್ದಾನೆ ಅಥವಾ ಉಪವಿಧಿಗಳಲ್ಲಿ ಗೊತ್ತುಪಡಿಸಲಾದಂಥ ನಗದು ಭದ್ರತೆಯನ್ನು ಸಮಿತಿಯ ಬಳಿ ಠೇವಣಿ ಇಡಲು ಅಥವಾ ಅಂಥ ಬ್ಯಾಂಕ್ ಖಾತರಿಯನ್ನು ಸಮಿತಿಗೆ ಒದಗಿಸಲು ತಪ್ಪಿದ್ದಾನೆ;

(vi) ಸಮಿತಿಗೆ ಅಥವಾ ಈ ಸಂಬಂಧದಲ್ಲಿ ಅಧಿಕೃತನಾದ ಅಧಿಕಾರಿಗೆ, ತನ್ನ ಲೆಕ್ಕದ ಪುಸ್ತಕಗಳನ್ನು ಪರಿಶೀಲನೆಗೆ ಒಪ್ಪಿಸಲು ನಿರಾಕರಿಸಿದ್ದಾನೆ ಅಥವಾ ಸಮಿತಿಯ ಯಾವುದೇ ಸಭೆಗೆ ಹಾಜರಾಗುವಂತೆ ನೀಡಲಾದ ಯಾವುದೇ ನೋಟೀಸನ್ನು ಅಥವಾ ಮಾಡಲಾದ ಕೋರಿಕೆಯನ್ನು ಪಾಲಿಸಲು ತಪ್ಪಿದ್ದಾನೆ;

(vii) ಈ ನಿಯಮಗಳಲ್ಲಿ ಅಥವಾ ಉಪವಿಧಿಗಳಲ್ಲಿ ಗೊತ್ತುಪಡಿಸಲಾದಂಥ ರೀತಿಯಲ್ಲಿ ಅಥವಾ ಸಮಿತಿಯು ನಿರ್ದಿಷ್ಟಪಡಿಸಬಹುದಾದಂಥ ಸೂಕ್ತ ಸಮಯದಲ್ಲಿ ಸಮಿತಿಗೆ ವರದಿಗಳನ್ನು ಅಥವಾ ವಿವರಪಟ್ಟಿಕೆಗಳನ್ನು ಅಥವಾ ವಿವರಗಳನ್ನು ಸಲ್ಲಿಸಲು ತಪ್ಪಿದ್ದಾನೆ;

(viii) ಮಾರುಕಟ್ಟೆಯ ಕೆಲಸ ಕಾರ್ಯಗಳು ಸುಗಮವಾಗಿ ನಡೆಯದಂತೆ ಅಥವಾ ಈ ಅಧಿನಿಯಮದ, ನಿಯಮಗಳ ಅಥವಾ ಉಪವಿಧಿಗಳ ಉಪಬಂಧಗಳನ್ನು ಜಾರಿಗೊಳಿಸದಂತೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಮುಷ್ಕರವನ್ನು ಹೂಡಿದ್ದಾನೆ ಅಥವಾ ಬಹಿಷ್ಕಾರವನ್ನು ಹಾಕಿದ್ದಾನೆ ಅಥವಾ ಹಾಗೆ ಮಾಡುವಂತೆ ಪ್ರೇರೇಪಿಸುತ್ತಿದ್ದಾನೆ;

(ix) ಅವನು ಈ ಅಧಿನಿಯಮದ, ನಿಯಮಗಳ ಅಥವಾ ಉಪವಿಧಿಗಳ ಉಪಬಂಧಗಳನ್ನು ಅಥವಾ ಸಮಿತಿಯು ನೀಡಿದ ಕಾನೂನು ಸಮ್ಮತ ನಿರ್ದೇಶನಗಳನ್ನು ರೂಢಿಗತವಾಗಿ ಉಲ್ಲಂಘಿಸಿರುತ್ತಾನೆ;

(x) ಅವನು ಯಾವನೇ ವ್ಯಕ್ತಿಯೊಂದಿಗೆ, ಅಪಕೀರ್ತಿ ತರುವಂಥ ಅಥವಾ ಮೋಸದ ಯಾವುದೇ ವ್ಯವಹಾರವನ್ನು ನಡೆಸಿರುತ್ತಾನೆ;

(xi) ಅವನು, ಲೈಸನ್ಸ್ ಅವಧಿಯಲ್ಲಿ ಅಧಿಸೂಚಿತ ಕೃಷಿ ಸರಕುಗಳಿಗೆ ಸಂಬಂಧಿಸಿದಂತೆ ಯಾವುದೇ ವ್ಯವಹಾರವನ್ನು ಮಾಡಿಲ್ಲ ಮತ್ತು ಅವನು ನಿಜವಾದ ಕಮಿಷನ್ ಏಜೆಂಟ್‌ನಾಗಿರದೆ, ಲೈಸನ್ಸ್‌ನಿಂದ ಪಡೆಯಬಹುದಾದ ಅನುಕೂಲಗಳ ಸಲುವಾಗಿ ಮಾತ್ರ ಲೈಸನ್ಸನ್ನು ಪಡೆದಿದ್ದಾನೆ.

**1[79. ಲೈಸನ್ಸು ಹೊಂದಿರುವ ತೂಕದಾರರು, ಅಳತೆಗಾರರು, ಸರ್ವೇಯರ್‌ಗಳು, ಹಮಾಲರು, ಎತ್ತಿನ ಗಾಡಿಯವರು, ಸಾರ್ವಜನಿಕ ಸಾಗಣೆದಾರರು ಮುಂತಾದವರು.–** (1) ಯಾವನೇ ವ್ಯಕ್ತಿಯು, ಮಾರುಕಟ್ಟೆ ಸಮಿತಿಯು ನೀಡಿರುವ 37ನೇ ನಮೂನೆಯಲ್ಲಿರುವ ಲೈಸನ್ಸನ್ನು ಹೊಂದಿರುವ ಹೊರತು, ಯಾವುದೇ ಮಾರುಕಟ್ಟೆ ಪ್ರದೇಶದಲ್ಲಿ ತೂಕದಾರನಾಗಿ, ಅಳತೆಗಾರನಾಗಿ ಸರ್ವೆಯರ್‌ನಾಗಿ, ಹಮಾಲನಾಗಿ, ಎತ್ತಿನ ಗಾಡಿಯವನಾಗಿ ಅಥವಾ ಸಾರ್ವಜನಿಕ ಸಾಗಣೆ ವಾಹನದ ಒಡೆಯನಾಗಿ ಅಥವಾ ಮಾರುಕಟ್ಟೆಯ ಇತರ ಯಾವುದೇ ಕಾರ್ಯನಿರ್ವಾಹಕನಾಗಿ ಕಾರ್ಯನಿರ್ವಹಿಸತಕ್ಕದ್ದಲ್ಲ.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ 27–1–1994ರ ಮೂಲಕ ಪ್ರತಿಯೋಜಿಸಲಾಗಿದೆ.

(2) ಮಾರುಕಟ್ಟೆ ಪ್ರದೇಶದಲ್ಲಿನ –

(i) ತೂಕದಾರನಾಗಿ, ಅಳತೆಗಾರನಾಗಿ, ಸರ್ವೇಯರನಾಗಿ ಕಾರ್ಯನಿರ್ವಹಿಸಲು ಲೈಸನ್ಸ್ ಪಡೆಯಬಯಸುವ ಯಾವನೇ ವ್ಯಕ್ತಿಯು ನಮೂನೆ 44ರಲ್ಲಿ ಅರ್ಜಿ ಸಲ್ಲಿಸತಕ್ಕಯ ;

(ii) ಹಮಾಲನಾಗಿ, ಎತ್ತಿನ ಗಾಡಿಯವನಾಗಿ, ಸಾರ್ವಜನಿಕ ಸಾಗಣೆ ವಾಹನದ ಒಡೆಯನಾಗಿ ಅಥವಾ ಇತರ ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನಾಗಿ ಕಾರ್ಯನಿರ್ವಹಿಸಲು ಲೈಸನ್ಸ್ ಪಡೆಯಬಯಸುವ ವ್ಯಕ್ತಿಯು ನಮೂನೆ 45ರಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

ಮತ್ತು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಹಾಗೂ ನೂರು ರೂ.ಗಳನ್ನು ಮೀರದ ಫೀಜನ್ನು ಸಂದಾಯ ಮಾಡತಕ್ಕದ್ದು. ಮತ್ತು ಅಂಥ ಅರ್ಜಿಯನ್ನು ಸ್ವೀಕರಿಸಿದ ತರುವಾಯ ಮಾರುಕಟ್ಟೆ ಸಮಿತಿಗೆ, ಅದನ್ನು ನಿರಾಕರಿಸಲು ಯಾವುದೇ ಕಾರಣ ಕಂಡುಬರದಿದ್ದರೆ ಅದು ನಮೂನೆ 37ರಲ್ಲಿ ಲೈಸನ್ಸು ನೀಡಬಹುದು ಅಥವಾ ಅದನ್ನು ನವೀಕರಿಸಬಹುದು ಮತ್ತು ಅಂಥ ಲೈಸನ್ಸು ಪಡೆದ ತರುವಾಯ ಅರ್ಜಿದಾರನು ಮಾರುಕಟ್ಟೆ ಸಮಿತಿಯು ನಿರ್ಧರಿಸಬಹುದಾದಂಥ ನಮೂನೆಯಲ್ಲಿ ಈ ನಿಯಮಗಳಲ್ಲಿ ಮತ್ತು ಮಾರುಕಟ್ಟೆ ಸಮಿತಿಯ ಉಪವಿಧಿಗಳನ್ನು ಅನುಸರಿಸಲು ಒಪ್ಪಿ, ಒಂದು ಕರಾರು ಪತ್ರವನ್ನು ಬರೆದುಕೊಡತಕ್ಕದ್ದು][1]

(3) (2)ನೇ ಉಪನಿಯಮದ ಮೇರೆಗೆ ನೀಡಿದ ಲೈಸನ್ಸನ್ನು ನವೀಕರಿಸಿದ ಹೊರತು, ಅದನ್ನು ಯಾವ ಮಾರುಕಟ್ಟೆ ವರ್ಷದಲ್ಲಿ ನೀಡಲಾಗಿದೆಯೋ ಆ ವರ್ಷದ ಅಂತ್ಯದವರೆಗೆ ಅದು ಜಾರಿಯಲ್ಲಿರತಕ್ಕದ್ದು.

(4) ಯಾರೇ ವ್ಯಕ್ತಿಯು ತಾನು ಯಾವ ವ್ಯವಹಾರಕ್ಕಾಗಿ ಲೈಸನ್ಸ್ ಪಡೆದಿರುವನೋ ಆ ವ್ಯವಹಾರದ ಹೊರತು [1][ಮಾರುಕಟ್ಟೆಯ ಕಾರ್ಯನಿರ್ವಾಹಕನಾಗಿ ವ್ಯವಹಾರ ನಡೆಸಲು][1] ಹಕ್ಕುಳ್ಳವನಾಗತಕ್ಕದ್ದಲ್ಲ.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44 ದಿನಾಂಕ 3.2.70 ರ ಮೂಲಕ ಪ್ರತಿಯೋಜಿಸಲಾಗಿದೆ.

(5) ಮತ್ತೊಬ್ಬ ವ್ಯಕ್ತಿಯ ಬಳಿ ಅಥವಾ ಫರ್ಮಿನಲ್ಲಿ ಕೆಲಸ ಮಾಡುತ್ತಿರುವ ಯಾವನೇ ವ್ಯಕ್ತಿಯು, ಸಮಿತಿಯು ನೀಡಿದ ಯಾವುದೇ ಲೈಸನ್ಸನ್ನು ಹೊಂದಿರಲಿ ಅಥವಾ ಹೊಂದಿಲ್ಲದಿರಲಿ, ಅವನು [1][xxx][1] ತೂಕದಾರನಾಗಿ ಅಥವಾ ಮಾಪಕನಾಗಿ [1][xxx][1] ಆ ಲೈಸನ್ಸನ್ನು ಧಾರಣಮಾಡಲು ಅರ್ಹನಾಗಿರತಕ್ಕದ್ದಲ್ಲ, ಲೈಸನ್ಸ್ ಪಡೆದಿರುವ ಯಾವನೇ ಬ್ರೋಕರನು, ತೂಕದಾರನು, ಮಾಪಕನು ಅಥವಾ ಸರ್ವೇಯರನು ಯಾವ ಕೆಲಸಕ್ಕಾಗಿ ಅಥವಾ ವ್ಯವಹಾರಕ್ಕಾಗಿ ಲೈಸನ್ಸ್ ಧಾರಣಮಾಡಿರುವನೋ ಆ ಕೆಲಸದ ಅಥವಾ ವ್ಯವಹಾರದ ಹೊರತಾಗಿ ಹಾಗೆ ಕೆಲಸ ಮಾಡುತ್ತಿದ್ದರೆ ಅಥವಾ ವ್ಯವಹಾರ ಮಾಡಿದರೆ ಅವನು ಆ ಲೈಸನ್ಸಿನ ಷರತ್ತುಗಳನ್ನು ಉಲ್ಲಂಘಿಸಿದ್ದಾನೆಂದು ಭಾವಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಆರ್‌ಡಿಸಿ, 265 ಎಂಎಂಡಿ 84 ದಿನಾಂಕ 7-4-1988ರ ಮೂಲಕ ಬಿಟ್ಟುಬಿಡಲಾಗಿದೆ.

(6) ಅರ್ಜಿದಾರನಿಗೆ ಲೈಸನ್ಸ್ ನೀಡಿದರೆ ಅಥವಾ ಅವನ ಲೈಸನ್ಸ್‌ನ್ನು ನವೀಕರಿಸಿದರೆ, ಸಮಿತಿಯ ನಿಯಂತ್ರಣದಲ್ಲಿ ನಡೆಯುವ ಮಾರುಕಟ್ಟೆ ವ್ಯವಹಾರಗಳ ದಕ್ಷ ಕಾರ್ಯನಿರ್ವಹಣೆಗೆ ಅನುಕೂಲವಾಗುವ ಸಂಭವವಿಲ್ಲವೆಂದು ಅಥವಾ ಅರ್ಜಿದಾರನು ಅಧಿನಿಯಮದ, ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಅನ್ಯಥಾ ಅರ್ಹನಾಗಿಲ್ಲವೆಂದು ಅಥವಾ ಅನರ್ಹನಾಗಿರುವನೆಂದು ಸಮಿತಿಗೆ ಮನದಟ್ಟಾದರೆ, ಸಮಿತಿಯು, ಅರ್ಜಿದಾರನಿಗೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ನಂತರ ಕಾರಣಗಳನ್ನು ದಾಖಲ್ಮಾಡಿ ಅವನಿಗೆ ಲೈಸನ್ಸ್‌ನ್ನು ನೀಡಲು ಅಥವಾ ನವೀಕರಿಸಲು ನಿರಾಕರಿಸಬಹುದು.

**80. ಲೈಸನ್ಸಿನ ದ್ವಿಪತ್ರಿಯನ್ನು ನೀಡುವುದು.–** ಸಮಿತಿಯು, ನೀಡಿದ ಲೈಸನ್ಸ್ ಕಳೆದುಹೋಗಿದೆ ಎಂದು ಅಥವಾ ಆಕಸ್ಮಿಕವಾಗಿ ನಾಶವಾಗಿದೆ ಎಂದು, ಅವಶ್ಯವಾದಂಥ ವಿಚಾರಣೆ ನಡೆಸಿದ ತರುವಾಯ ಅದಕ್ಕೆ ಮನದಟ್ಟಾದರೆ ಆಗ ಅದು ಒಂದು ರೂಪಾಯಿ ಫೀಜನ್ನು ಸಂದಾಯ ಮಾಡಿದ ಮೇಲೆ ಲೈಸೆನ್ಸ್‌ನ ದ್ವಿಪತ್ರಿಯನ್ನು ನೀಡಬಹುದು.

**81. ಲೈಸನ್ಸ್‌ನ ನಿರಾಕರಣೆಯನ್ನು, ರದ್ದಿಯಾತಿಯನ್ನು ಅಥವಾ ಅಮಾನತುಗೊಳಿಸಿರುವುದನ್ನು ಸಂಬಂಧಪಟ್ಟ ವ್ಯಕ್ತಿಗೆ ತಿಳಿಸುವುದು.–** (1) ಸಮಿತಿಯು,–

(ಎ) 76ನೇ ನಿಯಮದ (5)ನೇ ಉಪನಿಯಮದ ಅಥವಾ 79ನೇ ನಿಯಮದ (6)ನೇ ಉಪನಿಯಮದ ಮೇರೆಗೆ ಲೈಸನ್ಸನ್ನು ನೀಡಲು ನಿರಾಕರಿಸಿದಾಗಲೆಲ್ಲ;

(ಬಿ) ಅಧಿನಿಯಮದ 73ನೇ ಪ್ರಕರಣದ ಮೇರೆಗೆ ಲೈಸನ್ಸ್‌ನ್ನು ರದ್ದುಗೊಳಿಸಿದಾಗಲೆಲ್ಲ ಅಥವಾ ಅಮಾನತುಗೊಳಿಸಿದಾಗಲೆಲ್ಲ

ಸಮಿತಿಯು ಸಂದರ್ಭಾನುಸಾರವಾಗಿ ತನ್ನ ನಿರ್ಣಯವನ್ನು ಅಥವಾ ಆದೇಶವನ್ನು,–

(i) ಅಂಥ ನಿರ್ಣಯದ ಅಥವಾ ಸಂದರ್ಭಾನುಸಾರ ಆದೇಶದ ಪ್ರತಿಯನ್ನು ಸಂಬಂಧಪಟ್ಟ ವ್ಯಕ್ತಿಗೆ ಖುದ್ದಾಗಿ ಬಟವಾಡೆ ಮಾಡುವ ಮೂಲಕ ಅಥವಾ ಕೊಡುವ ಮೂಲಕ; ಅಥವಾ

(ii) ಅದನ್ನು ನೋಂದಾಯಿತ ಅಂಚೆ ಸ್ವೀಕೃತಿ ಪತ್ರದ ದ್ವಾರಾ ಕಳಿಸುವ ಮೂಲಕ ಅವನಿಗೆ ತಿಳಿಸತಕ್ಕದ್ದು.

(2) ಅಂಥ ನಿರ್ಣಯವನ್ನು ಅಥವಾ ಸಂದರ್ಭಾನುಸಾರ ಆದೇಶವನ್ನು ಸಂಬಂಧಪಟ್ಟ ವ್ಯಕ್ತಿಗೆ ಅದರ ಪ್ರತಿಯನ್ನು ಖುದ್ದಾಗಿ ಬಟಾವಾಡೆ ಮಾಡಲಾದ ಅಥವಾ ಕೊಡಲಾದ ದಿನಾಂಕದಂದು, ಅಥವಾ ಆ ಪ್ರತಿಯನ್ನು ಅವನು ನಿರಾಕರಿಸಿದಲ್ಲಿ, ಅಂಥ ನಿರಾಕರಣೆಯ ದಿನಾಂಕದಂದು ಅಥವಾ ನೋಂದಾಯಿತ ಅಂಚೆಯ ಮೂಲಕ ಕಳುಹಿಸಿದ್ದರೆ, ಅದನ್ನು ಅವನು ಸ್ವೀಕರಿಸಿದ ಅಥವಾ ನಿರಾಕರಿಸಿದ ದಿನಾಂಕದಂದು ಅವನಿಗೆ ತಿಳಿಸಲಾಗಿದೆ ಎಂದು ಭಾವಿಸತಕ್ಕದ್ದು.

**82. ಖರೀದಿದಾರ ಮತ್ತು ಮಾರಾಟಗಾರ ಇವರಿಬ್ಬರ ಪರವಾಗಿ ಬ್ರೋಕರರು ದಲ್ಲಾಳಿಗಳು, ಕಾರ್ಯನಿರ್ವಹಿಸದಂತೆ ನಿಷೇಧಿಸುವುದು.**– (1) ಲೈಸನ್ಸ್ ಪಡೆದಿರುವ ಯಾವನೇ ದಲ್ಲಾಳಿಯು ಕೃಷಿ ಉತ್ಪನ್ನದ ಖರೀದಿದಾರ ಮತ್ತು ಮಾರಾಟಗಾರ ಇವರಿಬ್ಬರ ಪರವಾಗಿ ಯಾವುದೇ ವ್ಯವಹಾರವನ್ನು ಮಾಡತಕ್ಕದ್ದಲ್ಲ.

(2) ಲೈಸನ್ಸ್ ಪಡೆದಿರುವ ಯಾವನೇ ದಲ್ಲಾಳಿಯು, (1)ನೇ ಉಪನಿಯಮದ ಉಪಬಂಧಗಳನ್ನು ಉಲ್ಲಂಘಿಸಿದಲ್ಲಿ, ಅವನು ತನ್ನ ಲೈಸನ್ಸ್‌ನ ಷರತ್ತುಗಳನ್ನು ಉಲ್ಲಂಘಿಸಿದ್ದಾನೆಂದು ಭಾವಿಸತಕ್ಕದ್ದು.

[1][**83. ಕಮೀಷನ್ ಏಜೆಂಟ್ ಮುಂತಾದವರು, ತಮ್ಮ ಸೇವೆಗೆ ನಿರ್ದಿಷ್ಟಪಡಿಸಿರುವುದರ ಹೊರತಾಗಿ, ಇತರ ಶುಲ್ಕಗಳನ್ನು ಸ್ವೀಕರಿಸತಕ್ಕದ್ದಲ್ಲ.**–][1]

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3-2-1970ರ ಮೂಲಕ ಬಿಟ್ಟುಬಿಡಲಾಗಿದೆ.

**84. ವ್ಯಾಪಾರಿ, ಮುಂತಾದವರು ತೂಕ, ಅಳತೆ ಅಥವಾ ಸರ್ವೆ ಮಾಡಲು ಬ್ರೋಕರೇಜನ್ನು (ದಲ್ಲಾಳಿ ಫೀಜನ್ನು) ಅಥವಾ ಚಾರ್ಜುಗಳನ್ನು ಕೇಳದಿರುವುದು.**– ಯಾವನೇ ವ್ಯಾಪಾರಿಯು ಅಥವಾ ಅವನ ವ್ಯಕ್ತ ಅಥವಾ ಇಂಗಿತ ಅನುಮತಿಯಿಂದ ಅವನ ಪರವಾಗಿ ಕಾರ್ಯಮಾಡುವ ಅವನ ನೌಕರನು ಅಥವಾ ಏಜೆಂಟನು ತೂಕ, ಅಳತೆ ಅಥವಾ ಸರ್ವೆ ಮಾಡುವುದಕ್ಕಾಗಿ ದಲ್ಲಾಳಿ ಫೀಜಿನ ಅಥವಾ ಚಾರ್ಜಿನ ರೂಪದಲ್ಲಿ ನಗದಾಗಿ ಅಥವಾ ಇತರ ರೀತಿಯಲ್ಲಿ ಯಾವುದೇ ಮೊಬಲಗನ್ನು ಕೇಳಿದಲ್ಲಿ ಅಥವಾ ಸ್ವೀಕರಿಸಿದಲ್ಲಿ ಅವನು ಆ ಲೈಸನ್ಸಿನ ಷರತ್ತುಗಳನ್ನು ಉಲ್ಲಂಘಿಸಿದ್ದಾನೆಂದು ಭಾವಿಸತಕ್ಕದ್ದು.

**85. ಲೆಕ್ಕಪುಸ್ತಕಗಳನ್ನು ಇಡುವುದು ಮತ್ತು ರಸೀದಿ ಮುಂತಾದವುಗಳನ್ನು ನೀಡುವುದು:**– ಮಾರುಕಟ್ಟೆ ಪ್ರದೇಶದಲ್ಲಿ ಕಾರ್ಯನಿರ್ವಹಿಸುವ ಮತ್ತು ಆ ಬಗ್ಗೆ ಸಮಿತಿಯಿಂದ ಲೈಸನ್ಸ್ ಪಡೆದಿರುವ ಪ್ರತಿಯೊಬ್ಬ ಮಾರುಕಟ್ಟೆ ಕಾರ್ಯನಿರ್ವಾಹಕನು, ಸಮಿತಿಯು ಕಾಲಕಾಲಕ್ಕೆ ನಿರ್ದೇಶಿಸ ಬಹುದಾದಂತೆ,–

(i) ಉಪವಿಧಿಗಳಲ್ಲಿ ನಿಯಮಿಸಬಹುದಾದಂಥ ನಮೂನೆಯಲ್ಲಿ ರಿಜಿಸ್ಟರುಗಳನ್ನು ದಸ್ತಾವೇಜುಗಳನ್ನು ಮತ್ತು ಲೆಕ್ಕ ಪುಸ್ತಕಗಳನ್ನು ಇಡತಕ್ಕದ್ದು ಮತ್ತು ಅವುಗಳನ್ನು ನಿರ್ವಹಿಸತಕ್ಕದ್ದು;

(ii) ಸ್ವೀಕರಿಸಲಾದ ಹಣದ ಮತ್ತು ಸರಕುಗಳ ಬಗ್ಗೆ ಅವನು ಅಥವಾ ಅವನ ಅಧಿಕೃತ ಪ್ರತಿನಿಧಿಯು ಸಹಿ ಹಾಕಿದ ಮತ್ತು ಸಂದರ್ಭಾನುಸಾರ ಸಂದಾಯಗಾರನು ಅಥವಾ ಬಟವಾಡೆಗಾರನು, ಅಥವಾ ಅಂಥ ವ್ಯಕ್ತಿಯ ಅಧಿಕೃತ ಪ್ರತಿನಿಧಿಯು ಮೇಲುರುಜು ಹಾಕಿದ ಮತ್ತು ಉಪವಿಧಿಗಳಲ್ಲಿ ನಿಯಮಿಸಬಹುದಾದಂಥ ನಮೂನೆಯಲ್ಲಿರುವ ರಸೀದಿಗಳನ್ನು ನೀಡತಕ್ಕದ್ದು ಮತ್ತು ಅವುಗಳ ಕಾರ್ಬನ್ ಪ್ರತಿಗಳನ್ನು ಇಟ್ಟುಕೊಂಡಿರತಕ್ಕದ್ದು.

**86. ವ್ಯಾಪಾರಿಗಳು ಮತ್ತು ಕಮಿಷನ್ ಏಜೆಂಟರು ವರದಿಗಳನ್ನು ಮತ್ತು ವಿವರಪಟ್ಟಿಕೆಗಳನ್ನು ಸಲ್ಲಿಸುವುದು:**– ಅಧಿನಿಯಮದ ಮತ್ತು ಉಪವಿಧಿಗಳ ಉಪಬಂಧಗಳಿಗೊಳಪಟ್ಟು, ಲೈಸನ್ಸ್ ಪಡೆದಿರುವ ಮತ್ತು ಮಾರುಕಟ್ಟೆ ಪ್ರದೇಶದಲ್ಲಿ ಕಾರ್ಯನಿರ್ವಹಿಸುವ ಪ್ರತಿಯೊಬ್ಬ ವ್ಯಾಪಾರಿಯು ಮತ್ತು ಕಮಿಷನ್ ಏಜೆಂಟನು ಅವನ ವ್ಯವಹಾರಕ್ಕೆ ಸಂಬಂಧಪಟ್ಟಂತೆ ಕೆಳಕಂಡ ಅಂಶಗಳನ್ನು ಒಳಗೊಂಡ ವರದಿಗಳನ್ನು ಮತ್ತು ವಿವರಪಟ್ಟಿಕೆಗಳನ್ನು ಉಪವಿಧಿಗಳಲ್ಲಿ ಗೊತ್ತುಪಡಿಸಬಹುದಾದಂಥ ಅಥವಾ ಸಮಿತಿಯು ಅಗತ್ಯಪಡಿಸಬಹುದಾದಂಥ ವಿವರಗಳೊಂದಿಗೆ ಪ್ರತಿದಿನ ಅಥವಾ ಅಂಥ ಮಧ್ಯಂತರದ ಅವಧಿಗಳಲ್ಲಿ ಮತ್ತು ಅಂಥ ಸಮಯದಲ್ಲಿ ಮತ್ತು ಅಂಥ ನಮೂನೆಯಲ್ಲಿ ಸಮಿತಿಗೆ ಅಥವಾ ಈ ಸಂಬಂಧದಲ್ಲಿ ಸಮಿತಿಯು ನಿರ್ದಿಷ್ಟಪಡಿಸಿದ ಅಧಿಕಾರಿಗೆ ಸಲ್ಲಿಸತಕ್ಕದ್ದು.

(ಎ) ಈ ಕೆಳಕಂಡ ಸ್ಥಳಗಳಲ್ಲಿ ಮಾಡಿಕೊಂಡ ಮಾರಾಟ ಅಥವಾ ಖರೀದಿ ಒಪ್ಪಂದ:–

[1][(i) ಮಾರುಕಟ್ಟೆ ಪ್ರಾಂಗಣ, ಮಾರುಕಟ್ಟೆ ಉಪಪ್ರಾಂಗಣ ಅಥವಾ ಉಪ ಪ್ರಾಂಗಣಗಳು ಮತ್ತು ಉಪಮಾರುಕಟ್ಟೆ ಪ್ರಾಂಗಣಗಳು ಅಥವಾ ಮಾರುಕಟ್ಟೆ ಉಪಪ್ರಾಂಗಣಗಳು][1]

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(ii) ಮಾರುಕಟ್ಟೆ ಪ್ರಾಂಗಣ, ಮಾರುಕಟ್ಟೆ ಉಪಪ್ರಾಂಗಣ ಅಥವಾ ಉಪಪ್ರಾಂಗಣಗಳು ಮತ್ತು ಉಪಮಾರುಕಟ್ಟೆ ಪ್ರಾಂಗಣ ಅಥವಾ ಉಪಮಾರುಕಟ್ಟೆ ಪ್ರಾಂಗಣಗಳು ಇವುಗಳ ಹೊರತಾಗಿ ಮಾರುಕಟ್ಟೆ ಮತ್ತು [1][ಉಪಮಾರುಕಟ್ಟೆ ಅಥವಾ ಉಪಮಾರುಕಟ್ಟೆಗಳು][1]; ಮತ್ತು

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(iii) ಮಾರುಕಟ್ಟೆ ಮತ್ತು ಉಪಮಾರುಕಟ್ಟೆ ಅಥವಾ ಉಪಮಾರುಕಟ್ಟೆಗಳು ಇವುಗಳ ಹೊರತಾಗಿ ಮಾರುಕಟ್ಟೆ ಪ್ರದೇಶ.

**(ಬಿ) ಕೆಳಕಂಡ ಸ್ಥಳಗಳಲ್ಲಿ ಬಟವಾಡೆ ಮಾಡಲಾದ ಕೃಷಿ ಉತ್ಪನ್ನಗಳು:**– (i) ಮಾರುಕಟ್ಟೆ ಪ್ರಾಂಗಣ, [1][ಉಪಮಾರುಕಟ್ಟೆ ಪ್ರಾಂಗಣ ಅಥವಾ ಉಪಮಾರುಕಟ್ಟೆ ಪ್ರಾಂಗಣಗಳು][1] ಮತ್ತು ಉಪಮಾರುಕಟ್ಟೆ ಉಪಪ್ರಾಂಗಣ ಅಥವಾ ಪ್ರಾಂಗಣಗಳು;

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್. 44 ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(ii) [1][ಮಾರುಕಟ್ಟೆ ಪ್ರಾಂಗಣ, ಮಾರುಕಟ್ಟೆ ಉಪಪ್ರಾಂಗಣ ಅಥವಾ ಉಪಪ್ರಾಂಗಣಗಳು ಮತ್ತು ಉಪಮಾರುಕಟ್ಟೆ ಪ್ರಾಂಗಣ ಅಥವಾ ಉಪಮಾರುಕಟ್ಟೆ ಪ್ರಾಂಗಣಗಳು – ಇವುಗಳ ಹೊರತಾಗಿ][1] ಮಾರುಕಟ್ಟೆ ಮತ್ತು ಉಪಮಾರುಕಟ್ಟೆ ಅಥವಾ ಉಪಮಾರುಕಟ್ಟೆಗಳು;

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್. 44 ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(iii) ಮಾರುಕಟ್ಟೆ ಮತ್ತು ಉಪಮಾರುಕಟ್ಟೆ ಅಥವಾ ಉಪಮಾರುಕಟ್ಟೆಗಳು – ಇವುಗಳ ಹೊರತಾಗಿ ಮಾರುಕಟ್ಟೆ ಪ್ರದೇಶ.

(ಸಿ) **ವಶಾವಣೆಗೆ ತೆಗೆದುಕೊಳ್ಳಲಾದ ಕೃಷಿ ಉತ್ಪನ್ನ :–** (i) ಮಾರುಕಟ್ಟೆ ಪ್ರಾಂಗಣ, ಮಾರುಕಟ್ಟೆ ಉಪಪ್ರಾಂಗಣ ಅಥವಾ ಉಪಪ್ರಾಂಗಣ ಮತ್ತು [1][ಉಪಮಾರುಕಟ್ಟೆ ಪ್ರಾಂಗಣ ಅಥವಾ ಉಪಮಾರುಕಟ್ಟೆ ಪ್ರಾಂಗಣಗಳು][1] ;

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್. 44 ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(ii) ಮಾರುಕಟ್ಟೆ ಪ್ರಾಂಗಣ, ಮಾರುಕಟ್ಟೆ ಉಪಪ್ರಾಂಗಣ ಅಥವಾ ಉಪಪ್ರಾಂಗಣಗಳು, [1][ಉಪಮಾರುಕಟ್ಟೆ ಪ್ರಾಂಗಣ ಮತ್ತು ಉಪಮಾರುಕಟ್ಟೆ ಪ್ರಾಂಗಣಗಳು][1]

– ಇವುಗಳಿಗೆ ಹೊರತಾಗಿ ಮಾರುಕಟ್ಟೆ ಮತ್ತು ಉಪಮಾರುಕಟ್ಟೆ ಅಥವಾ ಉಪಮಾರುಕಟ್ಟೆಗಳು; ಮತ್ತು

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್. 44 ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(iii) ಮಾರುಕಟ್ಟೆ ಮತ್ತು ಉಪಮಾರುಕಟ್ಟೆ ಅಥವಾ ಉಪಮಾರುಕಟ್ಟೆಗಳು – ಇವುಗಳ ಹೊರತಾಗಿ ಮಾರುಕಟ್ಟೆ ಪ್ರದೇಶ.

(ಡಿ) (i)ಯಾವನೇ ಇತರ ಮಾರುಕಟ್ಟೆ ಕಾರ್ಯನಿರ್ವಾಹಕನಿಂದ ವ್ಯಾಪಾರಿಗೆ ಅಥವಾ ಕಮಿಷನ್ ಏಜೆಂಟ್‌ನಿಗೆ ಬಾಕಿ ಬರಬೇಕಾದ, ಮತ್ತು (ii)ಯಾವನೇ ಉತ್ಪಾದಕನಿಗೆ ಅಥವಾ ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ ಅವನಿಂದ ಬಾಕಿ ಇರುವ ಮತ್ತು ಸಮಿತಿಯ ಉಪವಿಧಿಗಳ ಮೇರೆಗೆ ಅವಕಾಶವಿರುವ ಸಾಲದ ಅವಧಿಗೆ ಮೀರಿ ಬಾಕಿ ಇರುವ ಮೊಬಲಗು;

(ಇ) ಅವನಲ್ಲಿರುವ ಕೃಷಿ ಉತ್ಪನ್ನದ ದಾಸ್ತಾನು;

(ಎಫ್) ಅವನಿಂದ ಸಮಿತಿಗೆ ಬಾಕಿ ಇರುವ ಮಾರುಕಟ್ಟೆ ಫೀಜು; ಮತ್ತು

(ಜಿ) ಈ ಅಧಿನಿಯಮದ, ನಿಯಮಗಳ ಮತ್ತು ಸಮಿತಿಯ ಉಪವಿಧಿಗಳ ಉಪಬಂಧಗಳನ್ನು ಜಾರಿಗೊಳಿಸಲು ಸಮಿತಿಯು ಅವಶ್ಯವೆಂದು ಭಾವಿಸುವಂಥ ಯಾವುದೇ ಇತರ ಮಾಹಿತಿ.

**87. ವ್ಯಾಪಾರಿಗಳು ಮತ್ತು ಕಮಿಷನ್ ಏಜೆಂಟರ ಹೊರತಾಗಿ ಮಾರುಕಟ್ಟೆ ಕಾರ್ಯನಿರ್ವಾಹಕರು ಸಲ್ಲಿಸಬೇಕಾದ ವರದಿಗಳು.–** (1) ಮಾರುಕಟ್ಟೆ ಪ್ರದೇಶದಲ್ಲಿ ಲೈಸನ್ಸ್ ಪಡೆದಿರುವ ವ್ಯಾಪಾರಿಯ ಮತ್ತು ಕಮಿಷನ್ ಏಜೆಂಟನ ಹೊರತಾಗಿ, ಲೈಸನ್ಸ್ ಪಡೆದಿರುವ ಪ್ರತಿಯೊಬ್ಬ ಜಿನ್ನರ್, ಸಂಸ್ಕರಣಕಾರ, ಪ್ರೆಸ್ಸರ್, ಉಗ್ರಾಣಪಾಲಕ, ಆಮದುದಾರ, ರಫ್ತುದಾರ, ದಾಸ್ತಾನುದಾರ ಮತ್ತು ಪ್ರತಿಯೊಬ್ಬ ಇತರ ಮಾರುಕಟ್ಟೆ ಕಾರ್ಯನಿರ್ವಾಹಕನು, ಸಮಿತಿಗೆ ಅಥವಾ ಈ ಸಂಬಂಧದಲ್ಲಿ ಸಮಿತಿಯು ನಿರ್ದಿಷ್ಟಪಡಿಸುವ ಅಧಿಕಾರಿಗೆ ಉಪವಿಧಿಗಳಲ್ಲಿ ಗೊತ್ತುಪಡಿಸಬಹುದಾದಂಥ ಅಥವಾ ಸಮಿತಿಯು ಕಾಲಕಾಲಕ್ಕೆ ನಿರ್ದೇಶಿಸಬಹುದಾದಂಥ ನಿಯತಕಾಲಿಕ ವಿವರಪಟ್ಟಿಕೆಗಳನ್ನು ಅಂಥ ಸಮಯಕ್ಕೆ ಮತ್ತು ಅಂಥ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

(2) ಮಾರುಕಟ್ಟೆಯ ಯಾವನೇ ಕಾರ್ಯನಿರ್ವಾಹಕನು, (1)ನೇ ಉಪನಿಯಮದ ಮತ್ತು 83ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಅಗತ್ಯಪಡಿಸಲಾದಂಥ ವರದಿಗಳನ್ನು ಮತ್ತು ವಿವರಪಟ್ಟಿಕೆಗಳನ್ನು ಸಲ್ಲಿಸಲು ತಪ್ಪಿದರೆ, ಆ ಬಗ್ಗೆ ವಿಚಾರಣೆ ನಡೆಸಲು ಸಮಿತಿಯು ಯಾವನೇ ಅಧಿಕಾರಿಗೆ ಅಧಿಕಾರ ನೀಡಬಹುದು. ಆ ಅಧಿಕಾರಿಯು ಸಂಬಂಧಪಟ್ಟ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಅವಕಾಶ ಕೊಟ್ಟು ವಿವರವಾದ ವಿಚಾರಣೆಯನ್ನು ನಡೆಸತಕ್ಕದ್ದು ಮತ್ತು ಅಗತ್ಯವಾದ ವಿವರಪಟ್ಟಿಕೆಗಳನ್ನು ಮತ್ತು ವರದಿಗಳನ್ನು ಒಪ್ಪಿಸದಿರುವುದಕ್ಕೆ ಸಾಕಷ್ಟು ಕಾರಣಗಳು ಇದ್ದವೆ ಅಥವಾ ಇಲ್ಲವೆ ಎಂಬ ಬಗ್ಗೆ ಸಮಿತಿಗೆ ವರದಿಯನ್ನು ಸಲ್ಲಿಸತಕ್ಕದ್ದು.

(3) (1)ನೇ ಉಪನಿಯಮದ ಮೇರೆಗೆ ಸಲ್ಲಿಸಲಾದ ಎಲ್ಲಾ ವರದಿಗಳ ಮತ್ತು ವಿವರಪಟ್ಟಿಕೆಗಳ ಪಕ್ಕ ಪ್ರತಿಗಳನ್ನು ಮತ್ತು ದ್ವಿಪ್ರತಿಗಳನ್ನು ಅಂಥ ಸಲ್ಲಿಕೆಯ ದಿನಾಂಕದಿಂದ ಎರಡು ವರ್ಷಗಳ ಅವಧಿಯವರೆಗೆ ಮಾರುಕಟ್ಟೆ ಕಾರ್ಯನಿರ್ವಾಹಕನು ಇಟ್ಟುಕೊಂಡಿರತಕ್ಕದ್ದು ಮತ್ತು ಆ ಅವಧಿಯಲ್ಲಿ ಸಮಿತಿಯು ಪರಿಶೀಲನೆಗೆ ಕೇಳಿದಾಗಲೆಲ್ಲ ಅವುಗಳನ್ನು ಒದಗಿಸತಕ್ಕದ್ದು.

[1][**87ಎ. ಅಪರಾಧಗಳ ಬಗ್ಗೆ ರಾಜಿ.–** 8, 79 ಮತ್ತು 80ನೇ ಪ್ರಕರಣಗಳ ಉಪಬಂಧಗಳ ಉಲ್ಲಂಘನೆಗೆ ಸಂಬಂಧಪಟ್ಟ ಯಾವುದೇ ಅಪರಾಧದ ಬಗ್ಗೆ 70ನೇ ಪ್ರಕರಣದ ಮೇರೆಗೆ ರಾಜಿ ಮಾಡಿಕೊಳ್ಳತಕ್ಕದ್ದಲ್ಲ][1]

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 44, ದಿನಾಂಕ 3-2-1970ರ ಮೂಲಕ ಸೇರಿಸಲಾಗಿದೆ.

## ಭಾಗ – VII

## ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿ

[1][**88. ರಾಜ್ಯ ಮಾರುಕಟ್ಟೆ ಮಂಡಲಿಗೆ ಸದಸ್ಯನ ಚುನಾವಣೆ]1 .–** (1) 101ನೇ ಪ್ರಕರಣದ (1)ನೇ ಉಪಪ್ರಕರಣದ (ii)ನೇ ಖಂಡದ ಮೇರೆಗೆ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯ ಸದಸ್ಯನ ಚುನಾವಣೆಯನ್ನು ಇಲ್ಲಿ ಇನ್ನು ಮುಂದೆ ನಿರ್ದಿಷ್ಟಪಡಿಸಿರುವ ರೀತಿಯಲ್ಲಿ ನಡೆಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 74 ದಿನಾಂಕ 12-3-1971ರ ಮೂಲಕ ನಿಯಮ 88, 88ಎ ಯಿಂದ 88ಐ ನಿಯಮಗಳನ್ನು ಪ್ರತಿಯೋಜಿಸಲಾಗಿದೆ.

(2) ಸದರಿ ಚುನಾವಣೆಯ ಉದ್ದೇಶಕ್ಕಾಗಿ ರೆವಿನ್ಯೂ ಜಿಲ್ಲೆಯ ಕೃಷಿ ಮಾರುಕಟ್ಟೆಯ ಸಹಾಯಕ ನಿರ್ದೇಶಕನು ರಿಟರ್ನಿಂಗ್ ಆಫೀಸರ್ ಆಗಿರತಕ್ಕದ್ದು.

(3) ರಿಟರ್ನಿಂಗ್ ಆಫೀಸರ್, ಜಿಲ್ಲೆಯ ಎಲ್ಲಾ ಮಾರುಕಟ್ಟೆ ಸಮಿತಿಗಳ ಅಧ್ಯಕ್ಷರ ಪಟ್ಟಿಯನ್ನು ತನ್ನ ಕಛೇರಿಯಲ್ಲಿ ಇಟ್ಟುಕೊಂಡಿರತಕ್ಕದ್ದು. ಅಂಥ ಪಟ್ಟಿಯನ್ನು ತಹಲ್‌ವರೆಗೆ ಸರಿಪಡಿಸಿ ಇಟ್ಟುಕೊಳ್ಳಲು ಸಾಧ್ಯವಾಗುವಂತೆ, ಜಿಲ್ಲೆಯ ಎಲ್ಲಾ ಮಾರುಕಟ್ಟೆ ಸಮಿತಿಗಳ ಕಾರ್ಯದರ್ಶಿಗಳು, ತಮ್ಮ ತಮ್ಮ ಮಾರುಕಟ್ಟೆ ಸಮಿತಿಗಳ ಅಧ್ಯಕ್ಷರ ಹೆಸರುಗಳನ್ನು ರಿಟರ್ನಿಂಗ್ ಆಫೀಸರ್ ಕಛೇರಿಗೆ ಒದಗಿಸತಕ್ಕದ್ದು ಮತ್ತು ಅಧ್ಯಕ್ಷರು ಬದಲಾದಾಗಲೆಲ್ಲ ಹೊಸ ಅಧ್ಯಕ್ಷರ ಹೆಸರುಗಳನ್ನು ರಿಟರ್ನಿಂಗ್ ಆಫೀಸರ್‌ಗೆ ಆ ಕೂಡಲೇ ತಿಳಿಸತಕ್ಕದ್ದು. ರಿಟರ್ನಿಂಗ್ ಆಫೀಸರ್ ಆ ಮಾಹಿತಿಯನ್ನು ಸ್ವೀಕರಿಸಿದ ಮೇಲೆ ಹಿಂದಿನ ಅಧ್ಯಕ್ಷರ ಹೆಸರುಗಳನ್ನು ಹೊಡೆದುಹಾಕತಕ್ಕದ್ದು ಮತ್ತು ಅಂಥ ಮಾರುಕಟ್ಟೆ ಸಮಿತಿಯ ಹೊಸ ಅಧ್ಯಕ್ಷರ ಹೆಸರುಗಳನ್ನು ಪಟ್ಟಿಯಲ್ಲಿ ಸೇರಿಸತಕ್ಕದ್ದು.

(4) ಅಧ್ಯಕ್ಷರ ಹೆಸರುಗಳ ಪಟ್ಟಿಗೆ ಸಂಬಂಧಿಸಿದಂತೆ 5ಎ ನಿಯಮದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು:

ಪರಂತು, 5ಎ ನಿಯಮದ (1)ನೇ ಉಪನಿಯಮದ ಅಥವಾ (2)ನೇ ಉಪನಿಯಮದ (ಎ) ಖಂಡದ ಮೇರೆಗೆ ಸಲ್ಲಿಸಲಾಗುವ ಅರ್ಜಿಯು, ರಿಟರ್ನಿಂಗ್ ಆಫೀಸರ್‌ಗೆ ತಲುಪಿದ ಮೇಲೆ, ಅವನು ಸಂಬಂಧಪಟ್ಟ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಗೆ, ಅಂಥ ಅರ್ಜಿಯನ್ನು ಕಳುಹಿಸತಕ್ಕದ್ದು ಮತ್ತು ಸದರಿ ಕಾರ್ಯದರ್ಶಿಯು ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸ್ವೀಕರಿಸಿದ ಮೇಲೆ ಅವನು (2)ನೇ ಉಪನಿಯಮಕ್ಕನುಸಾರ ಕ್ರಮಕೈಗೊಳ್ಳತಕ್ಕದ್ದು.

(5) ರಿಟರ್ನಿಂಗ್ ಆಫೀಸರ್ ಪ್ರತಿಯೊಂದು ರೆವಿನ್ಯೂ ಜಿಲ್ಲೆಯ ಎಲ್ಲಾ ಮಾರುಕಟ್ಟೆ ಸಮಿತಿಗಳ ಅಧ್ಯಕ್ಷರು ಮತದಾರ ಗಣಕ್ಕೆ ಮಂಡಲಿಯ ಸದಸ್ಯನನ್ನು ಚುನಾಯಿಸುವಂತೆ ಆದೇಶದ ಮೂಲಕ ಕರೆ ನೀಡತಕ್ಕದ್ದು ಮತ್ತು ಆ ಚುನಾವಣೆಯ ದಿನಾಂಕವನ್ನು ನಿಗದಿಪಡಿಸತಕ್ಕದ್ದು. ಚುನಾವಣೆಯ ದಿನಾಂಕಕ್ಕೆ ಮೊದಲು ಹದಿನೈದು ದಿವಸಗಳಿಗೆ ಕಡಿಮೆ ಇಲ್ಲದಂತೆ ಈ ಕೆಳಕಂಡ ಅಂಶಗಳನ್ನೊಳಗೊಂಡ ನೋಟೀಸನ್ನು ತನ್ನ ಕಚೇರಿಯ ಸೂಚನಾ ಫಲಕದ ಮೇಲೆ ಅಂಟಿಸಿ ಪ್ರಕಟಿಸತಕ್ಕದ್ದು,-

(i) ನಾಮಪತ್ರಗಳನ್ನು ಸ್ವೀಕರಿಸುವ ಸ್ಥಳ ಮತ್ತು ವೇಳೆ ಮತ್ತು ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ, ಮತ್ತು ಆ ದಿನಾಂಕವು ನೋಟೀಸಿನ ಪ್ರಕಟಣೆಯ ದಿನಾಂಕದಿಂದ ಏಳು ದಿವಸಗಳಿಗೆ ಕಡಿಮೆ ಇಲ್ಲದ ದಿನವಾಗಿರತಕ್ಕದ್ದು;

(ii) ನಾಮಪತ್ರ ಪರಿಶೀಲನಾ ದಿನಾಂಕ ಮತ್ತು ಆ ದಿನಾಂಕವು ನಾಮಪತ್ರ ಸಲ್ಲಿಸುವ ಕೊನೆಯ ದಿನಾಂಕದ ತರುವಾಯದ ಎರಡನೆಯ ದಿನವಾಗಿರತಕ್ಕದ್ದು ಅಥವಾ ಆ ದಿನವು ಸಾರ್ವಜನಿಕ ರಜಾ ದಿನವಾಗಿದ್ದಲ್ಲಿ, ಸಾರ್ವಜನಿಕ ರಜಾ ದಿನವಾಗಿಲ್ಲದ ಆ ತರುವಾಯದ ದಿನ;

(iii) ನಾಮಪತ್ರ ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ಆ ದಿನಾಂಕವು ನಾಮಪತ್ರ ಪರಿಶೀಲನಾ ದಿನಾಂಕದ ತರುವಾಯದ ಮೂರನೆ ದಿನವಾಗಿರತಕ್ಕದ್ದು ಅಥವಾ ಆ ದಿನವು ಸಾರ್ವಜನಿಕ ರಜಾ ದಿನವಾಗಿದ್ದಲ್ಲಿ, ಸಾರ್ವಜನಿಕ ರಜಾ ದಿನವಾಗಿರದ ತರುವಾಯದ ದಿನ;

(iv) ಮತದಾನವು, ಅವಶ್ಯಕವಾದರೆ ಅದನ್ನು ನಡೆಸತಕ್ಕ ದಿನಾಂಕ ಮತ್ತು ವೇಳೆ ಮತ್ತು ಆ ದಿನಾಂಕವು ನೋಟೀಸಿನ ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳಿಗಿಂತ ಕಡಿಮೆ ಇಲ್ಲದ ದಿನವಾಗಿರತಕ್ಕದ್ದು;

(v) ಮತಗಳ ಎಣಿಕೆಯ ಸ್ಥಳ ಮತ್ತು ವೇಳೆ.

(6) (5)ನೇ ಉಪನಿಯಮದಲ್ಲಿ ಉಲ್ಲೇಖಿಸಿರುವ ನೋಟೀಸು ಪ್ರಕಟವಾದ ಕೂಡಲೆ ಅದರ ಪ್ರತಿಯನ್ನು ನೋಂದಾಯಿತ ಅಂಚೆಯ ಮೂಲಕ ಪ್ರತಿಯೊಂದು ಜಿಲ್ಲೆಯ ಮಾರುಕಟ್ಟೆ ಸಮಿತಿಯ ಎಲ್ಲಾ ಅಧ್ಯಕ್ಷರಿಗೆ ಕಳುಹಿಸತಕ್ಕದ್ದು.

(7) 105ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಉಪಚುನಾವಣೆಯ ಸಂದರ್ಭದಲ್ಲಿ ಆ ಸ್ಥಾನವು ತೆರವಾದ ತರುವಾಯ ಸಾಧ್ಯವಾದಷ್ಟು ಬೇಗನೆ (5)ನೇ ಉಪನಿಯಮದ ಮೇರೆಗಿನ ನೋಟೀಸನ್ನು ಪ್ರಕಟಿಸತಕ್ಕದ್ದು.

**88ಎ. ನಾಮಪತ್ರಗಳು.-** (1) ಯಾವುದೇ ರೆವಿನ್ಯೂ ಜಿಲ್ಲೆಯಲ್ಲಿ ಒಂದಕ್ಕಿಂತ ಹೆಚ್ಚು ಮಾರುಕಟ್ಟೆ ಸಮಿತಿಗಳಿರುವಲ್ಲಿ ಮಂಡಲಿಯ ಚುನಾವಣೆಗೆ ಸ್ಪರ್ಧಿಸಬಯಸುವ ಅಧ್ಯಕ್ಷನು ನಮೂನೆ ಸಂಖ್ಯೆ 38ರಲ್ಲಿ ರಿಟರ್ನಿಂಗ್ ಆಫೀಸರ್‌ಗೆ ನಾಮಪತ್ರಗಳನ್ನು, 88ನೇ ನಿಯಮದ (5)ನೇ ಉಪನಿಯಮದಲ್ಲಿ ಉಲ್ಲೇಖಿಸಲಾದ ನೋಟೀಸಿನಲ್ಲಿ ಈ ಬಗ್ಗೆ ನಿರ್ದಿಷ್ಟಪಡಿಸಲಾದ ಸ್ಥಳದಲ್ಲಿ ಬೆಳಿಗ್ಗೆ ಹನ್ನೊಂದುಗಂಟೆ ಮತ್ತು ಮಧ್ಯಾಹ್ನ ಮೂರು ಗಂಟೆಯ ನಡುವಿನ ಸಮಯದಲ್ಲಿ ಸಲ್ಲಿಸತಕ್ಕದ್ದು.

(2) ರಿಟರ್ನಿಂಗ್ ಆಫೀಸರ್, ನಾಮಪತ್ರಗಳನ್ನು ಸ್ವೀಕರಿಸಿದ ಮೇಲೆ ಆ ನಾಮಪತ್ರದಲ್ಲಿ ಅದರ ಕ್ರಮಸಂಖ್ಯೆ, ಆ ನಾಮಪತ್ರವನ್ನು ತನಗೆ ಸಲ್ಲಿಸಲಾದ ದಿನಾಂಕ ಮತ್ತು ವೇಳೆಯನ್ನು ನಮೂದಿಸತಕ್ಕದ್ದು ಮತ್ತು ತನ್ನ ಕಚೇರಿಯಲ್ಲಿ ಇಟ್ಟುಕೊಂಡಿರುವ ಅಧ್ಯಕ್ಷರ ಪಟ್ಟಿಯೊಂದಿಗೆ ಅಭ್ಯರ್ಥಿಯ ಹೆಸರು ಮತ್ತು ಸಂಖ್ಯೆಯನ್ನು ಹೋಲಿಸಿ ಪರಿಶೀಲಿಸತಕ್ಕದ್ದು.

(3) 88ನೇ ನಿಯಮದ (3)ನೇ ಉಪನಿಯಮದ (ii)ನೇ ಖಂಡದ ಮೇರೆಗೆ ಗೊತ್ತುಪಡಿಸಿದ ದಿನಾಂಕ ಮತ್ತು ವೇಳೆಯ ನಂತರ ಸ್ವೀಕರಿಸಲಾದ ನಾಮಪತ್ರಗಳನ್ನು ತಿರಸ್ಕರಿಸತಕ್ಕದ್ದು.

(4) ಈ ನಿಯಮದಲ್ಲಿ ಇರುವುದು ಯಾವುದೂ, ಯಾವನೇ ಅಭ್ಯರ್ಥಿಯು ಒಂದೇ ಚುನಾವಣೆ ಸಂಬಂಧದಲ್ಲಿ ಒಂದಕ್ಕಿಂತ ಹೆಚ್ಚು ನಾಮಪತ್ರಗಳನ್ನು ದಾಖಲು ಮಾಡುವುದಕ್ಕೆ ಅಡ್ಡಿಯಾಗತಕ್ಕದ್ದಲ್ಲ.

**88ಬಿ. ನಾಮಪತ್ರಗಳ ಪರಿಶೀಲನೆ.–** ಅಭ್ಯರ್ಥಿಗಳು ಮತ್ತು ಪ್ರತಿಯೊಬ್ಬ ಅಭ್ಯರ್ಥಿಗೆ ಒಬ್ಬನಿಗಿಂತ ಹೆಚ್ಚಾಗಿರದ ಅವರ ಏಜೆಂಟರು ನಾಮಪತ್ರಗಳ ಪರಿಶೀಲನೆಯ ಸಮಯದಲ್ಲಿ ಹಾಜರಿರಲು ಹಕ್ಕುಳ್ಳವರಾಗಿರತಕ್ಕದ್ದು ಮತ್ತು ರಿಟರ್ನಿಂಗ್ ಆಫೀಸರ್, ಎಲ್ಲಾ ಅಭ್ಯರ್ಥಿಗಳ ನಾಮಪತ್ರಗಳನ್ನು ಪರೀಕ್ಷಿಸುವುದಕ್ಕೆ ಎಲ್ಲಾ ಸೂಕ್ತ ಸೌಲಭ್ಯಗಳನ್ನು ಒದಗಿಸತಕ್ಕದ್ದು.

(2) ಆ ತರುವಾಯ ರಿಟರ್ನಿಂಗ್ ಆಫೀಸರ್, ನಾಮಪತ್ರಗಳನ್ನು ಪರಿಶೀಲಿಸತಕ್ಕದ್ದು ಮತ್ತು ಪರಿಶೀಲನೆಯ ಸಮಯದಲ್ಲಿ ಯಾವುದೇ ನಾಮಪತ್ರಗಳ ಸಂಬಂಧದಲ್ಲಿ ಎತ್ತಬಹುದಾಗಿದ್ದ ಎಲ್ಲಾ ಆಕ್ಷೇಪಣೆಗಳನ್ನು ಬಗೆಹರಿಸತಕ್ಕದ್ದು ಮತ್ತು ಅಂಥ ಆಕ್ಷೇಪಣೆಯ ಮೇಲೆ ಅಥವಾ ಸ್ವಂತ ಪ್ರೇರಣೆಯಿಂದ ಈ ಕೆಳಕಂಡ ಆಧಾರಗಳ ಪೈಕಿ ಯಾವುದೇ ಆಧಾರದ ಮೇಲೆ ಮತ್ತು ತಾನು ನಡೆಸುವುದು ಅವಶ್ಯವೆಂದು ಯೋಚಿಸುವಂಥ ಕ್ಷಿಪ್ರ ವಿಚಾರಣೆಯು ಯಾವುದಾದರೂ ಇದ್ದರೆ ಅದನ್ನು ನಡೆಸಿದ ತರುವಾಯ, ನಾಮಪತ್ರವನ್ನು ತಿರಸ್ಕರಿಸಬಹುದು:–

(ಎ) ನಾಮಪತ್ರದಲ್ಲಿರುವ ಅಭ್ಯರ್ಥಿಯ ಸಹಿಯು ನಿಜವಾದುದಲ್ಲ ಅಥವಾ ಅದನ್ನು ಮೋಸದಿಂದ ಪಡೆದುಕೊಳ್ಳಲಾಗಿದೆ; ಅಥವಾ

(ಬಿ) ನಾಮಪತ್ರವನ್ನು ಯುಕ್ತವಾಗಿ ಭರ್ತಿ ಮಾಡಿಲ್ಲ ಮತ್ತು ಅದರಲ್ಲಿನ ಗಮನಾರ್ಹ ನ್ಯೂನತೆ ಅಥವಾ ಅಕ್ರಮವು ಗಣನೀಯ ಸ್ವರೂಪದ್ದಾಗಿದೆ.

(3) ರಿಟರ್ನಿಂಗ್ ಆಫೀಸರ್, ಪ್ರತಿಯೊಂದು ನಾಮಪತ್ರದ ಮೇಲೆ ಅದನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ಬಗ್ಗೆ ತನ್ನ ನಿರ್ಣಯವನ್ನು ದಾಖಲು ಮಾಡತಕ್ಕದ್ದು ಮತ್ತು ನಾಮಪತ್ರವನ್ನು ತಿರಸ್ಕರಿಸಿದರೆ, ಹಾಗೆ ತಿರಸ್ಕರಿಸಿರುವ ಬಗ್ಗೆ ಕಾರಣಗಳ ಸಂಕ್ಷಿಪ್ತ ವಿವರಣೆಯನ್ನು ನಮೂದಿಸತಕ್ಕದ್ದು.

**88ಸಿ. ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವುದು.–** (1) ಯಾವನೇ ಅಭ್ಯರ್ಥಿಯು ತನ್ನ ಉಮೇದುವಾರಿಕೆಯನ್ನು 88ನೇ ನಿಯಮದ (5)ನೇ ಉಪನಿಯಮದ (iii) ನೇ ಖಂಡದ ಮೇರೆಗೆ ನಿಗದಿಪಡಿಸಿದ ದಿನಾಂಕದಂದು ಅಥವಾ ಅದಕ್ಕೆ ಮೊದಲು ಮಧ್ಯಾಹ್ನ ಮೂರು ಗಂಟೆಯ ಮುಂಚೆ ತಾನು ಸಹಿ ಮಾಡಿದ ಲಿಖಿತ ನೋಟೀಸನ್ನು ಖುದ್ದಾಗಿ ರಿಟರ್ನಿಂಗ್ ಆಫೀಸರ್‌ಗೆ ಒಪ್ಪಿಸಿ ಹಿಂತೆಗೆದುಕೊಳ್ಳಬಹುದು. ಆ ನೋಟೀಸನ್ನು ಸ್ವೀಕರಿಸಿದ ತರುವಾಯ, ರಿಟರ್ನಿಂಗ್ ಅಫೀಸರ್, ಅದನ್ನು ತನಗೆ ಒಪ್ಪಿಸಲಾದ ದಿನಾಂಕ ಮತ್ತು ವೇಳೆಯನ್ನು ಅದರ ಮೇಲೆ ಬರೆಯತಕ್ಕದ್ದು.

(2) (1)ನೇ ಉಪನಿಯಮದ ಮೇರೆಗೆ ತನ್ನ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ನೋಟೀಸು ಕೊಟ್ಟಿರುವ ಯಾವನೇ ವ್ಯಕ್ತಿಯು ನೋಟೀಸನ್ನು ಹಿಂತೆಗೆದುಕೊಳ್ಳಲು ಅಥವಾ ರದ್ದುಗೊಳಿಸಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

**88ಡಿ. ಸ್ಪರ್ಧೆ ಇರುವ ಮತ್ತು ಸ್ಪರ್ಧೆ ಇಲ್ಲದ ಚುನಾವಣೆಗಳಲ್ಲಿ ಅನುಸರಿಸುವ ಕಾರ್ಯವಿಧಾನ.–** ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಬಹುದಾದ ಅವಧಿಯು ಮುಕ್ತಾಯಗೊಂಡ ತರುವಾಯ,–

(ಎ) ಒಬ್ಬನೇ ಒಬ್ಬ ಅಭ್ಯರ್ಥಿಯು ಇದ್ದು ಅವನ ನಾಮಪತ್ರವು ಕ್ರಮಬದ್ಧವಾಗಿದ್ದು ಮತ್ತು ಅವನು ತನ್ನ ಉಮೇದುವಾರಿಕೆಯನ್ನು ಹಿಂತೆಗೆದುಕೊಂಡಿರದಿದ್ದರೆ, ಅಂಥ ಅಭ್ಯರ್ಥಿಯು ಮಂಡಲಿಯ ಸದಸ್ಯನೆಂದು ಕ್ರಮಬದ್ಧವಾಗಿ ಚುನಾಯಿತನಾಗಿರುವನೆಂದು ಆ ಕೂಡಲೇ ರಿಟರ್ನಿಂಗ್ ಆಫೀಸರ್ ಘೋಷಿಸತಕ್ಕದ್ದು; ಅಥವಾ

(ಬಿ) ಕ್ರಮಬದ್ಧವಾಗಿ ನಾಮಪತ್ರಗಳನ್ನು ಸಲ್ಲಿಸಿರುವ ಮತ್ತು ತಮ್ಮ ಉಮೇದುವಾರಿಕೆಯನ್ನು ಹಿಂತೆಗೆದುಕೊಂಡಿರದ ಅಭ್ಯರ್ಥಿಗಳ ಸಂಖ್ಯೆಯು, ಒಂದಕ್ಕಿಂತ ಹೆಚ್ಚು ಇದ್ದರೆ ರಿಟರ್ನಿಂಗ್ ಆಫೀಸರ್ 101ನೇ ಪ್ರಕರಣದ (1)ನೇ ಉಪಪ್ರಕರಣದ ಪರಂತುಕದ ವ್ಯಾಪ್ತಿಯೊಳಗೆ ಬರುವ ಸಂದರ್ಭದ ಹೊರತಾಗಿ, ಕ್ರಮಬದ್ಧವಾಗಿ ನಾಮಪತ್ರ ಸಲ್ಲಿಸಿರುವ ಅಭ್ಯರ್ಥಿಗಳ ಪಟ್ಟಿಯನ್ನು ಅಕಾರಾದಿ ಕ್ರಮದಲ್ಲಿ ತಯಾರಿಸತಕ್ಕದ್ದು ಮತ್ತು ಹಾಗೆ ತಯಾರಿಸಲಾದ ಪಟ್ಟಿಯ ಒಂದು ಪ್ರತಿಯನ್ನು ತನ್ನ ಕಛೇರಿಯ ಸೂಚನಾ ಫಲಕದ ಮೇಲೆ ಅಂಟಿಸುವ ವ್ಯವಸ್ಥೆ ಮಾಡತಕ್ಕದ್ದು.

**88ಇ. ಮತದಾನ.–** ಚುನಾವಣೆಯ ಉದ್ದೇಶಕ್ಕಾಗಿ ಅಧ್ಯಕ್ಷರು ಮತ ಚಲಾಯಿಸಬೇಕಾದಲ್ಲಿ, ಮತದಾನವು 88ನೇ ನಿಯಮದ (5)ನೇ ಉಪನಿಯಮದ (iv)ನೇ ಖಂಡದ ಮೇರೆಗೆ ಗೊತ್ತುಪಡಿಸಲಾದ ದಿನಾಂಕ ಮತ್ತು ವೇಳೆಯಲ್ಲಿ ರಿಟರ್ನಿಂಗ್ ಆಫೀಸರ್ ಕಚೇರಿಯಲ್ಲಿ ನಡೆಸತಕ್ಕದ್ದು.

**88ಎಫ್. ಚುನಾವಣಾ ಕಾರ್ಯವಿಧಾನ.–** (1) ಮತದಾನಕ್ಕಾಗಿ ಗೊತ್ತುಪಡಿಸಿದ ಸ್ಥಳದಲ್ಲಿ ರಿಟರ್ನಿಂಗ್ ಆಫೀಸರ್ ಒಂದು ಮತಪೆಟ್ಟಿಗೆಯನ್ನು ಇಡುವ ವ್ಯವಸ್ಥೆ ಮಾಡತಕ್ಕದ್ದು. ಆ ಪೆಟ್ಟಿಗೆಯೊಳಗೆ ಮತಪತ್ರಗಳನ್ನು ಹಾಕಲು ಅವಕಾಶವಿದ್ದು ಅದನ್ನು ತೆರೆಯದೆ ಆ ಮತಪತ್ರಗಳನ್ನು ಅದರಿಂದ ಹೊರತೆಗೆಯಲು ಸಾಧ್ಯವಿಲ್ಲದ ರೀತಿಯಲ್ಲಿ ಆ ಮತಪೆಟ್ಟಿಗೆಯನ್ನು ತಯಾರಿಸಿರತಕ್ಕದ್ದು.

(2) ರಿಟರ್ನಿಂಗ್ ಆಫೀಸರ್ ಮತದಾನ ನಡೆಯುವುದಕ್ಕೆ ನಿಕಟ ಪೂರ್ವದಲ್ಲಿ ಹಾಜರಿರಬಹುದಾದಂಥ ಅಧ್ಯಕ್ಷರು ಮತ ಪೆಟ್ಟಿಗೆಯು ಖಾಲಿ ಇರುವುದನ್ನು ನೋಡಲು ಸಾಧ್ಯವಾಗುವಂತೆ ಅವರಿಗೆ ಅದನ್ನು ತೋರಿಸತಕ್ಕದ್ದು, ಮತ್ತು ಆ ತರುವಾಯ ಅದಕ್ಕೆ ಬೀಗ ಹಾಕತಕ್ಕದ್ದು ಮತ್ತು ಅದರ ಮೇಲೆ ತನ್ನ ಮೊಹರನ್ನು ತೆರೆಯಲಾಗದಂಥ ರೀತಿಯಲ್ಲಿ ಹಾಕಿರತಕ್ಕದ್ದು.

(3) ಮತನೀಡಬಯಸುವ ಪ್ರತಿಯೊಬ್ಬ ಅಧ್ಯಕ್ಷನಿಗೆ, ನಮೂನೆ 39ರಲ್ಲಿರುವ ಒಂದು ಮತಪತ್ರವನ್ನು ಒದಗಿಸತಕ್ಕದ್ದು ಮತ್ತು ಆ ಮತಪತ್ರಕ್ಕೆ ಕೃಷಿ ಮಾರುಕಟ್ಟೆ ಸಹಾಯಕ ನಿರ್ದೇಶಕನ ಕಛೇರಿಯ ಮೊಹರನ್ನು ಹಾಕಿರತಕ್ಕದ್ದು ಮತ್ತು ರಿಟರ್ನಿಂಗ್ ಆಫೀಸರ್ ಸಹಿ ಹಾಕಿರತಕ್ಕದ್ದು ಮತ್ತು ಅದರಲ್ಲಿ ಸ್ಪರ್ಧಿಸಿರುವ ಎಲ್ಲಾ ಅಭ್ಯರ್ಥಿಗಳ ಹೆಸರುಗಳನ್ನು, ಇಂಗ್ಲೀಷ್ ಮತ್ತು ಕನ್ನಡದಲ್ಲಿ ಮುದ್ರಿಸಿರಬೇಕು, ಬೆರಳಚ್ಚು ಮಾಡಿರಬೇಕು ಅಥವಾ ಬರೆದಿರಬೇಕು. ಅಧ್ಯಕ್ಷನಿಗೆ ಮತಪತ್ರವನ್ನು ನೀಡುವ ಸಮಯದಲ್ಲಿ ರಿಟರ್ನಿಂಗ್ ಆಫೀಸರ್, ಮತದಾನದ ಉದ್ದೇಶಕ್ಕಾಗಿ ಇಟ್ಟಿರುವ ಅಧ್ಯಕ್ಷರ ಪಟ್ಟಿಯಲ್ಲಿ ಆ ಅಧ್ಯಕ್ಷನಿಗೆ ಸಂಬಂಧಿಸಿದ ನಮೂದಿನ ಎದುರು ಆ ಮತಪತ್ರದ ಕ್ರಮಸಂಖ್ಯೆಯನ್ನು ದಾಖಲು ಮಾಡಿಕೊಳ್ಳತಕ್ಕದ್ದು.

(4) (3)ನೇ ಉಪನಿಯಮದ ಮೇರೆಗೆ ಮತಪತ್ರವನ್ನು ಯಾವ ಅಧ್ಯಕ್ಷನಿಗೆ ನೀಡಲಾಗಿದೆಯೋ ಆ ಅಧ್ಯಕ್ಷನು, ಆ ಮತಪತ್ರವನ್ನು ಸ್ವೀಕರಿಸಿದ ತರುವಾಯ ಮತದಾನದ ಉದ್ದೇಶಕ್ಕಾಗಿ ಗೊತ್ತು ಪಡಿಸಿರುವ ಸ್ಥಳಕ್ಕೆ ತೆರಳಿ ತಾನು ಮತ ನೀಡಬಯಸುವ ಆ ಅಭ್ಯರ್ಥಿಯ ಹೆಸರಿನ ಮುಂದೆ [1][ಮೊಹರು ಹಾಕಲು ಒದಗಿಸಿರುವ ಸಾಧನದಿಂದ ಮೊಹರು ಹಾಕತಕ್ಕದ್ದು][1] ಆ ತರುವಾಯ ತಾನು ಮತ ನೀಡಿರುವುದು ಗೊತ್ತಾಗದಂತೆ ಆ ಮತಪತ್ರವನ್ನು ಮಡಿಚಿ ಮತಪೆಟ್ಟಿಗೆಯಲ್ಲಿ ಹಾಕತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ: 27-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

(5) ಮತಪತ್ರವೆಂದು ಉಪಯೋಗಿಸಲಾಗದಂಥ ರೀತಿಯಲ್ಲಿ ತನಗೆ ಕೊಟ್ಟ ಮತಪತ್ರವನ್ನು ಅಜಾಗರೂಕತೆಯಿಂದ ಬಳಸಿರುವ ಅಧ್ಯಕ್ಷನು ರಿಟರ್ನಿಂಗ್ ಆಫೀಸರಿಗೆ ಅದನ್ನು ಹಿಂದಿರುಗಿಸಿ ತನ್ನ ಅಜಾಗರೂಕತೆಯ ಬಗ್ಗೆ ಅವನಿಗೆ ಮನದಟ್ಟು ಮಾಡಿಕೊಟ್ಟ ಮೇಲೆ ಚುನಾವಣಾಧಿಕಾರಿಯು ಮತ್ತೊಂದು ಮತಪತ್ರವನ್ನು ಕೊಡಬಹುದು ಮತ್ತು ಹಾಗೆ ಹಿಂದಿರುಗಿಸಲಾದ ಮತಪತ್ರದ ಮೇಲೆ ರಿಟರ್ನಿಂಗ್ ಆಫೀಸರ್ "ಹಾಳಾಗಿದೆ-ರದ್ದುಗೊಳಿಸಲಾಗಿದೆ" ಎಂಬುದಾಗಿ ಗುರುತು ಮಾಡತಕ್ಕದ್ದು. ಅಧ್ಯಕ್ಷನು ಮತಪತ್ರವನ್ನು ಪಡೆದ ತರುವಾಯ ಅದನ್ನು ಉಪಯೋಗಿಸಬಾರದೆಂದು ತೀರ್ಮಾನಿಸಿದಲ್ಲಿ ಅವನು ಅದನ್ನು ರಿಟರ್ನಿಂಗ್ ಆಫೀಸರಿಗೆ ಹಿಂದಿರುಗಿಸತಕ್ಕದ್ದು ಮತ್ತು ಹಾಗೆ ಹಿಂದಿರುಗಿಸಲಾದ ಮತಪತ್ರದ ಮೇಲೆ ರಿಟರ್ನಿಂಗ್ ಆಫೀಸರ್ "ಹಿಂದಿರುಗಿಸಲಾಗಿದೆ ರದ್ದುಗೊಳಿಸಲಾಗಿದೆ" ಎಂದು ಗುರುತು ಮಾಡತಕ್ಕದ್ದು. ಈ ಖಂಡದ ಮೇರೆಗೆ ರದ್ದುಗೊಳಿಸಲಾದ-ಅಂಥ ಎಲ್ಲಾ ಮತಪತ್ರಗಳನ್ನು ಒಂದು ಪ್ರತ್ಯೇಕ ಲಕೋಟೆಯಲ್ಲಿ ಇಡತಕ್ಕದ್ದು.

**88ಜಿ. ಮತಗಳ ಎಣಿಕೆ.**- (1) ಹಾಜರಿದ್ದು ಮತನೀಡಬಯಸುವ ಎಲ್ಲಾ ಅಧ್ಯಕ್ಷರು ಮತ ಚಲಾಯಿಸಿದ ತರುವಾಯ ರಿಟರ್ನಿಂಗ್ ಆಫೀಸರ್ ಹಾಜರಿರುವ ಅಧ್ಯಕ್ಷರ ಸಮ್ಮುಖದಲ್ಲಿ ಮತಪೆಟ್ಟಿಗೆಯನ್ನು ತೆರೆಯತಕ್ಕದ್ದು ಮತ್ತು ಮತಪತ್ರವನ್ನು ಎಣಿಕೆ ಮಾಡತಕ್ಕದ್ದು ಹಾಗೂ ತನ್ನ ಅಭಿಪ್ರಾಯದಲ್ಲಿ ಕ್ರಮಬದ್ಧವಾಗಿರುವಂಥ ಮತಪತ್ರಗಳನ್ನು ಕ್ರಮಬದ್ಧವಾಗಿಲ್ಲದಂಥ ಮತಪತ್ರಗಳಿಂದ ಪ್ರತ್ಯೇಕಿಸತಕ್ಕದ್ದು. ಮತ್ತು ಅಂಥ ಕ್ರಮಬದ್ಧವಾಗಿಲ್ಲದಂಥ ಮತಪತ್ರಗಳ ಮೇಲೆ "ರದ್ದುಗೊಳಿಸಲಾಗಿದೆ ಎಂದು ಬರೆಯತಕ್ಕದ್ದು ಹಾಗೂ ತಿರಸ್ಕರಣೆಯ ಕಾರಣವನ್ನು ದಾಖಲು ಮಾಡತಕ್ಕದ್ದು ಮತ್ತು ಕ್ರಮಬದ್ಧವಾದ ಎಲ್ಲ ಮತಪತ್ರಗಳನ್ನು ಒಂದು ಕಟ್ಟಿನಲ್ಲಿ ವ್ಯವಸ್ಥೆ ಮಾಡಿ ಇಡತಕ್ಕದ್ದು.

(2) ರಿಟರ್ನಿಂಗ್ ಆಫೀಸರ್ ಈ ಕೆಳಕಂಡ ಸಂದರ್ಭಗಳಲ್ಲಿ ಮತಪತ್ರವನ್ನು ತಿರಸ್ಕರಿಸತಕ್ಕದ್ದು-

(ಎ) ಮತಪತ್ರದಲ್ಲಿ ಮತದಾರರನ್ನು ಗುರುತಿಸಬಹುದಾದಂಥ ಯಾವುದೇ ಗುರುತು ಅಥವಾ ಬರಹ ಇದ್ದರೆ; ಅಥವಾ

(ಬಿ) ಮತವನ್ನು ಯಾರಿಗೆ ಹಾಕಲಾಗಿದೆ ಎಂಬ ಬಗ್ಗೆ ಯಾವ ಗುರುತೂ ಮತಪತ್ರದಲ್ಲಿ ಇರದಿದ್ದರೆ; ಅಥವಾ

(ಸಿ) ಅದರಲ್ಲಿ ಒಬ್ಬನಿಗಿಂತ ಹೆಚ್ಚು ಅಭ್ಯರ್ಥಿಗಳ ಪರವಾಗಿ ಮತ ನೀಡಿದ್ದರೆ; ಅಥವಾ

(ಡಿ) ಅದರಲ್ಲಿ ಮಾಡಲಾದ ಮತದಾನದ ಗುರುತು, ಯಾವ ಅಭ್ಯರ್ಥಿಯ ಪರವಾಗಿ ಮತ ನೀಡಲಾಗಿದೆ ಎಂಬ ಬಗ್ಗೆ ಸಂದೇಹ ಉಂಟು ಮಾಡುವಂತಿದ್ದರೆ; ಅಥವಾ

(ಇ) ಅದು ಖೋಟಾ ಮತಪತ್ರವಾಗಿದ್ದರೆ:

ಪರಂತು, ಮತಪತ್ರದ ಮೇಲೆ ಮಾಡಿರುವ ಗುರುತಿನಿಂದ ಮತವನ್ನು ಯಾವ ನಿರ್ದಿಷ್ಟ ಅಭ್ಯರ್ಥಿಯ ಪರವಾಗಿ ನೀಡಲಾಗಿದೆ ಎಂದು ಸ್ಪಷ್ಟವಾಗಿ ಕಂಡು ಬಂದಾಗ ಆ ಮತವನ್ನು ಅದರ ಮೇಲೆ ಹಾಕಿರುವ ಗುರುತು ಅಸ್ಪಷ್ಟವಾಗಿದೆ ಎಂಬ ಅಥವಾ ಅದನ್ನು ಒಂದಕ್ಕಿಂತ ಹೆಚ್ಚು ಬಾರಿ ಮಾಡಲಾಗಿದೆ ಎಂಬ ಕಾರಣ ಮಾತ್ರದಿಂದ ತಿರಸ್ಕರಿಸತಕ್ಕದ್ದಲ್ಲ.

(3) ಈ ನಿಯಮದ ಮೇರೆಗೆ ಯಾವುದೇ ಮತಪತ್ರವನ್ನು ತಿರಸ್ಕರಿಸುವ ಮೊದಲು ರಿಟರ್ನಿಂಗ್ ಆಫೀಸರ್, ಪ್ರತಿಯೊಬ್ಬ ಅಭ್ಯರ್ಥಿಗೆ ಮತಪತ್ರವನ್ನು ಪರಿವೀಕ್ಷಿಸುವುದಕ್ಕೆ ಸೂಕ್ತ ಅವಕಾಶ ಕೊಡತಕ್ಕದ್ದು. ಆದರೆ ಅದನ್ನು ಅಥವಾ ಇತರ ಮತಪತ್ರವನ್ನು ಕೈಯಿಂದ ಮುಟ್ಟಲು ಅವನಿಗೆ ಅನುಮತಿ ನೀಡತಕ್ಕದ್ದಲ್ಲ.

(4) ತಿರಸ್ಕರಿಸದಿರುವ ಪ್ರತಿಯೊಂದು ಮತಪತ್ರವನ್ನು ಕ್ರಮಬದ್ಧ ಮತ ಎಂದು ಎಣಿಕೆ ಮಾಡತಕ್ಕದ್ದು. ಎಣಿಕೆಯು ಪೂರ್ಣಗೊಂಡ ತರುವಾಯ ರಿಟರ್ನಿಂಗ್ ಆಫೀಸರ್ ಚಲಾಯಿಸಲಾದ ಒಟ್ಟು ಮತಗಳಲ್ಲಿ ಪ್ರತಿಯೊಬ್ಬ ಅಭ್ಯರ್ಥಿಗೆ ದೊರೆತ ಮತಗಳನ್ನು ಒಂದು ವಿವರಣೆಯಲ್ಲಿ ದಾಖಲು ಮಾಡತಕ್ಕದ್ದು ಮತ್ತು ಅದನ್ನು ಘೋಷಿಸತಕ್ಕದ್ದು.

(5) (i)ಅಂತಹ ಘೋಷಣೆಯನ್ನು ಮಾಡಿದ ತರುವಾಯ, ರಿಟರ್ನಿಂಗ್ ಆಫೀಸರ್ ಸ್ವಪ್ರೇರಣೆಯಿಂದ ಅಥವಾ ಯಾವುದೇ ಅಭ್ಯರ್ಥಿಯ ಕೋರಿಕೆಯ ಮೇರೆಗೆ ಮತಗಳನ್ನು ಪುನಃ ಎಣಿಕೆ ಮಾಡಬಹುದು:

ಪರಂತು, ಇದರಲ್ಲಿ ಒಳಗೊಂಡಿರುವುದು ಯಾವುದೂ, ಅವೇ ಮತಗಳನ್ನು ಒಂದು ಸಲಕ್ಕಿಂತ ಹೆಚ್ಚಿಗೆ ಮರು ಎಣಿಕೆ ಮಾಡುವಂತೆ ಚುನಾವಣಾಧಿಕಾರಿಗೆ ನಿರ್ಬಂಧಕವಾಗುತಕ್ಕದ್ದಲ್ಲ.

(ii) ಈ ಉಪನಿಯಮದ ಮೇರೆಗೆ ಮತಗಳನ್ನು ಮರುಎಣಿಕೆ ಮಾಡಿದಾಗ, ಚುನಾವಣಾಧಿಕಾರಿಯು, ಅಂಥ ಮರು ಎಣಿಕೆಯ ತರುವಾಯ (4)ನೇ ಉಪನಿಯಮದಲ್ಲಿ ಉಲ್ಲೇಖಿಸಿರುವ ವಿವರಣೆಯನ್ನು ಅವಶ್ಯಕವಿರುವಷ್ಟರ ಮಟ್ಟಿಗೆ ತಿದ್ದುಪಡಿ ಮಾಡತಕ್ಕದ್ದು ಮತ್ತು ತಾನು ಹಾಗೆ ಮಾಡಿದ ತಿದ್ದುಪಡಿಯನ್ನು ಘೋಷಿಸತಕ್ಕದ್ದು.

(6) ಪ್ರತಿಯೊಬ್ಬ ಅಭ್ಯರ್ಥಿಗೆ ದೊರೆತ ಒಟ್ಟು ಮತಗಳನ್ನು (4)ನೇ ಉಪನಿಯಮ ಅಥವಾ ಸಂದರ್ಭಾನುಸಾರ (5)ನೇ ಉಪನಿಯಮದ ಮೇರೆಗೆ ಘೋಷಿಸಿದ ತರುವಾಯ ಚುನಾವಣಾಧಿಕಾರಿಯು ಕ್ರಮಬದ್ದವಾದ ಅತಿ ಹೆಚ್ಚಿನ ಮತಗಳನ್ನು ಗಳಿಸಿರುವ ಅಭ್ಯರ್ಥಿಯು ಯುಕ್ತವಾಗಿ ಚುನಾಯಿತನಾಗಿದ್ದಾನೆಂದು ಘೋಷಿಸತಕ್ಕದ್ದು.

(7) ಮತಗಳ ಎಣಿಕೆಯು ಪೂರ್ಣಗೊಂಡ ತರುವಾಯ ಅಭ್ಯರ್ಥಿಗಳ ಪೈಕಿ ಕೆಲವರಿಗೆ ಸಮ ಮತಗಳು ಬಂದಿರುವುದು ಕಂಡುಬಂದಲ್ಲಿ, ಮತ್ತು ಅವರಲ್ಲಿ ಯಾವನೇ ಒಬ್ಬನಿಗೆ ಒಂದು ಮತವು ಹೆಚ್ಚಾದರೆ ಅವನು ಚುನಾಯಿತನಾಗಿದ್ದಾನೆಂದು ಘೋಷಿಸಲು ಹಕ್ಕುಳ್ಳವನಾಗುವಂತಿದ್ದರೆ, ಆಗ ತಾನು ನಿರ್ಧರಿಸಬಹುದಾದಂಥ ರೀತಿಯಲ್ಲಿ ಚೀಟಿ ಎತ್ತುವ ಮೂಲಕ ಅಭ್ಯರ್ಥಿಗಳ ಪೈಕಿ ಯಾರಿಗೆ ಹೆಚ್ಚಿನ ಮತ ಇದೆಯೆಂಬುದನ್ನು ಆ ಕೂಡಲೆ ನಿರ್ಧರಿಸತಕ್ಕದ್ದು ಮತ್ತು ಯಾರ ಪರವಾಗಿ ಚೀಟಿ ಏಳುವುದೋ ಆ ಅಭ್ಯರ್ಥಿಯು ಒಂದು ಹೆಚ್ಚಿನ ಮತವನ್ನು ಪಡೆದಿದ್ದರೆ ಹೇಗೋ ಹಾಗೆ ಕ್ರಮ ಜರುಗಿಸತಕ್ಕದ್ದು. ಆ ತರುವಾಯ ರಿಟರ್ನಿಂಗ್ ಆಫೀಸರನು ಚೀಟಿ ಯಾರ ಪರವಾಗಿ ಬರುವುದೋ ಆ ಅಭ್ಯರ್ಥಿಯು ಯುಕ್ತವಾಗಿ ಚುನಾಯಿತನಾಗಿರುವನೆಂದು ಘೋಷಿಸತಕ್ಕದ್ದು.

(8) ರಿಟರ್ನಿಂಗ್ ಆಫೀಸರನು ಆ ತರುವಾಯ ನಮೂನೆ 40ರಲ್ಲಿ ಚುನಾವಣಾ ಫಲಿತಾಂಶದ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಹಾಗೂ ಅದನ್ನು ಪ್ರಮಾಣೀಕರಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ಕೂಡಲೆ ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ಕಳುಹಿಸತಕ್ಕದ್ದು.

(9) ರಿಟರ್ನಿಂಗ್ ಆಫೀಸರನು ಮಂಡಲಿಯಲ್ಲಿ ಜಿಲ್ಲೆಯ ಮಾರುಕಟ್ಟೆ ಸಮಿತಿಯನ್ನು ಪ್ರತಿನಿಧಿಸುವುದಕ್ಕಾಗಿ ತಾನು ಚೀಟಿ ಎತ್ತುವ ಮೂಲಕ ನಿರ್ಧರಿಸಿದ ಅಧ್ಯಕ್ಷನ ಹೆಸರನ್ನು ಕೃಷಿ ಮಾರುಕಟ್ಟೆ ನಿರ್ದೇಶಕನಿಗೆ ತಿಳಿಸತಕ್ಕದ್ದು.

**88ಹೆಚ್. ಚುನಾವಣಾ ಕಾಗದ ಪತ್ರಗಳಿಗೆ ಮೊಹರು ಮಾಡುವುದು ಮತ್ತು ಅವುಗಳ ಅಭಿರಕ್ಷೆ.–** (1) ರಿಟರ್ನಿಂಗ್ ಆಫೀಸರ್ ಆ ತರುವಾಯ ಗುರುತು ಮಾಡಲಾದ ಅಧ್ಯಕ್ಷರ ಪಟ್ಟಿಯ ಪ್ರತಿ, ಪ್ರತಿಯೊಬ್ಬ ಅಭ್ಯರ್ಥಿಗೆ ಸಂಬಂಧಪಟ್ಟಂತೆ ಎಣಿಕೆ ಮಾಡಲಾದ ಅಥವಾ ತಿರಸ್ಕರಿಸಲಾದ ಮತಪತ್ರಗಳು – ಇವುಗಳನ್ನು ಪ್ರತ್ಯೇಕ ಪ್ಯಾಕೆಟ್‌ಗಳಲ್ಲಿ ಸೇರಿಸಿಡತಕ್ಕದ್ದು ಮತ್ತು ಪ್ರತಿಯೊಂದು ಪ್ಯಾಕೆಟ್‌ಗೆ ಮೊಹರು ಮಾಡತಕ್ಕದ್ದು ಮತ್ತು ಅದರ ಮೇಲೆ ಒಳ ವಿಷಯಗಳ ವಿವರ ಸಂಬಂಧಪಟ್ಟ ಚುನಾವಣೆ ಮತ್ತು ಅದರ ದಿನಾಂಕ ಇವುಗಳನ್ನು ಬರೆದಿಡತಕ್ಕದ್ದು.

(2) ಈ ಪ್ಯಾಕೇಟುಗಳನ್ನು, 103ನೇ ಪ್ರಕರಣದ ಮೇರೆಗೆ ಜಿಲ್ಲಾ ನ್ಯಾಯಾಧೀಶನ ಆದೇಶದ ಹೊರತಾಗಿ ಯಾವನೇ ವ್ಯಕ್ತಿಯ ಅಥವಾ ಪ್ರಾಧಿಕಾರದ ಮುಂದೆ ತೆಗೆಯತಕ್ಕದ್ದಲ್ಲ ಮತ್ತು ಅದರ ಒಳಗಿನ ವಸ್ತುಗಳನ್ನು ತಪಾಸಣೆ ಮಾಡತಕ್ಕದ್ದಲ್ಲ ಅಥವಾ ಹಾಜರುಪಡಿಸತಕ್ಕದ್ದಲ್ಲ.

(3) ಈ ಪ್ಯಾಕೇಟುಗಳನ್ನು ಚುನಾವಣೆಯ ಫಲಿತಾಂಶವನ್ನು ಘೋಷಿಸಿದ ದಿನಾಂಕದಿಂದ ಎರಡು ವರ್ಷಗಳ ಅವಧಿಯವರೆಗೆ ರಿಟರ್ನಿಂಗ್ ಆಫೀಸರನು ತನ್ನ ಕಚೇರಿಯಲ್ಲಿ ಸುರಕ್ಷಿತ ಅಭಿರಕ್ಷೆಯಲ್ಲಿ ಇಟ್ಟುಕೊಳ್ಳತಕ್ಕದ್ದು. ಮತ್ತು ಆ ತರುವಾಯ ಜಿಲ್ಲಾ ನ್ಯಾಯಾಧೀಶನು ಅಥವಾ ಸಕ್ಷಮ ನ್ಯಾಯಾಲಯವು ಅಥವಾ ರಾಜ್ಯ ಸರ್ಕಾರವು ಈ ಬಗ್ಗೆ ಪ್ರತಿಕೂಲ ನಿರ್ದೇಶನಗಳನ್ನು ಕೊಟ್ಟ ಹೊರತು ಅವುಗಳನ್ನು ನಾಶಪಡಿಸತಕ್ಕದ್ದಲ್ಲ.

**88ಐ. ಮಂಡಳಿಯ ಚುನಾಯಿತ ಸದಸ್ಯರ ಹೆಸರುಗಳ ಪ್ರಕಟಣೆ.–** ಕೃಷಿ ಮಾರುಕಟ್ಟೆ ನಿರ್ದೇಶಕನು, ಮಂಡಲಿಗೆ ಚುನಾಯಿತರಾದ ಎಲ್ಲ ಸದಸ್ಯರ ಹೆಸರುಗಳನ್ನು ಅಧಿಸೂಚನೆಯ ಮೂಲಕ ಪ್ರಕಟಿಸತಕ್ಕದ್ದು.

[1][**89. ಯೋಜನೆಗಳ ಮತ್ತು ಅಂದಾಜುಗಳ ತಯಾರಿಕೆ.–**][1]

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3-2-1970ರ ಮೂಲಕ ಬಿಟ್ಟುಬಿಡಲಾಗಿದೆ.

[1][**90. ಆಯವ್ಯಯ ಪತ್ರ.–**][1]

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3-2-1970ರ ಮೂಲಕ ಬಿಟ್ಟುಬಿಡಲಾಗಿದೆ.

**91. ಮಾರುಕಟ್ಟೆ ಅಭಿವೃದ್ಧಿ ನಿಧಿ.-** (1) ಮಂಡಳಿಯು ಸ್ವೀಕರಿಸುವ ಎಲ್ಲಾ ಹಣವನ್ನು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ಲಿಮಿಟೆಡ್‌ನಲ್ಲಿ [1][ಅಥವಾ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ][1] [2][ಅಥವಾ ಸರ್ಕಾರದ ಭದ್ರತೆಗಳಲ್ಲಿ][1] ಇಡತಕ್ಕದ್ದು ಅಥವಾ ತೊಡಗಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಡಿ 370, ಎಂಆರ್‌ಡಿ 03 ದಿನಾಂಕ 22.7.2004ರ ಮೂಲಕ ಸೇರಿಸಲಾಗಿದೆ.

2. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ.

(2) ಮಂಡಲಿಯು, ಮಾರುಕಟ್ಟೆ ಅಭಿವೃದ್ಧಿ ನಿಧಿಯನ್ನು 111ನೇ ಪ್ರಕರಣದಲ್ಲಿ ನಮೂದಿಸಿರುವ ಉದ್ದೇಶಗಳಿಗಾಗಿ, ಸಮಿತಿಗಳ ಮೂಲಕ ಉಪಯೋಗಿಸಿಕೊಳ್ಳಬಹುದು.

(3) ಮಂಡಲಿಯು ಸಲಹಾ ಸಮಿತಿಗಳಿಗೆ ಅಥವಾ ತಾನು ಮಾನ್ಯತೆ ನೀಡಿರುವಂತಹ ಮತ್ತು ಕೃಷಿ ಉತ್ಪನ್ನದ ನಿಯಂತ್ರಿತ ಮಾರುಕಟ್ಟೆ ಕುರಿತಂತೆ ಶಿಕ್ಷಣ ನೀಡುತ್ತಿರುವ ಅಥವಾ ಸಾರ್ವತ್ರಿಕ ಹಿತದೃಷ್ಟಿಯಿಂದ ಕೃಷಿ ಉತ್ಪನ್ನದ ನಿಯಂತ್ರಿತ ಮಾರುಕಟ್ಟೆ ಕುರಿತಂತೆ ಯಾವುದೇ ಕಾರ್ಯ ಮಾಡುತ್ತಿರುವ ಸಂಸ್ಥೆಗಳಿಗೆ ಮಾರುಕಟ್ಟೆ ಅಭಿವೃದ್ಧಿ ನಿಧಿಯಿಂದ ನಿಧಿಗಳನ್ನು ಮಂಜೂರು ಮಾಡಬಹುದು.

## ಭಾಗ – VIII

### ಸಂಕೀರ್ಣ

**92. ಸಮಿತಿಗಳ ಏಜೆಂಟರಾಗಿ ನೇಮಕ ಮಾಡಲಾದ ಮಂಡಲ ಪಂಚಾಯಿತಿಗಳ ಅಧಿಕಾರಗಳು ಮತ್ತು ಕರ್ತವ್ಯಗಳು.-** (1) ಅಧಿನಿಯಮದ 97ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಸಮಿತಿಯ ಏಜೆಂಟರಾಗಿ ನೇಮಕ ಮಾಡಲಾದ ಮಂಡಲ್ ಪಂಚಾಯತಿಗಳು, ಈ ಕೆಳಗೆ ನಿರ್ದಿಷ್ಟಪಡಿಸಿದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು:-

(i) ಸಮಿತಿಯಿಂದ ಅವಶ್ಯಕ ಲೈಸನ್ಸನ್ನು ಪಡೆಯದೆ ಯಾವನೇ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ ಆ ಸಮಿತಿಯ ಅಧಿಕಾರ ವ್ಯಾಪ್ತಿಯ ಪ್ರದೇಶದೊಳಗೆ ಕಾರ್ಯನಿರ್ವಹಿಸಲು ಅನುಮತಿ ನೀಡತಕ್ಕದ್ದಲ್ಲ.

(ii) ಲೈಸನ್ಸಿನ ನೀಡಿಕೆಗಾಗಿ ಅಥವಾ ನವೀಕರಣಕ್ಕಾಗಿ ಬರುವ ಅರ್ಜಿಗಳನ್ನು ಸಮಿತಿಯ ಪರವಾಗಿ ಸ್ವೀಕರಿಸಲು ಆ ಬಗ್ಗೆ ಗೊತ್ತುಪಡಿಸಿದ ಲೈಸನ್ಸ್ ಫೀಜನ್ನು ವಸೂಲ್ಮಾಡಲು ಅಧಿಕಾರ ಹೊಂದಿರತಕ್ಕದ್ದು.

(iii) ಸಮಿತಿಯ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶದಲ್ಲಿ, ವ್ಯವಹಾರದ ವೇಳೆ ಮತ್ತು ಸ್ಥಳವನ್ನು ನಿರ್ದಿಷ್ಟಪಡಿಸಲು ಮತ್ತು ಅಧಿಸೂಚಿತ ಕೃಷಿ ಉತ್ಪನ್ನದ ಮಾರುಕಟ್ಟೆ ವ್ಯವಹಾರಕ್ಕೆ ಸಂಬಂಧಪಟ್ಟಂತೆ, ಮಾರಾಟಗಳು, ತೂಕ, ಬಟವಾಡೆ, ಸಂದಾಯ ಮತ್ತು ಇತರ ಎಲ್ಲಾ ವ್ಯವಹಾರಗಳನ್ನು ನಡೆಸಲು ಮತ್ತು ಆ ಕುರಿತು ಮೇಲ್ವಿಚಾರಣೆ ಮಾಡಲು ಅಧಿಕಾರ ಹೊಂದಿರತಕ್ಕದ್ದು.

(iv) ಸಮಿತಿಯ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶದಲ್ಲಿ ಮಾರಾಟ ಮಾಡಲಾಗುವ ಕೃಷಿ ಉತ್ಪನ್ನಗಳ ಸಂಬಂಧದಲ್ಲಿ ಸಮಿತಿಯ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಲಾದ ದರಗಳಲ್ಲಿ ಖರೀದಿದಾರನಿಂದ ಮಾರುಕಟ್ಟೆ ಫೀಜನ್ನು ವಸೂಲು ಮಾಡಲು ಮತ್ತು ಗೊತ್ತುಪಡಿಸಿದ ನಮೂನೆಯಲ್ಲಿ ರಸೀತಿಯನ್ನು ನೀಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(v) ಮಂಡಲ ಪಂಚಾಯತಿಯ ಅಧ್ಯಕ್ಷನು ಅಥವಾ ಕಾರ್ಯದರ್ಶಿಯು, ತನ್ನ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶದಲ್ಲಿ ಕೃಷಿ ಉತ್ಪನ್ನದ ಮಾರಾಟಕ್ಕಾಗಿ ಅಥವಾ ಖರೀದಿಗಾಗಿ ಉಪಯೋಗಿಸಲಾಗುವ ತೂಕದ ಬಟ್ಟುಗಳನ್ನು ಪರೀಕ್ಷಿಸುವ ಮತ್ತು ತಪಾಸಣೆ ಮಾಡುವ ಅಧಿಕಾರ ಹೊಂದಿರತಕ್ಕದ್ದು.

(vi) ಮಂಡಲ ಪಂಚಾಯತಿಯು ಈ ನಿಯಮಗಳ ಮೇರೆಗೆ, ಮಾರುಕಟ್ಟೆ ಕಾರ್ಯನಿರ್ವಾಹಕರು ಒದಗಿಸಬೇಕಾದ ನಿಯತಕಾಲಿಕ ವರದಿಗಳನ್ನು ಮತ್ತು ವಿವರ ಪಟ್ಟಿಕೆಗಳನ್ನು ಒದಗಿಸುವಂತೆ ಕೇಳುವ ಅಧಿಕಾರ ಹೊಂದಿರತಕ್ಕದ್ದು.

(2) ಈ ಕೆಳಕಂಡವುಗಳು ಮಂಡಲ ಪಂಚಾಯತಿಯ ಕರ್ತವ್ಯಗಳಾಗಿರತಕ್ಕದ್ದು:-

(i) ಲೈಸನ್ಸ್ ನೀಡಿಕೆಗಾಗಿ ಅಥವಾ ನವೀಕರಣಕ್ಕಾಗಿ ಬಂದ ಎಲ್ಲ ಅರ್ಜಿಗಳನ್ನು ಲೈಸನ್ಸ್ ಫೀ ಸಮೇತ ಸಮಿತಿಗೆ ಕಳುಹಿಸುವುದು;

(ii) ಮಾರುಕಟ್ಟೆ ಕಾರ್ಯನಿರ್ವಾಹಕರಿಂದ ಬಂದ ಎಲ್ಲಾ ನಿಯತಕಾಲಿಕ ವರದಿಗಳನ್ನು ಮತ್ತು ವಿವರಪಟ್ಟಿಕೆಗಳನ್ನು ತರುವಾಯದ ತಿಂಗಳಿನ 5ನೇ ದಿನಾಂಕಕ್ಕೆ ಮೊದಲು ಸಮಿತಿಗೆ ಕಳುಹಿಸುವುದು;

(iii) ವ್ಯಾಪಾರ ನಿರ್ವಹಣೆಗಾಗಿ ಅವಶ್ಯವಾದ ಮೂಲ ಸೌಲಭ್ಯಗಳನ್ನು ಒದಗಿಸುವುದು.

(iv) ಮಾರುಕಟ್ಟೆ ದರಗಳನ್ನು ಮತ್ತು ಅದೇ ರೀತಿಯ ಇತರ ಮಾಹಿತಿಯನ್ನು ಸ್ವೀಕರಿಸುವುದು ಮತ್ತು ಅದನ್ನು ಸಂಬಂಧಪಟ್ಟ ಎಲ್ಲರ ಪ್ರಯೋಜನಕ್ಕಾಗಿ ಮಂಡಲ ಪಂಚಾಯತಿಯ ಸೂಚನಾ ಫಲಕದ ಮೇಲೆ ಪ್ರಕಟಿಸುವುದು;

(v) ಕೃಷಿ ಉತ್ಪನ್ನಗಳ ಸಿದ್ಧಗೊಳಿಸುವಿಕೆ, ದಾಸ್ತಾನು, ಪ್ಯಾಕಿಂಗ್, ಸಾಗಣೆ ಮತ್ತು ಮಾರುಕಟ್ಟೆ ವ್ಯವಹಾರ ಈ ಕುರಿತು ಅನುಸರಿಸಬೇಕಾದ ಸೂಕ್ತ ವಿಧಾನಗಳ ಬಗ್ಗೆ ಪ್ರಚಾರ ಮಾಡುವುದು; ಮತ್ತು

(vi) ತನ್ನ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶದಲ್ಲಿ ಕೃಷಿ ಉತ್ಪನ್ನದ ಮಾರುಕಟ್ಟೆ ವ್ಯವಹಾರವನ್ನು ನಿಯಂತ್ರಣಗೊಳಿಸಲು ಸಮಿತಿಯು ಅದಕ್ಕೆ ವಹಿಸಿರುವ ಇತರ ಎಲ್ಲಾ ಪ್ರಕಾರ್ಯಗಳನ್ನು ನಿರ್ವಹಿಸುವುದು.

(3) ಅಧಿನಿಯಮಕ್ಕೆ, ನಿಯಮಗಳಿಗೆ ಮತ್ತು ಉಪವಿಧಿಗಳನುಸಾರವಾಗಿ ಮಂಡಲ ಪಂಚಾಯತಿಯು [1][ತನ್ನ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶದಲ್ಲಿ][1] ಚಲಾಯಿಸಿರುವ ಅಧಿಕಾರಗಳನ್ನು ನಿರ್ವಹಿಸಿರುವ ಕರ್ತವ್ಯಗಳನ್ನು, ಸಮಿತಿಯು ಚಲಾಯಿಸಿದೆ ಮತ್ತು ನಿರ್ವಹಿಸಿದೆ ಎಂದು ಭಾವಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 44, ದಿನಾಂಕ 3-2-1970ರ ಮೂಲಕ ಪ್ರತಿಯೋಜಿಸಲಾಗಿದೆ

**93. ಆಸ್ತಿಗಳ, ಹಕ್ಕುಗಳ ಮತ್ತು ಹೊಣೆಗಾರಿಕೆಗಳ ಹಂಚಿಕೆ.–** ವಿಸರ್ಜಿಸಲಾಗಿರುವ ಸಮಿತಿಯ ಆಸ್ತಿಗಳನ್ನು, ಹಕ್ಕುಗಳನ್ನು ಮತ್ತು ಹೊಣೆಗಾರಿಕೆಗಳನ್ನು ಆ ಸಮಿತಿಯ ಪ್ರದೇಶದಲ್ಲಿ ಸ್ಥಾಪಿಸಲಾಗುವ ಹೊಸ ಸಮಿತಿಗಳಿಗೆ, ಆಯಾ ಸಮಿತಿಗಳು ಪಡೆಯುವ ಅಂದಾಜು ವರಮಾನ ಮತ್ತು ಸೌಕರ್ಯಗಳನ್ನು ಆಧರಿಸಿ ನ್ಯಾಯಸಮ್ಮತವಾಗಿ ಹಂಚತಕ್ಕದ್ದು.

**94. ಉಪವಿಧಿಗಳ ಪ್ರಕಟಣೆ.–** (1) ಸಮಿತಿಯು ಉಪವಿಧಿಗಳನ್ನು ರಚಿಸತಕ್ಕದ್ದು ಮತ್ತು ಅವುಗಳನ್ನು ಸಮಿತಿಯ ಸೂಚನಾ ಫಲಕದ ಮೇಲೆ ಅಂಟಿಸುವ ಮೂಲಕ ಪ್ರಕಟಿಸತಕ್ಕದ್ದು.

(2) 149ನೇ ಪ್ರಕರಣದ ಮೇರೆಗೆ ರಚಿಸಲಾದ ಉಪವಿಧಿಗಳನ್ನು ಸಹ ಸಮಿತಿಯ ಸೂಚನಾ ಫಲಕದ ಮೇಲೆ ಅಂಟಿಸುವ ಮೂಲಕ ಪ್ರಕಟಿಸತಕ್ಕದ್ದು.

**95. ಸ್ಥಾಯಿ ಆದೇಶಗಳ ಪ್ರಕಟಣೆ.–** 151ನೇ ಪ್ರಕರಣದ ಮೇರೆಗೆ ಸಮಿತಿಯು ರಚಿಸಿದ ಪ್ರತಿಯೊಂದು ಸ್ಥಾಯೀ ಆದೇಶವನ್ನು ಸಮಿತಿಯ ಸೂಚನಾ ಫಲಕದ ಮೇಲೆ ಮತ್ತು ಸಮಿತಿಯ ಏಜೆಂಟರಾಗಿ ನೇಮಕಗೊಂಡ ಮಂಡಲ ಪಂಚಾಯತಿಗಳ ಸೂಚನಾ ಫಲಕದ ಮೇಲೆ ಅಂಟಿಸುವ ಮೂಲಕ ಪ್ರಕಟಿಸತಕ್ಕದ್ದು.

**96. ನಿರಸನ ಮತ್ತು ಉಳಿಸುವಿಕೆಗಳು.–** 154ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು ಹಿಂದೆ ಹೇಳಿದ ನಿಯಮಗಳಿಗೆ ಸಂವಾದಿಯಾಗಿರುವ ಎಲ್ಲಾ ನಿಯಮಗಳು ಈ ಮೂಲಕ ನಿರಸಿತವಾಗಿವೆ.

(ಸಂಖ್ಯೆ ಡಿಪಿಸಿ 257 ಸಿಎಂಡಿ 67)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಭರಣಯ್ಯ**

ಸರ್ಕಾರದ ಕಾರ್ಯದರ್ಶಿ,

ಅಭಿವೃದ್ಧಿ ವಸತಿ ಪಂಚಾಯತ್ ರಾಜ್ ಮತ್ತು ಸಹಕಾರ ಇಲಾಖೆ.

**ನಮೂನೆ – 1**

**[5(5)ನೇ ನಿಯಮವನ್ನು ನೋಡಿ]**

**ಮತದಾರರ ಪ್ರಾರಂಭಿಕ ಪಟ್ಟಿಯ ಪ್ರಕಟಣೆಯ ನೋಟೀಸು**

...............................ಚುನಾವಣಾ ಕ್ಷೇತ್ರದ ಮತದಾರರಿಗೆ.

1968ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳ ಅನುಸಾರವಾಗಿ ಮತದಾರರ ಪಟ್ಟಿಯನ್ನು ತಯಾರಿಸಲಾಗಿದೆಯೆಂದು ಮತ್ತು ಅದರ ಒಂದು ಪ್ರತಿಯು, ನನ್ನ ಕಚೇರಿಯಲ್ಲಿ ಮತ್ತು ............................................... ಈ ಸ್ಥಳದಲ್ಲಿ ಕಚೇರಿಯ ವೇಳೆಯಲ್ಲಿ ಪರಿಶೀಲನೆಗೆ ಲಭ್ಯವಿದೆ ಎಂದು ಈ ಮೂಲಕ ಸೂಚಿಸಲಾಗಿದೆ.

ಮತದಾರರ ಪಟ್ಟಿಯಲ್ಲಿ ಹೆಸರನ್ನು ಸೇರಿಸುವ ಬಗ್ಗೆ ಯಾವುದೇ ಕ್ಲೇಮು ಇರುವಲ್ಲಿ ಅಥವಾ ಯಾವುದೇ ಹೆಸರನ್ನು ಸೇರಿಸಿರುವ ಬಗ್ಗೆ ಯಾವುದೇ ಆಕ್ಷೇಪಣೆ ಇರುವಲ್ಲಿ ಅಥವಾ ಯಾವುದೇ ನಮೂದಿನಲ್ಲಿನ ವಿವರಗಳ ಬಗ್ಗೆ ಯಾವುದೇ ಆಕ್ಷೇಪಣೆ ಇರುವಲ್ಲಿ, ಅದನ್ನು ಸೂಕ್ತವಾಗಬಹುದಾದಂತೆ ನಮೂನೆ 2,3 ಅಥವಾ 4ರಲ್ಲಿ ............. ನೇ ಸಾಲಿನ ......... ತಿಂಗಳ ...............ನೇ ದಿನಾಂಕದಂದು ಅಥವಾ ಅದಕ್ಕೆ ಮೊದಲು ದಾಖಲು ಮಾಡತಕ್ಕದ್ದು.

ಅಂಥ ಪ್ರತಿಯೊಂದು ಕ್ಲೇಮನ್ನು ಅಥವಾ ಆಕ್ಷೇಪಣೆಯನ್ನು ನನ್ನ ಕಚೇರಿಯ ........................... ಇವರಿಗೆ ಸಲ್ಲಿಸತಕ್ಕದ್ದು ಅಥವಾ ಈ ಕೆಳಗೆ ಕೊಟ್ಟಿರುವ ವಿಳಾಸಕ್ಕೆ ಮೇಲೆ ಹೇಳಲಾದ ದಿನಾಂಕದ ಮುಂಚೆ ತಲುಪುವಂತೆ ಅಂಚೆಯ ಮೂಲಕ ಕಳುಹಿಸತಕ್ಕದ್ದು.

ದಿನಾಂಕ :

.............................

ಡೆಪ್ಯುಟಿ ಕಮಿಷನರು : ಅಧಿಕೃತ ಅಧಿಕಾರಿ

(ವಿಳಾಸ) ...........................

...........................

...........................

**ನಮೂನೆ – 2**

**[5(7)(ಎ)ನೇ ನಿಯಮವನ್ನು ನೋಡಿ]**

**ಹೆಸರನ್ನು ಸೇರಿಸುವುದಕ್ಕಾಗಿ ಕ್ಲೇಮು ಮಾಡುವ ಅರ್ಜಿ**

ಡೆಪ್ಯುಟಿ ಕಮಿಷನರ : ಅಧಿಕೃತ ಅಧಿಕಾರಿ,
.................... ಚುನಾವಣಾ ಕ್ಷೇತ್ರ,
ಇವರಿಗೆ,
ಮಾನ್ಯರೆ,

................................ ಕ್ಕೆ ಸಂಬಂಧಪಡುವ .................... ವಿಭಾಗ ಸಂಖ್ಯೆಯ ಮೇಲಿನ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ನನ್ನ ಹೆಸರನ್ನು ಸೇರಿಸಬೇಕೆಂದು ಕೋರುತ್ತೇನೆ.

ನನ್ನ ಪೂರ್ಣ ಹೆಸರು ................................
ನನ್ನ ತಂದೆ : ತಾಯಿ: ಗಂಡನ ಹೆಸರು ................................
ನಾನು ಸಾಗುವಳಿ ಮಾಡುವ ಕೃಷಿ
ಜಮಿನಿನ ವಿವರಗಳು ಇಂತಿವೆ:
ಜಮಿನಿನ ಸರ್ವೆ ನಂಬರು ................................
ಸರ್ವೆ ನಂಬರಿನ ಉಪವಿಭಾಗ ................................
ಗ್ರಾಮ ................................
ಜಿಲ್ಲೆ ................................

ನನಗೆ ತಿಳಿದಿರುವಷ್ಟರ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ಈ ಕೆಳಕಂಡಂತೆ ಘೋಷಿಸುತ್ತೇನೆ:

(i) ನಾನು ಮೇಲೆ ಸೂಚಿಸಿರುವ ಕೃಷಿ ಭೂಮಿಯನ್ನು ಸಾಗುವಳಿ ಮಾಡುವ ಅನುಭೋಗದಾರ : ಗೇಣಿದಾರನಾಗಿದ್ದೇನೆ;

(ii) ನನ್ನ ವಯಸ್ಸು .............;

(iii) ಈ ಚುನಾವಣಾ ಕ್ಷೇತ್ರದ ಅಥವಾ ಯಾವುದೇ ಇತರ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ನನ್ನ ಹೆಸರನ್ನು ಸೇರಿಸುವಂತೆ ಕೋರಿ ಅರ್ಜಿ ಸಲ್ಲಿಸಿಲ್ಲ; ಅಥವಾ .................... ರ ..................... ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ನನ್ನ ಹೆಸರನ್ನು ಸೇರಿಸಿರಬಹುದು, ಹಾಗಿದ್ದಲ್ಲಿ ಅದನ್ನು ಆ ಮತದಾರರ ಪಟ್ಟಿಯಿಂದ ತೆಗೆದುಹಾಕಬೇಕೆಂದು ಕೋರುತ್ತೇನೆ:–

ಸ್ಥಳ :
ದಿನಾಂಕ :

ಕ್ಲೇಮುದಾರನ ಸಹಿ ಅಥವಾ ಹೆಬ್ಬೆಟ್ಟಿನ ಗುರುತು.

ಕ್ಲೇಮುದಾರನು ............................. ಗೆ ಸಂಬಂಧಪಡುವ ............................. ವಿಭಾಗ ಸಂಖ್ಯೆಯ ಯಾವ ಮತದಾರರ ಪಟ್ಟಿಯಲ್ಲಿ ತನ್ನ ಹೆಸರನ್ನು ಸೇರಿಸುವುದಕ್ಕಾಗಿ ಅರ್ಜಿ ಸಲ್ಲಿಸಿರುವನೋ ಆ ಮತದಾರರ ಪಟ್ಟಿಯಲ್ಲಿ ನಾನೂ ಒಬ್ಬ ಮತದಾರನಾಗಿದ್ದು ಅದರಲ್ಲಿ ನನ್ನ ಕ್ರಮಸಂಖ್ಯೆ .................. ಆಗಿರುತ್ತದೆ. ಆದ್ದರಿಂದ ಈ ಕ್ಲೇಮನ್ನು ನಾನು ಸಮರ್ಥಿಸಿ ಅದಕ್ಕೆ ನನ್ನ ಮೇಲು ರುಜು ಹಾಕಿರುತ್ತೇನೆ.

.............................
ಮತದಾರರ ಸಹಿ

ಪೂರ್ಣಹೆಸರು .............................

**ನಮೂನೆ – 3**

**[5(7)(ಬಿ)ನೇ ನಿಯಮವನ್ನು ನೋಡಿ]**

**ಹೆಸರನ್ನು ಸೇರಿಸುವುದಕ್ಕೆ ಆಕ್ಷೇಪಣೆ**

ಡೆಪ್ಯುಟಿ ಕಮಿಷನರ : ಅಧಿಕೃತ ಅಧಿಕಾರಿ,
.................... ಚುನಾವಣಾ ಕ್ಷೇತ್ರ.
ಇವರಿಗೆ,
ಮಾನ್ಯರೆ,

ಈ ಕೆಳಕಂಡ ಕಾರಣಗಳಿಂದಾಗಿ ಮತದಾರರ ಪಟ್ಟಿಯ ..................... ವಿಭಾಗದ ..................... ಕ್ರಮ ಸಂಖ್ಯೆಯಲ್ಲಿ ...................... ಹೆಸರನ್ನು ಸೇರಿಸಿರುವುದನ್ನು ನಾನು ಆಕ್ಷೇಪಿಸುತ್ತೇನೆ:–

...............................
...............................
...............................

ಮೇಲೆ ಸೂಚಿಸಿರುವ ಸಂಗತಿಗಳು ನನಗೆ ತಿಳಿದಿರುವಷ್ಟರ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ಸತ್ಯವೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ನನ್ನ ಹೆಸರನ್ನು ಈ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ಈ ಕೆಳಕಂಡಂತೆ ಸೇರಿಸಲಾಗಿದೆ

ಪೂರ್ಣ ಹೆಸರು ..............................

ಕ್ರಮಸಂಖ್ಯೆ ..............................

ವಿಭಾಗ ಸಂಖ್ಯೆ ..............................

ಆಕ್ಷೇಪಣೆದಾರನ ಸಹಿ : ಹೆಬ್ಬೆಟ್ಟು ಗುರುತು

(ಪೂರ್ಣ ಅಂಚೆ ವಿಳಾಸ)

ದಿನಾಂಕ .................

........................... ವಿಭಾಗದ ...................... ಸಂಖ್ಯೆಯ ಮತದಾರರ ಪಟ್ಟಿಯಲ್ಲಿ ನನ್ನನ್ನು ಒಬ್ಬ ಮತದಾರನೆಂದು ಸೇರಿಸಲಾಗಿದ್ದು ಅದರಲ್ಲಿ ನನ್ನ ಕ್ರಮಸಂಖ್ಯೆ ...................... ಆಗಿರುತ್ತದೆ. ನಾನು ಮೇಲ್ಕಂಡ ಆಕ್ಷೇಪಣೆಯನ್ನು ಸಮರ್ಥಿಸುತ್ತೇನೆ ಮತ್ತು ಅದಕ್ಕೆ ನನ್ನ ಮೇಲುರುಜು ಹಾಕಿದ್ದೇನೆ.

.............................

ಮತದಾರನ ಸಹಿ

ಪೂರ್ಣ ಹೆಸರು................

**ನಮೂನೆ - 4**

[5(7)(ಸಿ)ನೇ ನಿಯಮವನ್ನು ನೋಡಿ]

**ನಮೂದಿನಲ್ಲಿರುವ ವಿವರಗಳ ಬಗ್ಗೆ ಆಕ್ಷೇಪಣೆ**

ಜಿಲ್ಲಾಧಿಕಾರಿ : ಅಧಿಕೃತ ಅಧಿಕಾರಿ

............. ಚುನಾವಣಾ ಕ್ಷೇತ್ರ

.................... ಇವರಿಗೆ.

ಮಾನ್ಯರೆ,

ಮತದಾರರ ಪಟ್ಟಿಯ .................... ವಿಭಾಗದ ........... ಕ್ರಮಸಂಖ್ಯೆಯಲ್ಲಿ ................ ಎಂಬುದಾಗಿ, ನನಗೆ ಸಂಬಂಧಪಟ್ಟ ನಮೂದು ಸರಿಯಿಲ್ಲವೆಂದು ನನಗೆ ಕಂಡುಬಂದಿದೆಯೆಂದು ಈ ಮೂಲಕ ತಮಗೆ ತಿಳಿಸಬಯಸುತ್ತೇನೆ. ಮತ್ತು ಅದನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಬೇಕು:-

"....................................................

.................................................. "

ಮತದಾರನ ಸಹಿ: ಹೆಬ್ಬೆಟ್ಟು ಗುರುತು.

ಸ್ಥಳ ................

ದಿನಾಂಕ ............

**ನಮೂನೆ - 5**

[5(9) (ಎ) ನಿಯಮವನ್ನು ನೋಡಿ]

**ಕ್ಲೇಮುಗಳ ಪಟ್ಟಿ**

| ಸ್ವೀಕರಿಸಿದ ದಿನಾಂಕ | ಕ್ರಮ ಸಂಖ್ಯೆ | ಕ್ಲೇಮುದಾರನ ಹೆಸರು | ತಂದೆ:ಗಂಡನ ತಾಯಿಯ ಹೆಸರು | ಕ್ಲೇಮುದಾರನು ಸಾಗುವಳಿ ಮಾಡುತ್ತಿರುವ ಕೃಷಿ ಭೂಮಿಯ ಸರ್ವೆ ನಂಬರು ಅಥವಾ ಅದರ ಉಪವಿಭಾಗ | ಕೃಷಿ ಭೂಮಿಯ ಇರುವ ಗ್ರಾಮದ ಮತ್ತು ತಾಲ್ಲೂಕಿನ ಹೆಸರು | ಸುನಾವಣೆಯ ದಿನಾಂಕ ಮತ್ತು ಸ್ಥಳ |
|---|---|---|---|---|---|---|
| 1 | 2 | 3 | 4 | 5 | 6 | 7 |

**ನಮೂನೆ – 6**

**[5(9) (ಎ) ನಿಯಮವನ್ನು ನೋಡಿ]**

**ಹೆಸರುಗಳ ಸೇರ್ಪಡೆಯ ಬಗ್ಗೆ ಮಾಡಲಾದ ಆಕ್ಷೇಪಣೆಗಳ ಪಟ್ಟಿ**

| ಸ್ವೀಕರಿಸಿದ ದಿನಾಂಕ | ಕ್ರಮ ಸಂಖ್ಯೆ | ಆಕ್ಷೇಪಣೆದಾರನ ಪೂರ್ಣ ಹೆಸರು | ಆಕ್ಷೇಪಿತ | ಹೆಸರುಗಳ | ವಿವರಗಳು | ಆಕ್ಷೇಪಣೆಯ ಸಂಕ್ಷಿಪ್ತ ಕಾರಣಗಳು | ಸುನಾವಣೆಯ (ಹಿಯರಿಂಗ್) ವೇಳೆ ಮತ್ತು ಸ್ಥಳ |
|---|---|---|---|---|---|---|---|
| | | | ವಿಭಾಗ ಸಂಖ್ಯೆ | ಕ್ರಮ ಸಂಖ್ಯೆ | ಪೂರ್ಣ ಹೆಸರು | | |
| **1** | **2** | **3** | 4 | 5 | 6 | **7** | **8** |
| | | | | | | | |

**ನಮೂನೆ – 7**

**[5 (9) (ಎ) ನಿಯಮವನ್ನು ನೋಡಿ]**

**ನಮೂದಿತ ವಿವರಗಳ ಬಗ್ಗೆ ಮಾಡಲಾದ ಆಕ್ಷೇಪಣೆಗಳ ಪಟ್ಟಿ**

| ಸ್ವೀಕರಿಸಿದ ದಿನಾಂಕ | ಕ್ರಮ ಸಂಖ್ಯೆ | ಆಕ್ಷೇಪಣೆ ಮಾಡುವ ಮತದಾರನ ಪೂರ್ಣ ಹೆಸರು | ವಿಭಾಗ ಸಂಖ್ಯೆ ಮತ್ತು ನಮೂದಿನ ಕ್ರಮ ಸಂಖ್ಯೆ | ಆಕ್ಷೇಪಣೆಯ ಸ್ವರೂಪ | ಸುನಾವಣೆಯ (ಹಿಯರಿಂಗ್) ದಿನಾಂಕ, ವೇಳೆ ಮತ್ತು ಸ್ಥಳ |
|---|---|---|---|---|---|
| **1** | **2** | **3** | **4** | **5** | **6** |
| | | | | | |

**ನಮೂನೆ – 8**

**[5 (12) (ಬಿ) (i)ನಿಯಮವನ್ನು ನೋಡಿ]**

**ನಕಲು**

**(ಕಚೇರಿಯ ಪ್ರತಿ)**

**ಕ್ಲೇಮಿನ ಬಗ್ಗೆ ಸುನಾವಣೆಯ (ಹಿಯರಿಂಗ್) ನೋಟೀಸು**

(ಕ್ಲೇಮುದಾರನ ................................

ಪೂರ್ಣ ಹೆಸರು ಮತ್ತು ವಿಳಾಸ) ................................

ಇವರಿಗೆ

ಉಲ್ಲೇಖ : ಕ್ಲೇಮು ಸಂಖ್ಯೆ .............

ಮತದಾರರ ಪಟ್ಟಿಯಲ್ಲಿ ನಿಮ್ಮ ಹೆಸರನ್ನು ಸೇರಿಸುವ ಬಗ್ಗೆ ನೀವು ಸಲ್ಲಿಸಿರುವ ಕ್ಲೇಮಿನ ಸಂಬಂಧದಲ್ಲಿ .........ನೇ ಸಾಲಿನ .............. ತಿಂಗಳ ............. ನೇ ದಿನದಂದು ....... ಗಂಟೆಗೆ ............... ಸ್ಥಳದಲ್ಲಿ ಸುನಾವಣೆ (ಹಿಯರಿಂಗ್) ಮಾಡಲಾಗುವುದೆಂದು ಈ ಮೂಲಕ ನಿಮಗೆ ತಿಳಿಸಲಾಗಿದೆ. ಈ ಸಂಬಂಧದಲ್ಲಿ ನೀವು ಒದಗಿಸಬಯಸುವ ಸಾಕ್ಷ್ಯಗಳೊಂದಿಗೆ ಸುನಾವಣೆಗೆ ಹಾಜರಾಗಬೇಕೆಂದು ಈ ಮೂಲಕ ನಿರ್ದೇಶಿಸಲಾಗಿದೆ.

ಸ್ಥಳ ......................

ದಿನಾಂಕ ......................

ಡೆಪ್ಯುಟಿ ಕಮಿಷನರ್/ ಅಧಿಕೃತ ಅಧಿಕಾರಿ.

**ನಮೂನೆ – 8**
**[5 (12) (ಬಿ) (i)ನಿಯಮವನ್ನು ನೋಡಿ]**
**(ಮೂಲ ಪ್ರತಿ)**
**(ಕ್ಲೇಮುದಾರನಿಗೆ ಜಾರಿಗೊಳಿಸಬೇಕಾದುದು)**
**ಕ್ಲೇಮಿನ ಬಗ್ಗೆ ಸುನಾವಣೆಯ (ಹಿಯರಿಂಗ್) ನೋಟೀಸು**

(ಕ್ಲೇಮುದಾರನ ...............................
ಪೂರ್ಣ ಹೆಸರು ಮತ್ತು ವಿಳಾಸ ) ...............................
ಇವರಿಗೆ

ಉಲ್ಲೇಖ : ಕ್ಲೇಮು ಸಂಖ್ಯೆ ............

ಮತದಾರರ ಪಟ್ಟಿಯಲ್ಲಿ ನಿಮ್ಮ ಹೆಸರನ್ನು ಸೇರಿಸುವ ಬಗ್ಗೆ ನೀವು ಸಲ್ಲಿಸಿರುವ ಕ್ಲೇಮಿನ ಸಂಬಂಧದಲ್ಲಿ ........ನೇ ಸಾಲಿನ ............. ತಿಂಗಳ ............ ನೇ ದಿನದಂದು ....... ಗಂಟೆಗೆ .............. ಸ್ಥಳದಲ್ಲಿ ಸುನಾವಣೆ (ಹಿಯರಿಂಗ್) ಮಾಡಲಾಗುವುದೆಂದು ಈ ಮೂಲಕ ನಿಮಗೆ ತಿಳಿಸಲಾಗಿದೆ. ಈ ಸಂಬಂಧದಲ್ಲಿ ನೀವು ಒದಗಿಸಬಯಸುವ ಸಾಕ್ಷ್ಯಗಳೊಂದಿಗೆ ಸುನಾವಣೆಗೆ ಹಾಜರಾಗಬೇಕೆಂದು ಈ ಮೂಲಕ ನಿರ್ದೇಶಿಸಲಾಗಿದೆ.

ಸ್ಥಳ........... .............................
ದಿನಾಂಕ........... ಡೆಪ್ಯುಟಿ ಕಮಿಷನರ್/ ಅಧಿಕೃತ ಅಧಿಕಾರಿ

**ನೋಟೀಸನ್ನು ಜಾರಿ ಮಾಡಿದ ಬಗ್ಗೆ ಪ್ರಮಾಣ ಪತ್ರ**
**ಸುನಾವಣೆಯ ದಿನಾಂಕದ ನೋಟೀಸನ್ನು ಸ್ವೀಕರಿಸಿದ್ದೇನೆ.**

ದಿನಾಂಕ : ಕ್ಲೇಮುದಾರ ............

ಕ್ಲೇಮುದಾರನಿಗೆ ಜಾರಿ ಮಾಡುವ ನೋಟೀಸನ್ನು ............ ದಿನಾಂಕದಂದು ............................... (ಹೆಸರು) ಖುದ್ದಾಗಿ ಅವನ ನಿವಾಸದ ಮೇಲೆ ಅಂಟಿಸುವ ಮೂಲಕ ಕ್ರಮಬದ್ಧವಾಗಿ ಜಾರಿಮಾಡಿದ್ದೇನೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ ............. .............
ದಿನಾಂಕ : ............ ಜಾರಿ ಮಾಡುವ ಅಧಿಕಾರಿ.

(ವಿ.ಸೂ. ಈ ನೋಟೀಸನ್ನು ಅಂಚೆಯ ಮೂಲಕ ಜಾರಿ ಮಾಡಿರುವಲ್ಲಿ ಅಂಚೆ ರಸೀದಿಯನ್ನು ಇಲ್ಲಿ ಲಗತ್ತಿಸಬೇಕು.)

**ನಮೂನೆ – 9**
**[5 (12) (ಬಿ) (ii)ನಿಯಮವನ್ನು ನೋಡಿ]**
**ನಕಲು**
**(ಕಚೇರಿ ಪ್ರತಿ)**
**ಆಕ್ಷೇಪಣೆದಾರನಿಗೆ ನೋಟೀಸು**
(ಆಕ್ಷೇಪಣೆದಾರನ ಪೂರ್ಣ ಹೆಸರು ಮತ್ತು ವಿಳಾಸ)

..............................................
ಇವರಿಗೆ.

ಉಲ್ಲೇಖ : ಕ್ಲೇಮು ಸಂಖ್ಯೆ ....................

...................... ಹೆಸರನ್ನು ಸೇರಿಸಿರುವ ಬಗ್ಗೆ ನೀವು ಸಲ್ಲಿಸಿರುವ ಆಕ್ಷೇಪಣೆಯ ಸಂಬಂಧದಲ್ಲಿ ........... ನೇ ಸಾಲಿನ ............ ತಿಂಗಳ ............. ನೇ ದಿನಾಂಕದಂದು .......... ಗಂಟೆಗೆ ............... ಸ್ಥಳದಲ್ಲಿ ಸುನಾವಣೆ (ಹಿಯರಿಂಗ್) ನಡೆಸಲಾಗುವುದೆಂದು ಈ ಮೂಲಕ ನಿಮಗೆ ತಿಳಿಸಲಾಗಿದೆ. ಈ ಸಂಬಂಧದಲ್ಲಿ ನೀವು ಒದಗಿಸಬಯಸುವ ಸಾಕ್ಷ್ಯದೊಂದಿಗೆ ಸುನಾವಣೆಗೆ ಹಾಜರಾಗಬೇಕೆಂದು ಈ ಮೂಲಕ ನಿರ್ದೇಶಿಸಲಾಗಿದೆ.

ಸ್ಥಳ : ................ ...............
ದಿನಾಂಕ : ಡೆಪ್ಯುಟಿ ಕಮಿಷನರ್ : ಅಧಿಕೃತ ಅಧಿಕಾರಿ.

**ನಮೂನೆ – 9**
**[5 (12) (ಬಿ) (ii)ನಿಯಮವನ್ನು ನೋಡಿ]**
**ಆಕ್ಷೇಪಣೆದಾರನಿಗೆ ನೋಟೀಸು**
**ಮೂಲ ಪ್ರತಿ**
**(ಆಕ್ಷೇಪಣೆದಾರನಿಗೆ ಜಾರಿ ಮಾಡುವುದು**

(ಆಕ್ಷೇಪಣೆದಾರನ ಪೂರ್ಣ ಹೆಸರು ಮತ್ತು ವಿಳಾಸ)
.....................................
.....................................

ಉಲ್ಲೇಖ : ಆಕ್ಷೇಪಣೆ ಸಂಖ್ಯೆ ............................

.....................................
.....................................

........................ ಹೆಸರನ್ನು ಸೇರಿಸುವ ಬಗ್ಗೆ ನೀವು ಸಲ್ಲಿಸಿರುವ ಆಕ್ಷೇಪಣೆಯ ಸಂಬಂಧದಲ್ಲಿ ........... ನೇ ಸಾಲಿನ ............ ತಿಂಗಳ ........... ನೇ ದಿನಾಂಕದಂದು ............. ಗಂಟೆಗೆ .......... ಸ್ಥಳದಲ್ಲಿ ಸುನಾವಣೆ (ಹಿಯರಿಂಗ್) ನಡೆಸಲಾಗುವುದೆಂದು ಈ ಮೂಲಕ ನಿಮಗೆ ತಿಳಿಸಲಾಗಿದೆ. ಈ ಸಂಬಂಧದಲ್ಲಿ ನೀವು ಒದಗಿಸಬಯಸುವ ಸಾಕ್ಷ್ಯದೊಂದಿಗೆ ಸುನಾವಣೆಗೆ ಹಾಜರಾಗಬೇಕೆಂದು ಈ ಮೂಲಕ ನಿರ್ದೇಶಿಸಲಾಗಿದೆ.

ಸ್ಥಳ : ................. ................................

ದಿನಾಂಕ : ಡೆಪ್ಯುಟಿ ಕಮಿಷನರ್ : ಅಧಿಕೃತ ಅಧಿಕಾರಿ.

**ನೋಟೀಸಿನ ಜಾರಿಯ ಬಗ್ಗೆ ಪ್ರಮಾಣಪತ್ರ**

**ಸುನಾವಣೆಯ ದಿನಾಂಕದ ನೋಟೀಸನ್ನು ಸ್ವೀಕರಿಸಿದ್ದೇನೆ**

ದಿನಾಂಕ : .......................

ಆಕ್ಷೇಪಣೆದಾರ

ಆಕ್ಷೇಪಣೆದಾರನಿಗೆ ಜಾರಿ ಮಾಡುವ ನೋಟೀಸನ್ನು ........... ನೇ ಸಾಲಿನ ............ ತಿಂಗಳ ............ ನೇ ದಿನಾಂಕದಂದು ................. ಹೆಸರಿಗೆ ಖುದ್ದಾಗಿ/ ಅವನ ನಿವಾಸದ ಮೇಲೆ ಅಂಟಿಸುವ ಮೂಲಕ ಕ್ರಮಬದ್ಧವಾಗಿ ಜಾರಿಮಾಡಲಾಗಿದೆ ಎಂದು ಪ್ರಮಾಣೀಕರಿಸುತ್ತೇನೆ.

ಸ್ಥಳ ............. . .............

ದಿನಾಂಕ : ............ ಜಾರಿ ಮಾಡುವ ಅಧಿಕಾರಿ.

**ವಿಶೇಷ ಸೂಚನೆ:** ಈ ನೋಟೀಸನ್ನು ಅಂಚೆಯ ಮೂಲಕ ಜಾರಿ ಮಾಡಿರುವಲ್ಲಿ ಅಂಚೆ ರಸೀದಿಯನ್ನು ಇಲ್ಲಿ ಲಗತ್ತಿಸಬೇಕು.

**ನಮೂನೆ - 10**

**[5 (12) (ಬಿ) (ii)ನಿಯಮವನ್ನು ನೋಡಿ]**

**ಮೂಲ ಪ್ರತಿ**

**(ಆಕ್ಷೇಪಿತ ವ್ಯಕ್ತಿಗೆ ಜಾರಿ ಮಾಡಬೇಕಾದುದು)**

ಆಕ್ಷೇಪಿತ ವ್ಯಕ್ತಿಯ ಪೂರ್ಣ ಹೆಸರು
ಮತ್ತು ವಿಳಾಸ
..............................
..............................
..............................
ಇವರಿಗೆ

ಉಲ್ಲೇಖ : ಆಕ್ಷೇಪಣೆ ಸಂಖ್ಯೆ ...........

ನಿಮ್ಮ ಹೆಸರನ್ನು .................................. ಚುನಾವಣಾ ಕ್ಷೇತ್ರದ ................... ಮತದಾರರ ಪಟ್ಟಿಯ ..................... ವಿಭಾಗದ ........................ ಕ್ರಮಸಂಖ್ಯೆಯಲ್ಲಿ ಸೇರಿಸಿರುವ ಬಗ್ಗೆ ....................... .......................... (ಆಕ್ಷೇಪಣೆದಾರನ ಪೂರ್ಣ ಹೆಸರು ಮತ್ತು ವಿಳಾಸ) ಇವರು ಸಲ್ಲಿಸಿದ ಆಕ್ಷೇಪಣೆ ಸಂಬಂಧದಲ್ಲಿ ........... ನೇ ಸಾಲಿನ ............ ತಿಂಗಳ ................. ನೇ ದಿನಾಂಕದಂದು ............. ಗಂಟೆಗೆ .............. ಸ್ಥಳದಲ್ಲಿ ಸುನಾವಣೆ (ಹಿಯರಿಂಗ್) ನಡೆಸಲಾಗುವುದೆಂದು ಈ ಮೂಲಕ ನಿಮಗೆ ತಿಳಿಸಲಾಗಿದೆ. ಈ ಸಂಬಂಧದಲ್ಲಿ ನೀವು ಒದಗಿಸಬಯಸುವ ಸಾಕ್ಷ್ಯದೊಂದಿಗೆ ಸುನಾವಣೆಗೆ ಹಾಜರಾಗುವಂತೆ ಈ ಮೂಲಕ ನಿರ್ದೇಶಿಸಲಾಗಿದೆ. ಆಕ್ಷೇಪಣೆಯ ಆಧಾರಗಳು ಇಂತಿವೆ.

(ಸಂಕ್ಷಿಪ್ತವಾಗಿ ನಮೂದಿಸಬೇಕು)

(ಎ)

(ಬಿ)

(ಸಿ)

ಸ್ಥಳ : ........... ....................

ದಿನಾಂಕ : ಡೆಪ್ಯುಟಿ ಕಮಿಷನರ್ : ಅಧಿಕೃತ ಅಧಿಕಾರಿ.

**ನಮೂನೆ – 10**

[5 (12) (ಬಿ) **(ii)** ನಿಯಮವನ್ನು ನೋಡಿ]

**ದ್ವಿಪ್ರತಿ (ಕಚೇರಿಯ ಪ್ರತಿ):**

(ಆಕ್ಷೇಪಿತ ವ್ಯಕ್ತಿಯ ಹೆಸರು ಮತ್ತು ವಿಳಾಸ)

..............................

..............................

..............................

..............................

ಇವರಿಗೆ

ಉಲ್ಲೇಖ : ಆಕ್ಷೇಪಣೆ ಸಂಖ್ಯೆ ...........

ನಿಮ್ಮ ಹೆಸರನ್ನು ................................ ಚುನಾವಣಾ ಕ್ಷೇತ್ರದ ಮತದಾರ ಪಟ್ಟಿಯ ................. ವಿಭಾಗ ಸಂಖ್ಯೆಯ ............ ಕ್ರಮಸಂಖ್ಯೆಯಲ್ಲಿ ಸೇರಿಸಿರುವ ಬಗ್ಗೆ ........................ (ಆಕ್ಷೇಪಣೆದಾರನ ಪೂರ್ಣ ಹೆಸರು ಮತ್ತು ವಿಳಾಸ) ಇವರು ಸಲ್ಲಿಸಿದ ಆಕ್ಷೇಪಣೆಯ ಸಂಬಂಧದಲ್ಲಿ ........... ನೇ ಸಾಲಿನ ............ ತಿಂಗಳ ........... ದಿನಾಂಕದಂದು ............ ಗಂಟೆಗೆ .......... ಸ್ಥಳದಲ್ಲಿ ಸುನಾವಣೆ ನಡೆಸಲಾಗುವುದೆಂದು ಈ ಮೂಲಕ ನಿಮಗೆ ತಿಳಿಸಲಾಗಿದೆ. ಈ ಸಂಬಂಧದಲ್ಲಿ ನೀವು ಒದಗಿಸಬಯಸುವ ಸಾಕ್ಷ್ಯದೊಂದಿಗೆ ಸುನಾವಣೆಗೆ ಹಾಜರಾಗುವಂತೆ ಈ ಮೂಲಕ ನಿರ್ದೇಶಿಸಲಾಗಿದೆ.

ಆಕ್ಷೇಪಣೆಯ ಆಧಾರಗಳು, ಇಂತಿವೆ :–

(ಸಂಕ್ಷಿಪ್ತವಾಗಿ ನಮೂದಿಸಬೇಕು)

(ಎ)

(ಬಿ)

(ಸಿ)

ಸ್ಥಳ : ........... ....................

ದಿನಾಂಕ : ಡೆಪ್ಯುಟಿ ಕಮಿಷನರ್ : ಅಧಿಕೃತ ಅಧಿಕಾರಿ.

**ನೋಟೀಸಿನ ಜಾರಿಯ ಬಗ್ಗೆ ಪ್ರಮಾಣಪತ್ರ**

**ಸುನಾವಣೆಯ (ಹಿಯರಿಂಗ್) ದಿನಾಂಕದ ಬಗ್ಗೆ ನೋಟೀಸನ್ನು ಸ್ವೀಕರಿಸಿದ್ದೇನೆ**

ದಿನಾಂಕ : ........................

ಆಕ್ಷೇಪಿತ ವ್ಯಕ್ತಿ.

ಯಾವ ವ್ಯಕ್ತಿಯ ಹೆಸರನ್ನು ಸೇರಿಸಿರುವ ಬಗ್ಗೆ ಆಕ್ಷೇಪಿಸಲಾಗಿದೆಯೋ ಆ ವ್ಯಕ್ತಿಗೆ ಜಾರಿ ಮಾಡುವ ನೋಟೀಸನ್ನು ................................... ಇವರಿಗೆ ನಾನು ಖುದ್ದಾಗಿ ನಿವಾಸದ ಮೇಲೆ ಅಂಟಿಸುವ ಮೂಲಕ ಜಾರಿ ಮಾಡಿದ್ದೇನೆ ಎಂದು ಪ್ರಮಾಣೀಕರಿಸುತ್ತೇನೆ.

ಸ್ಥಳ ............. ..............

ದಿನಾಂಕ : ........... ಜಾರಿ ಮಾಡುವ ಅಧಿಕಾರಿ.

**ವಿಶೇಷ ಸೂಚನೆ:** ಈ ನೋಟೀಸನ್ನು ಅಂಚೆಯ ಮೂಲಕ ಜಾರಿ ಮಾಡಿರುವಲ್ಲಿ ಅಂಚೆ ರಸೀದಿಯನ್ನು ಇಲ್ಲಿ ಲಗತ್ತಿಸಬೇಕು.

**ನಮೂನೆ – 11**

[5 (12) (ಬಿ) (**iii**)ನಿಯಮವನ್ನು ನೋಡಿ]

**ದ್ವಿಪ್ರತಿ**

**(ಕಚೇರಿಯ ಪ್ರತಿ)**

**ನಮೂದಿನಲ್ಲಿರುವ ವಿವರಗಳ ಸಂಬಂಧದಲ್ಲಿ ಸಲ್ಲಿಸಿದ ಆಕ್ಷೇಪಣೆಯ ಬಗ್ಗೆ ಸುನಾವಣೆಯ (ಹಿಯರಿಂಗ್) ನೋಟೀಸು**

ಆಕ್ಷೇಪಣೆದಾರನ ಪೂರ್ಣ ಹೆಸರು ಮತ್ತು ವಿಳಾಸ)

..............................

..............................

...................... ಇವರಿಗೆ.

ಉಲ್ಲೇಖ : ಆಕ್ಷೇಪಣೆ ಸಂಖ್ಯೆ ...........

ನಿಮಗೆ ಸಂಬಂಧಪಡುವ ನಮೂದಿನಲ್ಲಿರುವ ಕೆಲವು ವಿವರಗಳ ಬಗ್ಗೆ ನೀವು ಸಲ್ಲಿಸಿದ ಆಕ್ಷೇಪಣೆ ಕುರಿತು .......... ನೇ ಸಾಲಿನ ........... ತಿಂಗಳ ................ ನೇ ದಿನಾಂಕದಂದು .................. ಗಂಟೆಗೆ ............................ ರಲ್ಲಿ (ಸ್ಥಳದ ಹೆಸರು) ಸುನಾವಣೆ ಮಾಡಲಾಗುವುದೆಂದು ಈ ಮೂಲಕ ನಿಮಗೆ ತಿಳಸಲಾಗಿದೆ. ಈ ಬಗ್ಗೆ ನೀವು ಒದಗಿಸಬಯಸುವ ಸಾಕ್ಷ್ಯದೊಂದಿಗೆ ಸುನಾವಣೆಗೆ ಹಾಜರಾಗುವಂತೆ ನಿರ್ದೇಶಿಸಲಾಗಿದೆ.

ಸ್ಥಳ : ......... ......................

ದಿನಾಂಕ : ಡೆಪ್ಯುಟಿ ಕಮಿಷನರ್ : ಅಧಿಕೃತ ಅಧಿಕಾರಿ.

**ನಮೂನೆ – 11**

[5 (12) (ಬಿ) (**iii**)ನಿಯಮವನ್ನು ನೋಡಿ]

**ಮೂಲಪ್ರತಿ**

**(ಆಕ್ಷೇಪಣೆದಾರನಿಗೆ ಜಾರಿಮಾಡಬೇಕಾದುದು)**

**ನಮೂದಿನಲ್ಲಿರುವ ವಿವರಗಳ ಸಂಬಂಧದಲ್ಲಿ ಸಲ್ಲಿಸಿದ ಆಕ್ಷೇಪಣೆಯ ಬಗ್ಗೆ ಸುನಾವಣೆಯ (ಹಿಯರಿಂಗ್) ನೋಟೀಸು**

ಆಕ್ಷೇಪಣೆದಾರನ ಪೂರ್ಣ ಹೆಸರು ಮತ್ತು ವಿಳಾಸ)

...............................

...............................

....................... ಇವರಿಗೆ.

ಉಲ್ಲೇಖ : ಆಕ್ಷೇಪಣೆ ಸಂಖ್ಯೆ ............

ನಿಮಗೆ ಸಂಬಂಧಪಡುವ ನಮೂದಿನಲ್ಲಿರುವ ಕೆಲವು ವಿವರಗಳ ಬಗ್ಗೆ ನೀವು ಸಲ್ಲಿಸಿದ ಆಕ್ಷೇಪಣೆ ಕುರಿತು ........... ನೇ ಸಾಲಿನ ............ ತಿಂಗಳ ............ ನೇ ದಿನಾಂಕದಂದು .................. ಗಂಟೆಗೆ ........... ರಲ್ಲಿ (ಸ್ಥಳದ ಹೆಸರು) ಸುನಾವಣೆ ಮಾಡಲಾಗುವುದೆಂದು ಈ ಮೂಲಕ ನಿಮಗೆ ತಿಳಿಸಲಾಗಿದೆ ಮತ್ತು ಈ ಸಂಬಂಧದಲ್ಲಿ ನೀವು ಒದಗಿಸಬಯಸುವ ಸಾಕ್ಷ್ಯದೊಂದಿಗೆ ಸುನಾವಣೆಗೆ ಹಾಜರಾಗುವಂತೆ ಈ ಮೂಲಕ ನಿರ್ದೇಶಿಸಲಾಗಿದೆ.

ಸ್ಥಳ : ............ .....................

ದಿನಾಂಕ : ಡೆಪ್ಯುಟಿ ಕಮಿಷನರ್ : ಅಧಿಕೃತ ಅಧಿಕಾರಿ.

**ನೋಟೀಸಿನ ಜಾರಿಯ ಮಾಡಿದ ಬಗ್ಗೆ ಪ್ರಮಾಣಪತ್ರ**

**ಸುನಾವಣೆಯ (ಹಿಯರಿಂಗ್) ದಿನಾಂಕದ ಬಗೆಗಿನ ನೋಟೀಸನ್ನು ಸ್ವೀಕರಿಸಿದ್ದೇನೆ**

ದಿನಾಂಕ : ........................

ಆಕ್ಷೇಪಣೆದಾರ

ಆಕ್ಷೇಪಣೆದಾರನಿಗೆ ಜಾರಿ ಮಾಡುವ ನೋಟೀಸನ್ನು ನಾನು ........... ನೇ ಸಾಲಿನ ............ ತಿಂಗಳ...................ನೇ ದಿನಾಂಕದಂದು ....................... (ಹೆಸರು) ಇವರಿಗೆ ಖುದ್ದಾಗಿ : ನಿವಾಸದ ಮೇಲೆ ಅಂಟಿಸುವ ಮೂಲಕ ಕ್ರಮಬದ್ಧವಾಗಿ ಜಾರಿ ಮಾಡಿದ್ದೇನೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ .............. ..............

ದಿನಾಂಕ : ............ ಜಾರಿ ಮಾಡುವ ಅಧಿಕಾರಿ.

**ವಿಶೇಷ ಸೂಚನೆ:** ಈ ನೋಟೀಸನ್ನು ಅಂಚೆಯ ಮೂಲಕ ಜಾರಿ ಮಾಡಿರುವಲ್ಲಿ ಅಂಚೆ ರಸೀದಿಯನ್ನು ಇಲ್ಲಿ ಲಗತ್ತಿಸಬೇಕು.

**ನಮೂನೆ – 12**

[5 (15) (ಎ) (**ii**) ನಿಯಮವನ್ನು ನೋಡಿ]

**ಮತದಾರರ ಪಟ್ಟಿಯ ಅಂತಿಮ ಪ್ರಕಟಣೆಯ ಬಗ್ಗೆ ನೋಟೀಸು**

.................................. ಚುನಾವಣಾ ಕ್ಷೇತ್ರದ ಮತದಾರರ ಕರಡು ಪಟ್ಟಿಗೆ ಸೇರಿಸಬೇಕಾದ ತಿದ್ದುಪಡಿಗಳ ಪಟ್ಟಿಯನ್ನು [1][ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು, 1968][1] ಇವುಗಳಿಗನುಸಾರ ತಯಾರಿಸಲಾಗಿದೆಯೆಂದು ಮತ್ತು ಸದರಿ ತಿದ್ದುಪಡಿಗಳ ಪಟ್ಟಿಯೊಂದಿಗೆ ಸದರಿ ಕರಡು ಪಟ್ಟಿಯ ಒಂದು ಪ್ರತಿಯನ್ನು ಪ್ರಕಟಿಸಲಾಗಿದೆಯೆಂದು ಮತ್ತು ಅವು ಪರಿಶೀಲನೆಗೆ ದೊರೆಯುವಂತೆ ನನ್ನ ಕಚೇರಿಯಲ್ಲಿ ವ್ಯವಸ್ಥೆ ಮಾಡಲಾಗಿದೆ ಎಂದು ಸಾರ್ವಜನಿಕರಿಗೆ ಈ ಮೂಲಕ ತಿಳಿಸಲಾಗಿದೆ.

1. ಒಪ್ಪೋಲೆ ಜಿ.ಎಸ್.ಆರ್. 120, ದಿನಾಂಕ 14-4-1970ರ ಮೂಲಕ ಪ್ರತಿಯೋಜಿಸಲಾಗಿದೆ.

....................

ಡೆಪ್ಯುಟಿ ಕಮಿಷನರ್ : ಅಧಿಕೃತ ಅಧಿಕಾರಿ

ವಿಳಾಸ ....................

ಸ್ಥಳ ................

ದಿನಾಂಕ .............

**ನಮೂನೆ – 13**

**[ನಿಯಮ 5ಎ (3) (ಎ) ನೋಡಿ]**

**ಮತದಾರರ ಪಟ್ಟಿಯಲ್ಲಿಯ ನಮೂದನ್ನು ತೆಗೆದುಹಾಕುವ ಬಗ್ಗೆ ಅರ್ಜಿ**

ಡೆಪ್ಯುಟಿ ಕಮಿಷನರ್ : ಅಧಿಕೃತ ಅಧಿಕಾರಿ.
ಚುನಾವಣಾ ಕ್ಷೇತ್ರ
...................... ಇವರಿಗೆ.
ಮಾನ್ಯರೆ,

......................................... ಇವರ ಮಗ : ಹೆಂಡತಿ: ಮಗಳು ಆದ * ಶ್ರೀ: ಶ್ರೀಮತಿ ................................................ ಇವರಿಗೆ ಸಂಬಂಧಪಡುವಂತೆ ಮೇಲ್ಕಂಡ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯ .............. ವಿಭಾಗ ಸಂಖ್ಯೆಯಲ್ಲಿ ................. ಕ್ರಮಸಂಖ್ಯೆಯಲ್ಲಿ ನಮೂದಿಸಿರುವ ವ್ಯಕ್ತಿಯು ಮೃತನಾಗಿರುವುದರಿಂದ ಆ ಪ್ರದೇಶದಲ್ಲಿ ಕೃಷಿಕನಾಗಿಲ್ಲದಿರುವುದರಿಂದ: ಈ ಕೆಳಕಂಡ ಕಾರಣಗಳಿಗಾಗಿ ಮತದಾರರಪಟ್ಟಿಯಲ್ಲಿ ನೋಂದಾಯಿತನಾಗಲು ಹಕ್ಕುಳ್ಳವನಾಗಿಲ್ಲದಿರುವುದರಿಂದ ಅವನಿಗೆ ಸಂಬಂಧಿಸಿದ ನಮೂದನ್ನು ತೆಗೆದು ಹಾಕಬೇಕೆಂದು ಕೋರುತ್ತೇನೆ.

...........................
..........................
..........................

ಮೇಲೆ ಸೂಚಿಸಿರುವ ವಿಷಯಗಳು ನನಗೆ ತಿಳಿದಿರುವಷ್ಟರ ಮಟ್ಟಿಗೆ ಮತ್ತು ನಾನು ನಂಬಿರುವಷ್ಟರ ಮಟ್ಟಿಗೆ ಸತ್ಯವೆಂದು ಈ ಮೂಲಕಘೋಷಿಸುತ್ತೇನೆ.

ನಾನು, ಈ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯ ............ ವಿಭಾಗದ .................. ಕ್ರಮಸಂಖ್ಯೆಯಲ್ಲಿ ನಮೂದಾಗಿರುವ ಮತದಾರನೆಂದು ಈ ಮೂಲಕ ಘೋಷಿಸುತ್ತೇನೆ.

ಆಕ್ಷೇಪಣೆದಾರನ ಸಹಿ: ಹೆಬ್ಬೆಟ್ಟು ಗುರುತು
(ಅಂಚೆಯ ಪೂರ್ಣ ವಿಳಾಸ)

ದಿನಾಂಕ ...............
ಸ್ಥಳ ..................
*ಉಚಿತವಲ್ಲದ ಪದಗಳನ್ನು ಹೊಡೆದುಹಾಕಿ.

**ನಮೂನೆ – 14**

**[ನಿಯಮ 5ಬಿ (3)ನ್ನು ನೋಡಿ]**

**[1][xxx] [1] ವ್ಯಾಪಾರಿಗಳ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯಲ್ಲಿ ಹೆಸರನ್ನು ಸೇರಿಸುವ ಬಗ್ಗೆ ಅರ್ಜಿ**

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ: 27-1-1994ರ ಮೂಲಕ ಬಿಟ್ಟುಬಿಡಲಾಗಿದೆ.

ಡೆಪ್ಯುಟಿ ಕಮಿಷನರ್ : ಅಧಿಕೃತ ಅಧಿಕಾರಿ.
......................ಚುನಾವಣಾ ಕ್ಷೇತ್ರ
...................... ಇವರಿಗೆ,
ಮಾನ್ಯರೆ,

ನಾನು [1][xxx][1] ವ್ಯಾಪಾರಿಯಾಗಿ [2][..........][2] ಮಾರುಕಟ್ಟೆ ಸಮಿತಿಯಿಂದ ಲೈಸನ್ಸು ಪಡೆದಿದ್ದೇನೆ. ಮತ್ತು .................. ಮಾರುಕಟ್ಟೆ ಸಮಿತಿಯು ನೀಡಿರುವ ನನ್ನ ಲೈಸನ್ಸ್ ಸಂಖ್ಯೆ ...................... ಆಗಿರುತ್ತದೆ. [2][xxx][2] ನಾನು ವ್ಯಾಪಾರಿಗಳ ಚುನಾವಣಾ ಕ್ಷೇತ್ರದ ಮತದಾರ ಪಟ್ಟಿಯಲ್ಲಿ ಒಬ್ಬ ಮತದಾರನಾಗಿ ನೋಂದಾಯಿತನಾಗಲು ಹಕ್ಕುಳ್ಳವನಾಗಿದ್ದೇನೆ.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ 88 ದಿನಾಂಕ: 30-1-1990ರ ಮೂಲಕ ಬಿಟ್ಟುಬಿಡಲಾಗಿದೆ.
2. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ: 27-1-1994ರ ಮೂಲಕ ಬಿಟ್ಟುಬಿಡಲಾಗಿದೆ.

ನಿಮ್ಮ ನಂಬುಗೆಯ,

ನನ್ನ ವಿಳಾಸ :
.........................
.........................
.........................

**ನಮೂನೆ – 15**

**[ನಿಯಮ 8 (1)ನ್ನು ನೋಡಿ]**

**ನಾಮಪತ್ರ**

1. ಚುನಾವಣಾ ಕ್ಷೇತ್ರದ [1][ಅಥವಾ ಸಹಕಾರ ಮಾರುಕಟ್ಟೆ ವ್ಯವಹಾರ ಸಂಘದ : ಕೃಷಿ ಸಂಸ್ಕರಣ ಸಹಕಾರ ಸಂಘದ][1] ಹೆಸರು

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ: 27-1-1994ರ ಮೂಲಕ ಸೇರಿಸಲಾಗಿದೆ.

2. ಅಭ್ಯರ್ಥಿಯ ಪೂರ್ಣ ಹೆಸರು
3. ಮತದಾರರ ಪಟ್ಟಿಯಲ್ಲಿ ಅಭ್ಯರ್ಥಿಯ ಕ್ರಮಸಂಖ್ಯೆ
4. ತಂದೆಯ : ಗಂಡನ ಹೆಸರು
5. ವಯಸ್ಸು
6. ಪುರುಷ : ಸ್ತ್ರೀ
7. ವೃತ್ತಿ ಮತ್ತು ವಿಳಾಸ
8. ಸೂಚಕನ ಪೂರ್ಣ ಹೆಸರು
9. ಮತದಾರರ ಪಟ್ಟಿಯಲ್ಲಿ ಸೂಚಕನ ಕ್ರಮಸಂಖ್ಯೆ
10. ಸೂಚಕನ ಸಹಿ

**ಅಭ್ಯರ್ಥಿಯ ಘೋಷಣೆ**

ನಾನು ಚುನಾವಣೆಗೆ ಸ್ಪರ್ಧಿಸಲು ಇಷ್ಟಪಡುವುದಾಗಿ ಈ ಮೂಲಕ ಘೋಷಿಸುತ್ತೇನೆ.

ಅಭ್ಯರ್ಥಿಯ ಸಹಿ

**ನಾಮ ಪತ್ರವನ್ನು ಸ್ವೀಕರಿಸಿದ ಬಗ್ಗೆ ರಿಟರ್ನಿಂಗ್ ಆಫೀಸರನು ನೀಡಿದ ಪ್ರಮಾಣಪತ್ರ.**

ಕ್ರಮಸಂಖ್ಯೆ ............

.................. ಅವರು ಈ ನಾಮಪತ್ರವನ್ನು ............ ದಿನಾಂಕದಂದು ..................... ವೇಳೆಯಲ್ಲಿ ನನಗೆ ಒಪ್ಪಿಸಿದ್ದಾರೆ.

ರಿಟರ್ನಿಂಗ್ ಆಫೀಸರನ ಸಹಿ.

ಸೂಚನೆ: ನಾಮಪತ್ರಗಳನ್ನು ........... ನೇ ಸಾಲಿನ ............ ತಿಂಗಳ ........................ ನೇ ದಿನಾಂಕದಂದು ................ ಸಮಯದೊಳಗೆ ರಿಟರ್ನಿಂಗ್ ಆಫೀಸರ್‌ಗೆ ಒಪ್ಪಿಸದಿದ್ದರೆ ಅವುಗಳನ್ನು ಸ್ವೀಕರಿಸತಕ್ಕದ್ದಲ್ಲ.

**ನಮೂನೆ – 16**

**[ನಿಯಮ 10ನ್ನು ನೋಡಿ]**

**.................................. ಚುನಾವಣಾ ಕ್ಷೇತ್ರಕ್ಕಾಗಿ ಸ್ವೀಕರಿಸಲಾದ ನಾಮಪತ್ರಗಳ ಪಟ್ಟಿ.**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ತಂದೆಯ: ಗಂಡನ ಹೆಸರು | ಪುರುಷ: ಸ್ತ್ರೀ | ವೃತ್ತಿ ಮತ್ತು ವಿಳಾಸ | ಸೂಚಕನ ಹೆಸರು |
|---|---|---|---|---|---|
| **1** | **2** | **3** | **4** | **5** | **6** |
| | | | | | |

**ವಿ.ಸೂ.** ನಾಮಪತ್ರವನ್ನು ............. ದಿನಾಂಕದಂದು ................. ಸ್ಥಳದಲ್ಲಿ ಪೂರ್ವಾಹ್ನ : ಅಪರಾಹ್ನ ...................... ಗಂಟೆಗೆ ಪರಿಶೀಲನೆಗೆ ತೆಗೆದುಕೊಳ್ಳತಕ್ಕದ್ದು.

ರಿಟರ್ನಿಂಗ್ ಆಫೀಸರನ ಸಹಿ.

**ನಮೂನೆ – 17**

**[ನಿಯಮ 13 (2)ನ್ನು ನೋಡಿ]**

**ಕ್ರಮಬದ್ಧವಾದ ನಾಮಪತ್ರಗಳ ಪಟ್ಟಿ**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ಪುರುಷ: ಸ್ತ್ರೀ | ವಿಳಾಸ |
|---|---|---|---|
| **1** | **2** | **3** | **4** |
| | | | |

**ವಿ.ಸೂ.** ಈ ಮೊದಲೇ ಸೂಚಿಸಿರುವ ಮತಗಟ್ಟೆಯಲ್ಲಿ ಬೆಳಿಗ್ಗೆ ............. ಗಂಟೆಯಿಂದ ಸಾಯಂಕಾಲ . .............. ಗಂಟೆಯವರೆಗೆ ಮತದಾನ ನಡೆಯತಕ್ಕದ್ದು.

ರಿಟರ್ನಿಂಗ್ ಆಫೀಸರನ ಸಹಿ.

**ನಮೂನೆ – 18**

[ನಿಯಮ 16ನ್ನು ನೋಡಿ]

| ಪಕ್ಕಪ್ರತಿ ಪ್ರತಿ ಮತಪತ್ರದ ಸಂಖ್ಯೆ | | ಪ್ರತಿ ಮತಪತ್ರದ ಸಂಖ್ಯೆ | | |
|---|---|---|---|---|
| | ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ಅಭ್ಯರ್ಥಿಯ ಚಿಹ್ನೆ | ಮತದಾರನು ಹಾಕುವ ಗುರುತು |
| ಮತದಾರರ ಪಟ್ಟಿಯಲ್ಲಿ | 1 | | | |
| ಮತದಾರನ | 2 | | | |
| ಸಂಖ್ಯೆ | 3 | | | |
| | 4 | | | |
| ಮತದಾರನ ಸಹಿ | 5 | | | |
| ಅಥವಾ ಹೆಬ್ಬೆಟ್ಟು ಗುರುತು | 6 | | | |

ನಿಮ್ಮ ಮತವನ್ನು/ಗಳನ್ನು ನೀಡುವುದಕ್ಕೆ ಮೊದಲು ದಯವಿಟ್ಟು ಕೆಳಕಂಡ ಸೂಚನೆಗಳನ್ನು ಗಮನಿಸಿ.

(1) ನೀವು ................ ಮತವನ್ನು:ಗಳನ್ನು ನೀಡಬೇಕು.

[1][(2) ಮತವನ್ನು ಗುರುತು ಮಾಡುವ ಉದ್ದೇಶಕ್ಕಾಗಿ ನೀಡಲಾದ ಉಪಕರಣದಿಂದ ಪ್ರತಿಯೊಂದು ಮತವನ್ನು ಗುರುತು ಮಾಡಬೇಕು.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್ಇ 88 ದಿನಾಂಕ: 30–1–1990ರ ಮೂಲಕ ಪ್ರತಿಯೋಜಿಸಲಾಗಿದೆ.

(3) ನೀವು ಒಬ್ಬ ಅಭ್ಯರ್ಥಿಗೆ ಒಂದು ಮತವನ್ನು ಮಾತ್ರ ನೀಡಬಹುದು.

**ನಮೂನೆ – 19**

**[ನಿಯಮ 21 (1)ನ್ನು ನೋಡಿ]**

***ಪೋಲಿಂಗ್ ಏಜೆಂಟನ ನೇಮಕ**

****............... ನಡೆಯುವ ಚುನಾವಣೆ.**

ಮೇಲ್ಕಂಡ ಚುನಾವಣೆಯಲ್ಲಿ ಅಭ್ಯರ್ಥಿಯಾದ ...................... ಎಂಬ ನಾನು ಅಭ್ಯರ್ಥಿಯಾದ ಶ್ರೀ .....................................ಇವರ ಚುನಾವಣಾ ಏಜೆಂಟ್ ಆದ ................................ ಎಂಬ ನಾನು ಮತದಾನಕ್ಕಾಗಿ ನಿಗದಿಪಡಿಸಿರುವ ಸ್ಥಳವಾದ .......................... ಸಂಖ್ಯೆಯ ಮತಗಟ್ಟೆಯಲ್ಲಿ ಪೋಲಿಂಗ್ ಏಜೆಂಟನಾಗಿ ಕಾರ್ಯನಿರ್ವಹಿಸಲು .................... ಸ್ಥಳದ ............ ಎಂಬುವವರನ್ನು ಈ ಮೂಲಕ ನೇಮಕ ಮಾಡಿದ್ದೇನೆ.

ಸ್ಥಳ:

ದಿನಾಂಕ:

ಅಭ್ಯರ್ಥಿಯ : ಚುನಾವಣಾ ಏಜೆಂಟನ ಸಹಿ.

ನಾನು ಮೇಲ್ಕಂಡಂತೆ ಪೋಲಿಂಗ್ ಏಜೆಂಟನಾಗಿ ಕಾರ್ಯನಿರ್ವಹಿಸಲು ಒಪ್ಪಿಕೊಂಡಿದ್ದೇನೆ.

ಸ್ಥಳ :

ದಿನಾಂಕ :

ಪೋಲಿಂಗ್ ಏಜೆಂಟನ ಸಹಿ.

**ಪೋಲಿಂಗ್ ಏಜೆಂಟನು ಪ್ರಿಸೈಡಿಂಗ್ ಆಫೀಸರನ ಮುಂದೆ ಮಾಡತಕ್ಕ ಘೋಷಣೆ**

ಸದರಿ ಅಧಿನಿಯಮ ಮತ್ತು ಅದರ ಮೇರೆಗೆ ರಚಿಸಲಾದ ನಿಯಮಗಳನ್ನು ನಾನು ಓದಿದ್ದು:ನನಗೆ ಓದಿ ಹೇಳಲಾಗಿದ್ದು ಮೇಲ್ಕಂಡ ಚುನಾವಣೆಯಲ್ಲಿ ಸದರಿ ಅಧಿನಿಯಮದ ಹಾಗೂ ನಿಯಮಗಳ ಮೂಲಕ ನಿಷೇಧಿಸಲಾದ ಯಾವುದೇ ಕಾರ್ಯವನ್ನು ನಾನು ಮಾಡುವುದಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ :

ನನ್ನ ಸಮಕ್ಷಮದಲ್ಲಿ ಸಹಿ ಮಾಡಲಾಗಿದೆ.

ದಿನಾಂಕ: ಪೋಲಿಂಗ್ ಏಜೆಂಟನ ಸಹಿ.

* ಈ ನೇಮಕ ಪತ್ರವನ್ನು ಪ್ರಿಸೈಡಿಂಗ್ ಆಫೀಸರ್, ಮತಗಟ್ಟೆಯ ಅಥವಾ ಮತದಾನಕ್ಕಾಗಿ ನಿಗದಿಪಡಿಸಿರುವ ಸ್ಥಳದಲ್ಲಿ, ಹಾಜರುಪಡಿಸಲು ಪೋಲಿಂಗ್ ಏಜೆಂಟ್‌ಗೆ ಕೊಡಬೇಕು.

* ಈ ಕೆಳಕಂಡವುಗಳಲ್ಲಿ ಸೂಕ್ತವಾದ ಒಂದನ್ನು ಬರೆಯಿರಿ:–

(1) ಕೃಷಿಕರ ಚುನಾವಣಾ ಕ್ಷೇತ್ರ ಸಂಖ್ಯೆ———1

(2) ವ್ಯಾಪಾರಿಗಳ ಚುನಾವಣಾ ಕ್ಷೇತ್ರ

[1][(3) ಸಹಕಾರ ಮಾರುಕಟ್ಟೆ ಸಂಘ : ಸಂಘಗಳು

(4) ಕೃಷಿ ಸಂಸ್ಕರಣ ಸಹಕಾರ ಸಂಘ/ಸಂಘಗಳು][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್ಇ 91 ದಿನಾಂಕ: 27–1–1994ರ ಮೂಲಕ ಪ್ರತಿಯೋಜಿಸಲಾಗಿದೆ.

## ನಮೂನೆ - 20
[ನಿಯಮ 25 (2)ನ್ನು ನೋಡಿ]
**ಟೆಂಡರ್ ಮತ ಚಲಾಯಿಸಿದ ಮತದಾರರ ಪಟ್ಟಿ**

.......................................... ಚುನಾವಣಾ ಕ್ಷೇತ್ರದಿಂದ ................ ................ ಗೆ ಚುನಾವಣೆ. *
ಮತಗಟ್ಟೆಯ ಸಂಖ್ಯೆ ಮತ್ತು ಹೆಸರು...................................

| ಮತದಾರರ ಪಟ್ಟಿಯ ವಿಭಾಗ ಸಂಖ್ಯೆ ಮತ್ತು ಮತದಾರರ ಕ್ರಮಸಂಖ್ಯೆ ಮತ್ತು ಹೆಸರು | ಮತದಾರನ ವಿಳಾಸ | ಚಲಾಯಿಸಿದ ಟೆಂಟರ್ ಮತಪತ್ರದ ಕ್ರಮಸಂಖ್ಯೆ | ಈ ಮೊದಲೇ ಮತ ಚಲಾಯಿಸಿರುವ ವಯಕ್ತಿಗೆ ನೀಡಲಾದ ಮತಪತ್ರದ ಕ್ರಮ ಸಂಖ್ಯೆ | ಟೆಂಡರ್ ಮತವನ್ನು ಚಲಾಯಿಸುವ ವ್ಯಕ್ತಿಯ ಸಹಿ ಅಥವಾ ಹೆಬ್ಬೆಟ್ಟು ಗುರುತು |
|---|---|---|---|---|
| 1 | 2 | 3 | 4 | 5 |

ದಿನಾಂಕ: ಪ್ರಿಸೈಡಿಂಗ್ ಆಫೀಸರ್

* ಚುನಾವಣೆಯ ಸೂಕ್ತ ವಿವರಗಳನ್ನು ಬರೆಯಬೇಕು.

## ನಮೂನೆ - 21
[ನಿಯಮ 26 (2) (ಸಿ) ನೋಡಿ]
**ಆಕ್ಷೇಪಿತ ಮತಗಳ ಪಟ್ಟಿ**

.......................................... ಚುನಾವಣಾ
* ಕ್ಷೇತ್ರದಿಂದ .............................ಗೆ ಚುನಾವಣೆ
ಮತಗಟ್ಟೆ .....................................

| ನಮೂದಿನ ಕ್ರಮ ಸಂಖ್ಯೆ | ಮತದಾರನ ಹೆಸರು | ಮತದಾರರ ಪಟ್ಟಿಯ ವಿಭಾಗದ ಕ್ರಮ ಸಂಖ್ಯೆ | ಆ ವಿಭಾಗ ದಲ್ಲಿ ಮತದಾರನ ಹೆಸರು | ಆಕ್ಷೇಪಿತ ವ್ಯಕ್ತಿಯ ಸಹಿ ಅಥವಾ ಹೆಬ್ಬೆಟ್ಟಿನ ಗುರುತು | ಅಕ್ಷೇಪಿತ ವ್ಯಕ್ತಿಯ ವಿಳಾಸ | ಗುರುತಿಸು–ವವನು ಇದ್ದರೆ ಅವನ ಹೆಸರು | ಆಕ್ಷೇಪಣೆ ದಾರನ ಹೆಸರು | ಪ್ರಿಸೈಂಡಿಗ್ ಆಫೀಸರ್‌ನ ಆದೇಶ | ಠೇವಣಿಯ ಮರುಪಾವತಿಯನ್ನು ಸ್ವೀಕರಿಸಿದ ಮೇಲೆ ಆಕ್ಷೇಪಣೆದಾರನ ಸಹಿ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |

ದಿನಾಂಕ:

ಪ್ರಿಸೈಡಿಂಗ್ ಆಫೀಸರ್

* ಚುನಾವಣೆಯ ಸೂಕ್ತ ವಿವರಗಳನ್ನು ಬರೆಯಬೇಕು.

## ನಮೂನೆ - 22
[ನಿಯಮ 30ನ್ನು ನೋಡಿ]
**ಮತಪತ್ರಗಳ ಲೆಕ್ಕ**

.................................. ಚುನಾವಣಾ ಕ್ಷೇತ್ರದಿಂದ ................. ಗೆ ಚುನಾವಣೆ. ಮತಗಟ್ಟೆಯ ಸಂಖ್ಯೆ ಮತ್ತು ಹೆಸರು..............................

| | ಕ್ರಮ ಸಂಖ್ಯೆ | ಒಟ್ಟು ಸಂಖ್ಯೆ |
|---|---|---|

ಚುನಾವಣಾ ಕ್ಷೇತ್ರದಿಂದ – ಗೆ ಚುನಾವಣೆ ಮತಗಟ್ಟಿಯ ಸಂಖ್ಯೆ ಮತ್ತು ಹೆಸರು.

1. ಸ್ವೀಕರಿಸಲಾದ ಮತಪತ್ರಗಳು .................................
2. ಉಪಯೋಗಸದಿರುವ ಮತಪತ್ರಗಳು..........................
3. ಮತದಾರರಿಗೆ ಕೊಡಲಾದ ಮತಪತ್ರಗಳು......................
4. ರದ್ದುಗೊಳಿಸಲಾದ ಮತಪತ್ರಗಳು.............................
5. ಮತಗಟ್ಟೆಗಳಲ್ಲಿ ಚಲಾಯಿಸಲಾದ ಟೆಂಡರ್ ಮತಗಳ ಸಂಖ್ಯೆ.........

ದಿನಾಂಕ :...............

ಪ್ರಿಸೈಡಿಂಗ್ ಆಫೀಸರನ ಸಹಿ.

## ನಮೂನೆ - 23
[ನಿಯಮ 35(4)ನ್ನು ನೋಡಿ]
**ಮತಪೆಟ್ಟಿಗೆಯಲ್ಲಿ ಹಾಕಲಾಗಿರುವ ಮತಪತ್ರಗಳ ವಿವರ**

| ಮತಗಟ್ಟೆಯ ಹೆಸರು | ಮತಪೆಟ್ಟಿಗೆಗಳ ಸಂಖ್ಯೆ | ಮತಪೆಟ್ಟಿಗೆಯಲ್ಲಿ ಹಾಕಲಾದ ಮತಪತ್ರಗಳ ಸಂಖ್ಯೆ |
|---|---|---|
| 1 | 2 | 3 |

ರಿಟರ್ನಿಂಗ್ ಆಫೀಸರನ ಸಹಿ.

**ನಮೂನೆ - 24**

**1**

[1][ನಿಯಮ 37(1)ನ್ನು ನೋಡಿ][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ 88 ದಿನಾಂಕ: 30-1-1990ರ ಮೂಲಕ ಪ್ರತಿಯೋಜಿಸಲಾಗಿದೆ.

............. ಮಾರುಕಟ್ಟೆ ಸಮಿತಿಯ ಸ್ಥಾನಗಳಿಗೆ ನಡೆದ ಚುನಾವಣೆಯ ಫಲಿತಾಂಶವನ್ನು ತೋರಿಸುವ ಪಟ್ಟಿ.

| ಅಭ್ಯರ್ಥಿಯ ಹೆಸರು | ಕ್ರಮಬದ್ಧ ಮತಗಳ ಸಂಖ್ಯೆ |
|---|---|
| 1 | 2 |

ಎ

ಬಿ

ಸಿ

ಡಿ

ಇ

ಕ್ರಮಬದ್ಧವಾದ ಮತಗಳ ಒಟ್ಟು ಸಂಖ್ಯೆ

ಕುಲಗೆಟ್ಟ ಮತಗಳ ಒಟ್ಟು ಸಂಖ್ಯೆ

............................... ಮಾರುಕಟ್ಟೆ ಸಮಿತಿಯ ಕೆಳಕಂಡ ಅಭ್ಯರ್ಥಿಗಳು ಅವರ ಹೆಸರುಗಳ ಎದುರಿಗೆ ನಮೂದಿಸಿರುವ ......................... ಚುನಾವಣಾ ಕ್ಷೇತ್ರಕ್ಕೆ ಕ್ರಮವಾಗಿ ಚುನಾಯಿತರಾಗಿದ್ದಾರೆಂದು ನಾನು ಈ ಮೂಲಕ ಘೋಷಿಸುತ್ತೇನೆ.

1

2

3

4

ರಿಟರ್ನಿಂಗ್ ಆಫೀಸರನ ಸಹಿ.

**ನಮೂನೆ - 24ಎ**

**[1][xxxx][1]**

1. ಅಧಿಸೂಚನೆ ಸಂಖ್ಯೆ ಆರ್‌ಡಿಪಿ 221 ಎಂಎಂಡಿ 76 ದಿನಾಂಕ: 21-10-1976ರ ಮೂಲಕ ಬಿಟ್ಟುಬಿಡಲಾಗಿದೆ.

**ನಮೂನೆ - 25**

[1][ನಿಯಮ 44(2)ನ್ನು ನೋಡಿ][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ 88 ದಿನಾಂಕ: 30-1-1990ರ ಮೂಲಕ ಪ್ರತಿಯೋಜಿಸಲಾಗಿದೆ.

**ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ**

**ಅಧ್ಯಕ್ಷ: ಉಪಾಧ್ಯಕ್ಷನ ಸ್ಥಾನಕ್ಕಾಗಿ ಚುನಾವಣೆ**

| ಪಕ್ಕ ಪ್ರತಿ ಮತಪತ್ರದ ಕ್ರಮಸಂಖ್ಯೆ | | ಪ್ರತಿ | |
|---|---|---|---|
| | ಅಭ್ಯರ್ಥಿಯ ಕ್ರಮಸಂಖ್ಯೆ | ಅಭ್ಯರ್ಥಿಯ ಹೆಸರು | ಮತದಾರನು ಮಾಡುವ ಗುರುತು |

1

2

3

4

**ಮತದಾರರಿಗೆ ಸೂಚನೆಗಳು**

1. ನೀವು ಒಂದೇ ಒಂದು ಮತವನ್ನು ಚಲಾಯಿಸಬೇಕು.

[1][2. ನೀವು ಯಾರಿಗೆ ಮತ ನೀಡಬೇಕೆಂದು ಬಯಸುವಿರೋ ಆ ಅಭ್ಯರ್ಥಿಯ ಹೆಸರಿನ ಎದುರು ಆ ಉದ್ದೇಶಕ್ಕಾಗಿ ನೀಡಿರುವ ಉಪಕರಣದಿಂದ ಸ್ಪಷ್ಟವಾಗಿ ಗುರುತು ಮಾಡಬೇಕು.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ 88 ದಿನಾಂಕ: 30-1-1990ರ ಮೂಲಕ ಪ್ರತಿಯೋಜಿಸಲಾಗಿದೆ.

3. ನೀವು ಒಬ್ಬ ಅಭ್ಯರ್ಥಿಗಿಂತ ಹೆಚ್ಚಿನವರಿಗೆ ಮತ ನೀಡಕೂಡದು.
4. ನೀವು ಯಾವ ಅಭ್ಯರ್ಥಿಗೆ ಮತ ನೀಡಿದ್ದೀರೆಂಬ ಬಗ್ಗೆ ಸ್ಪಷ್ಟವಾಗಿ ಮತ್ತು ಯಾವುದೇ ಸಂಶಯಕ್ಕೆ ಎಡೆಯಿಲ್ಲದ ಹಾಗೆ ಗುರುತು ಮಾಡಬೇಕು. ಹಾಗೆ ಮಾಡಿದ ಗುರುತಿನಿಂದ ನೀವು ಯಾವ ಅಭ್ಯರ್ಥಿಗೆ ಮತ ನೀಡಿದ್ದೀರೆಂಬ ಬಗ್ಗೆ ಸಂದೇಹವುಂಟಾದಲ್ಲಿ, ಆ ಮತವು ಅಸಿಂಧುವಾಗುತ್ತದೆ.

**ನಮೂನೆ – 26**

**[ನಿಯಮ 44(16) ನೋಡಿ]**

**[1][xxxx][1]**

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್‌ಇ 88 ದಿನಾಂಕ: 30-1-1990ರ ಮೂಲಕ ಬಿಟ್ಟುಬಿಡಲಾಗಿದೆ.

**ನಮೂನೆ – 27**

**(ನಿಯಮ 49(1)ನ್ನು ನೋಡಿ)**

**ಅವಿಶ್ವಾಸ ಸೂಚನೆಯ ನೋಟೀಸಿನ ನಮೂನೆ**

ಕಾರ್ಯದರ್ಶಿ
ಮಾರುಕಟ್ಟೆ ಸಮಿತಿ,
..............
.............. ಇವರಿಗೆ,
ಮಾನ್ಯರೆ,

.................................. ಮಾರುಕಟ್ಟೆ ಸಮಿತಿಯ ಸದಸ್ಯನಾದ : ಸದಸ್ಯರಾದ ........................... ಆದ ನಾನು: ನಾವು ಈ ಕೆಳಕಂಡ ಕಾರಣಗಳಿಗಾಗಿ ................................. ಅಧ್ಯಕ್ಷನ : ಉಪಾಧ್ಯಕ್ಷನ ವಿರುದ್ಧ ಅವಿಶ್ವಾಸ ಸೂಚನೆಯನ್ನು ಮಂಡಿಸಲು ಇಚ್ಛಿಸುತ್ತೇನೆ/ವೆ.

ಮೇಲೆ ಸೂಚಿಸಿರುವ ಸಂಗತಿ : ಸಂಗತಿಗಳು ನಾನು : ನಾವು ತಿಳಿದಿರುವಷ್ಟರ ಮಟ್ಟಿಗೆ ಮತ್ತು ನಂಬುವಷ್ಟರ ಮಟ್ಟಿಗೆ ಸತ್ಯವೆಂದು ನಾನು : ನಾವು ಘೋಷಿಸುತ್ತೇನೆ:ವೆ. ನಾವು ಮೇಲ್ಕಂಡ ನೋಟೀಸನ್ನು ಅನುಮೋದಿಸುತ್ತೇವೆ.

................... ______________
................... _

(ಸಹಿಗಳು)

**1[ನಮೂನೆ – 27ಎ**

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ: 27-1-1994ರ ಮೂಲಕ ಸೇರಿಸಲಾಗಿದೆ.

**(ನಿಯಮ 60ಎ(4) ನೋಡಿ)**

**ಅಲ್ಪಾವಧಿ ಮುಂಗಡದ ಮಂಜೂರಾತಿಗಾಗಿ ಅರ್ಜಿ**

ಕಾರ್ಯದರ್ಶಿ,
ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ,
ಇವರಿಗೆ.
ಮಾನ್ಯರೆ,

ನಾನು: ನಾವು ....................................... ಚೀಲಗಳನ್ನು ಒತ್ತೆ ಇಟ್ಟಿರುವ ಸಂಬಂಧದಲ್ಲಿ ....................................... ರೂ. ಅಲ್ಪಾವಧಿ ಮುಂಗಡವನ್ನು ಮಂಜೂರು ಮಾಡಬೇಕೆಂದು ಕೋರುತ್ತೇನೆ:ವೆ. ನನ್ನ : ನಮ್ಮ ವಿವರಗಳನ್ನು ಕೆಳಗೆ ಕೊಡಲಾಗಿದೆ:–

1. ಹೆಸರು
2. ಅರ್ಜಿದಾರನ:ರ ತಂದೆಯ ಹೆಸರು
3. ಅರ್ಜಿದಾರನ:ರ ವಯಸ್ಸು
4. ಪೂರ್ಣ ವಿಳಾಸ (ಮನೆ ವಿಳಾಸ)
5. ಜಮೀನಿನ ವಿವರಗಳು
6. ತರಿ ಜಮೀನಿನ ವಿಸ್ತೀರ್ಣ: ಖುಷ್ಕಿ ಜಮೀನಿನ ವಿಸ್ತೀರ್ಣ:ಬೆಳೆಯುವ ಬೆಳೆಗಳು/ಪ್ರತಿ ಸರಕಿನ ಅಂದಾಜು ಪ್ರಮಾಣ.

ನಾನು : ನಾವು ಅಲ್ಪಾವಧಿ ಮುಂಗಡದ ಮಂಜೂರಾತಿಯ ಎಲ್ಲಾ ಷರತ್ತುಗಳನ್ನು ಪಾಲಿಸುತ್ತೇವೆ ಮತ್ತು ಒಪ್ಪಂದ ಪತ್ರದ ಎಲ್ಲಾ ಷರತ್ತುಗಳನ್ನು ಒಪ್ಪುತ್ತೇನೆ:ವೆ.

ನನ್ನ:ನಮ್ಮ ವಿಳಾಸವು ಈ ಅರ್ಜಿಯಲ್ಲಿ ತಿಳಿಸಿರುವಂತೆ ಇರುತ್ತದೆ:ವೆ ಮತ್ತು ವಿಳಾಸದಲ್ಲಿ ಏನಾದರೂ ಬದಲಾವಣೆಯಾದರೆ ಅದನ್ನು ತಿಳಿಸುತ್ತೇನೆ:ವೆ.

ನಾನು:ನಾವು ಈ ಹಿಂದೆ ಯಾವುದೇ ಅಲ್ಪಾವಧಿ ಮುಂಗಡವನ್ನು ಪಡೆದಿರುವುದಿಲ್ಲ: ಈ ಹಿಂದೆ ಪಡೆದ ಅಲ್ಪಾವಧಿ ಮುಂಗಡವನ್ನು ತೀರಿಸಿದ್ದು ಆ ಸಂಬಂಧದಲ್ಲಿ ಮಾರುಕಟ್ಟೆ ಸಮಿತಿಗೆ ಕೊಡಬೇಕಾದ ಯಾವುದೇ ಬಾಕಿಗಳಿರುವುದಿಲ್ಲ.

ಸ್ಥಳ :

ದಿನಾಂಕ :

ಅರ್ಜಿದಾರನ:ರ ಸಹಿ.

**ನಮೂನೆ – 27ಬಿ**

**(ನಿಯಮ 60ಎ(12) ನೋಡಿ)**

**ಒಪ್ಪಂದ ಪತ್ರ**

............................................ ಇವರ ಮಗನಾದ ಮತ್ತು ........................... ನಿವಾಸಿಯಾದ ನಾನು ಈ ಮುಂದಿನ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ನನಗೆ ಸೇರಿದ ........................ ಚೀಲಗಳ ......... ಅನ್ನು ಒತ್ತೆಯಿಟ್ಟು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ .................... ಇವರಿಂದ ............. ರೂ, ಅಲ್ಪಾವಧಿ ಮುಂಗಡವನ್ನು ಪಡೆದಿದ್ದೇನೆ.

1. ಮಾರುಕಟ್ಟೆ ಸಮಿತಿಗೆ ನಾನು ಒತ್ತೆಯಿಟ್ಟಿರುವ ಉತ್ಪನ್ನವು ನನ್ನ ಸ್ವಂತದ್ದಾಗಿದ್ದು, ಮಾರುಕಟ್ಟೆ ಸಮಿತಿಯ ವಶದಲ್ಲಿರಲು ನನ್ನಿಂದ ಯಾವುದೇ ಅಡ್ಡಿಯಿಲ್ಲ.
2. ಒತ್ತೆಯಿಟ್ಟ ದಾಸ್ತಾನನ್ನು ತೊಂಬತ್ತು ದಿನಗಳೊಳಗಾಗಿ ನಾನು ಮಾರಾಟ ಮಾಡುವ ವ್ಯವಸ್ಥೆ ಮಾಡುತ್ತೇನೆ ಮತ್ತು ಮಾರುಕಟ್ಟೆ ಸಮಿತಿಯ ಮಳಿಗೆಗಳಿಂದ ಖರೀದಿದಾರನು ದಾಸ್ತಾನನ್ನು ಎತ್ತುವುದಕ್ಕೆ ಮುಂಚೆ ಮಾರಾಟದಿಂದ ಬಂದ ಹಣದಿಂದ ಮುಂಗಡವನ್ನು ಬಡ್ಡಿ ಸಹಿತವಾಗಿ ತೀರಿಸುತ್ತೇನೆ.
3. ನಾನು ಮುಂಗಡ ಮೊಬಲಗನ್ನು ಬಿಡುಗಡೆ ಮಾಡಿದ ದಿನಾಂಕದ ತರುವಾಯ 31ನೇ ದಿನದಿಂದ ಮೊದಲುಗೊಂಡು ಮಳಿಗೆಯಿಂದ ಉತ್ಪನ್ನವನ್ನು ಎತ್ತುವ ದಿನದವರೆಗೆ ಮಾರುಕಟ್ಟೆ ಸಮಿತಿಯು ಮಂಜೂರು ಮಾಡಿದ ಅಲ್ಪಾವಧಿ ಮುಂಗಡದ ಮೇಲೆ ವರ್ಷಕ್ಕೆ ಶೇಕಡ ಎಂಟರಂತೆ ಬಡ್ಡಿಯನ್ನು ಸಂದಾಯ ಮಾಡುತ್ತೇನೆ.
4. ಒತ್ತೆಯಿಡಲಾದ ದಾಸ್ತಾನಿನ ಶೇಖರಣೆಯ ದಿನಾಂಕದಿಂದ ತೊಂಬತ್ತೊಂದನೆಯ ದಿನದಂದು ಉತ್ಪನ್ನವನ್ನು ಬಹಿರಂಗ ಹರಾಜಿನಲ್ಲಿ ಅಥವಾ ಟೆಂಡರಿನಲ್ಲಿ ಮಾರಾಟ ಮಾಡಿ, ಮುಂಗಡವನ್ನು ಮತ್ತು ಬಡ್ಡಿ ಹಾಗೂ ಇತರ ಯಾವುವೇ ವೆಚ್ಚಗಳಿದ್ದರೆ ಅವುಗಳನ್ನು ಸಹ ಮಾರಾಟದಿಂದ ಬಂದ ಹಣದಲ್ಲಿ ಕಳೆದು ಉಳಿದ ಹಣವನ್ನು ನನಗೆ ಸಂದಾಯ ಮಾಡಲು ಮಾರುಕಟ್ಟೆ ಸಮಿತಿಯು ಹಕ್ಕನ್ನು ಹೊಂದಿರುತ್ತದೆ. ನನ್ನಿಂದ ಬಾಕಿಯಿರುವ ಸಾಲ ಮತ್ತು ಅದರ ಮೇಲಿನ ಬಡ್ಡಿ ಹಾಗೂ ಇತರೆ ಬಾಕಿಗಳನ್ನು ಮಾರಾಟದಿಂದ ಬಂದ ಹಣದಿಂದ ಸಂಪೂರ್ಣವಾಗಿ ತೀರಿಸಲು ಸಾಧ್ಯವಾಗದಿದ್ದರೆ ಹಾಗೆ ಬಾಕಿ ಉಳಿದ ಹಣವನ್ನು ಬಡ್ಡಿ ಸಹಿತವಾಗಿ ಸಂದಾಯ ಮಾಡುವುದಾಗಿ ವಾಗ್ದಾನ ಮಾಡುತ್ತೇನೆ.
5. ಮೇಲ್ಕಂಡ ಅಲ್ಪಾವಧಿ ಮುಂಗಡ ಹಾಗೂ ಅದರ ಮೇಲಿನ ಬಡ್ಡಿಯನ್ನು ಮರುಸಂದಾಯ ಮಾಡಿದ ತರುವಾಯ ಉಳಿದ ದಾಸ್ತಾನನ್ನು ಅಥವಾ ಮಾರಾಟದ ಹಣವನ್ನು ಮಾರುಕಟ್ಟೆ ಸಮಿತಿಯು ನನಗೆ ಒಪ್ಪಿಸಬೇಕು.
6. ಒತ್ತೆಯಿಡಲಾದ ಕೃಷಿ ಉತ್ಪನ್ನವು ಮಾರುಕಟ್ಟೆ ಸಮಿತಿಯ ಅಭಿರಕ್ಷೆಯಲ್ಲಿರುವಾಗ ಅದರ ತೂಕದಲ್ಲಿ, ಪರಿಮಾಣದಲ್ಲಿ, ಸ್ಥಿತಿಯಲ್ಲಿ ಉಂಟಾಗಬಹುದಾದ ಯಾವುದೇ ವ್ಯತ್ಯಾಸದ ಬಗ್ಗೆ ಮಾರುಕಟ್ಟೆ ಸಮಿತಿಯು ಹೊಣೆಗಾರವಲ್ಲವೆಂದು ನಾನು ಒಪ್ಪಿಕೊಳ್ಳುತ್ತೇನೆ.
7. ಮೇಲ್ಕಂಡ ವ್ಯವಹಾರ ನಡೆಯುವ ಅವಧಿಯಲ್ಲಿ ನಾನು ಮೃತನಾದರೆ, ಮಾರಾಟದ ಹಣದಿಂದ ಅಲ್ಪಾವಧಿ ಮುಂಗಡದ ಎಲ್ಲಾ ಬಾಕಿಯನ್ನು ವಸೂಲು ಮಾಡಿಕೊಂಡು ಉಳಿಯುವ ಹಣವನ್ನು ಸಮಿತಿಯು ನನ್ನ ಉತ್ತರಾಧಿಕಾರಿಗೆ ಕೊಡಬೇಕು ಅಥವಾ
   ಮಾರಾಟದ ಹಣವನ್ನು ಹೊಂದಾಣಿಕೆ ಮಾಡಿದ ನಂತರವೂ ನಾನು ಸಂದಾಯ ಮಾಡಬೇಕಾದ ಬಾಕಿಯೇನಾದರೂ ಉಳಿದರೆ ಆ ಬಾಕಿಯನ್ನು ನನ್ನ ಉತ್ತರಾಧಿಕಾರಿಯಿಂದ ವಸೂಲು ಮಾಡಿಕೊಳ್ಳಬಹುದು.
8. ಈ ಒಪ್ಪಂದ ಪತ್ರಕ್ಕೆ ಸಂಬಂಧಿಸಿದಂತೆ ಯಾವುದೇ ವಿವಾದ ಉಂಟಾದಲ್ಲಿ ನಾನು : ನಾವು ಕೃಷಿ ಮಾರುಕಟ್ಟೆ ನಿರ್ದೇಶಕನ ಅಥವಾ ಸದರಿ ಉದ್ದೇಶಕ್ಕಾಗಿ ಅವನು ಅಧಿಕೃತಗೊಳಿಸಿದ ಅಧಿಕಾರಿಯ

ತೀರ್ಮಾನಕ್ಕೆ ಬದ್ಧನಾಗಿದ್ದೇನೆ:ರಾಗಿದ್ದೇವೆ, ಮತ್ತು ಸದರಿ ತೀರ್ಮಾನದ ಮೇಲೆ ಯಾವುದೇ ಸಿವಿಲ್ ದಾವೆ ಹೂಡುವುದಿಲ್ಲವೆಂದು ವಾಗ್ದಾನ ಮಾಡುತ್ತೇನೆ:ವೆ

ಸ್ಥಳ:
ದಿನಾಂಕ :
ಸಾಕ್ಷಿದಾರರು:

ಅರ್ಜಿದಾರನ ಸಹಿ

1. ಹೆಸರು ..................
   ವಿಳಾಸ .................
2. ಹೆಸರು .................
   ವಿಳಾಸ.................

**ನಮೂನೆ – 27 ಸಿ**

**(ನಿಯಮ 65ಎ (15) ನೋಡಿ)**

**ಸ್ವೀಕೃತಿ**

ಈ ಕೆಳಕಂಡ ಉತ್ಪನ್ನವು ಶ್ರೀ .................................... ಇವರ ಮಗನಾದ ಶ್ರೀ .................................... ಊರು/ಪಟ್ಟಣ ತಾಲ್ಲೂಕು ಜಿಲ್ಲೆಯವರಾದ ಇವರಿಗೆ ಸೇರಿದ್ದು, ಕೃಷಿ ಮಾರುಕಟ್ಟೆ ಉತ್ಪನ್ನ ಸಮಿತಿಯ ಉಗ್ರಾಣಗಳಲ್ಲಿ ಸಂಗ್ರಹಿಸಿಡುವುದಕ್ಕಾಗಿ ಸ್ವೀಕರಿಸಿದ್ದರೆ ಅದಕ್ಕೆ ಪ್ರತಿಯಾಗಿ ಅಲ್ಪಾವಧಿ ಮುಂಗಡಗಳನ್ನು ನೀಡಲಾಗಿದೆ.

| ಸರಕುಗಳ ವಿವರ | ಮತ್ತು ಗ್ರೇಡ್ | ಮೂಟೆಗಳ–ಚೀಲಗಳ ಪರಿಮಾಣ ಸಂಖ್ಯೆ ಮಂತಾದವು ವಿಭಿನ್ನತಾ ಗುರುತುಗಳಿದ್ದರೆ ಅವು | ಅಳತೆ ತೂಕ | ಮಾರುಕಟ್ಟೆ ಮೌಲ್ಯ | ಸರಕುಗಳ ಒಟ್ಟು ಮೌಲ್ಯ | ಮುಂಗಡ ನೀಡಿದ ಮೊತ್ತ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |

ಸ್ಥಳ :
ದಿನಾಂಕ:

ಕಾರ್ಯದರ್ಶಿಯ ಸಹಿ
(ಮೊಹರು)

**ನಮೂನೆ – 27ಡಿ**

**(ನಿಯಮ 60ಬಿ(2) ನೋಡಿ)**

**ಅಧಿಸೂಚಿತ ಕೃಷಿ ಉತ್ಪನ್ನದ ಖರೀದಿ ಮತ್ತು ಮಾರಾಟ:ಸಂಸ್ಕರಣದ ಉದ್ದೇಶಕ್ಕಾಗಿ ಕೃಷಿ ಮಾರುಕಟ್ಟೆ ವ್ಯವಹಾರ ಸಂಘಗಳಿಗೆ : ಕೃಷಿ ಸಂಸ್ಕರಣ ಸಹಕಾರ ಸಂಘಗಳಿಗೆ ನೀಡಲಾಗುವ ಸಾಲಗಳ ಅರ್ಜಿ ನಮೂನೆ:**

**ಕೃಷಿ ಉತ್ಪನ್ನ**

1. ಸಂಘದ ಹೆಸರು :
2. ಸಹಕಾರ ಸಂಘಗಳ ಅಧಿನಿಯಮದ ಮೇರೆಗೆ ನೋಂದಣಿ ಸಂಖ್ಯೆ :
3. ಕರ್ನಾಟಕ ಮಾರಾಟ ತೆರಿಗೆ ಮತ್ತು ಕೇಂದ್ರ ಮಾರಾಟ ತೆರಿಗೆ ನೋಂದಣಿ ಸಂಖ್ಯೆ :
4. ಮಾರುಕಟ್ಟೆ ಸಮಿತಿಯು ನೀಡಿದ ಲೈಸನ್ಸ್‌ಗಳ ಪ್ರವರ್ಗ ಸಂಖ್ಯೆ, ಮತ್ತು ಲೈಸನ್ಸಿನ ಅವಧಿ :
5. ಸಂಘದ ಸ್ಥಾಪನೆಯ ದಿನಾಂಕ :
6. ನೋಂದಾಯಿತ ಕಚೇರಿಯ ಮತ್ತು ಕಾರ್ಖಾನೆಯ ವಿಳಾಸ :
7. ಕಛೇರಿಯ : ಕಾರ್ಖಾನೆಯ ಆವರಣ ಸ್ವಂತದ್ದೇ, ಬಾಡಿಗೆಗೆ ಅಥವಾ : ಗುತ್ತಿಗೆಗೆ ಪಡೆಯಲಾಗಿದೆಯೇ? ಅಥವಾ ಕಂತು ಖರೀದಿಯ ಮೂಲಕ ತೆಗೆದುಕೊಳ್ಳಲಾಗಿದೆಯೇ? ಹಾಗಿದ್ದರೆ ಬಾಡಿಗೆ, ಗುತ್ತಿಗೆ ಮತ್ತು ಕಂತು ಖರೀದಿ ಮುಂತಾದುವುಗಳ ವಿವರಗಳನ್ನು ಕೊಡಿ (ದಾಸ್ತಾವೇಜುಗಳ ನಕಲುಗಳನ್ನು ಲಗತ್ತಿಸಬೇಕು) :
8. ಸಂಘವು ವ್ಯವಹಾರ ಮಾಡುವ ಅಧಿಸೂಚಿತ ಕೃಷಿ ಉತ್ಪನ್ನಗಳ ಪಟ್ಟಿಯನ್ನು ಒದಗಿಸಿ :
9. ಕೃಷಿ ಉತ್ಪನ್ನಗಳ ಸಂಸ್ಕರಣದ ವಿವರಗಳನ್ನು ಒದಗಿಸಬೇಕು (ಕೃಷಿ ಸಂಸ್ಕರಣ ಸಹಕಾರ ಸಂಘಗಳ ಸಂದರ್ಭದಲ್ಲಿ ಮಾತ್ರ) :

10. ಕಳೆದ ಮೂರು ವರ್ಷಗಳಲ್ಲಿ ಮಾರುಕಟ್ಟೆ ಸಮಿತಿಗೆ ಜಮೆ ಮಾಡಲಾದ ಮಾರುಕಟ್ಟೆ ಫೀಜಿನ ಮೊಬಲಗು :
11. ಯಾವ ಉದ್ದೇಶಕ್ಕಾಗಿ ಸಾಲವನ್ನು ಕೋರಲಾಗಿದೆ :
12. ಅಗತ್ಯವಿರುವ ಸಾಲದ ಮೊತ್ತ :
13. ಸಂಘದ ಆರ್ಥಿಕ ಪರಿಸ್ಥಿತಿಯ ಬಗ್ಗೆ ಹಿಂದಿನ ಲೆಕ್ಕ ಪರಿಶೋಧನೆ ವರದಿ, ಇತ್ತೀಚಿನ ಪರಿಶೋಧಿತ ಜಮಾ ಖರ್ಚು ಪಟ್ಟಿ, ವ್ಯಾಪಾರ ಮತ್ತು ಲಾಭ ಹಾಗೂ ವೆಚ್ಚದ ಲೆಕ್ಕ ಇವೇ ಮುಂತಾದ ಸಂಬಂಧಪಟ್ಟ ದಸ್ತಾವೇಜುಗಳನ್ನು ಒದಗಿಸಬೇಕು. :

(ಎ) **ಆಂತರಿಕ ಸಂಪನ್ಮೂಲಗಳು** :

(i) ಸಂದಾಯಿತ ಬಂಡವಾಳ (ಸರ್ಕಾರಿ ಷೇರು ಬಂಡವಾಳವೂ ಸೇರಿ) ಷೇರು ಬಂಡವಾಳದಲ್ಲಿ ಸರ್ಕಾರದ ವಂತಿಗೆಯು ಸ್ಥಿರಾಸ್ತಿಗಳನ್ನು ಆರ್ಜಿಸುವುದಕ್ಕಾಗಿದ್ದರೆ ಆ ಬಂಡವಾಳವನ್ನು ಆಂತರಿಕ ಸಂಪನ್ಮೂಲಗಳಲ್ಲಿ ಸೇರಿಸಕೂಡದು :

(ii) ಮೀಸಲು ನಿಧಿಗಳು

(iii) ಯಾವುವೇ ಠೇವಣಿಗಳನ್ನು ಹೊಂದಿದ್ದರೆ ಆ ಠೇವಣಿಗಳು

(iv) ಲಾಭ ಮತ್ತು ನಷ್ಟ ಲೆಕ್ಕದಲ್ಲಿ ಯಾವುದೇ ಹೆಚ್ಚುವರಿಯಿದ್ದರೆ ಆ ಹೆಚ್ಚುವರಿ :

ಒಟ್ಟು .............

(ಬಿ) **ಹೊಣೆಗಳು :**

(i) ಕನಿಷ್ಠ ನಗದು ಮತ್ತು ಬ್ಯಾಂಕ್ ಶಿಲ್ಕು :

(ii) ಖಾಯಂ ಭದ್ರತಾ ಠೇವಣಿಗಳು :

(iii) ಬ್ಯಾಂಕು ಮತ್ತು ಇತರ ಸಹಕಾರ ಸಂಘಗಳ ಷೇರುಗಳಲ್ಲಿ ಹೂಡಿಕೆಗಳು :

(iv) ಸ್ವಂತ ಸಂಪನ್ಮೂಲಗಳಿಂದ ಸ್ಥಿರಾಸ್ತಿಗಳಲ್ಲಿ ಹೂಡಿಕೆಗಳು :

(v) ಅಮೂರ್ತ ಆಸ್ತಿಗಳು ಯಾವುದಾದರೂ ಇದ್ದರೆ ಅವು :

(vi) ಸಂಚಿತ ನಷ್ಟಗಳು ಯಾವುದಾದರೂ ಇದ್ದರೆ, ಅವುಗಳು :

ಒಟ್ಟು ................

ಸಿ) ವಿಲೆ ಮಾಡಬಹುದಾದ ನಿವ್ವಳ ಸಂಪನ್ಮೂಲಗಳು ಎ–ಬಿ :

14. ಸಂಘವು ಹಿಂದಿನ ಸಹಕಾರ ವರ್ಷದಲ್ಲಿ ವ್ಯವಹರಿಸಿದ ಆರ್ಥಿಕ ವಹಿವಾಟು ಹಾಗೂ ಅಧಿಸೂಚಿತ ಕೃಷಿ ಉತ್ಪನ್ನದ ದಾಸ್ತಾನಿನ ವಹಿವಾಟು – ಇವುಗಳ ಸಂಕ್ಷಿಪ್ತ ವಿವರಣೆಯನ್ನು ಒದಗಿಸಬೇಕು. :
15. ಸಂಘವು ಹೊಂದಿರುವ ಅಧಿಸೂಚಿತ ಕೃಷಿ ಉತ್ಪನ್ನದ ಇತ್ತೀಚಿನ ದಾಸ್ತಾನಿನ ಸ್ಥಿತಿಗತಿಯ ಸಂಕ್ಷಿಪ್ತ ವಿವರಣೆಯನ್ನು ಒದಗಿಸಬೇಕು. :
16. ಸಂಘವು ಮಾರುಕಟ್ಟೆ ಸಮಿತಿಯ ಹೆಸರಿಗೆ ಅಡಮಾನ ಮಾಡಲು ಪ್ರಸ್ತಾಪಿಸಿರುವ ಚರ:ಸ್ಥಿರ ಆಸ್ತಿಯ:ಆಸ್ತಿಗಳ ವಿವರ :
17. ಸಂಘವು ಯಾವುದೇ ಬ್ಯಾಂಕಿನಿಂದ ಅಥವಾ ಇತರ ಸಂಸ್ಥೆಗಳಿಂದ ಸಾಲಗಳನ್ನು ಮುಂಗಡಗಳನ್ನು ಪಡೆದಿದೆಯೇ? ಹಾಗಿದ್ದರೆ ಸಾಲದ ಮತ್ತು ಉಳಿದ ಬಾಕಿಯ ಹಾಗೂ ಸಂಘವು ಅಡಮಾನ ಮಾಡಿದ ಚರ:ಸ್ಥಿರ ಆಸ್ತಿಗಳ ವಿವರ ಕೊಡಿ. :
18. ಸಂಘವು ಕ್ರ.ಸಂ. 16ರಲ್ಲಿ ನಮೂದಿಸಿರುವ ಆಸ್ತಿಗಳನ್ನು ಈಗಾಗಲೇ ಅಡಮಾನ ಮಾಡಿದೆಯೇ? :
19. ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಿಂದ ಸಾಲ ಕೋರುವ ಬಗ್ಗೆ ಸಂಘವು ಅಂಗೀಕರಿಸಿದ ಗೊತ್ತುವಳಿಯ ಪ್ರತಿಯನ್ನು ಒದಗಿಸಬೇಕು. :

ಸಹಿ
ಅಧ್ಯಕ್ಷರು
........... ಸಂಘ

ಸಹಿ
ಕಾರ್ಯದರ್ಶಿ/ವ್ಯವಸ್ಥಾಪಕ
............ ಸಂಘ.]1

**ನಮೂನೆ – 28**

[ನಿಯಮ 62ನ್ನು ನೋಡಿ]

**..................... ಮಾರುಕಟ್ಟೆ ಸಮಿತಿ**

**ಖಜಾನೆ ಅಥವಾ ಬ್ಯಾಂಕಿಗೆ ಮಾಡಲಾದ ಇರಸಾಲುಗಳ ರಿಜಿಸ್ಟರ್**

| ಇರಸಾಲು ಮಾಡಿದ ದಿನಾಂಕ | ಕಚೇರಿಯ ನಗದು ಪುಸ್ತಕದಲ್ಲಿಯ ಪುಟಸಂಖ್ಯೆಯ ಉಲ್ಲೇಖ | ಲೆಕ್ಕದ ಬಾಬು (ತೆರಿಗೆ ಸ್ವರೂಪವನ್ನು ಅಥವಾ ಮೊಬಲಗಿನ ವಿವರಗಳನ್ನು ನಮೂದಿಸತಕ್ಕದ್ದು) | ಖಜಾನೆ ಲೆಕ್ಕಗಳಲ್ಲಿ ಜಮೆ ಶೀರ್ಷಿಕೆ | ಮೊಬಲಗು ......... ರೂ. ಪೈ. | ಖಜಾಂಚಿಯ ಸಹಿ | ಖಜಾನೆ ಅಥವಾ ಬ್ಯಾಂಕಿನ ಪ್ರಭಾರ ಹೊಂದಿರುವ ಅಧಿಕಾರಿಯ ಸಹಿ |
|---|---|---|---|---|---|---|
| **1** | **2** | **3** | **4** | **5** | **6** | **7** |
| | | | | | | |

**ನಮೂನೆ – 29ಎ**

[ನಿಯಮ 64 (1)ನ್ನು ನೋಡಿ]

**..................... ಮಾರುಕಟ್ಟೆ ಸಮಿತಿಯ ................................. ವರ್ಷದ ಆಯವ್ಯಯ ಅಂದಾಜುಗಳು**

**ಆದಾಯ**

| ಕ್ರಮ ಸಂಖ್ಯೆ | ಬಾಬು ಗಳು | ಕಳೆದ 3 ವರ್ಷಗಳ ಸರಾಸರಿ ಆದಾಯ | ಹಿಂದಿನ ವರ್ಷದ ವಾಸ್ತವಿಕ ಆದಾಯ | ಹಿಂದಿನ ವರ್ಷದ ಮಂಜೂರಾದ ಆಯವ್ಯಯ ಅಂದಾಜುಗಳು | ಪರಿಷ್ಕೃತ ಅಂದಾಜು ವಿವರಗಳು | | | ಮಾರುಕಟ್ಟೆ ಸಮಿತಿಯ ವರ್ಷದ ಆದಾಯ | ಕೃಷಿ ಮಾರುಕಟ್ಟೆ ನಿರ್ದೇಶಕನು ಅಂದಾಜು ಮಾಡಿದ ವರ್ಷದ ಆದಾಯ | ಮಾರುಕಟ್ಟೆ ಸಮಿತಿಯ ವಿವರ ಣಾತ್ಮಕ ಟಿಪ್ಪಣಿ | ಮಂಜೂರಾದ ಆಯವ್ಯಯದ ವಿವರಣಾತ್ಮಕ ಟಿಪ್ಪಣಿಯ ಉಲ್ಲೇಖ |
|---|---|---|---|---|---|---|---|---|---|---|---|
| | | | | | 9 ತಿಂಗಳ ವಾಸ್ತವಿಕ ಆದಾಯ | 3 ತಿಂಗಳ ಅಂದಾಜು ಆದಾಯ | ಈ ವರ್ಷದ ಒಟ್ಟು ಅಂದಾಜು | | | | |
| **1** | **2** | **3** | **4** | **5** | **6** | **7** | **8** | **9** | **10** | **11** | **12** |

**ಲೈಸನ್ಸು ಫೀಜುಗಳು:**

1[I. ವ್ಯಾಪಾರಿಗಳು
ಚಿಲ್ಲರೆ ವ್ಯಾಪಾರಿಗಳು]1

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 130 ಎಂಆರ್ಇ 88 ದಿನಾಂಕ: 30–1–1990ರ ಮೂಲಕ ಪ್ರತಿಯೋಜಿಸಲಾಗಿದೆ.

II. ಕಮೀಷನ್ ಏಜೆಂಟರು

III. ದಲ್ಲಾಳಿಗಳು (ಬ್ರೋಕರ್ಸ್)

IV. ಇತರರು
1) ಗಾಡಿ ಹೊಡೆಯುವುದು
2) ಹಮಾಲಿಗಳು
3) ಪ್ರೊಸೆಸರು
4) ಟ್ರಕ್ ಮಾಲೀಕರು
(5) ...............)
(6) ..............)

V. ಒಟ್ಟು ವ್ಯಾಪಾರ ವಹಿವಾಟಿನ ಶೇಕಡಾ ..................
ಬರಬಹುದಾದ ................ ಲಕ್ಷ ರೂಪಾಯಿಗಳ
ಮೇಲೆ ಶೇಕಡಾ ............... ಮಾರುಕಟ್ಟೆ ಫೀಜು

––––––––––––––––––––––

ಒಟ್ಟು I ರಿಂದ V

----------------------------------

VI ನೋಂದಣಿ ಫೀಜು

VII ಪುಸ್ತಕಗಳ ಮತ್ತು ನಮೂನೆಗಳ ಮಾರಾಟ

VIII ಸಂಕೀರ್ಣ:–

(1) ಠೇವಣಿಗಳ ಮೇಲೆ ಬಡ್ಡಿ

(2) ಸ್ವತ್ತಿನ ಆದಾಯ

(3) ............

(4) ............

(5) .............

ಒಟ್ಟು ಜುಮ್ಲಾ

**ವೆಚ್ಚ**

| ಕ್ರಮ ಸಂಖ್ಯೆ | ಬಾಬು | ಕಳೆದ 3 ವರ್ಷಗಳ ಸರಾಸರಿ ವೆಚ್ಚ | ಹಿಂದಿನ ವರ್ಷದ ವಾಸ್ತವಿಕ ವೆಚ್ಚ | ಹಿಂದಿನ ವರ್ಷದ ಮಂಜೂರಾದ ಆಯವ್ಯಯ ಗಳು ಅಂದಾಜು | ಪರಿಷ್ಕೃತ ಅಂದಾಜು ವಿವರಗಳು | | | ಮಾರುಕಟ್ಟೆ ಸಮಿತಿಯ ವರ್ಷದ ಅಂದಾಜು ವೆಚ್ಚ | ಕೃಷಿ ಮಾರುಕಟ್ಟೆ ನಿರ್ದೇಶಕನು ಅಂದಾಜು ಮಾಡಿದ ವೆಚ್ಚ | ಮಾರುಕಟ್ಟೆ ಸಮಿತಿಯ ಆಯವ್ಯಯ ಟಿಪ್ಪಣಿಗಳ ಉಲ್ಲೇಖ | ಮಂಜೂರಾದ ಆಯವ್ಯಯದ ಪೂರಕ ಟಿಪ್ಪಣಿಯ ಉಲ್ಲೇಖ |
|---|---|---|---|---|---|---|---|---|---|---|---|
| | | | | | 9 ತಿಂಗಳ ವಾಸ್ತವಿಕ ವೆಚ್ಚ | 3 ತಿಂಗಳ ಅಂದಾಜು ವೆಚ್ಚ | ಒಟ್ಟು ಅಂದಾಜು ವೆಚ್ಚ | | | | |
| **13** | **14** | **15** | **16** | **17** | **18** | **19** | **20** | **21** | **22** | **23** | **24** |

**1.** **ವಂತಿಗೆಗಳು :**

(1) ಒಟ್ಟು ಜಮೆಗಳ ಮೇಲೆ ರಾಜ್ಯದ ಸಂಚಿತ ನಿಧಿಗೆ ಮಾಡಿದ ಶೇಕಡಾ

(2) ಜಮೆಗಳ ಮೇಲೆ ಶೇಕಡಾ 5 ರಂತೆ ರಾಜ್ಯ ಮಾರುಕಟ್ಟೆ ಮಂಡಲಿಗೆ ಮಾಡಿದ ವಂತಿಗೆ

ಒಟ್ಟು

II ಸಿಬ್ಬಂದಿ

II ಸಿಬ್ಬಂದಿ

ಎ) ವೇತನ

ಬಿ) ತುಟ್ಟಿಭತ್ಯೆ

ಸಿ) ಮನೆ ಬಾಡಿಗೆ ಭತ್ಯೆ

ಡಿ) ಇತರ ಭತ್ಯಗಳು

(ಲಗತ್ತಿಸಲಾಗಿರುವ ವಿವರಣಾ ಪಟ್ಟಿಯಲ್ಲಿ) ವಿವರಿಸಲಾಗಿರುವಂತೆ)

**III** **ಪ್ರಯಾಣ ಭತ್ಯೆ:–**

1. ಸದಸ್ಯರಿಗೆ
2. ಸಿಬ್ಬಂದಿಗೆ

ಒಟ್ಟು

IV ಮುದ್ರಣ ಮತ್ತು ಲೇಖನ ಸಾಮಗ್ರಿ

V ಸಾದಿಲ್ವಾರು

VI ಪ್ರಚಾರ

VII ಅಂಚೆ ಮತ್ತು ತಂತಿ ವೆಚ್ಚಗಳು

VIII ಜಾಹೀರಾತುಗಳು

IX ಗಣ್ಯ ಸಂದರ್ಶಕರು

X ಬಾಡಿಗೆ, ದರಗಳು ಮತ್ತು ತೆರಿಗೆಗಳು

XI ಸಮವಸ್ತ್ರ ಉಡುಪುಗಳು

XII ಸಮ್ಮೇಳನ ಮುಂತಾದವುಗಳಿಗೆ ಹಾಜರಾಗುವುದು

XIII ಜೀಪ್ ವೆಚ್ಚಗಳು

(ಎ) ದುರಸ್ತಿಗಳು

(ಬಿ) ಪೆಟ್ರೋಲ್

ಒಟ್ಟು

xiv ಕಟ್ಟಡ ಮುಂತಾದವುಗಳ ನಿರ್ವಹಣೆ

xv ಇತರ ಬಾಬುಗಳು

(ಎ) ...............

(ಬಿ) ..............

(ಸಿ) ..............

(ಡಿ) ..............

ಒಟ್ಟು

ಸಂಭವನೀಯ ಹೆಚ್ಚುವರಿ

ಒಟ್ಟು ಜುಮ್ಲಾ

## ನಮೂನೆ – 29ಬಿ

**[ನಿಯಮ 64 (1)ನ್ನು ನೋಡಿ]**

**..................... ಮಾರುಕಟ್ಟೆ ಸಮಿತಿಯ ................................. ವರ್ಷದ ಖಾಯಂ ಆಯವ್ಯಯ ಅಂದಾಜುಗಳು**

I. [1][31.3.......][1] ರಂದು ಇರುವಂತೆ ಖಾಯಂ ನಿಧಿ ರೂ. ಪೈ.

II. ಸರ್ಕಾರದ ಸಾಲ ಯಾವುದಾದರೂ ಇದ್ದರೆ ಅದು

III. ಸಂಭವನೀಯ ಹೆಚ್ಚುವರಿ (ವಿವರಗಳನ್ನು ಒದಗಿಸಬೇಕು)

IV. ಈಗಾಗಲೇ ಮಂಜೂರಾದ, ಆದರೆ ಖರ್ಚು ಮಾಡಿರದ ಮೊಬಲಗಿನ ವಜಾ ಬಾಬುಗಳು ಮಂಜೂರಾದ ಮೊಬಲಗು

(ಎ)

(ಬಿ)

(ಸಿ)

(ಡಿ)

ವೆಚ್ಚಕ್ಕಾಗಿ ಲಭ್ಯವಿರುವ ಶಿಲ್ಕು ............

...........

ಪ್ರಸ್ತಾವಿತ ವೆಚ್ಚದ ವಿವರಗಳು ರೂ. ಪೈ.

I. ಜಡ ಸರಕು

II. ಆರ್ಜನೆ (ವಿವರಗಳನ್ನು ಒದಗಿಸಬೇಕು)

III. ಮಾರುಕಟ್ಟೆ ಪ್ರಾಂಗಣದ ಅಭಿವೃದ್ಧಿ

IV. ಕಟ್ಟಡಗಳು (ವಿವರಗಳನ್ನು ಒದಗಿಸಬೇಕು)

V. ಇತರ ಬಾಬುಗಳು ಯಾವುದಾದರೂ ಇದ್ದರೆ ಅವು

(ಎ)

(ಬಿ)

(ಸಿ)

ಮುಂದುವರಿಸಲಾದ ನಿವ್ವಳ ಶಿಲ್ಕು ...........

...........

ಕಾರ್ಯದರ್ಶಿ ಅಧ್ಯಕ್ಷ

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್ಇ 91 ದಿನಾಂಕ: 27-1-1994ರ ಮೂಲಕ ಸೇರಿಸಲಾಗಿದೆ.

## ನಮೂನೆ – 30

**[64(3) (ಎ)ನಿಯಮವನ್ನು ನೋಡಿ]**

**ಸಿಬ್ಬಂದಿ ವರ್ಗದ 19........... 19 ............. ವರ್ಷದ ವಿವರಗಳನ್ನು ತೋರಿಸುವ ಪಟ್ಟಿ.**

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಹುದ್ದೆಗಳ ಪದನಾಮ | ಮಂಜೂರಾದ ಹುದ್ದೆಗಳ ಸಂಖ್ಯೆ | ಹುದ್ದೆಯನ್ನು ಮಂಜೂರು ಮಾಡಿ ಹೊರಡಿಸಿದ ಸರ್ಕಾರದ ಅಥವಾ ಇತರ ಪ್ರಾಧಿಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಹುದ್ದೆಗಳ ವೇತನ ಶ್ರೇಣಿ | ಪ್ರಸಕ್ತ ವರ್ಷದ ಏಪ್ರಿಲ್ ಒಂದರಂದು ಇರುವಂತೆ ಹುದ್ದೆಗಳಲ್ಲಿ ಹಾಲಿ ಇರುವವರ ಹೆಸರುಗಳು ಮತ್ತು ಅವರ ವೇತನ ಮತ್ತು ಭತ್ಯೆಗಳು | | | | ಮುಂಬರುವ ವರ್ಷದಲ್ಲಿ ಶೀರ್ಷಿಕೆಯ ಅಡಿಯಲ್ಲಿ ನಿರೀಕ್ಷಿಸಲಾದ ಒಟ್ಟು ವೆಚ್ಚ |
|---|---|---|---|---|---|---|---|---|---|---|
| | | | | | | ಹುದ್ದೆಯಲ್ಲಿ ಇರುವವರ ಹೆಸರು | ಏಪ್ರಿಲ್ ಒಂದು ರಂದು ವೇತನ | ಇದ್ದ ತುಟ್ಟಿ ಭತ್ಯೆ | ನಿರ್ದಿಷ್ಟ ಪಡಿಸಬೇಕಾದ ಇತರ ಭತ್ಯೆಗಳು | |
| 1 | 2 | 3 | 4 | 5 | 6 | 7 | 8 | 9 | 10 | 11 |
| | | | | | | | | | | |

## ನಮೂನೆ – 31

[64(3) (ಬಿ)ನಿಯಮವನ್ನು ನೋಡಿ]

**ಮುಂಬರುವ ವರ್ಷದಲ್ಲಿ ನಿರ್ವಹಿಸಬೇಕಾದ ಲೋಕೋಪಯೋಗಿ ಕಾಮಗಾರಿಗಳ ವಿವರಗಳನ್ನು ತೋರಿಸುವ ಪಟ್ಟಿ.**

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಾಮಗಾರಿಯ ಹೆಸರು ಅಥವಾ ವಿವರಣೆ | ಕಾಮಗಾರಿಯನ್ನು ಮಂಜೂರು ಮಾಡಿ ಹೊರಡಿಸಿದ ಸರ್ಕಾರದ ಅಥವಾ ಇತರ ಪ್ರಾಧಿಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಮಂಜೂರಾದ ಅಂದಾಜು ಮೊಬಲಗು | ಈವರೆಗೆ ಕಾಮಗಾರಿಯ ಸಂಬಂಧದಲ್ಲಿ ವಹಿಸಲಾಗಿರುವ ವೆಚ್ಚ | ಮುಂಬರುವ ವರ್ಷದಲ್ಲಿ ಕಾಮಗಾರಿಯ ಸಂಬಂಧದಲ್ಲಿ ವಹಿಸಬೇಕೆಂದಿರುವ ವೆಚ್ಚ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | | | | | | |

## ನಮೂನೆ – 32

[64(3) (ಸಿ)ನಿಯಮವನ್ನು ನೋಡಿ]

**ಮಾರುಕಟ್ಟೆ ಸಮಿತಿಗೆ ಮಂಜೂರಾದ ಸಾಲಗಳ ವಿವರಗಳು**

| ಕ್ರಮ ಸಂಖ್ಯೆ | ಸಾಲವನ್ನು ಮಂಜೂರು ಮಾಡಿ ಹೊರಡಿಸಿದ ಆದೇಶ ಸಂಖ್ಯೆ ಮತ್ತು ದಿನಾಂಕ | ಸಾಲವನ್ನು ಮಂಜೂರು ಮಾಡಿದ ಉದ್ದೇಶ | ಮಂಜೂರಾದ ಸಾಲದ ಮೊಬಲಗು | ಮಾರುಕಟ್ಟೆ ಸಮಿತಿಯು ಪಡೆದುಕೊಂಡ ಸಾಲದ ಮೊಬಲಗು | | ಸಾಲವನ್ನು ಮರುಪಾವತಿ ಮಾಡಬೇಕಾದ ಕಂತುಗಳ ಸಂಖ್ಯೆ ಮತ್ತು ಪ್ರತಿ ಕಂತಿನ ಅವಧಿ | ಬಡ್ಡಿಯ ದರ | ಮರುಪಾವತಿ ಮಾಡಬೇಕಾದ ಸುಸ್ತಿ ಸಾಲದ ಮೊಬಲಗು ಮತ್ತು ಸುಸ್ತಿ ಬಡ್ಡಿ ಯಾವುದಾದರೂ ಇದ್ದರೆ ಅವು | | ಷರಾ |
|---|---|---|---|---|---|---|---|---|---|---|
| | | | | ಮೊಬಲಗು | ತೆಗೆದುಕೊಂಡ ದಿನಾಂಕ | | | ಮರುಪಾವತಿ ಮಾಡಬೇಕಾದ ಸುಸ್ತಿ ಸಾಲದ ಮೊಬಲಗು | ಸುಸ್ತಿ ಬಡ್ಡಿಯ ಮೊಬಲಗು | |
| 1 | 2 | 3 | 4 | 5 | 6 | 7 | 8 | 9 | 10 | 11 |

**ಸಂಕ್ಷಿಪ್ತ ವಿವರ :**

1. ಏಪ್ರಿಲ್ ಒಂದರಂದು ಇರುವಂತೆ ಮಾರುಕಟ್ಟೆ ಸಮಿತಿಯು ಪಡೆದ ಸಾಲಗಳ ಒಟ್ಟು ಮೊತ್ತ ..........
2. ಆಯವ್ಯಯ ವರ್ಷದಲ್ಲಿ ಮರುಪಾವತಿ ಮಾಡಬೇಕಾದ ಸಾಲಗಳ ಮೊಬಲಗು ............
3. ಆಯವ್ಯಯ ವರ್ಷದ ಅವಧಿಯಲ್ಲಿ ಸಾಲಗಳ ಮೇಲೆ ಸಂದಾಯ ಮಾಡಬೇಕಾದ ಬಡ್ಡಿಯ ಮೊಬಲಗು ..........

## ನಮೂನೆ – 33

[64(3) (ಡಿ)ನಿಯಮವನ್ನು ನೋಡಿ]

**ಮುಂಬರುವ ವರ್ಷದಲ್ಲಿ ಮಾರುಕಟ್ಟೆ ಸಮಿತಿಯು, ಸರ್ಕಾರಿ ಇಲಾಖೆಗಳಿಗೆ ಸಂದಾಯ ಮಾಡಬೇಕಾದ ವಂತಿಗೆಗಳು ಮತ್ತು ಇತರ ಬಾಕಿಗಳು**

| ಕ್ರಮ ಸಂಖ್ಯೆ | ಸರ್ಕಾರಕ್ಕೆ ಸಂದಾಯ ಮಾಡಬೇಕಾದ ವಂತಿಗೆಗಳು ಮತ್ತು ಇತರ ಬಾಕಿಗಳು | ಸಂದಾಯ ಮಾಡಬೇಕಾದ ಮೊಬಲಗು | ಸರ್ಕಾರಕ್ಕೆ ಸಂದಾಯ ಮಾಡಬೇಕಾದ ವಂತಿಗೆ ಅಥವಾ ಇತರ ಬಾಕಿಗಳನ್ನು ಸಂದಾಯ ಮಾಡುವಂತೆ ಒತ್ತಾಯಿಸುವ ಬಿಲ್ಲಿನ ಅಥವಾ ಪತ್ರದ ಸಂಖ್ಯೆ ಮತ್ತು ದಿನಾಂಕ | ವಂತಿಗೆ ಅಥವಾ ಇತರ ಬಾಕಿಗಳನ್ನು ಸಂದಾಯಕ್ಕಾಗಿ ಏರ್ಪಾಟು ಮಾಡಿರುವ ಲೆಕ್ಕ ಶೀರ್ಷಿಕೆ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| | | | | | |

**ನಮೂನೆ – 34**

**[67ನೇ ನಿಯಮವನ್ನು ನೋಡಿ]**

**ವಾರ್ಷಿಕ ವರದಿ**

1. ಪೀಠಿಕೆ
2. ಮಾರುಕಟ್ಟೆ ಪ್ರದೇಶ, ನಿಯಂತ್ರಿತ ಸರಕುಗಳು
3. ಮಳೆ ಪ್ರಮಾಣ ಮತ್ತು ಸಾಗುವಳಿಯಾಗುತ್ತಿರುವ ಭೂಮಿ – ಎಕರೆಗಳಲ್ಲಿ
4. ಲೈಸನ್ಸ್ ಪಡೆದಿರುವ ನಿರ್ವಾಹಕರುಗಳು – 5 ವರ್ಷಗಳ ಲೈಸನ್ಸ್ ಫೀಜು
5. ಬಂದಿರುವ ಸರಕುಗಳ ಮತ್ತು ಅವುಗಳ ಮೌಲ್ಯ–ಮುಖ್ಯ ಸರಕುಗಳಿಗೆ ಸಂಬಂಧಪಟ್ಟ ಮಾಸಿಕ ಅಂಕಿಗಳು (ಐದು ವರ್ಷಗಳಿಗೆ)
6. ವಾರ್ಷಿಕ ವಹಿವಾಟು (ಐದು ವರ್ಷಗಳಿಗೆ)
7. ಮಾರುಕಟ್ಟೆ ಫೀಜು – ದರ – ಆದಾಯ (ಐದು ವರ್ಷಗಳಿಗೆ)
8. ಮಾಸಿಕ ಮಾರುಕಟ್ಟೆ ಬೆಲೆಗಳು – ಸರ್ವೇಸಾಧಾರಣ ಬೆಲೆಗಳು
9. ಎಣ್ಣೆ ಗಿರಣಿಗಳು ಮತ್ತು ಇತರ ಸಂಸ್ಕರಣ ಉದ್ದಿಮೆಗಳು ಹಾಗೂ ಅವುಗಳ ವಾರ್ಷಿಕ ವಹಿವಾಟು
10. ಸಹಕಾರಿ ಸಂಘಗಳ ಮೂಲಕ ಮಾರಾಟಗಳು : ಒಟ್ಟು ವಹಿವಾಟಿಗೆ ಸಂಬಂಧಿಸಿದಂತೆ ಅನುಪಾತ
11. ಮಾರುಕಟ್ಟೆ ವ್ಯವಹಾರದ ಚಾರ್ಜುಗಳು
12. ಸರಕುಗಳ ಚಲನ ವಲನ
13. ರಫ್ತುಗಳು
14. ಮಾರಾಟ ವಿಧಾನ
15. ಒಪ್ಪಂದಗಳು
16. ನಿಯಂತ್ರಿಸಬೇಕಾದ ಹೆಚ್ಚಿನ ಸರಕುಗಳು
17. ಮಾರುಕಟ್ಟೆ ಪ್ರದೇಶದ ವಿಸ್ತರಣೆ
18. ಮಾರಾಟ ಪ್ರಾಂಗಣಗಳು
19. ಉಪಪ್ರಾಂಗಣಗಳಲ್ಲಿ ಸರಕುಗಳು ಬರುವಿಕೆ ಮತ್ತು ಅವುಗಳ ಮಾರಾಟಗಳು
20. ಗ್ರಾಮದಲ್ಲಿ ಮಾರಾಟಗಳು ಮತ್ತು ಪ್ರಚಾರ
21. ವಸ್ತು ಪ್ರದರ್ಶನಗಳು ಮತ್ತು ಮಾರಾಟ ಮಳಿಗೆಗಳು
22. ನ್ಯಾಯಾಲಯ ಮೊಕದ್ದಮೆಗಳು
23. ಲೈಸನ್ಸ್‌ಗಳ ರದ್ದಿಯಾತಿ
24. ವಿವಾದಗಳು
25. ಉಪವಿಧಿಗಳ ತಿದ್ದುಪಡಿಗಳು
26. ಸಭೆಗಳು
27. ಚುನಾವಣೆಗಳು
28. ಲೆಕ್ಕಪರಿಶೋಧನೆ
29. ಗಣ್ಯ ಸಂದರ್ಶಕರು
30. ಸಮಾರೋಪ

**ನಮೂನೆ – 35**

**[ನಿಯಮ 74]**

**............. ಮಾರುಕಟ್ಟೆ ಸಮಿತಿ**

**ಸಾಮಾನ್ಯ ರಸೀತಿ**

ಪುಸ್ತಕ ಸಂಖ್ಯೆ : ರಸೀತಿ ಸಂಖ್ಯೆ

ದಿನಾಂಕ.......

. ..................... ಸಂಬಂಧದಲ್ಲಿ ................ ಇವರಿಂದ ..................... ರೂ.ಗಳನ್ನು (............................................. ಅಕ್ಷರಗಳಲ್ಲಿ) ಸ್ವೀಕರಿಸಲಾಗಿದೆ.

ಕಾರ್ಯದರ್ಶಿಯ ಸಹಿ.

**ನಮೂನೆ – 35ಎ**

**(ನಿಯಮ 74ಎ)**

**.................................................. ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ**

**ಪ್ರಮಾಣ ಪತ್ರ**

(ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ 65ನೇ ಪ್ರಕರಣದ ಮೇರೆಗೆ ಮಾರುಕಟ್ಟೆ ಫೀಜನ್ನು ವಸೂಲಿ ಮಾಡಿದ ಬಗ್ಗೆ)

ಪುಸ್ತಕ ಸಂಖ್ಯೆ : ರಸೀತಿ ಸಂಖ್ಯೆ............

ವೇಳೆ: ದಿನಾಂಕ................

1. ವ್ಯಾಪಾರಿ : ರಫ್ತುದಾರನ ಹೆಸರು ಮತ್ತು ವಿಳಾಸ
2. ವಾಹನ : ಲಾರಿ : ವ್ಯಾನು ಮುಂತಾದವುಗಳ ನೋಂದಣಿ ಸಂಖ್ಯೆ
3. ಯಾರಿಂದ ಖರೀದಿಸಲಾಗಿದೆ, ಅವರ ವಿಳಾಸದೊಂದಿಗೆ
4. ಯಾರಿಗೆ ಸಾಗಣೆ ಮಾಡಲಾಗಿದೆ, ಅವರ ವಿಳಾಸದೊಂದಿಗೆ
5. ಸಾಗಣೆಯಲ್ಲಿರುವ ಕೃಷಿ ಉತ್ಪನ್ನದ ವಿವರಣೆ
   (ಎ) ವ್ಯಾಪಾರ ಸರಕಿನ ಹೆಸರು
   (ಬಿ) ಪರಿಮಾಣ : ತೂಕ
   (ಸಿ) ಮೊತ್ತ (ರೂಪಾಯಿಗಳಲ್ಲಿ)
6. ಮಾರುಕಟ್ಟೆ ಫೀಜನ್ನು ಸಂದಾಯ ಮಾಡಿದ್ದರೆ, ಅದರ ವಿವರಗಳು
   (ರಸೀತಿ ಸಂಖ್ಯೆ ಮತ್ತು ದಿನಾಂಕ, ಮುಂತಾದವು)
7. ಖರೀದಿಯ : ಮಾರಾಟದ ಬಿಲ್ ಸಂಖ್ಯೆ ಮತ್ತು ದಿನಾಂಕ
8. ಜಾರಿಯಲ್ಲಿರುವ ಅವಧಿ

.................. ನೇ ಸಾಲಿನ ............. ತಿಂಗಳ .............. ದಿನದ .................... ಗಂಟೆಗಳಿಂದ .................. ನೇ ಸಾಲಿನ ............ ತಿಂಗಳ .................... ದಿನದ ....................... ಗಂಟೆಗಳವರೆಗೆ

ಟಿಪ್ಪಣಿ: ಈ ಪ್ರಮಾಣ ಪತ್ರವು ಮೇಲೆ ನಿರ್ದಿಷ್ಟಪಡಿಸಿದ ಅವಧಿಯವರೆಗೆ ಮಾತ್ರ ಸಿಂಧುವಾಗಿರುತ್ತದೆ. ಇದನ್ನು ವರ್ಗಾಯಿಸುವಂತಿಲ್ಲ.

(ಹೆಸರು .....................)

ಕಾರ್ಯದರ್ಶಿ

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಸ್. ಇಂದುಮತಿ

ಸರ್ಕಾರದ ಅಧೀನ ಕಾರ್ಯದರ್ಶಿ

[1] [**ನಮೂನೆ – 36**][1]

1. ಅಧಿಸೂಚನೆ ಸಂಖ್ಯೆ ಆರ್‌ಡಿಸಿ – 265 ಎಂಎಂಡಿ–84 ದಿನಾಂಕ: 7–4–88ರ ಮೂಲಕ ಪ್ರತಿಯೋಜಿಸಲಾಗಿದೆ.

**[76 (4)ನೇ ನಿಯಮವನ್ನು ನೋಡಿ]**

ಸಂಖ್ಯೆ : ......................

........................ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು, 1968ರ 76(4)ನೇ ನಿಯಮದ ಮೇರೆಗೆ .............................. ಜಿಲ್ಲೆಯ ......................... ತಾಲ್ಲೂಕಿನ .............................. ಸ್ಥಳದಲ್ಲಿ ವಾಸವಾಗಿರುವ ..................................................... ಇವರ ಮಗ ಶ್ರೀ ..................................... ಇವರಿಗೆ

| | | |
|---|---|---|
| * ವ್ಯಾಪಾರಿ | : | ಆಮದುದಾರ |
| ಕಮೀಷನ್ ಏಜೆಂಟ್ | : | ಜಿನ್ನರ್ |
| ದಳ್ಳಾಳಿ (ಬ್ರೋಕರ್) | : | ಪ್ರೆಸ್ಸರ್ |
| ಸಂಸ್ಕರಣಕಾರ | : | ಕ್ರಷರ್ |
| ರಫ್ತುದಾರ | : | ದಾಸ್ತಾನುದಾರ : [1][ಉಗ್ರಾಣಪಾಲಕ][1] |
| | : | ಚಿಲ್ಲರೆ ವ್ಯಾಪಾರಿ : – |

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯು 174 ಎಂಆರ್‌ಇ 91 ದಿನಾಂಕ: 27-1-1994ರ ಮೂಲಕ ಸೇರಿಸಲಾಗಿದೆ.

ಎಂದು [1][....... ನೇ ಸಾಲಿನ ಮಾರ್ಚ್ 31][1] ಕ್ಕೆ ಅಂತ್ಯವಾಗುವ ಮಾರುಕಟ್ಟೆ ವರ್ಷಕ್ಕಾಗಿ ಲೈಸೆನ್ಸನ್ನು ನೀಡಲಾಗಿದೆ ಮತ್ತು ಸದರಿ ಲೈಸೆನ್ಸು ಈ ಅಧಿನಿಯಮದಲ್ಲಿ, ನಿಯಮಗಳಲ್ಲಿ ಮತ್ತು ಉಪವಿಧಿಗಳಲ್ಲಿ ಹೇಳಿರುವ ಷರತ್ತುಗಳಿಗೆ ಮತ್ತು ಸಮಿತಿಯು ವಿಧಿಸಬಹುದಾದಂಥ ಇತರ ಷರತ್ತುಗಳಿಗೆ ಮತ್ತು 76ನೇ ನಿಯಮದ (40)ನೇ ಉಪನಿಯಮದ ಮೇರೆಗೆ ಬರೆದು ಕೊಡಬೇಕಾದ ಒಪ್ಪಂದದ ನಿಬಂಧನೆಗಳಿಗೊಳಪಟ್ಟಿರುತ್ತದೆ.

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯು 174 ಎಂಆರ್ಇ 91 ದಿನಾಂಕ: 27-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

ಕಾರ್ಯದರ್ಶಿ ಅಧ್ಯಕ್ಷರು.

ಮೊಹರು :

ದಿನಾಂಕ :

* (ಅಗತ್ಯವಿಲ್ಲದಿರುವುದನ್ನು ಹೊಡೆದು ಹಾಕಿ).

## [1][ನಮೂನೆ - 37][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯು 174 ಎಂಆರ್ಇ 91 ದಿನಾಂಕ: 27-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

**[ನಿಯಮ 79(2)ನೋಡಿ]**

ಸಂ : ........

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ....................

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ), ನಿಯಮಗಳು, 1968ರ ನಿಯಮ 79(2)ರ ಪ್ರಕಾರ ........................................... ಇವರ ಮಗನಾದ ಮತ್ತು ................................ ಜಿಲ್ಲೆಯ ...................... ತಾಲ್ಲೂಕಿನ ............................ ನಿವಾಸಿಯಾದ ಶ್ರೀ ...................... ............................... ಇವರಿಗೆ

*ತೂಕದಾರನಾಗಿ ಎತ್ತಿನ ಗಾಡಿಯವನಾಗಿ

ಅಳತೆದಾರನಾಗಿ ಲಾರಿ ಮಾಲೀಕನಾಗಿ

ಸರ್ವೇಯರ್‌ನಾಗಿ ಪಬ್ಲಿಕ್ ಕ್ಯಾರಿಯರ್ ವಾಹನದ

ಹಮಾಲಿಯಾಗಿ ಮಾಲೀಕನಾಗಿ

ಸಮಿತಿಯು ನಿರ್ದಿಷ್ಟಪಡಿಸಿರುವ ಷರತ್ತುಗಳಿಗೆ ಮತ್ತು 79ನೇ ನಿಯಮದ (2)ನೇ ಉಪನಿಯಮದ ಮೇರೆಗೆ ಬರೆದುಕೊಟ್ಟ ಒಪ್ಪಂದದ ನಿಬಂಧನೆಗಳಿಗೆ ಒಳಪಟ್ಟು 31ನೇ ಮಾರ್ಚ್ 19 .... ಕ್ಕೆ ಅಂತ್ಯಗೊಳ್ಳುವ ಮಾರುಕಟ್ಟೆ ವರ್ಷದ ಬಗ್ಗೆ ಲೈಸನ್ಸ್ ನೀಡಲಾಗಿದೆ.

ಕಾರ್ಯದರ್ಶಿ ಅಧ್ಯಕ್ಷರು.

ಮೊಹರು :

ದಿನಾಂಕ :

* (ಅನ್ವಯವಾಗದಿರುವುದನ್ನು ಒಡೆದುಹಾಕಿ)

## [1][ನಮೂನೆ - 38][1]

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 74 ದಿನಾಂಕ: 12-3-1971ರ ಮೂಲಕ ಸೇರಿಸಲಾಗಿದೆ.

**[88ಎ (1) ನಿಯಮವನ್ನು ನೋಡಿ]**

**ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯ ಸದಸ್ಯತ್ವಕ್ಕೆ ಚುನಾವಣೆ.**

. ........................... ಜಿಲ್ಲೆಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಅಧ್ಯಕ್ಷನಾಗಿರುವ ................................................... ಎಂಬ ನಾನು, ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯ ಸದಸ್ಯತ್ವ ಚುನಾವಣೆಗೆ ಒಬ್ಬ ಅಭ್ಯರ್ಥಿಯಾಗಿ ನಾಮಪತ್ರ ಸಲ್ಲಿಸುತ್ತಿದ್ದೇನೆ.

ದಿನಾಂಕ:

ಅಭ್ಯರ್ಥಿಯ ಸಹಿ.

## [1][ನಮೂನೆ - 39][1]

1. ಅಧಿಸೂಚನೆ ಸಂಖ್ಯೆ ಜಿಎಸ್ಆರ್ 74 ದಿನಾಂಕ: 12-3-1971ರ ಮೂಲಕ ಸೇರಿಸಲಾಗಿದೆ.

**[88ಎಫ್ (3) ನಿಯಮವನ್ನು ನೋಡಿ]**

**ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯ ಚುನಾವಣೆಯ ಮತಪತ್ರ**

ಮತಪತ್ರದ ಪಕ್ಕ ಪ್ರತಿ
ಪ್ರತಿಯ ಕ್ರಮ ಸಂಖ್ಯೆ

..................................................................................

| ಅಭ್ಯರ್ಥಿಯ ಕ್ರಮಸಂಖ್ಯೆ | ಅಭ್ಯರ್ಥಿಯ ಹೆಸರು | ಮತದಾರನು ಮಾಡುವ ಗುರುತು |
|---|---|---|

1. ............................................................
2. ............................................................
3. ............................................................
4. ............................................................

**ಮತದಾರರಿಗೆ ಸೂಚನೆ**

1. ನೀವು ಒಂದು ಮತವನ್ನು ಚಲಾಯಿಸಬೇಕು.

[1][2. ನೀವು ಯಾವ ಅಭ್ಯರ್ಥಿಯ ಪರವಾಗಿ ಮತ ಚಲಾಯಿಸಲು ಇಚ್ಛಿಸುತ್ತೀರೋ ಆ ಅಭ್ಯರ್ಥಿಯ ಹೆಸರಿನ ಎದುರಿಗೆ ಗುರುತು ಹಾಕಲು ನೀಡಿರುವ ಉಪಕರಣದಿಂದ ಒಂದು ಗುರುತು ಹಾಕಿರಿ.][1]

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ: 27-1-1994ರ ಮೂಲಕ ಪ್ರತಿಯೋಜಿಸಲಾಗಿದೆ.

3. ಒಬ್ಬ ಅಭ್ಯರ್ಥಿಗಿಂತ ಹೆಚ್ಚಿನವರಿಗೆ ಮತ ನೀಡಕೂಡದು.

4. ನೀವು ಯಾರೇ ಅಭ್ಯರ್ಥಿಗೆ ಮತ ಚಲಾಯಿಸಿದ್ದೀರೆಂಬ ಬಗ್ಗೆ ಸಂದೇಹ ಬಾರದಂತೆ, ಸ್ಪಷ್ಟವಾಗಿ ಗುರುತು ಮಾಡಿರಿ. ನೀವು ಯಾವ ಅಭ್ಯರ್ಥಿಗೆ ಮತ ಚಲಾಯಿಸಿದ್ದೀರೆಂಬುದು ಸಂದೇಹವಾಗುವಂತೆ ಗುರುತು ಮಾಡಿದ್ದಲ್ಲಿ ಮತವು ಅಸಿಂಧುವಾಗುವುದು.

**[1][ನಮೂನೆ – 40][1]**

1. ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 74 ದಿನಾಂಕ: 12–3–1971ರ ಮೂಲಕ ಸೇರಿಸಲಾಗಿದೆ.

**[88ಜಿ (8) ನಿಯಮವನ್ನು ನೋಡಿ]**

**ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯ ಸದಸ್ಯತ್ವದ ಚುನಾವಣೆಯ ವಿವರ ಪಟ್ಟಿ**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ಅಭ್ಯರ್ಥಿಯು ಪಡೆದ ಕ್ರಮಬದ್ಧ ಮತಗಳ ಸಂಖ್ಯೆ |
|---|---|---|

ಚಲಾಯಿಸಲಾದ ಮತಗಳಲ್ಲಿ ಕ್ರಮಬದ್ಧ ಮತಗಳ ಸಂಖ್ಯೆ:
ತಿರಸ್ಕ ೃತ ಮತಗಳ ಒಟ್ಟು ಸಂಖ್ಯೆ:

............................ ಜಿಲ್ಲೆಯ .................... ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಅಧ್ಯಕ್ಷರಾದ .................................. ಇವರು ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯ ಸದಸ್ಯರಾಗಿ ಚುನಾಯಿತರಾಗಿದ್ದಾರೆಂದು ನಾನು ಘೋಷಿಸುತ್ತೇನೆ.

ರಿಟರ್ನಿಂಗ್ ಆಫೀಸರ್.

**1[ನಮೂನೆ – 41]1**

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 174 ಎಂಆರ್‌ಇ 91 ದಿನಾಂಕ: 27-1-1994ರ ಮೂಲಕ ನಮೂನೆ ಸಂಖ್ಯೆ 41, 42, 43, 44 ಮತ್ತು 45ನ್ನು ಸೇರಿಸಲಾಗಿದೆ.

**[71 (2) (1)ನೇ ನಿಯಮದೊಡನೆ ಓದಲಾದ 72 (1)ನೇ ಪ್ರಕರಣವನ್ನು ನೋಡಿ]**

**ವ್ಯಾಪಾರಿಗಳು : ಕಮಿಷನ್ ಏಜೆಂಟರು : ದಳ್ಳಾಳಿಗಳು(ಬ್ರೋಕರ್‌ಗಳು): ರಫ್ತುದಾರರು : ಆಮದುದಾರರು : ದಾಸ್ತಾನುದಾರರು/ ಉಗ್ರಾಣಪಾಲಕರು : ಜಿನ್ನರ್‌ಗಳು : ಪ್ರೆಸ್ಸರ್‌ಗಳು : ಕ್ರಷರ್‌ಗಳು : ಸಂಸ್ಕರಣಕಾರರು: ಲೈಸೆನ್ಸ್ ನೀಡಿಕೆಗೆ: ನವೀಕರಣ ಕೋರಿ ಸಲ್ಲಿಸತಕ್ಕ ಅರ್ಜಿ ನಮೂನೆ**

ಕಾರ್ಯದರ್ಶಿ,
ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ,
................ ಇವರಿಗೆ.

ಮಾನ್ಯರೆ,

20..... ನೇ ಸಾಲಿನ ಮಾರ್ಚ್ 31ಕ್ಕೆ ಅಂತ್ಯಗೊಳ್ಳುವ ಮಾರುಕಟ್ಟೆ ವರ್ಷದ ಅವಧಿಯಲ್ಲಿ ವ್ಯಾಪಾರಿಗಳಾಗಿ : ಕಮಿಷನ್ ಏಜೆಂಟರಾಗಿ : ದಳ್ಳಾಳಿಗಳಾಗಿ (ಬ್ರೋಕರ್): ರಫ್ತುದಾರನಾಗಿ: ಆಮದುದಾರರಾಗಿ: ದಾಸ್ತಾನುದಾರರಾಗಿ:

ಉಗ್ರಾಣಪಾಲಕರಾಗಿ :ಜಿನ್ನರ್‌ಗಳಾಗಿ : ಪ್ರೆಸ್ಸರಗಳಾಗಿ: ಕ್ರಷರ್‌ಗಳಾಗಿ : ಸಂಸ್ಕರಣಕಾರರಾಗಿ – ವ್ಯವಹರಿಸಲು ಲೈಸನ್ಸ್ ನೀಡಿಕೆಗಾಗಿ : ನವೀಕರಣಕ್ಕಾಗಿ ನಾನು : ನಾವು ಈ ಮೂಲಕ ಅರ್ಜಿ ಸಲ್ಲಿಸುತ್ತಿದ್ದೇನೆ:ವೆ.

ಸಂಬಂಧಪಟ್ಟ ವಿವರಗಳು ಈ ಕೆಳಕಂಡಂತಿವೆ:

1. ಅರ್ಜಿದಾರನ ವ್ಯವಹಾರದ ಹೆಸರು
   (i) ಅರ್ಜಿದಾರನು (ಅಪ್ರಾಪ್ತ ವಯಸ್ಕನಾಗಿರುವಲ್ಲಿ) ಸಹಿ ಹಾಕಿರುವವನ ಜೊತೆ ಅವನ ಸಂಬಂಧ :
2) ಅರ್ಜಿದಾರನ/ ಸಹಿ ಹಾಕುವವನ ಹೆಸರು ಮತ್ತು ವಿಳಾಸ :
   i) ವ್ಯಾಪಾರ ಸ್ಥಳದ ಹೆಸರು ಮತ್ತು ವಿಳಾಸ ಮತ್ತು ದೂರವಾಣಿ ಇದ್ದರೆ ಅದರ ಸಂಖ್ಯೆ
   ii) ಮನೆಯ ವಿಳಾಸ ಮತ್ತು ದೂರವಾಣಿ ಇದ್ದರೆ ಅದರ ಸಂಖ್ಯೆ
3) ಅರ್ಜಿದಾರನ ತಂದೆ/ ಗಂಡನ ಹೆಸರು ಮತ್ತು ಜನ್ಮ ದಿನಾಂಕ
4) ಅರ್ಜಿದಾರನ ಸ್ಥಾನಮಾನ (ವ್ಯಕ್ತಿ ಅಥವಾ ಪಾಲುಗಾರಿಕೆ ಫರ್ಮ್ ಅಥವಾ ಸಹಕಾರ ಸಂಘ ಅಥವಾ ಅವಿಭಾಜ್ಯ ಹಿಂದು ಕುಟುಂಬ ಅಥವಾ ಸಂಸ್ಥೆ ಅಥವಾ ಕಂಪನಿ ಅಥವಾ ನಿಗಮ ಅಥವಾ ಮಂಡಲಿ ಅಥವಾ ಇತರ ಯಾವುದೇ ಸ್ಥಾನಮಾನವನ್ನು ಹೊಂದಿರತಕ್ಕವನೇ ಎಂಬುದನ್ನು ತಿಳಿಸಿ)
   ಎ) ಅರ್ಜಿದಾರನು – ವ್ಯಕ್ತಿಯಾಗಿರುವಲ್ಲಿ ಅಪ್ರಾಪ್ತ ವಯಸ್ಕನಾಗಿದ್ದರೆ ಈ ಅರ್ಜಿಗೆ ಸಹಿ ಮಾಡಿರುವ ಅವನ ಪಾಲಕನು ಸ್ವಾಭಾವಿಕ ಪಾಲಕನೇ ಅಥವಾ ನ್ಯಾಯಾಲಯವು ನೇಮಕ ಮಾಡಿರುವ ಪಾಲಕನೇ ಎಂಬುದನ್ನು ತಿಳಿಸಿ.
   (ಬಿ) ಪಾಲುದಾರಿಕೆ ಫರ್ಮು ಆಗಿರುವಲ್ಲಿ, ಪಾಲುದಾರನ:ರ ಹೆಸರುಗಳನ್ನು ನಮೂದಿಸಬೇಕು ಮತ್ತು ನೋಂದಣಿ ಪ್ರಮಾಣ ಪತ್ರವನ್ನು : ಪಾಲುದಾರಿಕೆ ಪತ್ರವನ್ನು ಲಗತ್ತಿಸಬೇಕು.
   (ಸಿ) ಕಂಪನಿ, ಸಂಘ, ಮಂಡಲಿ ಅಥವಾ ನಿಗಮ ಆಗಿರುವಲ್ಲಿ ಅದರ ಅಧ್ಯಕ್ಷ ಸಭಾಪತಿ : ನಿರ್ದೇಶಕರು ಮತ್ತು ವ್ಯವಸ್ಥಾಪಕರು: ವ್ಯವಸ್ಥಾಪಕ ಏಜೆಂಟರು ಯಾರಾದರೂ ಇದ್ದರೆ ಆ ವ್ಯವಸ್ಥಾಪಕನ ಏಜೆಂಟರು – ಇವರ ಹೆಸರುಗಳನ್ನು ನಮೂದಿಸಿ. ಈ ಎಲ್ಲ ಸಂದರ್ಭಗಳಲ್ಲಿ ಸಮಗ್ರ ಮುಖ್ತ್ಯರನಾಮೆಯ (ಪವರ್ ಆಫ್ ಅಟಾರ್ನಿ) ಮೂಲಕ ಅಥವಾ ನಿರ್ಣಯದ ಮೂಲಕ ಅಥವಾ ಇತರ ಯಾವುದೇ ರೀತಿಯಲ್ಲಿ ವ್ಯವಹಾರ ನಡೆಸಲು ಅಧಿಕೃತರಾದ ಏಜೆಂಟರ ಅಥವಾ ವ್ಯಕ್ತಿಗಳ ಹೆಸರುಗಳನ್ನು ನಮೂದಿಸಿ.
   (ಡಿ) ಇತರ ಸಂದರ್ಭಗಳಲ್ಲಿ ಮಾಲೀಕರ ಅಥವಾ ವ್ಯವಸ್ಥಾಪಕರಾಗಿರುವ ವ್ಯಕ್ತಿಗಳ ಹೆಸರುಗಳನ್ನು ನಮೂದಿಸಿ.
   ಇ) ಅವಿಭಕ್ತ ಹಿಂದು ಕುಟುಂಬದ ಫರ್ಮು ಆಗಿರುವಲ್ಲಿ, ಪ್ರತಿಯೊಬ್ಬ ಸದಸ್ಯನ ಮತ್ತು ವ್ಯವಸ್ಥಾಪಕನ ಹೆಸರುಗಳನ್ನು ಮತ್ತು ಅವರ ವಯಸ್ಸನ್ನು ನಮೂದಿಸಿ.
   ಎಫ್) ಕೃಷಿ ಉತ್ಪನ್ನಗಳ ವ್ಯವಹಾರ ನಡೆಸುತ್ತಿರುವ ಯಾವ ಇತರ ಫರ್ಮ್‌ಗಳಲ್ಲಿ ಅಥವಾ ಕಂಪನಿಗಳಲ್ಲಿ ಅರ್ಜಿದಾರನು ಅಥವಾ ಅರ್ಜಿದಾರ ಫರ್ಮಿನ ಪಾಲುದಾರನು ಅಥವಾ ಅರ್ಜಿದಾರ ಕಂಪನಿಯ ನಿರ್ದೇಶಕನು ಪಾಲುದಾರನಾಗಿರುವನೋ ಅಥವಾ ಸಂದರ್ಭಾನುಸಾರ ನಿರ್ದೇಶಕನಾಗಿರುವನೋ ಆ ಇತರ ಫರ್ಮುಗಳ ಅಥವಾ ಕಂಪನಿಗಳ ಹೆಸರುಗಳನ್ನು ನಮೂದಿಸಿ ಮತ್ತು ಅಗತ್ಯ ವಿವರಗಳನ್ನು ಒದಗಿಸಿ.

5) ಅರ್ಜಿದಾರನು ವ್ಯಾಪಾರ ನಡೆಸಲು ಉದ್ದೇಶಿಸಿರುವ ಕೃಷಿ ಉತ್ಪನ್ನ.

6) ಅರ್ಜಿದಾರನು, ಯಾವನೇ ಉತ್ಪಾದಕನಿಗೆ : ಮಾರಾಟಗಾರನಿಗೆ ತನ್ನ ವ್ಯವಹಾರಕ್ಕೆ ಸಂಬಂಧಿಸಿದಂತೆ ಯಾವುದೇ ಬಾಕಿ ಸಂದಾಯ ಮಾಡಬೇಕಾಗಿದೆಯೇ? ಹಾಗಿದ್ದರೆ ಅಂಥ ಬಾಕಿಗಳ ವಿವರಗಳನ್ನು ನೀಡಿ.

7) ಅರ್ಜಿದಾರನು ಅಧಿನಿಯಮದ 85ನೇ ಅಥವಾ 86ನೇ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಹಾಗೆ ಸಂದರ್ಭಾನುಸಾರ ಮಾರುಕಟ್ಟೆ ಸಮಿತಿಯ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿರುವಂತೆ ಮಾರುಕಟ್ಟೆ ಸಮಿತಿಯಲ್ಲಿ ನಗದು ಭದ್ರತೆಯನ್ನು ಠೇವಣಿ ಇಟ್ಟಿರುವನೆ? ಅಥವಾ ಮಾರುಕಟ್ಟೆ ಸಮಿತಿಗೆ ಬ್ಯಾಂಕ್ ಖಾತರಿಯನ್ನು ಒದಗಿಸಿದ್ದಾನೆಯೇ ? ಎಂಬ ಬಗ್ಗೆ ಪೂರ್ಣ ವಿವರಗಳನ್ನು ಕೊಡಿ.

| ನಗದು ರೂ.ಗಳು ವರೆಗೆ | ರಸೀದಿ ಸಂಖ್ಯೆ ಮತ್ತು ದಿನಾಂಕ | ಬ್ಯಾಂಕ್ ಖಾತರಿಯ ಮೊತ್ತ | ಬ್ಯಾಂಕ್ ಖಾತರಿ ಸಂಖ್ಯೆ ಮತ್ತು ದಿನಾಂಕ | ಬ್ಯಾಂಕ್‌ನ ಹೆಸರು | ಅವಧಿ ಇಂದ |
|---|---|---|---|---|---|
| 1 | 2 | 3 | 4 | 5 | 6 |

8. ಅರ್ಜಿದಾರನು ಯಾವುದೇ ಚರ : ಸ್ಥಿರ ಆಸ್ತಿಯನ್ನು ಹೊಂದಿರುವನೇ ಹಾಗಿದ್ದರೆ, ಅವುಗಳ ಮೇಲಿನ ಋಣಭಾರಗಳು ಸೇರಿ ವಿವರಗಳನ್ನು ಕೊಡಿ.

9. ಅರ್ಜಿದಾರನಲ್ಲಿ ದಾಸ್ತಾನು ಮಳಿಗೆಯ ಸೌಲಭ್ಯವಿದೆಯೇ? ಹಾಗಿದ್ದರೆ, ವಿವರಗಳನ್ನು ನೀಡಿ ಮತ್ತು ಮಾರುಕಟ್ಟೆ ಸಮಿತಿಯ ಉಪ ವಿಧಿಗಳಲ್ಲಿ ನಿರ್ದಿಷ್ಟಪಡಿಸಿರುವಂತೆ ಆ ಸೌಲಭ್ಯಗಳ ಬಗ್ಗೆ ಮಾರುಕಟ್ಟೆ ಸಮಿತಿಯಲ್ಲಿ ನೋಂದಣಿಯಾಗಿದೆಯೆ ಹೇಗೆ ಎಂಬುದನ್ನು ತಿಳಿಸಿ.

| | ಸಿಟಿಎಸ್ ಸಂ. ವಾರ್ಡ್ ಲೇನ್ | ದಾಸ್ತಾನು ಸಾಮರ್ಥ್ಯ ಚೀಲಗಳು ಎಂಟಿಎಸ್ |
|---|---|---|
| ಗೋದಾಮುಗಳು : ಸ್ವಂತದ್ದು : | | |
| ಬಾಡಿಗೆಯವು : ಗುತ್ತಿಗೆಯವು: | | |

10. ಅರ್ಜಿದಾರನು ಸಂಸ್ಕರಣ ಘಟಕವನ್ನು : ಕಾರ್ಖಾನೆಯನ್ನು ಹೊಂದಿರುವನೆ ? ಹಾಗಿದ್ದರೆ ಜಿನ್ನರ್ : ಪ್ರೆಸ್ಸರ್ :ಪ್ರೊಸೆಸರ್ : ಕ್ರಷರ್ ಇವುಗಳ ಬಗ್ಗೆ ವಿವರ ಕೊಡಿ.

| ಸಂಸ್ಕರಣಾ ಘಟಕದ : ಕಾರ್ಖಾನೆಯ ಹೆಸರು ಮತ್ತು ವಿಳಾಸ | ಸಿಟಿಎಸ್ ಸಾಮರ್ಥ್ಯ ನಂ ವಾರ್ಡ್ ಮತ್ತು ಸಿಟಿಎಸ್ ನಂಬರ್:ಲೇನ್ |
|---|---|

---------------------------------------------------------------=--------

ಸ್ವಂತದ್ದು
ಬಾಡಿಗೆಯದು
ಗುತ್ತಿಗೆಯದು

11. ಅರ್ಜಿದಾರನ ಪರವಾಗಿ ಕಾರ್ಯನಿರ್ವಹಿಸುವ ಸಹಾಯಕರ ಹೆಸರು ಮತ್ತು ವಿಳಾಸ ನಮೂದಿಸಿ.

| ಹೆಸರು | ವಯಸ್ಸು | ವಿಳಾಸ | ಮಾದರಿ ರುಜು |
|---|---|---|---|
| 1) | | | |
| 2) | | | |
| 3) | | | |
| 4) | | | |

12. ಅರ್ಜಿದಾರನು ಕ.ಮಾ.ತೆ. ಅಧಿನಿಯಮ : ಕೇಂ.ಮಾ.ತೆ. ಅಧಿನಿಯಮದ ಮೇರೆಗೆ ತನ್ನ ಹೆಸರನ್ನು/ಫರ್ಮನ್ನು ನೋಂದಾಯಿಸಿರುವನೇ? ಹಾಗಿದ್ದರೆ ವಿವರಗಳನ್ನು ಕೊಡಿ ಮತ್ತು ಆ ಬಗ್ಗೆ ಪ್ರಮಾಣೀಕೃತ ಪ್ರತಿಗಳನ್ನು ಲಗತ್ತಿಸಿ.
13. ಅರ್ಜಿದಾರನು, ಅರ್ಜಿಯನ್ನು ಲೈಸನ್ಸಿನ ನವೀಕರಣಕ್ಕಾಗಿ ಸಲ್ಲಿಸಿದ್ದರೆ ಅವನು ಹಿಂದಿನ ವರ್ಷದ ಅವಧಿಯಲ್ಲಿ ವ್ಯವಹಾರ ನಡೆಸಿರುವನೇ?
14. ಅರ್ಜಿದಾರನು, ಅರ್ಜಿಯನ್ನು ಲೈಸನ್ಸಿನ ನವೀಕರಣಕ್ಕಾಗಿ ಸಲ್ಲಿಸಿದ್ದರೆ, ಮಾರುಕಟ್ಟೆ ಸಮಿತಿಯು ಈ ಹಿಂದೆ ಅವನಿಗೆ ಮಂಜೂರು ಮಾಡಿದ ಲೈಸನ್ಸಿನ ಮೂಲ ಪ್ರಮಾಣಪತ್ರವನ್ನು ಲಗತ್ತಿಸಬೇಕು.
15. ಅರ್ಜಿದಾರನು ಚಾರ್ಜು : ವೆಚ್ಚ : ಖರ್ಚು : ಫೀಜು : ಬಾಡಿಗೆ ಲೆಕ್ಕಕ್ಕೆ ಅಥವಾ ಇತರ ಯಾವುದೇ ಲೆಕ್ಕಕ್ಕೆ ಮಾರುಕಟ್ಟೆ ಸಮಿತಿಗೆ ಯಾವುದೇ ಬಾಕಿ ಸಂದಾಯ ಮಾಡಬೇಕಾಗಿದೆಯೇ? ಹಾಗಿದ್ದರೆ ವಿವರಗಳನ್ನು ಕೊಡಿ.
16. ಇತರ ಯಾವುದೇ ಮಾಹಿತಿ.

ಅರ್ಜಿದಾರನ ಸಹಿ
ಪದನಾಮ :ಮೊಹರು.

.................................. ಎಂಬ ನಾನು ಮೇಲ್ಕಂಡ ಅರ್ಜಿಯಲ್ಲಿ ತಿಳಿಸಿರುವ ಮಾಹಿತಿಯು ನನಗೆ ತಿಳಿದಿರುವಷ್ಟರ ಮಟ್ಟಿಗೆ ಮತ್ತು ನನಗೆ ಗೊತ್ತಿರುವಷ್ಟು ಮಟ್ಟಿಗೆ ಸತ್ಯವಾದುದಾಗಿದೆ ಎಂದು ಈ ಮೂಲಕ ಘೋಷಿಸುತ್ತೇನೆ. ನಾನು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 ಮತ್ತು ನಿಯಮಗಳು 1968ರ ಮತ್ತು ನಿಮ್ಮ ಸಮಿತಿಯ ಉಪವಿಧಿಗಳು ಮತ್ತು ಸ್ಥಾಯೀ ಆದೇಶಗಳು – ಇವುಗಳ ಉಪಬಂಧಗಳನ್ನು ಮತ್ತು ಅವುಗಳ ಮೇರೆಗೆ ನೀಡಲಾದ ಲೈಸನ್ಸಿನ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಹಾಗೂ ನಿರ್ಬಂಧಗಳನ್ನು ಓದಿ ಅರ್ಥಮಾಡಿಕೊಂಡಿದ್ದೇನೆ ಮತ್ತು ನಾನು ಅವುಗಳನ್ನು ಮತ್ತು ಇನ್ನು ಮುಂದೆ ಅವುಗಳಿಗೆ ಮಾಡಲಾಗುವ ಯಾವುದೇ ತಿದ್ದುಪಡಿಗಳನ್ನು ಪಾಲಿಸುವುದಾಗಿ ಈ ಮೂಲಕ ಘೋಷಿಸುತ್ತೇನೆ.

ಇದಲ್ಲದೆ ಒಂದು ಒಪ್ಪಂದ ಪತ್ರವನ್ನು ಬರೆದುಕೊಡಲು ಮತ್ತು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯು ಕಾಲಕಾಲಕ್ಕೆ ಗೊತ್ತುಪಡಿಸುವ ಇತರ ಷರತ್ತುಗಳನ್ನು ಪಾಲಿಸಲು ಒಪ್ಪಿರುತ್ತೇನೆ.

20.....ನೇ ಸಾಲಿನ ಮಾರ್ಚ್ 31ಕ್ಕೆ ಅಂತ್ಯಗೊಳ್ಳುವ ಮಾರುಕಟ್ಟೆ ವರ್ಷದ ಬಗ್ಗೆ ಈ ದಿನ ನಗದಾಗಿ : ಡಿಮಾಂಡ್ ಡ್ರಾಫ್ಟ್ ಮೂಲಕ ....... ರೂಪಾಯಿಗಳ (......... ರೂಪಾಯಿಗಳು ಮಾತ್ರ) ಲೈಸನ್ಸ್ ಫೀಜನ್ನು ಈ ಮೂಲಕ ಸಂದಾಯ ಮಾಡಿದ್ದೇನೆ.

20.....ನೇ ಸಾಲಿನ ಮಾರ್ಚ್ 31ಕ್ಕೆ ಅಂತ್ಯಗೊಳ್ಳುವ ಮಾರುಕಟ್ಟೆ ವರ್ಷದ ಬಗ್ಗೆ ..... ....... ಲೈಸನ್ಸ್ ಅನ್ನು ನೀಡಬೇಕೆಂದು: ನವೀಕರಿಸಬೇಕೆಂದು ಕೋರುತ್ತೇನೆ.

ತಮ್ಮ ವಿಶ್ವಾಸಿ,
ಸಹಿ

ಸ್ಥಳ :
ತಾಲ್ಲೂಕು :
ಜಿಲ್ಲೆ :
ದಿನಾಂಕ :

(ಅನ್ವಯವಾಗದಿರುವುದನ್ನು ಹೊಡೆದುಹಾಕಿ)

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿದ ತರುವಾಯ ....... ದಿನಾಂಕದ........ ರಸೀದಿ ಸಂಖ್ಯೆಯ ಮೇರೆಗೆ ರೂ. ........... (......... ರೂಪಾಯಿ ಮಾತ್ರ) ಲೈಸನ್ಸ್ ಫೀಜನ್ನು ಸ್ವೀಕರಿಸಲಾಗಿದೆಯೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ

.............
ಲೆಕ್ಕಿಗನ ರುಜು.

**ನಮೂನೆ – 42**

**(76(ii)ನೇ ನಿಯಮದೊಡನೆ ಓದಲಾದ 72ನೇ ಪ್ರಕರಣ ನೋಡಿ)**

**ಚಿಲ್ಲರೆ ವ್ಯಾಪಾರಿಗಳು ಉಪಯೋಗಿಸತಕ್ಕ ಅರ್ಜಿ ನಮೂನೆ**

ಕಾರ್ಯದರ್ಶಿ,
ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ
................ ಇವರಿಗೆ.

ಮಾನ್ಯರೆ,

ನಾನು: ನಾವು ನನ್ನ : ನಮ್ಮ ಚಿಲ್ಲರೆ ಮಾರಾಟ ಲೈಸನ್ಸ್ ನೀಡಿಕೆಗಾಗಿ : ನವೀಕರಣಕ್ಕಾಗಿ ಈ ಮೂಲಕ ಅರ್ಜಿ ಸಲ್ಲಿಸುತ್ತಿದ್ದೇನೆ:ವೆ. ಸಂಬಂಧಪಟ್ಟ ವಿವರಗಳು ಕೆಳಕಂಡಂತಿವೆ.

1. ಅರ್ಜಿದಾರನ ಹೆಸರು ಮತ್ತು ಪೂರ್ಣ ವಿಳಾಸ :
2. ಫರ್ಮುಗಳ ಸಂದರ್ಭದಲ್ಲಿ ಪಾಲುದಾರರ ಹೆಸರು ಮತ್ತು ವಿಳಾಸ :
3. ವ್ಯಾವಹಾರದ : ಅಂಗಡಿಯ ಸ್ಥಳ ಮತ್ತು ಪೂರ್ಣ ವಿಳಾಸ :
4. ಮನೆಯ ವಿಳಾಸ :
5. ವ್ಯಪಾರ ಮಾಡಲು ಉದ್ದೇಶಿಸಿರುವ ಕೃಷಿ ಉತ್ಪನ್ನಗಳು :
6. ಅರ್ಜಿದಾರನು ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮದ ಮತ್ತು ಕೇಂದ್ರ ಮಾರಾಟ ತೆರಿಗೆ ಅಧಿನಿಯಮದ ಮೇರೆಗೆ ತನ್ನ ಹೆಸರನ್ನು ಅಥವಾ ಫರ್ಮನ್ನು ನೋಂದಾಯಿಸಿರುವನೇ? ಹಾಗಿದ್ದರೆ, ನೋಂದಣಿ ಸಂಖ್ಯೆ ಮತ್ತು ಇತರ ವಿವರಗಳನ್ನು ನೀಡಿ. :
7. ಕಳೆದ ಮಾರುಕಟ್ಟೆ ವರ್ಷದಲ್ಲಿ ಅರ್ಜಿದಾರನ ವಹಿವಾಟು :
8. ಅರ್ಜಿದಾರನು ಅರ್ಜಿಯನ್ನು ನವೀಕರಣಕ್ಕಾಗಿ ಸಲ್ಲಿಸಿದ್ದರೆ ಈ ಹಿಂದೆ ಮಾರುಕಟ್ಟೆ ಸಮಿತಿಯು ಮಂಜೂರು ನೀಡಿದ ಲೈಸನ್ಸಿನ ಮೂಲ ಪ್ರಮಾಣಪತ್ರವನ್ನು ಲಗತ್ತಿಸಬೇಕು.

ಅರ್ಜಿದಾರನ ಸಹಿ,

............................................. ಎಂಬ ನಾನು : ನಾವು ಮೇಲೆ ಒದಗಿಸಿರುವ ಮಾಹಿತಿಯು ನನಗೆ : ನಮಗೆ ತಿಳಿದಿರುವ ಮಟ್ಟಿಗೆ ಮತ್ತು ನನಗೆ : ನಮಗೆ ಗೊತ್ತಿರುವಷ್ಟರ ಮಟ್ಟಿಗೆ ಸತ್ಯವಾಗಿದೆಯೆಂದು ಈ ಮೂಲಕ ಘೋಷಿಸುತ್ತೇನೆ:ತ್ತೇವೆ. ನಾನು : ನಾವು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಮತ್ತು ಅದರ ಮೇರೆಗೆ ರಚಿಸಲಾದ ನಿಯಮಗಳು, 1968 ಮತ್ತು ನಿಮ್ಮ ಸಮಿತಿಯ ಉಪವಿಧಿಗಳು ಮತ್ತು ಸ್ಥಾಯೀ ಆದೇಶಗಳು – ಇವುಗಳ ಉಪಬಂಧಗಳನ್ನು ಮತ್ತು ಅವುಗಳ ಮೇರೆಗೆ ನೀಡಲಾದ ಲೈಸನ್ಸಿನ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಹಾಗೂ ನಿರ್ಬಂಧಗಳನ್ನು ಓದಿ ಅರ್ಥಮಾಡಿಕೊಂಡಿದ್ದೇನೆ : ದ್ದೇವೆ ಮತ್ತು ನಾನು: ನಾವು ಅವುಗಳನ್ನು ಮತ್ತು ಅವುಗಳಿಗೆ ಇನ್ನು ಮುಂದೆ ಮಾಡಲಾಗುವ ಯಾವುವೇ ತಿದ್ದುಪಡಿಗಳನ್ನು ಪಾಲಿಸುವುದಾಗಿ ಈ ಮೂಲಕ ಘೋಷಿಸುತ್ತೇನೆ: ತ್ತೇವೆ.

ಇದಲ್ಲದೆ ಒಂದು ಒಪ್ಪಂದ ಪತ್ರವನ್ನು ಬರೆದುಕೊಡಲು ಮತ್ತು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯು ಕಾಲಕಾಲಕ್ಕೆ ಗೊತ್ತುಪಡಿಸುವ ಇತರ ಷರತ್ತುಗಳನ್ನು ಪಾಲಿಸಲು ಸಮ್ಮತಿಸುತ್ತೇನೆ:ತ್ತೇವೆ.

20.....ನೇ ಸಾಲಿನ ಮಾರುಕಟ್ಟೆ ವರ್ಷದ ಬಗ್ಗೆ ಈ ದಿನ ನಗದಾಗಿ : ಡಿಮ್ಯಾಂಡ್ ಡ್ರಾಫ್ಟ್ ಮೂಲಕ ...... ರೂಪಾಯಿಗಳ (............ ರೂಪಾಯಿಗಳು ಮಾತ್ರ) ಲೈಸನ್ಸ್ ಫೀಜನ್ನು ಈ ಮೂಲಕ ಸಂದಾಯ ಮಾಡಿದ್ದೇನೆ: ದ್ದೇವೆ.

20..... ನೇ ಸಾಲಿನ 31ನೇ ಮಾರ್ಚ್ ಕ್ಕೆ ಅಂತ್ಯಗೊಳ್ಳುವ ಮಾರುಕಟ್ಟೆ ವರ್ಷದ ಬಗ್ಗೆ ಚಿಲ್ಲರೆ ವ್ಯಾಪಾರಿ ಲೈಸನ್ಸ್‌ನ ನೀಡಿಕೆ: ನವೀಕರಣ ಕೋರಿ : ನಾವು ಅರ್ಜಿ ಸಲ್ಲಿಸುತ್ತೇನೆ: ಸುತ್ತೇವೆ.

ಅರ್ಜಿದಾರನ ಸಹಿ.

ಸ್ಥಳ :

ತಾಲ್ಲೂಕು :

ಜಿಲ್ಲೆ :

ದಿನಾಂಕ :

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿದ ತರುವಾಯ ............ ದಿನಾಂಕದ ..... ರಸೀತಿ ಸಂಖ್ಯೆ ಮೇರೆಗೆ ರೂ....... (........ ರೂಪಾಯಿಗಳು ಮಾತ್ರ) ಲೈಸನ್ಸ್ ಫೀಜನ್ನು ಸ್ವೀಕರಿಸಿರುವುದಾಗಿ ನಾನು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಲೆಕ್ಕಿಗನ ಸಹಿ.

## ನಮೂನೆ – 43

### (76 (2)(iii)ನೇ ನಿಯಮದೊಡನೆ ಓದಲಾದ 72ನೇ ಪ್ರಕರಣ ನೋಡಿ)

### ವ್ಯಾಪಾರಿಗಳ ತಾತ್ಕಾಲಿಕ ಲೈಸನ್ಸ್‌ಗಾಗಿ ಅರ್ಜಿಯ ನಮೂನೆ

........... ಇಂದ ............ ವರೆಗಿನ ಅವಧಿಗೆ.

ಕಾರ್ಯದರ್ಶಿ.
ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ
............... ಇವರಿಗೆ

ಮಾನ್ಯರೆ,

1. ವ್ಯಾಪಾರಿಯ ಪೂರ್ಣ ಹೆಸರು
2. ತಾತ್ಕಾಲಿಕ ವಿಳಾಸ ತಾಲ್ಲೂಕು ಜಿಲ್ಲೆ
3. ಖಾಯಂ ವಿಳಾಸ ತಾಲ್ಲೂಕು ಜಿಲ್ಲೆ
4. ವ್ಯಾಪಾರ ಮಾಡಬೇಕೆಂದಿರುವ
   ಕೃಷಿ ಉತ್ಪನ್ನ
5. ಅರ್ಜಿದಾರನ ಪರವಾಗಿ ಮಾರುಕಟ್ಟೆ
   ಪ್ರದೇಶದಲ್ಲಿ ಕಾರ್ಯನಿರ್ವಹಿಸುವ
   ಇತರ ಪ್ರತಿನಿಧಿಗಳ ಅಥವಾ ಸಹಾಯಕರ
   ಹೆಸರು ಮತ್ತು ವಿಳಾಸ
   ಹೆಸರು ಮತ್ತು ವಿಳಾಸ
   (i )
   (ii)
   (iii)
   (iv)
6. ಕರ್ನಾಟಕ ಮಾರಾಟ ತೆರಿಗೆ : ಕೇಂದ್ರ
   ಮಾರಾಟ ತೆರಿಗೆ ಪ್ರಮಾಣಪತ್ರದ
   ನಕಲುಗಳನ್ನು ಲಗತ್ತಿಸಬೇಕು.

ನಾನು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 ಮತ್ತು ನಿಯಮಗಳು ಮತ್ತು ಉಪವಿಧಿಗಳು, ಸ್ಥಾಯೀ ಆದೇಶಗಳು – ಇವುಗಳನ್ನು ಮತ್ತು ಅವುಗಳ ಮೇರೆಗೆ ನೀಡಲಾದ ಲೈಸನ್ಸಿನ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಹಾಗೂ ನಿರ್ಬಂಧಗಳನ್ನು ಓದಿ ಅರ್ಥ ಮಾಡಿಕೊಂಡಿದ್ದೇನೆಂದು ಮತ್ತು ನಾನು ಅವುಗಳನ್ನು ಮತ್ತು ಅವುಗಳಿಗೆ ಇನ್ನು ಮುಂದೆ ಮಾಡಲಾಗುವ ಯಾವುವೇ ತಿದ್ದುಪಡಿಗಳನ್ನು ಪಾಲಿಸುವುದಾಗಿ ಈ ಮೂಲಕ ಘೋಷಿಸುತ್ತೇನೆ.

ಒಪ್ಪಂದವೊಂದನ್ನು ಬರೆದುಕೊಡಲು ಮತ್ತು ಸಮಿತಿಯವರಿಂದ ಗೊತ್ತುಪಡಿಸಲಾಗುವ ಯಾವುದೇ ಇತರ ಷರತ್ತುಗಳನ್ನು ಪೂರೈಸುವುದಕ್ಕೆ ನಾನು ಒಪ್ಪಿಕೊಂಡಿರುತ್ತೇನೆ.

ಇದಲ್ಲದೆ, ನಗದು ಖರೀದಿ ಮಾಡಿದ ಸರಕುಗಳನ್ನು ವಶಕ್ಕೆ ತೆಗೆದುಕೊಳ್ಳುವ ಮೊದಲು ಅವುಗಳ ಬೆಲೆಯನ್ನು ಸಂದಾಯ ಮಾಡುವುದಕ್ಕೆ ಸಹ ಒಪ್ಪಿಕೊಂಡಿರುತ್ತೇನೆ. ನನಗೆ ತಾತ್ಕಾಲಿಕ ಲೈಸನ್ಸನ್ನು ನೀಡಬೇಕೆಂದು ಕೋರುತ್ತೇನೆ.

........... ನಿಂದ ಪ್ರಾರಂಭವಾಗಿ .......... ಗೆ ಕೊನೆಗೊಳ್ಳುವ ಒಂದು ತಿಂಗಳನ್ನು ಮೀರದ ಅವಧಿಗೆ ........... ರೂ. (........... ರೂಪಾಯಿಗಳು) ಲೈಸನ್ಸು ಫೀಜನ್ನು ಈ ಮೂಲಕ ಸಂದಾಯ ಮಾಡಿದ್ದೇನೆ. ದಯವಿಟ್ಟು ಸ್ವೀಕರಿಸಬೇಕು ಮತ್ತು .......... ನಿಂದ ........ ವರೆಗಿನ ತಾತ್ಕಾಲಿಕ ಅವಧಿಗೆ ತಾತ್ಕಾಲಿಕ ಲೈಸನ್ಸನ್ನು ದಯವಿಟ್ಟು ನೀಡಬೇಕೆಂದು ಕೋರುತ್ತೇನೆ.

ಅರ್ಜಿದಾರನ ಸಹಿ.

ಸ್ಥಳ :
ತಾಲ್ಲೂಕು :
ಜಿಲ್ಲೆ :
ದಿನಾಂಕ :

ಫರ್ಮುಗಳ ಸಂದರ್ಭದಲ್ಲಿ, ಫರ್ಮಿನ ಮತ್ತು ಅದರ ಮಾಲೀಕನ, ಅಥವಾ ಅದರ ಪರವಾಗಿ ಮಾರುಕಟ್ಟೆಯಲ್ಲಿ ಕಾರ್ಯನಿರ್ವಹಿಸುವ ಪ್ರಧಾನ ಪ್ರತಿನಿಧಿಯ ಹೆಸರನ್ನು ಸೂಚಿಸಬೇಕು.

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿದ ತರುವಾಯ ............ ದಿನಾಂಕದ ........ ರಸೀತಿ ಸಂಖ್ಯೆಯ ಮೇರೆಗೆ ರೂಪಾಯಿ ............. (.................................................. ರೂಪಾಯಿ) ಲೈಸನ್ಸು ಫೀಜನ್ನು ಸ್ವೀಕರಿಸಿರುವುದಾಗಿ ನಾನು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಲೆಕ್ಕಿಗನ ಸಹಿ.

**ನಮೂನೆ – 44**

**(79 (2)(i) ರೊಂದಿಗೆ ಓದಲಾದ 72ನೇ ಪ್ರಕರಣವನ್ನು ನೋಡಿ)**

**ತೂಕದಾರರು : ಅಳತೆಗಾರರು : ಸರ್ವೇಯರರು ಲೈಸನ್ಸ್ ಕೋರಿ ಸಲ್ಲಿಸತಕ್ಕ ಅರ್ಜಿ**

**ನಮೂನೆ**

ಕಾರ್ಯದರ್ಶಿ,
ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ.
............. ಇವರಿಗೆ

ಮಾನ್ಯರೇ,

........................ ಜಿಲ್ಲೆಯ ................ ತಾಲ್ಲೂಕಿನ ........ ಸ್ಥಳದ ನಿವಾಸಿಯಾದ ........................ ಎಂಬ ನಾನು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಪ್ರದೇಶದೊಳಗಿನ ........... ಮಾರುಕಟ್ಟೆ ಪ್ರಾಂಗಣದಲ್ಲಿ : ಮಾರುಕಟ್ಟೆ ಉಪಪ್ರಾಂಗಣದಲ್ಲಿ/ಉಪಮಾರುಕಟ್ಟೆ ಪ್ರಾಂಗಣದಲ್ಲಿ ತೂಕದಾರನಾಗಿ: ಅಳತೆದಾರನಾಗಿ : ಸರ್ವೇಯರನಾಗಿ ಕಾರ್ಯನಿರ್ವಹಿಸಲು ಲೈಸನ್ಸ್ ನೀಡಿಕೆ : ನವೀಕರಣ ಕೋರಿ ಈ ಮೂಲಕ ಅರ್ಜಿ ಸಲ್ಲಿಸುತ್ತೇನೆ.

ನಾನು ........... ತರಗತಿಯವರೆಗೆ ಓದಿದ್ದೇನೆ ಮತ್ತು ಕನ್ನಡದಲ್ಲಿ ತಕ್ಕಮಟ್ಟಿಗೆ ಓದಲು ಮತ್ತು ಬರೆಯಲು ಸಮರ್ಥನಾಗಿದ್ದೇನೆ.

ಮಾರುಕಟ್ಟೆ ಪ್ರದೇಶದೊಳಗೆ ಲೈಸನ್ಸ್ ಹೊಂದಿರುವ ಯಾವನೇ ವ್ಯಾಪಾರಿಯ / ಕಮಿಷನ್ ಏಜೆಂಟನ ಅಥವಾ ದಳ್ಳಾಳಿಯ ಯಾವುದೇ ರೀತಿಯ ಸೇವೆಗೆ ಸೇರುವುದಿಲ್ಲವೆಂದು ಈ ಮೂಲಕ ಒಪ್ಪಿಕೊಂಡಿದ್ದೇನೆ.

ತೂಕ ಮಾಡುವ ಸ್ಥಳ ಮತ್ತು ವಿಧಾನ, ಸೂಕ್ತ ವಿವರಪಟ್ಟಿಕೆಗಳು, ಮುಂತಾದವುಗಳನ್ನು ದಾಖಲು ಮಾಡುವ ಮತ್ತು ಸಲ್ಲಿಸುವ ಸಂಬಂಧದಲ್ಲಿ ಮಾರುಕಟ್ಟೆ ಸಮಿತಿಯು ಕಾಲಕಾಲಕ್ಕೆ ನೀಡುವ ನಿರ್ದೇಶನಗಳಿಗೆ ಬದ್ಧನಾಗಿರುತ್ತೇನೆಂದು ಒಪ್ಪಿದ್ದೇನೆ.

ಮಾರುಕಟ್ಟೆ ಪ್ರಾಂಗಣದಲ್ಲಿ ಮಾರುಕಟ್ಟೆ ಉಪಪ್ರಾಂಗಣದಲ್ಲಿ : ಉಪಮಾರುಕಟ್ಟೆ ಪ್ರಾಂಗಣದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನವನ್ನು ತೂಕಮಾಡುವ, ಅಳತೆ ಮಾಡುವ ಸಮಯದಲ್ಲಿ ಸರ್ಕಾರವು ನಿರ್ದೇಶಿಸಿದ ರೀತಿಯಲ್ಲಿ ತೂಕದಾರನ ಅಳತೆದಾರನ ಅಥವಾ ಸರ್ವೇಯರನ ಬ್ಯಾಡ್ಜನ್ನು ನಾನು ಧರಿಸಿಕೊಳ್ಳುವೆನು.

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ ಮತ್ತು ಉಪವಿಧಿಗಳ ಹಾಗೂ ಸ್ಥಾಯಿ ಆದೇಶಗಳು ಮುಂತಾದವುಗಳ ಉಪಬಂಧಗಳನ್ನು ನಾನು ಓದಿದ್ದೇನೆ ಮತ್ತು ಅರ್ಥಮಾಡಿಕೊಂಡಿದ್ದೇನೆ ಮತ್ತು ಆ ಉಪಬಂಧಗಳಿಗೆ ಮತ್ತು ಅವುಗಳಿಗೆ ಮಾಡಲಾಗುವ ಯಾವುದೇ ತಿದ್ದುಪಡಿಗಳಿಗೆ ಸಹ ನಾನು ಬದ್ಧನಾಗಿರುತ್ತೇನೆ. ಇದಲ್ಲದೆ ಸಮಿತಿಯು ವಿಧಿಸಿದ ಲೈಸನ್ಸಿನ ನಿಬಂಧನೆಗಳು ಮತ್ತು ಷರತ್ತುಗಳಿಗೆ ಹಾಗೂ ನಿರ್ಬಂಧಗಳಿಗೆ ನಾನು ಬದ್ಧನಾಗಿರುತ್ತೇನೆ.

ನಾನು ಈಗ ಲೈಸನ್ಸು ಹೊಂದಿರುವುದಾಗಿ : ಹೊಂದಿಲ್ಲವೆಂಬುದಾಗಿ ಘೋಷಿಸುತ್ತೇನೆ ಮತ್ತು ಮಾರುಕಟ್ಟೆ ಸಮಿತಿಯು ನನಗೆ ಈ ಹಿಂದೆ ನೀಡಿದ ಲೈಸನ್ಸ್‌ನ ಮೂಲ ಪ್ರಮಾಣ ಪತ್ರವನ್ನು ಈ ಮೂಲಕ ಲಗತ್ತಿಸಿದ್ದೇನೆ.

ನಾನು, 20 .......... ರ ಮಾರುಕಟ್ಟೆ ವರ್ಷದ ಬಗ್ಗೆ ರೂ. ....... (........ ರೂಪಾಯಿಗಳು ಮಾತ್ರ) ನಗದಾಗಿ : ಡಿಮ್ಯಾಂಡ್ ಡ್ರಾಫ್ಟ್‌ನಲ್ಲಿ ಲೈಸನ್ಸಿನ ಫೀಜನ್ನು ಈ ಮೂಲಕ ಸಂದಾಯ ಮಾಡಿದ್ದೇನೆ.

20............ರ 31ನೇ ಮಾರ್ಚಿಗೆ ಕೊನೆಗೊಳ್ಳುವ ಮಾರುಕಟ್ಟೆ ವರ್ಷದ ಬಗ್ಗೆ ನನಗೆ ತೂಕಮಾಡುವವರ / ಅಳತೆ ಮಾಡುವವರ / ಸರ್ವೆಯವರ ಲೈಸೆನ್ಸನ್ನು ನೀಡಬೇಕಾಗಿ ನವೀಕರಿಸಬೇಕಾಗಿ ಕೋರುತ್ತೇನೆ.

1. ಸ್ಥಳ
2. ತಾಲೂಕು
3. ಜಿಲ್ಲೆ

ತಮ್ಮ ವಿಶ್ವಾಸಿ
ಅರ್ಜಿದಾರನ ಸಹಿ.

---

ಮೇಲ್ಕಂಡ ವಿಷಯಗಳನ್ನು ಪರಿಶೀಲಿಸಿದ ತರುವಾಯ ....... ದಿನಾಂಕ ....... ರಸೀತಿ ಸಂಖ್ಯೆಯ ಮೇರೆಗೆ ಲೈಸನ್ಸು ಫೀಜು ರೂ. ............... (........... ರೂಪಾಯಿಗಳನ್ನು) ವಸೂಲಿ ಮಾಡಲಾಗಿದೆ ಎಂದು ನಾನು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ :

................
ಲೆಕ್ಕಿಗನ ಸಹಿ.

**ನಮೂನೆ - 45**

**(79 (2)(ii)ನೇ ನಿಯಮದೊಡನೆ ಓದಲಾದ 72ನೇ ಪ್ರಕರಣವನ್ನು ನೋಡಿ)**

**ಹಮಾಲಿಗಳು : ಗಾಡಿ ಹೊಡೆಯುವವರು : ಪಬ್ಲಿಕ್ ಕ್ಯಾರಿಯರ್ ವಾಹನದ : ಟ್ರಕ್‌ನ : ಟ್ರಾಕ್ಟರ್‌ನ : ಮಾಲೀಕರು ಲೈಸನ್ಸ್ ನೀಡಿಕೆ : ನವೀಕರಣಕ್ಕೆ ಕೋರಿ ಸಲ್ಲಿಸುವ ಅರ್ಜಿ ನಮೂನೆ:**

ಕಾರ್ಯದರ್ಶಿ,
ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ.
..................... ಇವರಿಗೆ.

ಮಾನ್ಯರೇ,

.............. ಜಿಲ್ಲೆಯ .................... ತಾಲೂಕಿನ ................... ಸ್ಥಳದ ನಿವಾಸಿಯಾದ ............................. ಎಂಬ ನಾನು ...................... ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಪ್ರಾಂಗಣದಲ್ಲಿ : ಮಾರುಕಟ್ಟೆ ಪ್ರದೇಶದಲ್ಲಿ ಹಮಾಲಿ/ಗಾಡಿಹೊಡೆಯುವವರ/ಪಬ್ಲಿಕ್ ಕ್ಯಾರಿಯರ್ ವಾಹನದ/ ಟ್ರಕ್‌ನ/ಟ್ರಾಕ್ಟರ್‌ನ/ ಮಾಲೀಕನಾಗಿ ಕಾರ್ಯನಿರ್ವಹಿಸಲು ಲೈಸನ್ಸ್ ನೀಡಿಕೆ : ನವೀಕರಣೆ ಕೋರಿ ಈ ಮೂಲಕ ಅರ್ಜಿ ಸಲ್ಲಿಸುತ್ತಿದ್ದೇನೆ.

ಮಾರುಕಟ್ಟೆ ಪ್ರದೇಶದೊಳಗೆ ಲೈಸನ್ಸು ಹೊಂದಿರುವ ಯಾವನೇ ವ್ಯಾಪಾರಿಯ/ಕಮಿಷನ್ ಏಜೆಂಟನ ಅಥವಾ ದಲ್ಲಾಳಿಯ ಯಾವುದೇ ರೀತಿಯ ಸೇವೆಗೆ ಸೇರುವುದಿಲ್ಲವೆಂದು ಈ ಮೂಲಕ ಒಪ್ಪಿಕೊಂಡಿರುತ್ತೇನೆ.

ನಾನು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ 1966, ಮತ್ತು ಅದರ ಮೇರೆಗೆ ರಚಿಸಲಾದ ನಿಯಮಗಳು, ಉಪವಿಧಿಗಳ ಮತ್ತು ಸ್ಥಾಯೀ ಆದೇಶಗಳ ಉಪಬಂಧಗಳನ್ನು ಮತ್ತು ಲೈಸನ್ಸ್‌ನ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಹಾಗೂ ನಿರ್ಬಂಧಗಳನ್ನು ಓದಿಕೊಂಡಿದ್ದೇನೆ ಮತ್ತು ತಿಳಿದುಕೊಂಡಿದ್ದೇನೆ ಹಾಗೂ ಅವುಗಳಿಗೆ ಮಾಡಲಾಗುವ ಯಾವುದೇ ತಿದ್ದುಪಡಿಗಳಿಗೆ ಬದ್ಧನಾಗುವುದಾಗಿ ಒಪ್ಪಿಕೊಂಡಿದ್ದೇನೆ.

ನನ್ನ ವಾಹನದ ನೋಂದಣಿ ಸಂಖ್ಯೆ .............

ನಾನು ಈಗ ಲೈಸನ್ಸು ಹೊಂದಿರುವುದಾಗಿ : ಹೊಂದಿಲ್ಲವೆಂಬುದಾಗಿ ಘೋಷಿಸುತ್ತೇನೆ ಮತ್ತು ಮಾರುಕಟ್ಟೆ ಸಮಿತಿಯು ನನಗೆ ಈ ಹಿಂದೆ ನೀಡಿದ ಲೈಸನ್ಸ್‌ನ ಮೂಲ ಪ್ರಮಾಣಪತ್ರವನ್ನು ಈ ಮೂಲಕ ಲಗತ್ತಿಸಿದ್ದೇನೆ.

...... ಮಾರುಕಟ್ಟೆ ವರ್ಷದ ಬಗ್ಗೆ ............... ರೂ. (....... ರೂಪಾಯಿಗಳು) ಲೈಸನ್ಸ್ ಫೀಜನ್ನು ನಗದಾಗಿ : ಡಿಮ್ಯಾಂಡ್ ಡ್ರಾಫ್ಟ್‌ನಲ್ಲಿ ಈ ಮೂಲಕ ಸಂದಾಯ ಮಾಡುತ್ತೇನೆ.

20..........ರ 31ನೇ ಮಾರ್ಚಿಗೆ ಕೊನೆಗೊಳ್ಳುವ ಮಾರುಕಟ್ಟೆ ವರ್ಷದ ಬಗ್ಗೆ ನನಗೆ ಹಮಾಲಿಗಳ ಗಾಡಿ ಹೊಡೆಯುವವರ : ಪಬ್ಲಿಕ್ ಕ್ಯಾರಿಯರ್ ವಾಹನದ : ಟ್ರಕ್‌ನ: ಟ್ರಾಕ್ಟರ್‌ನ ಮಾಲೀಕರ ಲೈಸನ್ಸನ್ನು ನೀಡಬೇಕಾಗಿ: ನವೀಕರಿಸಬೇಕಾಗಿ ಕೋರುತ್ತೇನೆ.

ತಮ್ಮ ವಿಶ್ವಾಸಿ.
ಅರ್ಜಿದಾರನ ಸಹಿ

1. ಸ್ಥಳ
2. ದಿನಾಂಕ
3. ಜಿಲ್ಲೆ

ಮೇಲ್ಕಂಡ ವಿಷಯಗಳನ್ನು ಪರಿಶೀಲಿಸಿದ ತರುವಾಯ ........... ದಿನಾಂಕದ ..... ರಸೀತಿ ಸಂಖ್ಯೆಯ ಮೇರೆಗೆ ರೂ. ................... (................... ರೂ.ಗಳು) ಲೈಸನ್ಸ್ ಫೀಜನ್ನು ವಸೂಲು ಮಾಡಲಾಗಿದೆ ಎಂಬುದಾಗಿ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ

ಲೆಕ್ಕಿಗನ ಸಹಿ]1

**ಅಧಿನಿಯಮ ಮತ್ತು ನಿಯಮಗಳ ಮೇರೆಗೆ ಹೊರಡಿಸಲಾದ ಆದೇಶಗಳು ಮತ್ತು ಅಧಿಸೂಚನೆಗಳು**

**ಅಭಿವೃದ್ಧಿ, ವಸತಿ, ಪಂಚಾಯತ್ ರಾಜ್ ಮತ್ತು ಸಹಕಾರಿ ಇಲಾಖೆಗಳ ಸಚಿವಾಲಯ**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತೊಂದರೆಗಳ ನಿವಾರಣೆ) ಆದೇಶ 1968 ಆದೇಶ**

**ಬೆಂಗಳೂರು, ದಿನಾಂಕ 29ನೇ ನವೆಂಬರ್, 1968**

**ಎಸ್.ಓ. 2659:** ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 ಇದು 1968ರ ಮೇ ಒಂದನೇ ದಿನದಿಂದ ಜಾರಿಗೆ ಬಂದಿರುವುದರಿಂದ;

ಅಧಿನಿಯಮದ 4,5 ಮತ್ತು 6ನೇ ಪ್ರಕರಣಗಳ ಮೇರೆಗೆ ಕ್ರಮ ತೆಗೆದುಕೊಳ್ಳಬೇಕಾದಂಥ ಪ್ರಸ್ತಾವದ ಸಂಬಂಧದಲ್ಲಿ ಸದರಿ ಅಧಿನಿಯಮದ 112ನೇ ಪ್ರಕರಣಕ್ಕೆ ಅನುಸಾರವಾಗಿ ರಾಜ್ಯ ಕೃಷಿ ಮಾರುಕಟ್ಟೆ ಮಂಡಲಿಯೊಡನೆ ಸಮಾಲೋಚಿಸಬೇಕಾಗಿರುವುದರಿಂದ;

ಕಂದಾಯ ಜಿಲ್ಲೆಗಳ ಮಾರುಕಟ್ಟೆ ಸಮಿತಿಗಳ ಪದಾವಧಿಯು ಕೆಲವು ಪ್ರಕರಣಗಳಲ್ಲಿ ಅಂತ್ಯಗೊಂಡಿರುವುದರಿಂದ ಮತ್ತು ಇನ್ನೂ ಕೆಲವು ಪ್ರಕರಣಗಳಲ್ಲಿ ಅಂತ್ಯಗೊಳ್ಳಲಿರುವುದರಿಂದ ಮತ್ತು ಚುನಾವಣೆಗಳನ್ನು ನಡೆಸುವ ವಿಧಾನವನ್ನು ಗೊತ್ತುಪಡಿಸಲು ಮತ್ತು ಸಮಿತಿಗಳನ್ನು ಪುನಃ ರಚಿಸಲು ಕ್ರಮವನ್ನು ತೆಗೆದುಕೊಳ್ಳಲಾಗುತ್ತಿರುವುದರಿಂದ ಸದರಿ ಸಮಿತಿಗಳ ಅಧ್ಯಕ್ಷರುಗಳ ಪೈಕಿ ಸದರಿ ಮಂಡಲಿಗೆ ಸದಸ್ಯರ ಚುನಾವಣೆಯು ನಡೆಯದಿರುವ ಕಾರಣ ಸದರಿ ಮಂಡಲಿಯನ್ನು ರಚಿಸಲು ಸಾಧ್ಯವಾಗಿಲ್ಲದಿರುವುದರಿಂದ;

ಮೇಲೆ ಹೇಳಲಾದ ಕ್ರಮವನ್ನು ಪೂರ್ಣಗೊಳಿಸಲು ಕಾಲಾವಕಾಶ ಬೇಕಾಗಿರುವುದರಿಂದ ಮತ್ತು ಮೇಲೆ ಹೇಳಲಾದ 4,5 ಮತ್ತು 6ನೇ ಪ್ರಕರಣಗಳ ಮೇರೆಗೆ ಮಾರುಕಟ್ಟೆ ಪ್ರದೇಶಗಳ ಮತ್ತು ಅಲ್ಲಿ ನಿರ್ದಿಷ್ಟಪಡಿಸಿರುವ ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಹಾರದ ನಿಯಂತ್ರಣದ ಘೋಷಣೆ ಮತ್ತು ಮಾರುಕಟ್ಟೆಗಳ, ಮಾರುಕಟ್ಟೆ ಪ್ರಾಂಗಣಗಳ ಸ್ಥಾಪನೆ ಹಾಗೂ ಮಾರುಕಟ್ಟೆ ಸಮಿತಿಗಳ ರಚನೆ ಇವುಗಳ ಬಗ್ಗೆ ತುರ್ತು ಕ್ರಮ ಕೈಗೊಳ್ಳಬೇಕಾಗಿರುವುದರಿಂದ;

ಈಗ, 1966ರ ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ (1966ರ ಮೈಸೂರು ಅಧಿನಿಯಮದ 27) ಪ್ರಕರಣ 152 ಉಪಪ್ರಕರಣ (1)ರ ಮೂಲಕ ಪ್ರಧಾನ ಮಾಡಲಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ಆದೇಶವನ್ನು ಹೊರಡಿಸಿದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ಆದೇಶವನ್ನು ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತೊಂದರೆಗಳ ನಿವಾರಣೆ) ಆದೇಶ, 1968 ಎಂದು ಕರೆಯತಕ್ಕದ್ದು.

(2) ಇದು ಕೂಡಲೇ ಜಾರಿಗೆ ಬರತಕ್ಕದ್ದು.

**2. ಮಾರುಕಟ್ಟೆ ಪ್ರದೇಶಕ್ಕೆ ಸಂಬಂಧಿಸಿದ ಘೋಷಣೆ ಇತ್ಯಾದಿಗಳಿಗೆ ಸಂಬಂಧಿಸಿದ ಉಪಬಂಧ.–** ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ 112ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ರಾಜ್ಯ ಸರ್ಕಾರವು ಅಥವಾ ಸಂದರ್ಭಾನುಸಾರ ಮುಖ್ಯ ಮಾರುಕಟ್ಟೆ ಅಧಿಕಾರಿಯು ಸದರಿ ಅಧಿನಿಯಮದ 4,5 ಮತ್ತು 6ನೇ ಪ್ರಕರಣಗಳ ಮೇರೆಗೆ ಅಧಿಕಾರಗಳನ್ನು ಚಲಾಯಿಸಲು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸಲು ಅಧಿಕಾರ ಹೊಂದಿರತಕ್ಕದ್ದು.

(ಕ್ರಮಾಂಕ ಡಿಪಿಸಿ 458 ಸಿಎಂಡಿ 68)

ಮೈಸೂರು ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಆರ್. ಭರಣಯ್ಯ
ಸರ್ಕಾರದ ಕಾರ್ಯದರ್ಶಿ
ಅಭಿವೃದ್ಧಿ, ವಸತಿ, ಪಂಚಾಯತ್ ರಾಜ್ ಮತ್ತು ಸಹಕಾರ
ಇಲಾಖೆ.

**ಮೈಸೂರು ಸರ್ಕಾರ**

ಕ್ರಮಾಂಕ : ಡಿಪಿಸಿ 468 ಸಿಎಂಡಿ 68.

ಮೈಸೂರು ಸರ್ಕಾರದ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು,
ದಿನಾಂಕ 19ನೇ ಜುಲೈ 1969.

**ಅಧಿಸೂಚನೆ – II**

ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) 67ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮೈಸೂರು ಸರ್ಕಾರವು, ಮಾರುಕಟ್ಟೆ ಸಮಿತಿಗಳ ಕಾರ್ಯದರ್ಶಿಗಳಿಗೆ ಸದರಿ ಉಪಪ್ರಕರಣದ ಉದ್ದೇಶಕ್ಕಾಗಿ ಈ ಮೂಲಕ ಅಧಿಕಾರ ನೀಡುತ್ತದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ.
ಎನ್. ನರಸಿಂಹರಾವ್
ಸರ್ಕಾರದ ಕಾರ್ಯದರ್ಶಿ
ಅಭಿವೃದ್ಧಿ, ವಸತಿ, ಪಂಚಾಯತ್ ರಾಜ್ ಮತ್ತು ಸಹಕಾರ
ಇಲಾಖೆ.

**ಮೈಸೂರು ಸರ್ಕಾರ**

ಕ್ರಮಾಂಕ: ಡಿಪಿಸಿ 468 ಸಿಎಂಡಿ 68.

ಮೈಸೂರು ಸರ್ಕಾರದ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು,
ದಿನಾಂಕ 19ನೇ ಜುಲೈ 1969.

**ಅಧಿಸೂಚನೆ – I**

ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಮೈಸೂರು ಅಧಿನಿಯಮ 27) 66ನೇ ಪ್ರಕರಣದ (1) ಮತ್ತು (2)ನೇ ಉಪಪ್ರಕರಣಗಳ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮೈಸೂರು ಸರ್ಕಾರವು, ಮಾರುಕಟ್ಟೆ ಸಮಿತಿಗಳ ಕಾರ್ಯದರ್ಶಿಗೆ ಸದರಿ ಉಪ ಪ್ರಕರಣದ ಉದ್ದೇಶಕ್ಕಾಗಿ ಈ ಮೂಲಕ ಅಧಿಕಾರ ನೀಡುತ್ತದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ.
ಸಹಿ
ಸರ್ಕಾರದ ಕಾರ್ಯದರ್ಶಿ,
ಅಭಿವೃದ್ಧಿ, ವಸತಿ, ಪಂಚಾಯತ್ ರಾಜ್ ಮತ್ತು ಸಹಕಾರ
ಇಲಾಖೆ.

**ಮೈಸೂರು ಸರ್ಕಾರ**

ಕ್ರಮಾಂಕ: ಡಿಪಿಸಿ 457 ಸಿಎಂಡಿ 72.

ಮೈಸೂರು ಸರ್ಕಾರದ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು,
ದಿನಾಂಕ 27ನೇ ಸೆಪ್ಟೆಂಬರ್ 1972.

**ಅಧಿಸೂಚನೆ – I**

ಸರ್ಕಾರಿ ಅಧಿಸೂಚನೆ ಕ್ರಮಾಂಕ ಡಿಪಿಸಿ 238 ಸಿಎಂಡಿ 71 ದಿನಾಂಕ 31ನೇ ಆಗಸ್ಟ್ 1971 ಇದನ್ನು ರದ್ದುಗೊಳಿಸಿ ಮತ್ತು ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಮೈಸೂರು ಅಧಿನಿಯಮ 27)ರ 2ನೇ ಪ್ರಕರಣದ (7)ನೇ ಖಂಡದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮೈಸೂರು ಸರ್ಕಾರವು, ಸದರಿ ಅಧಿನಿಯಮದ 11, 71 (1), 76, 90(ಎ) 131 ಮತ್ತು 145 (2) (ಎ) – ಈ ಪ್ರಕರಣಗಳ ಉಪಬಂಧಗಳ ಮೇರೆಗೆ ಮುಖ್ಯ ಮಾರುಕಟ್ಟೆ ಅಧಿಕಾರಿಯು ಹೊಂದಿರುವ ಅಧಿಕಾರಗಳನ್ನು ಚಲಾಯಿಸಲು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸಲು, ಜಂಟಿ ಮುಖ್ಯ ಮಾರುಕಟ್ಟೆ ಅಧಿಕಾರಿಗೆ ಈ ಮೂಲಕ ಅಧಿಕಾರ ನೀಡುತ್ತದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ,
ಸಹಿ
ಸಿ.ಪಿ. ಮುನಿಯಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ
ಅಭಿವೃದ್ಧಿ, ವಸತಿ, ಪಂಚಾಯತ್ ರಾಜ್ ಮತ್ತು ಸಹಕಾರ
ಇಲಾಖೆ.

**ಅಧಿಸೂಚನೆ ಕ್ರಮಾಂಕ ಆರ್‌ಡಿಸಿ 96 ಎಂಎಂಡಿ 76**

**ಬೆಂಗಳೂರು, ದಿನಾಂಕ 23ನೇ ಮೇ, 1977**

**ಎಸ್.ಓ. 1241:** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ 65ನೇ ಪ್ರಕರಣದ (1)ನೇ ಉಪಪ್ರಕರಣದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸಂಕೇಶ್ವರ – ಇದಕ್ಕೆ ಅಧಿಸೂಚಿತ ಕೃಷಿ ಉತ್ಪನ್ನಗಳ, ಎಂದರೆ ಮೆಣಸಿನಕಾಯಿ, ತಂಬಾಕು ಮತ್ತು ಜಾನುವಾರುಗಳ ಸಂಬಂಧದಲ್ಲಿ ಮಾರಾಟಗಾರರು ಸಂದಾಯ ಮಾಡಬೇಕಾದ ಮಾರುಕಟ್ಟೆ ಫೀಜನ್ನು ವಿಧಿಸಿ ವಸೂಲು ಮಾಡುವ ಕಾರ್ಯದಿಂದ ವಿನಾಯಿತಿಗೊಳಿಸುವುದು ಅವಶ್ಯವೆಂದು ಅಭಿಪ್ರಾಯಪಟ್ಟರೆ, ಅದು ಹಾಗೆ ಮಾಡಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಂ.ವಿ. ಲಕ್ಷ್ಮಿನರಸಿಂಹಯ್ಯ
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಸಹಕಾರ ಇಲಾಖೆ (ಮಾರುಕಟ್ಟೆ)

**ಅಧಿಸೂಚನೆ ಕ್ರಮಾಂಕ ಆರ್‌ಡಿಸಿ 84 ಸಿಎಂಡಿ 74 ಬೆಂಗಳೂರು, ದಿನಾಂಕ 25ನೇ ನವೆಂಬರ್ 1977.**

**ಎಸ್.ಓ. 3147:** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27)ರ 133ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಅಧಿನಿಯಮ, ಕಬ್ಬಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಸದರಿ ಅಧಿನಿಯಮದ 65ನೇ ಪ್ರಕರಣದ ಉಪಬಂಧಗಳು ಕರ್ನಾಟಕ ರಾಜ್ಯದಲ್ಲಿರುವ ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ಅನ್ವಯವಾಗದಂತೆ ಈ ಮೂಲಕ ಅವುಗಳಿಗೆ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ,
ಸಹಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣ ಅಭಿವೃದ್ಧಿ ಮತ್ತು ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಕ್ರಮಾಂಕ : ಆರ್‌ಡಿಸಿ 26 ಸಿಎಲ್‌ಎಂ 78.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು,
ದಿನಾಂಕ 21ನೇ ಜೂನ್ 1978.

**ಅಧಿಸೂಚನೆ**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ 16ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ – I) ಖಂಡದ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ರಾಜ್ಯದಲ್ಲಿನ ಎಲ್ಲ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಸದರಿ ಪ್ರಕರಣದ ಉದ್ದೇಶಕ್ಕಾಗಿ ಈ ಮೂಲಕ ಮಾನ್ಯತೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ,
ಎ. ಪರಮೇಶ್ವರಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಸಹಕಾರ ಇಲಾಖೆ.

**ಗ್ರಾಮೀಣಾಭಿವೃದ್ಧಿ ಮತ್ತು ಸಹಕಾರ ಸಚಿವಾಲಯ**

**ಅಧಿಸೂಚನೆ ಕ್ರಮಾಂಕ ಆರ್‌ಡಿಸಿ 9 ಎಂಡಬ್ಲ್ಯೂ ಎಂ 79**

**ಬೆಂಗಳೂರು, ದಿನಾಂಕ 30ನೇ ಮೇ 1979.**

ಕರ್ನಾಟಕ ತೂಕ ಮತ್ತು ಅಳತೆ (ಜಾರಿ) ಅಧಿನಿಯಮ, 1958 (1959ರ ಕರ್ನಾಟಕ ಅಧಿನಿಯಮ 2)ರ 8ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ದಿನಾಂಕ 7ನೇ ಜುಲೈ 1979ರಿಂದ ಜಾರಿಗೆ ಬರುವಂತೆ ತರಕಾರಿ ಮಾರಾಟದ ಸಂಬಂಧದಲ್ಲಿ ನಡೆಯುವ ಯಾವುದೇ ವ್ಯವಹಾರದಲ್ಲಿ, ವಹಿವಾಟಿನಲ್ಲಿ ಅಥವಾ ಮಾಡಿಕೊಳ್ಳಲಾಗುವ ಯಾವುದೇ ಕರಾರಿನಲ್ಲಿ ತರಕಾರಿಗಳ ಮೊತ್ತವನ್ನು ತೂಕದಲ್ಲಿ ಮಾತ್ರವೇ ನಮೂದಿಸತಕ್ಕದ್ದೆಂದು ಈ ಮೂಲಕ ನಿರ್ದೇಶಿಸಿದೆ.

ತರಕಾರಿಗಳನ್ನು ರಾಶಿಗಳಲ್ಲಿ ಮಾರಾಟ ಮಾಡಿದಾಗ ಅಂತಹ ಪ್ರತಿಯೊಂದು ರಾಶಿಯ ಮೇಲೆ ಅದರ ಅಂದಾಜು ತೂಕವನ್ನು ಬರೆದು ಚೀಟಿಯೊಂದನ್ನು ಇಟ್ಟಿರಬೇಕು:

ಪರಂತು, ಯಾವ ರಾಶಿಯ ಮಾರುಕಟ್ಟೆ ಬೆಲೆಯು ಒಂದು ರೂಪಾಯಿಗೆ ಮೀರುವುದಿಲ್ಲವೋ ಅಂತಹ ರಾಶಿಯ ಮೇಲೆ ಅಂತಹ ಯಾವುದೇ ಚೀಟಿಯನ್ನು ಇಡಬೇಕಾಗಿಲ್ಲ.

1193–ಎಸ್‌ಓ. 1264

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ,
ಜಿ.ಎಸ್. ಜೋಷಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಕ್ರಮಾಂಕ : ಆರ್‌ಡಿಸಿ 261 ಎಂಎಂಡಿ 79.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು,
ದಿನಾಂಕ 30ನೇ ಜನವರಿ 1980.

**ಅಧಿಸೂಚನೆ**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ 140ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಕೋಷ್ಟಕದ ಅಂಕಣ (3)ರಲ್ಲಿ ನಿರ್ದಿಷ್ಟಪಡಿಸಿರುವಂತೆ, ಸದರಿ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಲಾದ ನಿಯಮಗಳ ಉಪಬಂಧಗಳ ಮೂಲಕ, ಮುಖ್ಯ ಮಾರುಕಟ್ಟೆ ಅಧಿಕಾರಿಗೆ ಪ್ರದಾನ ಮಾಡಲಾದ ಅಧಿಕಾರಗಳನ್ನು (2)ನೇ ಅಂಕಣದ ಸಂವಾದಿ ನಮೂದುಗಳಲ್ಲಿ ನಿರ್ದಿಷ್ಟಪಡಿಸಿರುವ ಅವನ ಅಧೀನ ಅಧಿಕಾರಿಗಳು ಸಹ ಚಲಾಯಿಸತಕ್ಕದ್ದೆಂದು ಈ ಮೂಲಕ ನಿರ್ದೇಶಿಸಿದೆ. ಆದರೆ ಹಾಗೆ ಅಧಿಕಾರ ಚಲಾಯಿಸುವುದು ಅದರ ಅಂಕಣ (4)ರಲ್ಲಿನ ಸಂವಾದಿ ನಮೂದುಗಳಲ್ಲಿ ನಿರ್ದಿಷ್ಟಪಡಿಸಿರುವ ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟಿರುತ್ತದೆ.

**ಕೋಷ್ಟಕ**

| ಕ್ರಮ ಸಂಖ್ಯೆ | ಅಧೀನ ಅಧಿಕಾರಿಗಳು | ಅಧಿನಿಯಮ ಮತ್ತು ನಿಯಮಗಳ ಉಪಬಂಧಗಳು | ನಿಬಂಧನೆಗಳು ಮತ್ತು ಷರತ್ತುಗಳು |
|---|---|---|---|
| 1 | 2 | 3 | 4 |
| 1. | ಜಂಟಿ ಮುಖ್ಯ ಮಾರುಕಟ್ಟೆ ಅಧಿಕಾರಿ | ಪ್ರಕರಣಗಳು : 44(2), 53(3), 71(1), 73(3), 74 (1) ಮತ್ತು 125 ನಿಯಮಗಳು– 49 (3), 59, 64(2) | (ಎ) 71 (1)ನೇ ಪ್ರಕರಣದ ಮೂಲಕ ಮಂಜೂರಾತಿ ಬಗ್ಗೆ ಪ್ರದಾನ ಮಾಡಲಾದ ಅಧಿಕಾರಗಳ ಪ್ರತ್ಯಾಯೋಜನೆಯು ಐದು ನೂರು ರೂಪಾಯಿಗಳನ್ನು ಮೀರದ ಮೊಬಲಗಿಗೆ ಸೀಮಿತವಾಗಿರತಕ್ಕದ್ದು. |

| 1 | 2 | 3 |
|---|---|---|
| 1. | ಜಿಲ್ಲಾ ಮಾರುಕಟ್ಟೆ ಅಧಿಕಾರಿ | ಪ್ರಕರಣ 53 (3) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ
ಜಿ.ಎಸ್. ಜೋಷಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣ ಅಭಿವೃದ್ಧಿ ಮತ್ತು ಸಹಕಾರ ಇಲಾಖೆ.

**ಗೃಹ ಸಚಿವಾಲಯ**
**ಅಧಿಸೂಚನೆ ಕ್ರಮಾಂಕ ಹೆಚ್‌ಡಿ 2226 ಪಿಸಿಸಿ 81**
**ಬೆಂಗಳೂರು, ದಿನಾಂಕ 7ನೇ ಜನವರಿ 1982.**

ಕರ್ನಾಟಕ ಪೋಲೀಸು ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ 4)ರ ಪ್ರಕರಣ 2ರ ಖಂಡ (11–ಎ) ದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಮೇರೆಗೆ ಸ್ಥಾಪಿಸಲಾದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳನ್ನು ಸದರಿ ಅಧಿನಿಯಮದ ಉದ್ದೇಶಕ್ಕಾಗಿ "ಸ್ಥಳೀಯ ಪ್ರಾಧಿಕಾರ" ಎಂಬುದಾಗಿ ಈ ಮೂಲಕ ಘೋಷಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ,
ಎನ್.ವಿ. ನಾಯಕ್
ಸರ್ಕಾರದ ಅಧೀನ ಕಾರ್ಯದರ್ಶಿ
ಗೃಹ ಇಲಾಖೆ.

**ಕರ್ನಾಟಕ ಸರ್ಕಾರ**

ಕ್ರಮಾಂಕ :ಆರ್‌ಡಿಸಿ 35 ಎಂಎಂಡಿ 82.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು,
21ನೇ ಮೇ 84.

**ಆದೇಶ**

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಾಹಣೆಯ) ನಿಯಮಗಳು, 1977ರ ನಿಯಮ 6ರ ಉಪನಿಯಮ (1)ರ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಗ್ರಾಮೀಣ ಅಭಿವೃದ್ಧಿ ಮತ್ತು ಸಹಕಾರ ಇಲಾಖೆಯ ಸಚಿವ ಆರ್.ಎಲ್. ಜಾಲಪ್ಪ ಎಂಬ ನಾನು, ಸರ್ಕಾರದ ಕಾರ್ಯದರ್ಶಿ. ಗ್ರಾಮೀಣ ಅಭಿವೃದ್ಧಿ ಮತ್ತು ಸಹಕಾರ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ನಿಯಂತ್ರಣ ಅಧಿನಿಯಮ 1966ರ 126ನೇ ಪ್ರಕರಣದ ಮೇರೆಗೆ ಉದ್ಭವಿಸುವ ಪ್ರಕರಣಗಳನ್ನು ಮುಂದಿನ ಆದೇಶಗಳವರೆಗೆ ವಿಲೇ ಮಾಡತಕ್ಕದ್ದೆಂದು ಈ ಮೂಲಕ ವಿಶೇಷವಾಗಿ ನಿರ್ದೇಶಿಸಿದ್ದೇನೆ.

ಸಹಿ
ಆರ್.ಎಲ್. ಜಾಲಪ್ಪ
ಸಹಕಾರ ಸಚಿವರು.
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಸಹಿ
ಅರ್ಜುನಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)
ಗ್ರಾಮೀಣ ಅಭಿವೃದ್ಧಿ ಮತ್ತು ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಕ್ರಮಾಂಕ :ಸಿಎಂಡಬ್ಲ್ಯೂ 4 ಇಡಬ್ಲ್ಯೂಎಂ 86

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ, ಬೆಂಗಳೂರು,
ದಿನಾಂಕ: 31ನೇ ಮಾರ್ಚ್ 86.

**ಅಧಿಸೂಚನೆ**

ಕರ್ನಾಟಕ ತೂಕ ಮತ್ತು ಅಳತೆಗಳ (ಜಾರಿ) ಅಧಿನಿಯಮ 1958 (1959ರ ಕರ್ನಾಟಕ ಅಧಿನಿಯಮ 2)ರ 8ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಅಧಿಕೃತ ರಾಜ್ಯ ಪತ್ರದಲ್ಲಿ ಅಧಿಸೂಚನೆಯು ಪ್ರಕಟವಾದ ದಿನಾಂಕದಿಂದ ಇಡೀ ಕರ್ನಾಟಕ ರಾಜ್ಯದಲ್ಲಿ ತರಕಾರಿಗಳ ಸಗಟು ವ್ಯಾಪಾರಕ್ಕೆ ಸಂಬಂಧಿಸಿದಂತೆ ನಡೆಯುವ ಯಾವುದೇ ವ್ಯವಹಾರದಲ್ಲಿ, ವಹಿವಾಟಿನಲ್ಲಿ ಅಥವಾ ಮಾಡಿಕೊಳ್ಳಲಾಗುವ ಯಾವುದೇ ಕರಾರಿನಲ್ಲಿ ತರಕಾರಿಗಳ ಮೊತ್ತವನ್ನು ತೂಕದಲ್ಲಿ ಮಾತ್ರವೇ ನಮೂದಿಸತಕ್ಕದ್ದೆಂದು ಈ ಮೂಲಕ ನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಸಹಿ
ವಿ. ನರಸಿಂಹಮೂರ್ತಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಕ್ರಮಾಂಕ : ಸಿಎಂಡಬ್ಲ್ಯೂ 199 ಇಎಂಡಿ 86 (ಪಿ)**

**ಬೆಂಗಳೂರು, ದಿನಾಂಕ 2ನೇ ಡಿಸೆಂಬರ್ 1986**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ 1966ರ (1966ರ ಕರ್ನಾಟಕ ಅಧಿನಿಯಮ 27)ರ 2ನೇ ಪ್ರಕರಣದ ಖಂಡ (12–ಎ)ರ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಅಧಿನಿಯಮದ ಮೇರೆಗೆ ಕೃಷಿ ಮಾರುಕಟ್ಟೆ ನಿರ್ದೇಶಕನ ಎಲ್ಲ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಚಲಾಯಿಸಲು ಮತ್ತು ನಿರ್ವಹಿಸಲು ಮುಖ್ಯ ಮಾರುಕಟ್ಟೆ ಅಧಿಕಾರಿಗೆ ಈ ಮೂಲಕ ಅಧಿಕಾರ ನೀಡಿದೆ.

1527–ಎಸ್.ಓ.346

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ,
ಆರ್. ಕಮಲಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಕ್ರಮಾಂಕ :ಸಿಎಂಡಬ್ಲ್ಯೂ 257 ಎಂಎಂಡಿ 86

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ, ಬೆಂಗಳೂರು,
ದಿನಾಂಕ: 4.12.1986.

**ಅಧಿಸೂಚನೆ**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ 152ಎ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಅನುಸೂಚಿಯಲ್ಲಿ ಈ ಕೆಳಕಂಡ ತಿದ್ದುಪಡಿಗಳನ್ನು ಮಾಡಿದೆ:–

ಸದರಿ ಅನುಸೂಚಿಯಲ್ಲಿ :–

1) " III ಹೂಗಳು" ಎಂಬ ಬಾಬನ್ನು ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು.

2) "VI ಹಣ್ಣುಗಳು" ಎಂಬ ಬಾಬಿನಲ್ಲಿ ಉಪಬಾಬು 19ರ ತರುವಾಯ ಈ ಕೆಳಕಂಡ ಬಾಬುಗಳನ್ನು ಸೇರಿಸತಕ್ಕದ್ದು, ಎಂದರೆ:–

"20. ಕಿತ್ತಳೆ" "21. ಕಲ್ಲಂಗಡಿ"

3) "XIಮರ" ಎಂಬ ಬಾಬಿನಲ್ಲಿ ಉಪಬಾಬು 19ರ ತರುವಾಯ ಈ ಕೆಳಕಂಡ ಬಾಬುಗಳನ್ನು ಸೇರಿಸತಕ್ಕದ್ದು, ಎಂದರೆ:–

"20. ಸಿಲ್ವರ್ ಓಕ್" "21 ಪಾರಿವಾಳ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಸಹಿ
ವಿ. ನರಸಿಂಹಮೂರ್ತಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಕ್ರಮಾಂಕ ಆರ್ ಡಿಸಿ 180 ಎಂಎಂಡಿ 84**

**ಬೆಂಗಳೂರು, ದಿನಾಂಕ 11ನೇ ಡಿಸೆಂಬರ್ 1986**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966(1966ರ ಕರ್ನಾಟಕ ಅಧಿನಿಯಮ 27)ರ ಪ್ರಕರಣ 133ರ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 64ನೇ ಪ್ರಕರಣದ ಉಪಬಂಧಗಳು ಕರ್ನಾಟಕ ರಾಜ್ಯ ಬಿತ್ತನೆ, ನಿಗಮ ನಿಯಮಿತ, ಬೆಂಗಳೂರು (ಕರ್ನಾಟಕ ಸರ್ಕಾರದ ಉದ್ಯಮ) ಇದಕ್ಕೆ ಅನ್ವಯವಾಗದಂತೆ ಈ ಮೂಲಕ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ,
ಸಹಿ
ಎಸ್.ಓ.ಸಂ.2205 ವಿ. ನರಸಿಂಹಮೂರ್ತಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಕ್ರಮಾಂಕ :ಸಿಎಂಡಬ್ಲ್ಯೂ 272 ಎಂಎಂಡಿ 86.

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ, ಬೆಂಗಳೂರು,
ದಿನಾಂಕ: 14.1.1987.

**ಅಧಿಸೂಚನೆ**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966(1966ರ ಕರ್ನಾಟಕ ಅಧಿನಿಯಮ 27)ರ 152ಎ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಅನುಸೂಚಿಯಲ್ಲಿ ಈ ಕೆಳಕಂಡ ತಿದ್ದುಪಡಿಗಳನ್ನು ಮಾಡಿದೆ:-

ಅನುಸೂಚಿಯಲ್ಲಿ "ಪ್ಲಾಂಟೇಷನ್ ಬೆಳೆಗಳು ಮತ್ತು ಸಾಂಬಾರ ಪದಾರ್ಥಗಳು" ಇವುಗಳಿಗೆ ಸಂಬಂಧಿಸಿದ ಬಾಬು VIII ರಲ್ಲಿ ಕ್ರಮಸಂಖ್ಯೆ 2ರಲ್ಲಿನ "ಏಲಕ್ಕಿ" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ
ಸಹಿ
ವಿ. ನರಸಿಂಹಮೂರ್ತಿ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಮುಖ್ಯ ಮಾರುಕಟ್ಟೆ ಅಧಿಕಾರಿಯ ಮತ್ತು ಇತರ ಅಧೀನ ಹುದ್ದೆಗಳ ಹೆಸರಿನ ಬದಲಾವಣೆ**

**ಪ್ರಸ್ತಾವನೆ:**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966 ಇದನ್ನು 1988ರ ಅಧಿನಿಯಮ ಸಂಖ್ಯೆ 35ರಿಂದ ತಿದ್ದುಪಡಿ ಮಾಡಲಾಗಿದ್ದು, ಸದರಿ ತಿದ್ದುಪಡಿಯು ಇತರ ವಿಷಯಗಳೊಂದಿಗೆ "ಮುಖ್ಯ ಮಾರುಕಟ್ಟೆ ಅಧಿಕಾರಿ" ಎಂಬ ಪದಾವಳಿಗೆ ಬದಲಾಗಿ "ಕೃಷಿ ಮಾರುಕಟ್ಟೆ ನಿರ್ದೇಶಕ" ಎಂಬ ಪದಾವಳಿಯನ್ನು ಸೇರಿಸಲು ಅವಕಾಶ ಕಲ್ಪಿಸುತ್ತದೆ. ಆದ್ದರಿಂದ ಮುಖ್ಯ ಮಾರುಕಟ್ಟೆ ಅಧಿಕಾರಿಯು ಮತ್ತು ಇತರ ಅಧೀನ ಹುದ್ದೆಗಳ ಪದನಾಮಗಳನ್ನು ಈ ಕೆಳಕಂಡಂತೆ ಬದಲಾವಣೆ ಮಾಡಬೇಕಾಗಿದೆ:

| | ಈಗಿರುವ ಪದನಾಮಗಳು | ಉದ್ದೇಶಿತ ಬದಲಿ ಪದನಾಮಗಳು |
|---|---|---|
| 1) | ಮುಖ್ಯ ಮಾರುಕಟ್ಟೆ ಅಧಿಕಾರಿ | ಕೃಷಿ ಮಾರುಕಟ್ಟೆ ನಿರ್ದೇಶಕ |
| 2) | ಜಂಟಿ ಮುಖ್ಯ ಮಾರುಕಟ್ಟೆ ಅಧಿಕಾರಿ | ಕೃಷಿ ಮಾರುಕಟ್ಟೆ ಜಂಟಿ ನಿರ್ದೇಶಕ |
| 3) | ಉಪ ಮುಖ್ಯಮಾರುಕಟ್ಟೆ ಅಧಿಕಾರಿ | ಕೃಷಿ ಮಾರುಕಟ್ಟೆ ಉಪ ನಿರ್ದೇಶಕ |
| 4) | ಜಿಲ್ಲಾ ಮಾರುಕಟ್ಟೆ ಅಧಿಕಾರಿ | ಕೃಷಿ ಮಾರುಕಟ್ಟೆ ಸಹಾಯಕ ನಿರ್ದೇಶಕ |
| 5) | ಮುಖ್ಯ ಮಾರುಕಟ್ಟೆ ಅಧಿಕಾರಿಯ ಕಾರ್ಯಾಲಯದ ಗೆಜೆಟೆಡ್ ಸಹಾಯಕ | ಕೃಷಿ ಮಾರುಕಟ್ಟೆ ನಿರ್ದೇಶಕನ ಕೇಂದ್ರ ಕಾರ್ಯಾಲಯದ ಗೆಜೆಟೆಡ್ ಸಹಾಯಕ |
| 6) | ಜಂಟಿ ಮುಖ್ಯ ಮಾರುಕಟ್ಟೆ ಅಧಿಕಾರಿಯ ಕೇಂದ್ರ ಗೆಜೆಟೆಡ್ ಸಹಾಯಕ | ಕೃಷಿ ಮಾರುಕಟ್ಟೆ ಜಂಟಿ ನಿರ್ದೇಶಕನ ಕೇಂದ್ರ ಗೆಜೆಟೆಡ್ ಸಹಾಯಕ |

ಮೇಲ್ಕಂಡ ಹುದ್ದೆಗಳ ಪದನಾಮಗಳನ್ನು ಬದಲಾಯಿಸಲು ಒಂದು ಔಪಚಾರಿಕ ಆದೇಶವನ್ನು ಹೊರಡಿಸುವುದು ಅವಶ್ಯಕವಾಗಿದೆ.

**ಆದೇಶ ಸಂಖ್ಯೆ ಸಿಎಂಡಬ್ಲ್ಯೂ 199 ಇಎಂಡಿ 86,**
**ಬೆಂಗಳೂರು, ದಿನಾಂಕ 5ನೇ ಫೆಬ್ರವರಿ 1987**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತಿದ್ದುಪಡಿ) ಅಧಿನಿಯಮ, 1966ರ ಪ್ರಕಟಣೆಯ ಪರಿಣಾಮವಾಗಿ (ಸರ್ಕಾರಿ ಅಧಿಸೂಚನೆ ಸಂಖ್ಯೆ ಲಾ 48 ಎಲ್ ಎಂಪಿ 86 ದಿನಾಂಕ 7ನೇ ಅಕ್ಟೋಬರ್ 1986 ಇದನ್ನು ನೋಡಿ) ಮಾರುಕಟ್ಟೆ ಇಲಾಖೆಯ ಈ ಕೆಳಕಂಡ ಹುದ್ದೆಗಳ ಹೆಸರುಗಳನ್ನು ಈ ಮುಂದೆ ಸೂಚಿಸಿರುವಂತೆ ಬದಲಾಯಿಸಲಾಗಿದೆ:

| ಕ್ರಮಸಂಖ್ಯೆ | ಈಗಿರುವ ಪದನಾಮಗಳು | ಉದ್ದೇಶಿತ ಬದಲಿ ಪದನಾಮಗಳು |
|---|---|---|
| 1. | ಮುಖ್ಯ ಮಾರುಕಟ್ಟೆ ಅಧಿಕಾರಿ | ಕೃಷಿ ಮಾರುಕಟ್ಟೆ ನಿರ್ದೇಶಕ |
| 2. | ಜಂಟಿ ಮುಖ್ಯ ಮಾರುಕಟ್ಟೆ ಅಧಿಕಾರಿ | ಕೃಷಿ ಮಾರುಕಟ್ಟೆ ಜಂಟಿ ನಿರ್ದೇಶಕ |
| 3. | ಉಪ ಮುಖ್ಯ ಮಾರುಕಟ್ಟೆ ಅಧಿಕಾರಿ | ಕೃಷಿ ಮಾರುಕಟ್ಟೆ ಉಪ ನಿರ್ದೇಶಕ |
| 4. | ಜಿಲ್ಲಾ ಮಾರುಕಟ್ಟೆ ಅಧಿಕಾರಿ | ಕೃಷಿ ಮಾರುಕಟ್ಟೆ ಸಹಾಯಕ ನಿರ್ದೇಶಕ |
| 5. | ಮುಖ್ಯ ಮಾರುಕಟ್ಟೆ ಅಧಿಕಾರಿಯ ಕಾರ್ಯಾಲಯದ ಗೆಜೆಟೆಡ್ ಸಹಾಯಕ | ಕೃಷಿ ಮಾರುಕಟ್ಟೆ ನಿರ್ದೇಶಕನ ಕೇಂದ್ರ ಕಾರ್ಯಾಲಯದ ಗೆಜೆಟೆಡ್ ಸಹಾಯಕ |
| 6. | ಜಂಟಿ ಮುಖ್ಯ ಮಾರುಕಟ್ಟೆ ಅಧಿಕಾರಿಯ ಕೇಂದ್ರ ಗೆಜೆಟೆಡ್ ಸಹಾಯಕ | ಕೃಷಿ ಮಾರುಕಟ್ಟೆ ಜಂಟಿ ನಿರ್ದೇಶಕನ ಕೇಂದ್ರ ಗೆಜೆಟೆಡ್ ಸಹಾಯಕ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಮನೋಹರ್ ರಾವ್
ಸರ್ಕಾರದ ಅಧೀನ ಕಾರ್ಯದರ್ಶಿ,
(ಪ್ರಭಾರ), ಸಹಕಾರ ಇಲಾಖೆ.

* * * * *

**ಕರ್ನಾಟಕ ಸರ್ಕಾರ**

ಕ್ರಮಾಂಕ :ಸಿಎಂಡಬ್ಲ್ಯೂ 199 ಇಎಂಡಿ 86.

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ, ಬೆಂಗಳೂರು,
ದಿನಾಂಕ: 20ನೇ ಮಾರ್ಚ್ 1987.

**ಅಧಿಸೂಚನೆ**

ಅಧಿಸೂಚನೆ ಕ್ರಮಾಂಕ ಡಿಪಿಎಆರ್ 435 ಎಸ್‌ಎಎಸ್ 86, ದಿನಾಂಕ 9.3.1987 ಇದರ ಮೇರೆಗೆ ಶ್ರೀ ಎಸ್.ಎಲ್. ಗಂಗಾಧರಪ್ಪ ಐಎಎಸ್ – ಇವರನ್ನು ಸರ್ಕಾರದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಕೃಷಿ ಮಾರುಕಟ್ಟೆ ನಿರ್ದೇಶಕರೆಂದು ನೇಮಕ ಮಾಡಿದೆ.

ಮೇಲೆ ಹೇಳಲಾದ ನೇಮಕಾತಿಯನ್ನು ಗಮನಿಸಿ, ಮುಖ್ಯ ಮಾರುಕಟ್ಟೆ ಅಧಿಕಾರಿಗೆ ಕೃಷಿ ಮಾರುಕಟ್ಟೆ ನಿರ್ದೇಶಕನ ಅಧಿಕಾರಗಳನ್ನು ವಹಿಸಿಕೊಟ್ಟಿರುವ ಬಗ್ಗೆ ಈ ಇಲಾಖೆಯು ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 199 ಇಎಂಡಿ 86(ಪಿ) ದಿನಾಂಕ 28ನೇ ಆಗಸ್ಟ್ 1986 ಮತ್ತು 2ನೇ ಡಿಸೆಂಬರ್ 1986 ಇವುಗಳ ಮೂಲಕ ಈಗಾಗಲೇ ಹೊರಡಿಸಿರುವ ಆದೇಶವನ್ನು ಈ ಮೂಲಕ ಹಿಂತೆಗೆದುಕೊಳ್ಳಲಾಗಿದೆ.

ಈ ಆದೇಶವು ಮಾರ್ಚ್ 9, 1987ರಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಸಹಿ
ಎನ್.ಎಲ್. ಕುಲಕರ್ಣಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಕ್ರಮಾಂಕ :ಸಿಎಂಡಬ್ಲ್ಯೂ 28 ಎಂಆರ್‌ಇ 86.

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ, ಬೆಂಗಳೂರು,
ದಿನಾಂಕ: 20ನೇ ಜುಲೈ 1987.

**ಅಧಿಸೂಚನೆ**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ 133ನೇ ಪ್ರಕರಣದ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು,

ಶಿವಮೊಗ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಇದರ ಉಪವಿಧಿ ಸಂಖ್ಯೆ 24 (12) (ಎ) ಇದು ಅಡಿಕೆಗೆ ಸಂಬಂಧಪಡುವಷ್ಟರ ಮಟ್ಟಿಗೆ ಆ ಉಪವಿಧಿಯ ಉಪಬಂಧಗಳು ಕೇಂದ್ರ ಅಡಿಕೆ ಮತ್ತು ಕೊಕೊ ಮಾರುಕಟ್ಟೆ ಮತ್ತು ಸಂಸ್ಕರಣಾ ಸಹಕಾರ ಸಂಘ ನಿಯಮಿತ, ಮಂಗಳೂರು ಇದಕ್ಕೆ ಅನ್ವಯವಾಗದಂತೆ ಈ ಮೂಲಕ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಸಹಿ
ವಿ. ನರಸಿಂಹಮೂರ್ತಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ 258 ಎಂಎಂಡಿ 86, ಬೆಂಗಳೂರು ದಿನಾಂಕ 7ನೇ ಜನವರಿ 1988**

1980ರ ಕರ್ನಾಟಕ ಅಧಿನಿಯಮ ಸಂಖ್ಯೆ 17 ರಿಂದ ತಿದ್ದುಪಡಿಯಾದಂತೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ತಿದ್ದುಪಡಿ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ 52 'ಎ' ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮಕ್ಕೆ ಲಗತ್ತಿಸಲಾದ ಅನುಸೂಚಿಯಲ್ಲಿ ಈ ಕೆಳಕಂಡ ತಿದ್ದುಪಡಿಯನ್ನು ಮಾಡಿದೆ:

ಅನುಸೂಚಿಯಲ್ಲಿ "XIIಇತರ ಉತ್ಪನ್ನಗಳು" ಎಂಬ ಶೀರ್ಷಿಕೆಯ ಅಡಿಯಲ್ಲಿ ಈ ಕೆಳಕಂಡ ಬಾಬುಗಳನ್ನು ಬಿಟ್ಟುಬಿಡತಕ್ಕದ್ದು.

"3. ಏಡಿಗಳು 4. ಮೀನು 5. ಸೀಗಡಿ"

23.ಎಸ್.ಓ.75

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ತುಳಸೀರಾಮಯ್ಯ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಕ್ರಮಾಂಕ ಆರ್‌ಡಿಸಿ 180 ಎಂಎಂಡಿ 84, ಬೆಂಗಳೂರು ದಿನಾಂಕ 2ನೇ ಫೆಬ್ರವರಿ 1988**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ ಪ್ರಕರಣ 8(3) ರೊಂದಿಗೆ (iii) ಓದಲಾದ ಪ್ರಕರಣ 133ರ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಸದರಿ ಅಧಿನಿಯಮ ಪ್ರಕರಣ 8ರ ಉಪಬಂಧಗಳು (1) ಕರ್ನಾಟಕ ಸಹಕಾರ ಎಣ್ಣೆ ಬೀಜಗಳ ಬೆಳೆಗಾರರ ಸಂಘ ಮತ್ತು (2) ಪ್ರಾಥಮಿಕ ಎಣ್ಣೆ ಬೀಜಗಳ ಬೆಳೆಗಾರರ ಸಹಕಾರ ಸಂಘಗಳು, ಇವುಗಳಿಗೆ ಅನ್ವಯವಾಗದಂತೆ ಈ ಮೂಲಕ ವಿನಾಯಿತಿ ನೀಡಿದೆ.

ಎಸ್.ಓ.ಸಂ.411

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಎನ್.ಎಲ್. ಕುಲಕರ್ಣಿ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ 185 ಎಂಆರ್‌ಇ 87 ಬೆಂಗಳೂರು ದಿನಾಂಕ 25ನೇ ಮೇ 1988**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು, 1968 ಇವುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವ ನಿಯಮಗಳ ಕರಡನ್ನು, ಸದರಿ ನಿಯಮಗಳಿಂದ ಬಾಧಿತರಾಗಬಹುದಾದ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ ಕರ್ನಾಟಕ ಕೃಷಿ ಉತ್ಪನ್ನವನ್ನು ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ 146ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಕರ್ನಾಟಕ ರಾಜ್ಯಪತ್ರದ ಭಾಗ 1 ವಿಭಾಗ 2 ಎಫ್ ಸಿ (1) ಇದರ 7ನೇ ಜನವರಿ 1988ನೇ ದಿನಾಂಕದ ವಿಶೇಷ ಸಂಚಿಕೆಯಲ್ಲಿ ಪ್ರಕಟಗೊಂಡ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 185 ಎಂಆರ್‌ಇ 87 ದಿನಾಂಕ 30ನೇ ಡಿಸೆಂಬರ್ 1987 ಇದರಲ್ಲಿ ಪ್ರಕಟಿಸಲಾಗಿರುವುದರಿಂದ ಮತ್ತು ಸದರಿ ನಿಯಮಗಳ ಕರಡನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 32 ದಿವಸಗಳ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ತಿಳಿಸಲಾಗಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವು ದಿನಾಂಕ 7ನೇ ಜನವರಿ 1988 ರಂದು ಸಾರ್ವಜನಿಕರಿಗೆ ದೊರೆಯುವ ವ್ಯವಸ್ಥೆ ಮಾಡಿರುವುದರಿಂದ;

ರಾಜ್ಯ ಸರ್ಕಾರಕ್ಕೆ ಯಾವನೇ ವ್ಯಕ್ತಿಯಿಂದ ಯಾವುದೇ ಆಕ್ಷೇಪಣೆಗಳು ಅಥವಾ ಸಲಹೆಗಳು ಬಾರದಿರುವುದರಿಂದ;

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ 146ನೇ ಪ್ರಕರಣದ ಮೂಲಕ ಪ್ರದಾನ ಮಾಡಲಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮೂಲಕ ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ:-

**1. ಹೆಸರು ಮತ್ತು ಪ್ರಾರಂಭ.-** (1) ಈ ನಿಯಮಗಳನ್ನು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) (ತಿದ್ದುಪಡಿ) ನಿಯಮಗಳು, 1988 ಎಂದು ಕರೆಯತಕ್ಕದ್ದು.

(2) ಅವು ಕೂಡಲೇ ಜಾರಿಗೆ ಬರತಕ್ಕದ್ದು.

**2. "ಮುಖ್ಯ ಮಾರುಕಟ್ಟೆ ಅಧಿಕಾರಿ" ಮತ್ತು "ಜಿಲ್ಲಾ ಮಾರುಕಟ್ಟೆ ಅಧಿಕಾರಿ" ಪದಗಳ ಬದಲಾವಣೆ.-** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು, 1968 ಇವುಗಳಲ್ಲಿ "ಮುಖ್ಯ ಮಾರುಕಟ್ಟೆ ಅಧಿಕಾರಿ" ಮತ್ತು "ಜಿಲ್ಲಾ ಮಾರುಕಟ್ಟೆ ಅಧಿಕಾರಿ" ಎಂಬ ಪದಗಳು ಬರುವ ಕಡೆಗಳಲ್ಲೆಲ್ಲಾ "ಕೃಷಿ ಮಾರುಕಟ್ಟೆ ನಿರ್ದೇಶಕ" ಮತ್ತು "ಕೃಷಿ ಮಾರುಕಟ್ಟೆ ಸಹಾಯಕ ನಿರ್ದೇಶಕ" ಎಂಬ ಪದಗಳನ್ನು ಅನುಕ್ರಮವಾಗಿ ಸೇರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಎನ್.ಎಲ್. ಕುಲಕರ್ಣಿ,
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಒಪ್ಪೋಲೆ**

**ಕ್ರಮಾಂಕ ಆರ್‌ಡಿಸಿ 180 ಎಂಎಂಡಿ 81, ಬೆಂಗಳೂರು, ದಿನಾಂಕ 14ನೇ ಜೂನ್ 1988.**

26ನೇ ಫೆಬ್ರವರಿ 1988ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ಸಂಖ್ಯೆ 117) ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಸರ್ಕಾರಿ ಅಧಿಸೂಚನೆ ಸಂಖ್ಯೆ ಆರ್ ಡಿಪಿ 180 ಎಂಎಂಡಿ 81, ದಿನಾಂಕ 22ನೇ ಫೆಬ್ರವರಿ 1988 ಇದರ ಕೊನೆಯ ಸಾಲಿನಲ್ಲಿ ಬಂದಿರುವ "ಸದರಿ ಅಧಿನಿಯಮದ 8ನೇ ಪ್ರಕರಣ" ಎಂಬ ಪದಗಳು ಮತ್ತು ಸಂಖ್ಯೆಗೆ ಬದಲಾಗಿ 'ಸದರಿ ಅಧಿನಿಯಮದ 8 (2)ನೇ ಪ್ರಕರಣ' ಎಂದು ಓದಿಕೊಳ್ಳತಕ್ಕದ್ದು.

ಎಸ್.ಓ.1004

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಹೆಚ್.ಹೆಚ್. ಸೇಠ್
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 183 ಎಂಆರ್‌ಇ 88, ಬೆಂಗಳೂರು ದಿನಾಂಕ 2ನೇ ಜೂನ್ 1989**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ 152ಎ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮೂಲಕ ಅನುಸೂಚಿಯಲ್ಲಿ ಈ ಕೆಳಕಂಡ ತಿದ್ದುಪಡಿಗಳನ್ನು ಮಾಡಿದೆ:-

ಅನುಸೂಚಿಯಲ್ಲಿ VIII ಪ್ಲಾಂಟೇಷನ್ ಬೆಳೆಗಳು ಮತ್ತು ಸಾಂಬಾರ ಪದಾರ್ಥಗಳು ಎಂಬ ಬಾಬಿನಲ್ಲಿ ""3 ಗೋಡಂಬಿ" ಎಂಬ ಉಪಬಾಬಿನ ತುರವಾಯ ಈ ಕೆಳಕಂಡ ಉಪಬಾಬನ್ನು ಸೇರಿಸತಕ್ಕದ್ದು, ಎಂದರೆ:-

"3ಎ ಗೋಡಂಬಿ ತಿರುಳು"

ಎಸ್.ಓ.970

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಹೆಚ್. ಹೆಚ್. ಸೇಠ್
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂಖ್ಯೆ ಸಮಾತೂ 10 ಮಾನಿಇ 89 ಬೆಂಗಳೂರು ದಿನಾಂಕ 1ನೇ ಆಗಸ್ಟ್ 1989**

ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 133 ರಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಿದ ಮಾರುಕಟ್ಟೆ ಸಮಿತಿಗಳ ಮಾರುಕಟ್ಟೆ ಪ್ರಾಂಗಣ: ಉಪಪ್ರಾಂಗಣ:ಉಪ ಮಾರುಕಟ್ಟೆ ಪ್ರಾಂಗಣಗಳಲ್ಲಿ ಮಾತ್ರ ಅಡಿಕೆಯನ್ನು ಖರೀದಿಸಬೇಕೆಂಬ ಷರತ್ತಿನ ಮೇಲೆ ಸದರಿ ಮಾರುಕಟ್ಟೆ ಸಮಿತಿಗಳ ಎದುರುಗಡೆ ಸೂಚಿಸಿರುವ ಉಪನಿಯಮಗಳಲ್ಲಿ ನಿಗದಿಪಡಿಸಿರುವ ನಿಬಂಧನೆಗಳಿಂದ ಕ್ಯಾಂಪ್ಕೊ (ಕೇಂದ್ರೀಯ ಅಡಿಕೆ ಮತ್ತು ಕೋಕಾ ಮಾರಾಟ ಹಾಗೂ ಸಂಸ್ಕರಣ ಸಹಕಾರ ಸಂಘ ನಿಯಮಿತ ಸಂಸ್ಥೆ) ಮಂಗಳೂರು – ಇವರಿಗೆ ವಿನಾಯಿತಿ ನೀಡಿದೆ.

ವಿನಾಯಿತಿಯು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬಂದಿದೆ.

**ಅನುಸೂಚಿ**

| ಮಾರುಕಟ್ಟೆ ಸಮಿತಿಯ ಹೆಸರು | | ವಿನಾಯಿತಿ ನೀಡಿರುವ ಉಪ ನಿಯಮದ ಸಂಖ್ಯೆ |
|---|---|---|
| 1. | ಮಂಗಳೂರು ಮಾರುಕಟ್ಟೆ ಸಮಿತಿ | 23(12)(ಎ) |
| 2. | ಸಾಗರ ಮಾರುಕಟ್ಟೆ ಸಮಿತಿ | 23(10)(ಎ) |
| 3. | ಕುಮಟಾ ಮಾರುಕಟ್ಟೆ ಸಮಿತಿ | 49 |
| 4. | ಸಿದ್ದಾಪುರ ಮಾರುಕಟ್ಟೆ ಸಮಿತಿ | 34(10)(ಎ) |
| 5. | ಸಿರ್ಸಿ ಮಾರುಕಟ್ಟೆ ಸಮಿತಿ | 23(10) |
| 6. | ಚಿತ್ರದುರ್ಗ ಮಾರುಕಟ್ಟೆ ಸಮಿತಿ | 23(11)(ಎ) |
| 7. | ತುಮಕೂರು ಮಾರುಕಟ್ಟೆ ಸಮಿತಿ | 23(11) |
| 8. | ಹೊನ್ನಾವರ ಮಾರುಕಟ್ಟೆ ಸಮಿತಿ | 49 |
| 9. | ಯಲ್ಲಾಪುರ ಮಾರುಕಟ್ಟೆ ಸಮಿತಿ | 32(9)(ಎ) |
| 10. | ಕಡೂರು ಮಾರುಕಟ್ಟೆ ಸಮಿತಿ | 23(12)(ಎ) |
| 11. | ಚನ್ನಗಿರಿ ಮಾರುಕಟ್ಟೆ ಸಮಿತಿ | 24(11)(ಎ) |

ಎಸ್.ಓ. 1259

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,
ಕೆಂ. ಬ. ಗುರುದೇವಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಬೆಂಗಳೂರು, ದಿನಾಂಕ 1ನೇ ಆಗಸ್ಟ್ 1989**

ಸಂಖ್ಯೆ ಸಮಾತೋ 10 ಮಾನಿಇ 89 11 ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ ಪ್ರಕರಣ 133 ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಮಂಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿನ ಮಾರುಕಟ್ಟೆ ಪ್ರಾಂಗಣ, ಉಪಮಾರುಕಟ್ಟೆ ಪ್ರಾಂಗಣಗಳಲ್ಲಿ ಅಡಿಕೆ ಖರೀದಿಗೆ ಸಂಬಂಧಿಸಿದಂತೆ ಸದರಿ ಸಮಿತಿಯ ಉಪನಿಯಮ 23(12)(ಎ) ದಲ್ಲಿ ನಿಗದಿಪಡಿಸಿರುವ ನಿಬಂಧನೆಗಳಿಂದ ಕೇಂದ್ರೀಯ ಅಡಿಕೆ ಮತ್ತು ಕೋಕಾ ಮಾರಾಟ ಮತ್ತು ಸಂಸ್ಕರಣ ಸಹಕಾರಿ ಸಂಘ (ನಿಯಮಿತ), ಮಂಗಳೂರು ಇವರಿಗೆ ರಿಯಾಯಿತಿ ನೀಡಿದೆ.

ಈ ರಿಯಾಯಿತಿಯು ಕೂಡಲೇ ಜಾರಿಗೆ ಬರುವುದು.

ಎಸ್.ಓ.1260

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ
ಕೆಂ. ಬ. ಗುರುದೇವಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 95 ಎಂಆರ್‌ಇ 89, ಬೆಂಗಳೂರು, ದಿನಾಂಕ 29ನೇ ನವೆಂಬರ್ 1989**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966ರ 152ಎ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅನುಸೂಚಿಯನ್ನು ಈ ಕೆಳಕಂಡಂತೆ ಈ ಮೂಲಕ ತಿದ್ದುಪಡಿ ಮಾಡಿದೆ:-

"XIಮರ" ಈ ಬಾಬಿನಲ್ಲಿ 21ನೇ ಉಪ-ಬಾಬಿನ ತರುವಾಯ ಈ ಕೆಳಕಂಡವುಗಳನ್ನು ಸೇರಿಸತಕ್ಕದ್ದು, ಎಂದರೆ:-

22. ಸಾಲಂಗಬೆಟ್ಟು (ಸಾಲ್) (ಗಟ್ಟಿಮರ)
23. ಬಳಾವು (ಗಟ್ಟಿಮರ)
24. ಕೆರುಯಿಂಗ್ (ಮೆದು ಮರ)
25. ಸ್ವಾಂಪ್ ಎಂಎಲ್‌ಹೆಚ್ (ಮೆದುಮರ)
26. ಗುರ್ಜನ್ (ಮೆದುಮರ)
27. ಕಾಪುರ್ (ಕಾಡು ಮರ)
28. ಕಾಲ್ವೊಫಿಲಿಯಮ್ (ಮೆದು ಮರ)
29. ಮಿಕ್ಸೆಡ್ ಲೈಟ್ (ಗಟ್ಟಿ ಮರ)
30. ನ್ಯಾಟೋಹ್ (ಮೆದು ಮರ)
31. ಮರಂತಿ (ಕಡುಗೆಂಪು) (ಮೆದು ಮರ)
32. ರೆಸಾಕ್
33. ಸ್ವಾಂಪ್ ಮರಂತಿ (ಮೆದು ಮರ)
34. ಹಿಲ್ ಎಂಎಲ್‌ಹೆಚ್
35. ಹಿಲ್‌ಮರಂತಿ (ಮೆದು ಮರ)
36. ಮಾಂಡ್ ದಾಟಾ
37. ಕೆಂಪಾಸ್ (ಗಟ್ಟಿ ಮರ)
38. ಸಂಮಿಶ್ರಜಾತಿ ಮರಗಳು
39. ಕ್ವಿಲ್ (ಗಟ್ಟಿ ಮರ)
40. ಮರಸ್ವ ಮೇಡ್
41. ರೆಡಾಲ್
42. ಹೊಳಮತ್ತಿ (ಟರ್ಮಿನಾಲಿಯಾ)
43. ಹಸಿರು ಎಫ್‌ಎಸ್‌ಟಿ
44. ಹಳದಿ ಸಿಎಸ್‌ಟಿ
45. ಬ್ಲೂ ಆಲ್
46. ಬೆಟ್ಟದ ಕಣಿಗಲು (ಡೈತಿನಿಯಾ)
47. ಟರ್ಕೆಲ (ಬಹಳ ಗಟ್ಟಿ ಮರ)
48. ರೆಡೆಮಿಕ್ಸ
49. ವಾಟರ್ ಗಮ್
50. ವಾಲ್‌ನಟ್
51. ಟರ್ಮಿನೇಲಿಯಾ ಕೆಲಾಮಿನಿಯಾ (ಮೆದು ಮರದಿಂದ ಮಧ್ಯದ ಗಟ್ಟಿವರೆಗೆ)
52. ಯಲ್ಲೋ ಆಲ್
53. ವೈಟ್ ಆಲ್
54. ಮಲಾಸ್ (ಗಟ್ಟಿ ಮರ)
55. ಕಮರರೆ (ಮಧ್ಯಮ ಗಟ್ಟಿ)
56. ವೈಟಿಕ್ಸ್ (ನವಿಲಡಿ, ಮೈರೊಳ್) (ಗಟ್ಟಿ ಮರ)
57. ಪೈನ್‌ಮರ
58. ರೆಂಗಾಸ್ (ಮಿಶ್ರ)
59. ತಿಂಗಡು
60. ಬಿನಾಟಾಂಗರ್
61. ನಾಗ

62. ಟೆಟ್ರಾ ಬರ್ಲಿನಿಯಾ
63. ಕುರ್ಸಿಯಾ
64. ಡೆಡ್ಡಿಲೋಷಿಯಾ
65. ಎಕ್ಕಿ
66. ಇರೋಕೋ
67. ಹೋಪಿಯಾ (ಭೋಗಿ)
68. ಅಂಗೆಲಿಮ್ ಬ್ರಿಗಿಲಿಯನ್ ಗಟ್ಟಿಮರ
69. ಜಟೋಬ
70. ಗೊಂಬೆ
71. ದಹೋಮ
72. ಒಪೇಪೆ
73. ತಿಟ್‌ಕಾರ್
74. ತಾವುನ್
75. ಫಿಜಿ ಮೂಲದ ಗಟ್ಟಿಮರ
76. ವಂಡೇಜ್
77. ಅಗತಿ
78. ಎಂಜಿನಿಯಾ
79. ಮೆಂಗ್ರಿಸ್
80. ಎಂಎಲ್‌ಹೆಚ್
81. ಮರ್‌ಕೂರ್
82. ವೆಸ್ಟ್
83. ಪಾಲಿ
84. ಸಾಲಮರ
85. ಸಾರವಾಕ್
86. ನೀಲಗಿರಿ

ಭಾರತದ ರಾಷ್ಟ್ರಪತಿಯವರ
ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಸಹಿ.
ಸಿ.ಆರ್. ಭಾಗೀರಥಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂ. ಸಿಎಂಡಬ್ಲ್ಯೂ 73 ಎಂಆರ್‌ಇ 89, ಬೆಂಗಳೂರು,**
**ದಿನಾಂಕ 3ನೇ ಜನವರಿ 1990**

1966ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮದ (1966ರ ಕರ್ನಾಟಕ ಅಧಿನಿಯಮ 27) 66ನೇ ಪ್ರಕರಣದ (1)ನೇ ಉಪಪ್ರಕರಣದ ಮತ್ತು 67ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 66 ಮತ್ತು 67ನೇ ಪ್ರಕರಣಗಳಲ್ಲಿ ಹೇಳಿರುವ ಉದ್ದೇಶಕ್ಕಾಗಿ ಕೃಷಿ ಮಾರುಕಟ್ಟೆ ಇಲಾಖೆಯ ಈ ಕೆಳಕಂಡ ಅಧಿಕಾರಿಗಳಿಗೆ ಈ ಮೂಲಕ ಅಧಿಕಾರ ನೀಡಿದೆ:–

1) ರಾಜ್ಯದ ಎಲ್ಲ ವಿಭಾಗಗಳ ಕೃಷಿ ಮಾರುಕಟ್ಟೆ ಜಂಟಿ ನಿರ್ದೇಶಕರು.
2) ರಾಜ್ಯದ ಎಲ್ಲ ಜಿಲ್ಲೆಗಳ ಕೃಷಿ ಮಾರುಕಟ್ಟೆ ಸಹಾಯಕ ನಿರ್ದೇಶಕರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಸಿ.ಆರ್. ಭಾಗೀರಥಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂ. ಸಿಎಂಡಬ್ಲ್ಯೂ 88 ಎಂಆರ್‌ಇ 90 ಬೆಂಗಳೂರು,**
**ದಿನಾಂಕ 21ನೇ ಸೆಪ್ಟೆಂಬರ್ 1990**

1966ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮದ (1966ರ ಕರ್ನಾಟಕ ಅಧಿನಿಯಮ 27) 55ನೇ ಪ್ರಕರಣದ (6)ನೇ ಉಪಪ್ರಕರಣದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಈ ಕೆಳಕಂಡ ಕೋಷ್ಟಕದ (3)ನೇ ಅಂಕಣದಲ್ಲಿರುವ ನಮೂದುಗಳಲ್ಲಿ ನಿರ್ದಿಷ್ಟಪಡಿಸಿರುವ ಪ್ರದೇಶಕ್ಕೆ ಸಂಬಂಧಿಸಿದಂತೆ ಸದರಿ ಪರಂತುಕದಲ್ಲಿ ಹೇಳಿರುವ ಉದ್ದೇಶಕ್ಕಾಗಿ, ಕೋಷ್ಟಕದ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿರುವ ಅಧಿಕಾರಿಗಳಿಗೆ ಈ ಮೂಲಕ ಅಧಿಕಾರ ನೀಡಿದೆ.

**ಕೋಷ್ಟಕ**

| ಕ್ರಮಸಂಖ್ಯೆ | ಹುದ್ದೆ | ಪ್ರದೇಶ |
|---|---|---|
| 1 | 2 | 3 |
| 1. | ಕಾರ್ಯನಿರ್ವಾಹಕ ಇಂಜಿನಿಯರ್, ಮಾರುಕಟ್ಟೆ ಅಭಿವೃದ್ಧಿ ಯೋಜನೆ ಮೈಸೂರು ವಿಭಾಗ, ಮೈಸೂರು | ಮೈಸೂರು, ರೆವಿನ್ಯೂ ವಿಭಾಗ |
| 2. | ಕಾರ್ಯ ನಿರ್ವಾಹಕ ಇಂಜಿನಿಯರ್, ಮಾರುಕಟ್ಟೆ ಅಭಿವೃದ್ಧಿ ಯೋಜನೆ ಬೆಂಗಳೂರು ವಿಭಾಗ, ಬೆಂಗಳೂರು | ಬೆಂಗಳೂರು ರೆವಿನ್ಯೂ ವಿಭಾಗ |
| 3. | ಕಾರ್ಯ ನಿರ್ವಾಹಕ ಇಂಜಿನಿಯರ್, ಮಾರುಕಟ್ಟೆ ಅಭಿವೃದ್ಧಿ ಯೋಜನೆ, ಬೆಳಗಾವಿ ವಿಭಾಗ, ಬೆಳಗಾವಿ | ಬೆಳಗಾವಿ ರೆವಿನ್ಯೂ ವಿಭಾಗ |
| 4. | ಕಾರ್ಯ ನಿರ್ವಾಹಕ ಇಂಜಿನಿಯರ್, ಮಾರುಕಟ್ಟೆ ಅಭಿವೃದ್ಧಿ ಯೋಜನೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ | ಗುಲ್ಬರ್ಗಾ ರೆವಿನ್ಯೂ ವಿಭಾಗ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಸಿ.ಆರ್. ಭಾಗೀರಥಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂ. ಸಿಎಂಡಬ್ಲ್ಯೂ 76 ಎಂಆರ್‌ಇ 89 ಬೆಂಗಳೂರು, ದಿನಾಂಕ 9ನೇ ಮೇ, 1991**

1966ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮದ (1966ರ ಕರ್ನಾಟಕ ಅಧಿನಿಯಮ 27) 152ಎ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅನುಸೂಚಿಗೆ ಈ ಕೆಳಕಂಡ ತಿದ್ದುಪಡಿಯನ್ನು ಈ ಮೂಲಕ ಮಾಡುತ್ತದೆ:-

ಅನುಸೂಚಿಯಲ್ಲಿ, ಕೊನೆಯಲ್ಲಿ ಈ ಕೆಳಕಂಡ ವಿವರಣೆಯನ್ನು ಸೇರಿಸತಕ್ಕದ್ದು:-

"**ವಿವರಣೆ:** ಈ ಅನುಸೂಚಿಯ ಉದ್ದೇಶಕ್ಕಾಗಿ, ಬಾಬು IV ಆಹಾರ ಬೆಳೆಗಳ, ಬಾಬು VII ಎಣ್ಣೆಬೀಜಗಳು, ಬಾಬು VIIIರ ಉಪಬಾಬು 7 ಕೊತ್ತಂಬರಿಯನ್ನು ಮತ್ತು ಬಾಬು Xರ ಉಪಬಾಬು 5 ಆಲುಗಡ್ಡೆಯ ಅಡಿಯಲ್ಲಿ ಬರುವ ಕೃಷಿ ಉತ್ಪನ್ನಗಳಲ್ಲಿ ಪ್ರಮಾಣಿತ ಹಾಗೂ ಸಂಸ್ಕರಿಸಿದ ಬೀಜಗಳಂಥ, ವಿಷವೆಂದು ಗುರುತು ಮಾಡಿ ಸರಿಯಾಗಿ ಚೀಟಿ ಅಂಟಿಸಿರುವಂಥ ಎಲ್ಲ ಕೃಷಿ ಉತ್ಪನ್ನದ ಬೀಜಗಳು ಸೇರತಕ್ಕದ್ದಲ್ಲ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಸಿ.ಆರ್. ಭಾಗೀರಥಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂ. ಸಿಎಂಡಬ್ಲ್ಯೂ 115 ಎಂಆರ್‌ಇ 91, ಬೆಂಗಳೂರು, ದಿನಾಂಕ 27ನೇ ಜುಲೈ 1991**

1991ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮದ (1991ರ ಕರ್ನಾಟಕ ಅಧಿನಿಯಮ 16) 1ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು 1991ರ ಆಗಸ್ಟ್ 1ನೇ ದಿನಾಂಕವನ್ನು ಸದರಿ ತಿದ್ದುಪಡಿ ಅಧಿನಿಯಮದ 1, 2 ರಿಂದ 20,22, 23, 28 ರಿಂದ 33, 35, 36, 38, 42 ರಿಂದ 44, 49, 51 ರಿಂದ 55 ಹಾಗೂ 57 ರಿಂದ 59ನೇ ಪ್ರಕರಣಗಳ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ,
ಸಿ.ಆರ್. ಭಾಗೀರಥಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ನಂ. ಸಿಎಂಡಬ್ಲ್ಯೂ 115 ಎಂಆರ್‌ಇ 91 (1) ಬೆಂಗಳೂರು,**
**ದಿನಾಂಕ 21ನೇ ಫೆಬ್ರವರಿ 1992**

1991ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮದ (1991ರ ಕರ್ನಾಟಕ ಅಧಿನಿಯಮ 16) 1ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು 1992ರ ಮಾರ್ಚ್ 1ನೇ ದಿನಾಂಕವನ್ನು ಸದರಿ ಅಧಿನಿಯಮದ 45ನೇ ಪ್ರಕರಣದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ
ಹೆಸರಿನಲ್ಲಿ,
**ಸಿ.ಆರ್. ಭಾಗೀರಥಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂ. ಸಿಎಂಡಬ್ಲ್ಯೂ 130 ಎಂಆರ್ 89, ಬೆಂಗಳೂರು,**
**ದಿನಾಂಕ 21ನೇ ಅಕ್ಟೋಬರ್ 1992**

1966ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮದ (1966ರ ಕರ್ನಾಟಕ ಅಧಿನಿಯಮ 27) 133ನೇ ಪ್ರಕರಣದ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 65ನೇ ಪ್ರಕರಣದ ಉಪಬಂಧಗಳಿಂದ ಕರ್ನಾಟಕ ಸಹಕಾರ ಎಣ್ಣೆ ಬೀಜ ಬೆಳೆಗಾರರ ಮಹಾಮಂಡಲಿ, – ಇದಕ್ಕೆ ಈ ಮೂಲಕ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಆರ್. ಭಾಗೀರಥಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂ. ಸಿಎಂಡಬ್ಲ್ಯೂ 115 ಎಂಆರ್‌ಇ 91, ಬೆಂಗಳೂರು, ದಿನಾಂಕ 23ನೇ ಮಾರ್ಚ್ 1994**

1991ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮದ (1991ರ ಕರ್ನಾಟಕ ಅಧಿನಿಯಮ 16) 1ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು 1994ರ ಏಪ್ರಿಲ್ 1ನೇ ದಿನಾಂಕವನ್ನು ಸದರಿ ಅಧಿನಿಯಮದ 21, 26 ಮತ್ತು 34ನೇ ಪ್ರಕರಣದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಿ. ಬೆಳಗತ್ತೆರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಸಂಖ್ಯೆ. ಆರ್.ಡಿ. 121 ಜಿಹೆಚ್ಆರ್ 92

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ, ಬೆಂಗಳೂರು,
ದಿನಾಂಕ: 24ನೇ ಮಾರ್ಚ್ 1994.

**ಅಧಿಸೂಚನೆ**

1974ರ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅನುಭವದಾರರನ್ನು ಹೊರಹಾಕುವ) ಅಧಿನಿಯಮದ (1974ರ ಕರ್ನಾಟಕ ಅಧಿನಿಯಮ 32) 3ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು:–

(i) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಕಾರ್ಯದರ್ಶಿಯ ಹುದ್ದೆಯು ರಾಜ್ಯ ಸಿವಿಲ್ ಸೇವೆಗಳ ಗ್ರೂಪ್ – 'ಬಿ' ಅಧಿಕಾರಿಗಿಂತ ಕಡಿಮೆಯಲ್ಲದ ದರ್ಜೆಯ ಹುದ್ದೆಯಾಗಿರುವಲ್ಲಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಸಂಬಂಧದಲ್ಲಿ ಸದರಿ ಕಾರ್ಯದರ್ಶಿಯನ್ನು, ಮತ್ತು

(ii) ಕಾರ್ಯದರ್ಶಿಯ ಹುದ್ದೆಯು, ರಾಜ್ಯ ಸಿವಿಲ್ ಸೇವೆಗಳ ಗ್ರೂಪ್ 'ಬಿ' ಅಧಿಕಾರಿಗಿಂತ ಕಡಿಮೆ ದರ್ಜೆಯ ಹುದ್ದೆಯಾಗಿರುವಲ್ಲಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಸಂಬಂಧದಲ್ಲಿ, ಜಿಲ್ಲಾ ಕೃಷಿ ಮಾರುಕಟ್ಟೆ ಸಹಾಯಕ ನಿರ್ದೇಶಕರು, ಇವರನ್ನು ಸದರಿ ಅಧಿನಿಯಮದಲ್ಲಿ ಹೇಳಿರುವ ಉದ್ದೇಶಕ್ಕಾಗಿ "ಸಕ್ಷಮ ಅಧಿಕಾರಿ" ಯಾಗಿ ಈ ಮೂಲಕ ನೇಮಕಮಾಡಿದೆ. ಮತ್ತು ಸದರಿ ಅಧಿಕಾರಿಗಳು, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) ಮೇರೆಗೆ ಸ್ಥಾಪಿತವಾದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಸೇರಿದ ಸಾರ್ವಜನಿಕ ಆವರಣದ ಸಂಬಂಧದಲ್ಲಿ, ಆಯಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಅಧಿಕಾರವ್ಯಾಪ್ತಿಯೊಳಗೆ, ಸದರಿ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಸಹಿ
**ಕೆ.ಟಿ. ತಿಮ್ಮಾರೆಡ್ಡಿ**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ (ಹೆಚ್ಆರ್ಸಿ)

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 85 ಎಂಆರ್ಇ 90 ಬೆಂಗಳೂರು**

**ದಿನಾಂಕ: 26ನೇ ಅಕ್ಟೋಬರ್ 1994.**

ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿ) ಅಧಿನಿಯಮ 1966ರ ಪ್ರಕರಣ 133ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಎಣ್ಣೆಬೀಜ ಬೆಳೆಗಾರರ ಮಹಾಮಂಡಳ (ನಿ), ಬೆಂಗಳೂರು ಇವರು ಬಿಜಾಪುರ, ಬಳ್ಳಾರಿ, ಸಿಂಧನೂರು ಹಾಗೂ ರಾಯಚೂರು ಮಾರುಕಟ್ಟೆ ಸಮಿತಿಯ ಕ್ಷೇತ್ರದಲ್ಲಿ 1987–88ನೇ ಸಾಲಿನಲ್ಲಿ ಖರೀದಿಸಿದ ಹುಟ್ಟುವಳಿ ಸಂಬಂಧ ಆಯಾ ಮಾರುಕಟ್ಟೆ ಸಮಿತಿಗಳಿಗೆ ಕಟ್ಟಬೇಕಾಗಿರುವ ದಂಡದ ಮಾರುಕಟ್ಟೆ ಶುಲ್ಕವನ್ನು ಪಾವತಿಸುವುದರಿಂದ ಈ ಕೆಳಕಂಡಂತೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿ), ಅಧಿನಿಯಮ, 1966ರ ಪ್ರಕರಣ 65ರಿಂದ ವಿನಾಯಿತಿ ನೀಡಲಾಗಿದೆ.

| ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ | ಮನ್ನಾ ಮಾಡಲಾದ ದಂಡ |
|---|---|
| 1. ಬಿಜಾಪುರ | ರೂ. 5,442–05 |
| 2. ಬಳ್ಳಾರಿ | ರೂ. 17,080–00 |
| 3. ಸಿಂಧನೂರು | ರೂ. 12,886–98 |
| 4. ರಾಯಚೂರು | ರೂ. 23, 424–38 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಸ್. ಬಿ. ಬೆಳಗತ್ತೆರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂ. ಸಿಎಂಡಬ್ಲ್ಯೂ 96 ಎಂಆರ್‌ಇ 94, ಬೆಂಗಳೂರು, ದಿನಾಂಕ 9ನೇ ನವೆಂಬರ್ 1994**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27) 152ಎ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅನುಸೂಚಿಗೆ ಕೆಳಕಂಡ ತಿದ್ದುಪಡಿಗಳನ್ನು ಈ ಮೂಲಕ ಮಾಡಿದೆ:–

ಅನುಸೂಚಿಯಲ್ಲಿ ''VIII ತೋಟದ ಬೆಳೆಗಳು ಮತ್ತು ಸಾಂಬಾರ ಪದಾರ್ಥಗಳು" ಎಂಬ ಶೀರ್ಷಿಕೆಯಲ್ಲಿ, 12ನೇ ಬಾಬಿನ ತರುವಾಯ, ಈ ಕೆಳಕಂಡವುಗಳನ್ನು ಸೇರಿಸತಕ್ಕದ್ದು, ಎಂದರೆ:–

"13. ಕಾಫಿ ಬೀಜಗಳು (ಉಚಿತ ಮಾರಾಟದ ಕೋಟಾದಷ್ಟು ಮಟ್ಟಿಗೆ):–

(i) ಕಚ್ಚಾ ಕಾಫಿ (ಚೆರ್ರಿ ಕಾಫಿ)

(ii) ಸಂಸ್ಕರಿಸಿದ ಕಾಫಿ ಬೀಜಗಳು

(iii) ಸಂಸ್ಕರಿಸಿಲ್ಲದ ಕಾಫಿ ಬೀಜಗಳು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಬೆಳಗತ್ತೆರ,**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂ. ಸಿಎಂಡಬ್ಲ್ಯೂ 104 ಎಂಆರ್‌ಇ 94, ಬೆಂಗಳೂರು, ದಿನಾಂಕ 9ನೇ ಜನವರಿ 1995**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ 152ಎ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅನುಸೂಚಿಗೆ ಈ ಕೆಳಕಂಡ ತಿದ್ದುಪಡಿಗಳನ್ನು ಈ ಮೂಲಕ ಮಾಡಿದೆ, ಎಂದರೆ:–

ಅನುಸೂಚಿಯಲ್ಲಿ, IIನೇ ಬಾಬಿನ ತರುವಾಯ ಈ ಕೆಳಕಂಡ ಬಾಬು ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ :–

III ಹೂವುಗಳು

"ಎಲ್ಲಾ ಹೂವುಗಳು"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಬೆಳಗತ್ತೆರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ :ಸಿಎಂಡಬ್ಲ್ಯೂ 297 ಇಎಂಡಿ 91, ಬೆಂಗಳೂರು, ದಿನಾಂಕ 27ನೇ ಜೂನ್ 1995.**

1991ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮದ 1ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಒಂದು ಸಾವಿರದ ಒಂಬೈನೂರ ತೊಂಬತ್ತೈದರ ಜೂನ್ ಇಪ್ಪತ್ತೇಳನೇ ದಿನವನ್ನು, ಸದರಿ ತಿದ್ದುಪಡಿ ಅಧಿನಿಯಮದ 25ನೇ ಪ್ರಕರಣದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಡಿ. ಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಸಂಖ್ಯೆ :ಸಿಎಂಡಬ್ಲ್ಯೂ 5 ಎಂಆರ್ಇ 96

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡಗಳು, ಬೆಂಗಳೂರು,
ದಿನಾಂಕ: 27ನೇ ಮಾರ್ಚ್ 1996.

**ಅಧಿಸೂಚನೆ**

1991ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮದ (1991ರ ಕರ್ನಾಟಕ ಅಧಿನಿಯಮ 16) 1ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1.4.1996ನ್ನು ಸದರಿ ಅಧಿನಿಯಮದ (ಮೂಲ ಅಧಿನಿಯಮದ 112ನೇ ಪ್ರಕರಣದ 1ನೇ ಉಪಪ್ರಕರಣ) 50ನೇ ಪ್ರಕರಣದ ಉಪಬಂಧವು ಜಾರಿಗೆ ಬರತಕ್ಕ ದಿನಾಂಕವೆಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಬಿ.ವಿ. ನಟರಾಜನ್
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಸಂಖ್ಯೆ :ಸಿಎಂಡಬ್ಲ್ಯೂ 144 ಎಂಆರ್ಇ 2001

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡಗಳು, ಬೆಂಗಳೂರು,
ದಿನಾಂಕ: 16ನೇ ಜೂನ್ 2001.

**ಅಧಿಸೂಚನೆ**

1966ರ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮದ (1966ರ ಕರ್ನಾಟಕ ಅಧಿನಿಯಮ 27) 152ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಅನುಸೂಚಿಗೆ ಈ ಕೆಳಕಂಡ ತಿದ್ದುಪಡಿಗಳನ್ನು ಈ ಮೂಲಕ ಮಾಡಿದೆ, ಎಂದರೆ:–

ಅನುಸೂಚಿಯಲ್ಲಿ, ಬಾಬು VIII ರಲ್ಲಿ, ಉಪಬಂಧ 3ಎ ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಇಂಧುಮತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

**ಅನುಬಂಧ – 1**

**(ಅಧಿಸೂಚನೆ ಸಂ: ಇ.127 ಎಂ.ಆರ್.ಇ 2001, ದಿನಾಂಕ: 29.10.2001)**

**ಬೆಂಗಳೂರು ಹಣ್ಣು ಮತ್ತು ತರಕಾರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಹೊರತುಪಡಿಸಿ ಉಳಿದ ಎಲ್ಲಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಮಾರುಕಟ್ಟೆ ಕ್ಷೇತ್ರಗಳಲ್ಲಿ ಮಾರಾಟ ನಿಯಂತ್ರಣಕ್ಕೆ ಘೋಷಿಸಿರುವ ಕೃಷಿ ಉತ್ಪನ್ನಗಳು.**

**ಪಶು ಸಂಗೋಪನೆ**

1. ಜಾನುವಾರುಗಳು
2. ಮೇಕೆಗಳು
3. ಕುರಿಗಳು

**II. ನೂಲು, ಎಳೆ**

1 ಹತ್ತಿ (ಬೀಜ ತೆಗೆದ ಮತ್ತು ತೆಗೆಯದ)

**III. ಹೂಗಳು**

1. ಎಲ್ಲಾ ಹೂಗಳು

**IV. ಆಹಾರ ಧಾನ್ಯಗಳು**

1. ಸಜ್ಜೆ
2. ಜವೆಗೋಧಿ

3. ಜೋಳ
4. ಕಂಬು
5. ಮೆಕ್ಕೆ ಜೋಳ
6. ನವಣಿ
7. ಭತ್ತ
8. ರಾಗಿ
9. ಅಕ್ಕಿ
10. ಸಾಮೆ (ಸಾವೆ)
11. ಗೋಧಿ

**V. ಅರಣ್ಯ ಉತ್ಪನ್ನಗಳು**

1. ಅಂಟುವಾಳ
2. ಬೊಂಬು
3. ಭತ್ತ
4. ಹಿಪ್ಪೇ ಬೀಜ
5. ಹೊಂಗೆಬೀಜ
6. ಬೇವಿನ ಬೀಜ
7. ಸೀಗೆಕಾಯಿ
8. ಹುಣಸೇಹಣ್ಣು
9. ಹುಣಸೇಬೀಜ

**VI. ಹಣ್ಣುಗಳು**

1. ಸೇಬು
2. ಬಾಳೆಹಣ್ಣು
3. ಬೋರೇಹಣ್ಣು
4. ಹುಳಿಹಣ್ಣುಗಳು
5. ಚಕ್ಕೋತನಾ ಹಣ್ಣು
6. ಪೇರಳೆ ಹಣ್ಣು (ಸೀಬೇಹಣ್ಣು)
7. ದ್ರಾಕ್ಷಿ
8. ಹಲಸಿನ ಹಣ್ಣು
9. ಜಂಬು ನೇರಳೆ ಹಣ್ಣು
10. ನಿಂಬೆಹಣ್ಣು
11. ಕರಬೂಜ
12. ಮಾವಿನಹಣ್ಣು
13. ಮೂಸಂಬಿ
14. ಮರಸೇಬು
15. ಪೈನಾಪಲ್ (ಅನಾನಸ್)
16. ಪಪ್ಪಾಯಿ ಹಣ್ಣು (ಪರಂಗಿ ಹಣ್ಣು)
17. ದಾಳಿಂಬೆಹಣ್ಣು
18. ಸಪೋಟ
19. ಸಿದ್ದೋಟ
20. ಕಿತ್ತಳೆ
21. ಕಲ್ಲಂಗಡಿ

**VII. ಎಣ್ಣೆ ಬೀಜಗಳು**

1. ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ)
2. ಹರಳು ಬೀಜ
3. ಹತ್ತಿ ಬೀಜ
4. ಅಗಸೆ ಬೀಜ
5. ಸಾಸಿವೆ
6. ಉಚ್ಚೆಳ್ಳು

7. ಕುಸುಬೆ
8. ಎಳ್ಳು
9. ಸೂರ್ಯಕಾಂತಿ ಬೀಜ
10. ಸೋಯಾಬೀನ್

**VIII. ತೋಟಗಾರಿಕೆ ಬೆಳೆಗಳು ಮತ್ತು ಸಂಬಾರು ಪದಾರ್ಥಗಳು**

1. ಅಡಿಕೆ
2. ಗೋಡಂಬಿ ಬೀಜ
3. ಒಣ ಮೆಣಸಿನಕಾಯಿ
4. ತೆಂಗಿನಕಾಯಿ
5. ಕೊಬ್ಬರಿ
6. ಕೊತ್ತಂಬರಿ ಬೀಜ (ಧನಿಯ)
7. ಬೆಳ್ಳುಳ್ಳಿ
8. ಶುಂಠಿ
9. ಮೆಂತ್ಯೆ
10. ಕಾಳು ಮೆಣಸು
11. ಅರಿಶಿನ

**IX. ದ್ವಿದಳ ಧಾನ್ಯಗಳು**

1. ಅಲಸಂದೆ (ಇಡೀ ಮತ್ತು ಒಡೆದ)
2. ಅವರೆ (ಇಡೀ ಮತ್ತು ಒಡೆದ)
3. ಕಡ್ಲೆ ((ಇಡೀ ಮತ್ತು ಒಡೆದ)
4. ಉದ್ದು (ಇಡೀ ಮತ್ತು ಒಡೆದ)
5. ಬುಲ್ಲರ್ (ಇಡೀ ಮತ್ತು ಒಡೆದ)
6. ಹೆಸರು (ಇಡೀ ಮತ್ತು ಒಡೆದ)
7. ಹುರುಳಿ
8. ಲಾಕ್ (ಇಡೀ ಮತ್ತು ಒಡೆದ)
9. ಮಡಿಕೆ (ಮಟಕಿ) (ಇಡೀ ಮತ್ತು ಒಡೆದ)
10. ಚೆನ್ನಂಗಿ (ಇಡೀ ಮತ್ತು ಒಡೆದ)
11. ಬಟಾಣಿ
12. ತೊಗರಿ (ಇಡೀ ಮತ್ತು ಒಡೆದ)
13. ಮೋತ್ (ಇಡೀ ಮತ್ತು ಒಡೆದ)

**X. ತರಕಾರಿಗಳು**

1. ಎಲ್ಲಾ ತರಕಾರಿಗಳು (ಸೊಪ್ಪುಗಳೂ ಸೇರಿಸಿ)
2. ಕಾಯಿಗಳು
3. ಹಸಿರು ಮೆಣಸಿನಕಾಯಿ
4. ಈರುಳ್ಳಿ
5. ಆಲೂಗಡ್ಡೆ
6. ಸುವರ್ಣಗಡ್ಡೆ
7. ಸಿಹಿಗೆಣಸು (ಗೆಣಸು)
8. ಟೊಮ್ಯಾಟೊ

**XI. ಮರಮುಟ್ಟುಗಳು**

1. ಬೀಟೆ (ರೋಸ್‌ವುಡ್)
2. ಬಿಲ್ವಾಲ
3. ಉರುವಲು ಕಟ್ಟಿಗೆ
4. ಗಂಜಾನ್
5. ಹಡಗ
6. ಹಳದಿ
7. ಹನಿಮುತ್ತಲ್
8. ಹೊನ್ನೆ
9. ಐಯಾನಿ

10. ಈರುಳ್ಳಿ
11. ಜಂಬ
12. ಕಲನ್
13. ಕಿಂಡಲ್
14. ಮಾವಿನಮರ
15. ಮತ್ತಿ
16. ನಂದಿ
17. ರಾಂಪತ್ರೆ
18. ತೇಗ (ನಾಗವಾನಿ)
19. ಬಿಳಿ ದೇವದಾರ್ (ಕೇದರ)
20. ಸಿಲ್ವರ್ ಓಕ್
21. ನೀಲಗಿರಿ

**XII. ಇತರೆ ಉತ್ಪನ್ನಗಳು**

1. ವೀಳ್ಯದೆಲೆ
2. ಬೆಲ್ಲ
3. ತೆಂಗಿನಕಡ್ಡಿ
4. ಒಣದ್ರಾಕ್ಷಿ

ಸಹಿ
ಎಸ್. ಇಂದುಮತಿ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಸಂಖ್ಯೆ: ಸಹಕಾರ/10/ಎಂಇಆರ್ 2001,

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿ ಕಟ್ಟಡಗಳು,
ಬೆಂಗಳೂರು, ದಿನಾಂಕ: 30.10.2001.

**ಅಧಿಸೂಚನೆ**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) 65ನೇ ಪ್ರಕರಣದ (3)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಉಪಪ್ರಕರಣದ ಉದ್ದೇಶಗಳಿಗಾಗಿ 2001ರ ನವೆಂಬರ್ ಹನ್ನೆರಡನೇ ದಿವಸದಿಂದ ಪ್ರಾರಂಭವಾಗುವ ಮತ್ತು 2001ರ ಡಿಸೆಂಬರ್ 31ನೇ ದಿವಸಕ್ಕೆ ಕೊನೆಗೊಳ್ಳುವ ಖಾರಿಪ್ ಋತುಮಾನವನ್ನು ಅನುಬಂಧ 1 ಮತ್ತು 2 ರಲ್ಲಿ ನಿರ್ದಿಷ್ಟಪಡಿಸಿದ ಕೃಷಿ ಉತ್ಪನ್ನದ ಸಂಬಂಧದಲ್ಲಿನ ಋತುಮಾನ ಎಂಬುದಾಗಿ ಈ ಮೂಲಕ ನಿರ್ದಿಷ್ಟಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಸಹಿ/
ಎಸ್. ಇಂದುಮತಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಅನುಬಂಧ 2**

**(ಅಧಿಸೂಚನೆ ಸಂ: ಸ.ಇ.127 ಎಂ.ಆರ್.ಇ. 2001, ದಿನಾಂಕ 29.10.2001)**

**ರಾಜ್ಯದಲ್ಲಿನ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಮತ್ತು ಮಾರುಕಟ್ಟೆ ಕ್ಷೇತ್ರ**

| ಕ್ರ.ಸಂ. | ಜಿಲ್ಲೆಯ ಹೆಸರು | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಹೆಸರು | ಮಾರುಕಟ್ಟೆ ಕ್ಷೇತ್ರ ಒಳಗೊಂಡಿರುವ ತಾಲ್ಲೂಕುಗಳು |
|---|---|---|---|
| 1 | 2 | 3 | 4 |
| | | **ಬೆಂಗಳೂರು ಕಂದಾಯ ವಿಭಾಗ** | |
| 1. | ಬೆಂಗಳೂರು ನಗರ ಜಿಲ್ಲೆ | 1. ಬೆಂಗಳೂರು | ಬೆಂಗಳೂರು ದಕ್ಷಿಣ<br>ಬೆಂಗಳೂರು ಉತ್ತರ, ಆನೇಕಲ್ |
| 2. | ಬೆಂಗಳೂರು ಗ್ರಾಮಾಂತರ ಜಿಲ್ಲೆ | 3. ಚನ್ನಪಟ್ಟಣ | ಚನ್ನಪಟ್ಟಣ, ರಾಮನಗರ, ಮಾಗಡಿ |

| 1 | 2 | 3 | 4 |
|---|---|---|---|
| | | 4. ಕನಕಪುರ | ಕನಕಪುರ |
| | | 5. ದೊಡ್ಡಬಳ್ಳಾಪುರ | ದೊಡ್ಡಬಳ್ಳಾಪುರ, ಹೊಸಕೋಟೆ, ದೇವನಹಳ್ಳಿ, ನೆಲಮಂಗಲ |
| 3. | ಚಿತ್ರದುರ್ಗ | 6. ಚಿತ್ರದುರ್ಗ | ಚಿತ್ರದುರ್ಗ |
| | | 7. ಚಳ್ಳಕೆರೆ | ಚಳ್ಳಕೆರೆ, ಮೊಳಕಾಲ್ಮೂರು |
| | | 8. ಹಿರಿಯೂರು | ಹಿರಿಯೂರು |
| | | 9. ಹೊಸದುರ್ಗ | ಹೊಸದುರ್ಗ, ಹೊಳಲ್ಕೆರೆ |
| 4. | ದಾವಣಗೆರೆ | 10. ದಾವಣಗೆರೆ | ದಾವಣಗೆರೆ |
| | | 11. ಜಗಳೂರು | ಜಗಳೂರು |
| | | 12. ಹರಿಹರ | ಹರಿಹರ |
| | | 13. ಹರಪ್ಪನಹಳ್ಳಿ | ಹರಪನಹಳ್ಳಿ |
| | | 14. ಹೊನ್ನಾಳಿ | ಹೊನ್ನಾಳಿ |
| | | 15. ಚನ್ನಗಿರಿ | ಚನ್ನಗಿರಿ |
| 5. | ಕೋಲಾರ | 16. ಕೋಲಾರ | ಕೋಲಾರ |
| | | 17. ಮಾಲೂರು | ಮಾಲೂರು |
| | | 18. ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ, ಬಾಗೇಪಲ್ಲಿ, ಶಿಡ್ಲಘಟ್ಟ |
| | | 19. ಚಿಂತಾಮಣಿ | ಚಿಂತಾಮಣಿ |
| | | 20. ಬಂಗಾರಪೇಟೆ | ಬಂಗಾರಪೇಟೆ |
| | | 21. ಗೌರಿಬಿದನೂರು | ಗೌರಿಬಿದನೂರು, ಗುಡಿಬಂಡೆ |
| | | 22. ಮುಳಬಾಗಿಲು | ಮುಳಬಾಗಿಲು |
| | | 23. ಶ್ರೀನಿವಾಸಪುರ | ಶ್ರೀನಿವಾಸಪುರ |
| 6. | ಶಿವಮೊಗ್ಗ | 24. ಶಿವಮೊಗ್ಗ | ಶಿವಮೊಗ್ಗ, ತೀರ್ಥಹಳ್ಳಿ |
| | | 25. ಸಾಗರ | ಸಾಗರ, ಸೊರಬ, ಹೊಸನಗರ |
| | | 26. ಶಿಕಾರಿಪುರ | ಶಿಕಾರಿಪುರ |
| | | 27. ಭದ್ರಾವತಿ | ಭದ್ರಾವತಿ |
| 7. | ತುಮಕೂರು | 28. ತುಮಕೂರು | ತುಮಕೂರು, ಕೊರಟಗೆರೆ |
| | | 29. ಗುಬ್ಬಿ | ಗುಬ್ಬಿ |
| | | 30. ಹುಳಿಯಾರು | ಚಿಕ್ಕನಾಯಕನ ಹಳ್ಳಿ |
| | | 31. ಕುಣಿಗಲ್ | ಕುಣಿಗಲ್ |
| | | 32. ಮಧುಗಿರಿ | ಮಧುಗಿರಿ |
| | | 33. ಪಾವಗಡ | ಪಾವಗಡ |
| | | 34. ಸಿರಾ | ಸಿರಾ |
| | | 35. ತುರುವೇಕೆರೆ | ತುರುವೇಕೆರೆ |
| | | 36. ತಿಪಟೂರು | ತಿಪಟೂರು |
| | | **ಮೈಸೂರು ಕಂದಾಯ ವಿಭಾಗ** | |
| 8. | ಮೈಸೂರು | 37. ಮೈಸೂರು | ಮೈಸೂರು |
| | | 38. ಕೃಷ್ಣರಾಜನಗರ | ಕೃಷ್ಣರಾಜನಗರ |
| | | 39. ಹುಣಸೂರು | ಹುಣಸೂರು |
| | | 40. ಪಿರಿಯಾಪಟ್ಟಣ | ಪಿರಿಯಾಪಟ್ಟಣ |
| | | 41. ಟಿ. ನರಸೀಪುರ | ಟಿ. ನರಸೀಪುರ |
| | | 42. ನಂಜನಗೂಡು | ನಂಜನಗೂಡು |
| | | 43. ಸಂತೆಸರಗೂರು | ಹೆಚ್.ಡಿ.ಕೋಟೆ |
| 9. | ಚಾಮರಾಜನಗರ | 44. ಚಾಮರಾಜನಗರ | ಚಾಮರಾಜನಗರ, ಯಳಂದೂರು |

| 1 | 2 | 3 | 4 |
|---|---|---|---|
| | | 45. ಗುಂಡ್ಲುಪೇಟೆ | ಗುಂಡ್ಲುಪೇಟೆ |
| | | 46. ಕೊಳ್ಳೇಗಾಲ | ಕೊಳ್ಳೇಗಾಲ |
| 10. | ದಕ್ಷಿಣ ಕನ್ನಡ | 47. ಮಂಗಳೂರು | ಮಂಗಳೂರು |
| | | 48. ಬಂಟ್ವಾಳ | ಬಂಟ್ವಾಳ |
| | | 49. ಪುತ್ತೂರು | ಪುತ್ತೂರು |
| | | 50. ಸುಳ್ಯ | ಸುಳ್ಯ |
| | | 51. ಬೆಳ್ತಂಗಡಿ | ಬೆಳ್ತಂಗಡಿ |
| 11. | ಉಡುಪಿ | 52. ಉಡುಪಿ | ಉಡುಪಿ |
| | | 53. ಕುಂದಾಪುರ | ಕುಂದಾಪುರ |
| | | 54. ಕಾರ್ಕಳ | ಕಾರ್ಕಳ |
| 12. | ಕೊಡಗು | 55. ಮಡಿಕೇರಿ | ಮಡಿಕೇರಿ |
| | | 56. ಸೋಮವಾರಪೇಟೆ (ಕೇಂದ್ರಸ್ಥಾನ ಕುಶಾಲನಗರ) | ಸೋಮವಾರಪೇಟೆ |
| | | 57. ಗೋಣಿಕೊಪ್ಪಲು | ವಿರಾಜಪೇಟೆ |
| 13. | ಚಿಕ್ಕಮಗಳೂರು | 58. ಚಿಕ್ಕಮಗಳೂರು | ಚಿಕ್ಕಮಗಳೂರು |
| | | 59. ಕಡೂರು | ಕಡೂರು |
| | | 60. ತರೀಕೆರೆ | ತರೀಕೆರೆ |
| | | 61. ಮೂಡಿಗೆರೆ | ಮೂಡಿಗೆರೆ |
| | | 62. ಕೊಪ್ಪ | ಕೊಪ್ಪ, ನರಸಿಂಹರಾಜಪುರ |
| | | 63. ಶೃಂಗೇರಿ | ಶೃಂಗೇರಿ |
| 14. | ಹಾಸನ | 64. ಹಾಸನ | ಹಾಸನ |
| | | 65. ಬೇಲೂರು | ಬೇಲೂರು, ಆಲೂರು |
| | | 66. ಅರಸೀಕೆರೆ | ಅರಸೀಕೆರೆ |
| | | 67.ಹೊಳೆನರಸೀಪುರ | ಹೊಳೆನರಸೀಪುರ |
| | | 68. ಚನ್ನರಾಯಪಟ್ಟಣ | ಚನ್ನರಾಯಪಟ್ಟಣ |
| | | 69. ಸಕಲೇಶಪುರ | ಸಕಲೇಶಪುರ |
| 15. | ಮಂಡ್ಯ | 70. ಮಂಡ್ಯ | ಮಂಡ್ಯ, ಶ್ರೀರಂಗಪಟ್ಟಣ |
| | | 71. ಮದ್ದೂರು | ಮದ್ದೂರು, ಮಳವಳ್ಳಿ |
| | | 72. ಕೃಷ್ಣರಾಜಪೇಟೆ | ಕೃಷ್ಣರಾಜಪೇಟೆ |
| | | 73. ನಾಗಮಂಗಲ | ನಾಗಮಂಗಲ, ಪಾಂಡವಪುರ |
| | | **ಬೆಳಗಾಂ ಕಂದಾಯ ವಿಭಾಗ** | |
| 16. | ಬೆಳಗಾವಿ | 74. ಬೆಳಗಾವಿ | ಬೆಳಗಾವಿ |
| | | 75. ಬೈಲಹೊಂಗಲ | ಬೈಲಹೊಂಗಲ |
| | | 76. ಅಥಣಿ | ಅಥಣಿ |
| | | 77. ಗೋಕಾಕ್ | ಗೋಕಾಕ್ |
| | | 78. ಕುಡಚಿ | ರಾಯಭಾಗ್ |
| | | 79. ನಂದಗಡ | ಖಾನಾಪುರ |
| | | 80. ರಾಮದುರ್ಗ | ರಾಮದುರ್ಗ |
| | | 81. ಸೌಂದತ್ತಿ | ಸೌಂದತ್ತಿ |
| | | 82. ನಿಪ್ಪಾಣಿ | ಚಿಕ್ಕೋಡಿ |
| | | 83. ಸಂಕೇಶ್ವರ | ಹುಕ್ಕೇರಿ |
| 17. | ಬಿಜಾಪುರ | 84. ಬಿಜಾಪುರ | ಬಿಜಾಪುರ, ಬಸವನಬಾಗೇವಾಡಿ |
| | | 85. ಸಿಂಧಗಿ | ಸಿಂಧಗಿ, ಇಂಡಿ |
| | | 86. ತಾಳಿಕೋಟೆ | ಮುದ್ದೇಬಿಹಾಳ |

| 1 | 2 | 3 | 4 |
|---|---|---|---|
| 18. | ಬಾಗಲ ಕೋಟೆ | 87. ಬಾಗಲ ಕೋಟೆ | ಬಾಗಲ ಕೋಟೆ, ಬೀಳಗಿ |
| | | 88. ಬಾದಾಮಿ | ಬಾದಾಮಿ |
| | | 89. ಹುನಗುಂದ | ಹುನಗುಂದ |
| | | 90. ಜಮಖಂಡಿ | ಜಮಖಂಡಿ |
| | | 91. ಮಹಾಲಿಂಗಪುರ | ಮುಧೋಳ |
| 19. | ಧಾರವಾಡ | 92. ಧಾರವಾಡ | ಧಾರವಾಡ |
| | | 93. ಅಣ್ಣಿಗೇರಿ | ನವಲ ಗುಂದ |
| | | 94. ಹುಬ್ಬಳ್ಳಿ | ಹುಬ್ಬಳ್ಳಿ |
| | | 95. ಕುಂದಗೋಳ | ಕುಂದಗೋಳ |
| | | 96. ಕಲ ಘಟಗಿ | ಕಲಘಟಗಿ, ಶಿಗ್ಗಾಂವಿ |
| | | 97. ಗದಗ್ | ಗದಗ್ |
| | | 98. ಮುಂಡರಗಿ | ಮುಂಡರಗಿ |
| | | 99. ನರಗುಂದ | ನರಗುಂದ |
| | | 100. ರೋಣ (ಕೇಂದ್ರ ಸ್ಥಾನ ಹೊಳೆಆಲೂಲು) | ರೋಣ |
| 21. | ಹಾವೇರಿ | 101. ಲಕ್ಷ್ಮೇಶ್ವರ | ಶಿರಹಟ್ಟಿ |
| | | 102. ಹಾವೇರಿ | ಹಾವೇರಿ |
| | | 103. ಹಿರೇಕೆರೂರು | ಹಿರೇಕೆರೂರು |
| | | 104. ರಾಣೆಬೆನ್ನೂರು | ರಾಣೆಬೆನ್ನೂರು |
| | | 105. ಬ್ಯಾಡಗಿ | ಬ್ಯಾಡಗಿ |
| | | 106. ಸವಣೂರು | ಸವಣೂರು |
| | | 107. ಹಾನಗಲ್ | ಹಾನಗಲ್ |
| 22. | ಉತ್ತರ ಕನ್ನಡ | 108. ಹಳಿಯಾಳ | ಹಳಿಯಾಳ, ಸೂಪಾ |
| | | 109. ಕುಮಟಾ | ಕುಮಟಾ |
| | | 110. ಹೊನ್ನಾವರ | ಹೊನ್ನಾವರ |
| | | 111. ಸಿದ್ದಾಪುರ | ಸಿದ್ದಾಪುರ |
| | | 112. ಯಲ್ಲಾಪುರ | ಯಲ್ಲಾಪುರ |
| | | 113. ಶಿರಸಿ | ಶಿರಸಿ |
| | | 114. ಮುಂಡಗೋಡ | ಮುಂಡಗೋಡ |
| | | 115. ಕಾರವಾರ | ಕಾರವಾರ, ಅಂಕೋಲ |
| | | **ಗುಲ್ಬರ್ಗಾ ಕಂದಾಯ ವಿಭಾಗ** | |
| 23. | ಗುಲ್ಬರ್ಗಾ | 116. ಗುಲ್ಬರ್ಗಾ | ಗುಲ್ಬರ್ಗಾ, ಅಫ್‌ಜಲ್‌ಪುರ, ಆಳಂದ, ಜೇವರ್ಗಿ |
| | | 117. ಚಿತ್ತಾಪುರ | ಚಿತ್ತಾಪುರ |
| | | 118. ಶಹಾಪುರ | ಶಹಾಪುರ |
| | | 119. ಸೋಲಾಪುರ | ಸೋಲಾಪುರ |
| | | 120. ಸೇಡಂ | ಸೇಡಂ |
| | | 121. ಯಾದಗಿರಿ | ಯಾದಗಿರಿ |
| | | 122. ಚಿಂಚೋಳಿ | ಚಿಂಚೋಳಿ |
| 24. | ಬಳ್ಳಾರಿ | 123. ಬಳ್ಳಾರಿ | ಬಳ್ಳಾರಿ, ಸಂಡೂರು |
| | | 124. ಕೊಟ್ಟೂರು | ಕೂಡ್ಲಗಿ |
| | | 125. ಹೊಸಪೇಟೆ | ಹೊಸಪೇಟೆ |
| | | 126. ಹಗರಿಬೊಮ್ಮನಹಳ್ಳಿ | ಹಗರಿ ಬೊಮ್ಮನಹಳ್ಳಿ |

| 1 | 2 | 3 | 4 |
|---|---|---|---|
| | | 127. ಹಡಗಲಿ | ಹಡಗಲಿ |
| | | 128. ಸಿರುಗುಪ್ಪ | ಸಿರುಗುಪ್ಪ |
| 25. | ಬೀದರ್ | 129. ಬೀದರ್ | ಬೀದರ್ |
| | | 130. ಹುಮ್ನಾಬಾದ್ | ಹುಮ್ನಾಬಾದ್ |
| | | 131. ಬಸವಕಲ್ಯಾಣ | ಬಸವಕಲ್ಯಾಣ |
| | | 132. ಭಾಲ್ಕಿ | ಭಾಲ್ಕಿ |
| | | 134. ರಾಯಚೂರು | ರಾಯಚೂರು |
| | | 135. ಲಿಂಗಸುಗೂರು | ಲಿಂಗಸುಗೂರು |
| | | 136. ಮಾನ್ವಿ | ಮಾನ್ವಿ |
| | | 137. ಕೊಪ್ಪಳ | ಕೊಪ್ಪಳ |
| | | 138. ಗಂಗಾವತಿ | ಗಂಗಾವತಿ |
| | | 139. ಯಲಬುರ್ಗಾ (ಕೇಂದ್ರ ಕಾರ್ಯಸ್ಥಾನ ಕಾಕನೂರು) | ಯಲಬುರ್ಗಾ |
| | | 140. ಕುಷ್ಟಗಿ | ಕುಷ್ಟಗಿ |
| | | 141. ಸಿಂಧನೂರು | ಸಿಂಧನೂರು |

ಸಹಿ
ಎಸ್. ಇಂದುಮತಿ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಅನುಬಂಧ – 2**

**(ಅಧಿಸೂಚನೆ ಸಂ. ಸ.ಇ. 10 : ಎಂ.ಆರ್.ಇ. 2001, ದಿನಾಂಕ: 30.10.2001)**

**I. ಪಶು ಸಂಗೋಪನೆ**

1. ಜಾನುವಾರುಗಳು
2. ಮೇಕೆಗಳು
3. ಕುರಿಗಳು

**II. ನೂಲು, ಎಳೆ**

1. ಹತ್ತಿ (ಬೀಜ ತೆಗೆದ ಮತ್ತು ತೆಗೆಯದ)

**III. ಹೂಗಳು**

1. ಎಲ್ಲಾ ಹೂಗಳು

**IV. ಆಹಾರ ಧಾನ್ಯಗಳು**

1. ಸಜ್ಜೆ
2. ಜವೆಗೋಧಿ
3. ಜೋಳ
4. ಕಂಬು
5. ಮೆಕ್ಕೆ ಜೋಳ
6. ನವಣಿ
7. ಭತ್ತ
8. ರಾಗಿ
9. ಅಕ್ಕಿ
10. ಸಾಮೆ (ಸಾವೆ)
11. ಗೋಧಿ

**V. ಅರಣ್ಯ ಉತ್ಪನ್ನಗಳು**

1. ಅಂಟುವಾಳ
2. ಬೊಂಬು
3. ಭತ್ತ

4. ಹಿಪ್ಪೇ ಬೀಜ
5. ಹೊಂಗೇಬೀಜ
6. ಬೇವಿನ ಬೀಜ
7. ಸೀಗೇಕಾಯಿ
8. ಹುಣಸೇಹಣ್ಣು
9. ಹುಣಸೇಬೀಜ

**VI. ಹಣ್ಣುಗಳು**

1. ಸೇಬು
2. ಬಾಳೆಹಣ್ಣು
3. ಬೋರೇಹಣ್ಣು
4. ಹುಳಿಹಣ್ಣುಗಳು
5. ಚಕ್ಕೋತನಾ ಹಣ್ಣು
6. ಪೇರಳೆ ಹಣ್ಣು (ಸೀಬೇಹಣ್ಣು)
7. ದ್ರಾಕ್ಷಿ
8. ಹಲಸಿನ ಹಣ್ಣು
9. ಜಂಬು ನೇರಳೆ ಹಣ್ಣು
10. ನಿಂಬೆಹಣ್ಣು
11. ಕರಬೂಜ
12. ಮಾವಿನಹಣ್ಣು
13. ಮೂಸಂಬಿ
14. ಮರಸೇಬು
15. ಪೈನಾಪಲ್ (ಅನಾನಸ್)
16. ಪಪ್ಪಾಯಿ ಹಣ್ಣು (ಪರಂಗಿ ಹಣ್ಣು)
17. ದಾಳಿಂಬೆಹಣ್ಣು
18. ಸಪೋಟ
19. ಸಿದ್ದೋಟ
20. ಕಿತ್ತಳೆ
21. ಕಲ್ಲಂಗಡಿ

**VII. ಎಣ್ಣೆ ಬೀಜಗಳು**

1. ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ)
2. ಹರಳು ಬೀಜ
3. ಹತ್ತಿ ಬೀಜ
4. ಅಗಸೆ ಬೀಜ
5. ಸಾಸಿವೆ
6. ಉಚ್ಚೆಳ್ಳು
7. ಕುಸುಬೆ
8. ಎಳ್ಳು
9. ಸೂರ್ಯಕಾಂತಿ ಬೀಜ
10. ಸೋಯಾಬೀನ್

**VIII. ತೋಟಗಾರಿಕೆ ಬೆಳೆಗಳು ಮತ್ತು ಸಂಬಾರ ಪದಾರ್ಥಗಳು**

1. ಅಡಿಕೆ
2. ಗೋಡಂಬಿ ಬೀಜ
3. ಒಣ ಮೆಣಸಿನಕಾಯಿ
4. ತೆಂಗಿನಕಾಯಿ
5. ಕೊಬ್ಬರಿ

6. ಕೊತ್ತಂಬರಿ ಬೀಜ (ಧನಿಯ)
7. ಬೆಳ್ಳುಳ್ಳಿ
8. ಶುಂಠಿ
9. ಮೆಂತ್ಯೆ
10. ಕಾಳು ಮೆಣಸು
11. ಅರಿಶಿನ

**IX. ದ್ವಿದಳ ಧಾನ್ಯಗಳು**

1. ಅಲಸಂದೆ (ಇಡೀ ಮತ್ತು ಒಡೆದ)
2. ಅವರೆ (ಇಡೀ ಮತ್ತು ಒಡೆದ)
3. ಕಡ್ಲೆ (ಇಡೀ ಮತ್ತು ಒಡೆದ)
4. ಉದ್ದು (ಇಡೀ ಮತ್ತು ಒಡೆದ)
5. ಬುಲ್ಲರ್ (ಇಡೀ ಮತ್ತು ಒಡೆದ)
6. ಹೆಸರು (ಇಡೀ ಮತ್ತು ಒಡೆದ)
7. ಹುರುಳಿ
8. ಲಾಕ್ (ಇಡೀ ಮತ್ತು ಒಡೆದ)
9. ಮಡಿಕೆ (ಮಟಕಿ) (ಇಡೀ ಮತ್ತು ಒಡೆದ)
10. ಚೆನ್ನಂಗಿ (ಇಡೀ ಮತ್ತು ಒಡೆದ)
11. ಬಟಾಣಿ
12. ತೊಗರಿ (ಇಡೀ ಮತ್ತು ಒಡೆದ)
13. ಮೋಠ್ (ಇಡೀ ಮತ್ತು ಒಡೆದ)

**X ತರಕಾರಿಗಳು**

1. ಎಲ್ಲಾ ತರಕಾರಿಗಳು (ಸೊಪ್ಪುಗಳೂ ಸೇರಿಸಿ)
2. ಕಾಯಿಗಳು
3. ಹಸಿರು ಮೆಣಸಿನಕಾಯಿ
4. ಈರುಳ್ಳಿ
5. ಆಲೂಗಡ್ಡೆ
6. ಸುವರ್ಣಗಡ್ಡೆ
7. ಸಿಹಿಗೆಣಸು (ಗೆಣಸು)
8. ಟೊಮ್ಯಾಟೊ

**XI. ಮರಮುಟ್ಟುಗಳು**

1. ಬೀಟೆ (ರೋಸ್‌ವುಡ್)
2. ಬಿಲ್ವಾಲ
3. ಉರುವಲು ಕಟ್ಟಿಗೆ
4. ಗಂಜಾನ್
5. ಹಡಗ
6. ಹಳದಿ
7. ಹನಿಮುತ್ತಲ್
8. ಹೊನ್ನೆ
9. ಐಯಾನಿ
10. ಈರುಳ್ಳಿ
11. ಜಂಬ
12. ಕಲನ್
13. ಕಿಂಡಲ್
14. ಮಾವಿನಮರ
15. ಮತ್ತಿ
16. ನಂದಿ

17. ರಾಂಪತ್ರೆ
18. ತೇಗ (ಸಾಗವಾನಿ)
19. ಬಿಳಿ ದೇವದಾರ್ (ಕೇದರ)
20. ಸಿಲ್ವರ್ ಓಕ್
21. ನೀಲಗಿರಿ

**XII.** **ಇತರೆ ಉತ್ಪನ್ನಗಳು**

1. ವೀಳ್ಯದೆಲೆ
2. ಬೆಲ್ಲ
3. ತೆಂಗಿನಕಡ್ಡಿ
4. ಒಣದ್ರಾಕ್ಷಿ

ಸಹಿ
ಎಸ್. ಇಂದುಮತಿ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಅನುಬಂಧ–2**

**(ಅಧಿಸೂಚನೆ ಸಂ. ಸಸಿ 10ಃ ಎಂ.ಆರ್.ಇ. 2001, ದಿನಾಂಕ 30.10.2001**

| ಕ್ರ. ಸಂ. | ಜಿಲ್ಲೆಯ ಉತ್ಪನ್ನ | ಕೃಷಿ ಉತ್ಪನ್ನ | ಮಾರುಕಟ್ಟೆ ಕ್ಷೇತ್ರ (ತಾಲೂಕುಗಳು) | ಮಾರುಕಟ್ಟೆ ಕ್ಷೇತ್ರದಲ್ಲಿ ನಿರ್ದಿಷ್ಟಪಡಿಸಿದ ಕೃಷಿ ಉತ್ಪನ್ನಗಳು |
|---|---|---|---|---|
| 1 | 2 | 3 | 4 | 5 |
| 1. | ಬೆಂಗಳೂರು ನಗರ ಜಿಲ್ಲೆ | ಹಣ್ಣು ಮತ್ತು ತರಕಾರಿ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ | ಬೆಂಗಳೂರು (ಉತ್ತರ) ಬೆಂಗಳೂರು (ದಕ್ಷಿಣ) ಆನೇಕಲ್ | **ತರಕಾರಿಗಳು:** ಬದನೆಕಾಯಿ, ಬೆಂಡೆಕಾಯಿ, ಸೌತೆಕಾಯಿ, ಕುಂಬಳಕಾಯಿ, ಬೂದುಕುಂಬಳಕಾಯಿ, ಸೋರೆಕಾಯಿ, ಹೀರೇಕಾಯಿ, ಪಡವಲಕಾಯಿ, ಹಾಗಲಕಾಯಿ, ಅವರೆಕಾಯಿ, ಹಸಿರುಮೆಣಸಿನಕಾಯಿ, ಹುರುಳಿಕಾಯಿ, ತೊಗರಿಕಾಯಿ, ಸಿಹಿಗೆಣಸು, ಮರಗೆಣಸು (ಟೋಪಿಕ್) ಬೀಟ್‌ರೂಟ್, ಕ್ಯಾರೆಟ್, ಮೂಲಂಗಿ, ಸುವರ್ಣಗೆಡ್ಡೆ, ಬಟಾಣಿ, ಗೋರಿಕಾಯಿ (ಕ್ಲಸ್ಟರ್‌ಬೀನ್ಸ್), ಬಾಳೇಕಾಯಿ, ಮಾವಿನಕಾಯಿ, ನೆಲ್ಲಿಕಾಯಿ, |

| | | | | |
|---|---|---|---|---|
| | | | | ಸೀಮೆಬದನೇಕಾಯಿ,<br>ಚಪ್ಪರದವರೆಕಾಯಿ, ಅಲಸಂದೆಕಾಯಿ,<br>ನುಗ್ಗೆಕಾಯಿ,<br>ತೊಂಡೆಕಾಯಿ,<br>ಹುರಳಿಕಾಯಿ,<br>ಎಲೆಕೋಸು,<br>ಕಾಲಿಫ್ಲವರ್,<br>ನವಲಕೋಲ್,<br>ಸೊಪ್ಪುಗಳು,<br>ಟೊಮ್ಯಾಟೊ,<br>ಹಸಿಶುಂಠಿ<br>ಹಣ್ಣುಗಳುಃ<br>ಸೇಬು, ಮರಸೇಬು, ದ್ರಾಕ್ಷಿ, ಅನಾನಸ್,<br>ಸೀಬೇಹಣ್ಣು,<br>ನೇರಳೆಹಣ್ಣು ದಾಳಿಂಬೆಹಣ್ಣು,<br>ಮಾವಿನಹಣ್ಣು, ಹಲಸಿನಹಣ್ಣು,<br>ಮೂಸಂಬಿ, ಕಿತ್ತಳೆಹಣ್ಣು, ಕಲ್ಲಂಗಡಿ<br>ಹಣ್ಣು, ಕರಬೂಜ, ಸಿದ್ದೋಟ, ಚಕೋತ<br>ಹಣ್ಣು, ಬಾಳೇಹಣ್ಣು, ಅಂಜೂರ,<br>ಪಪ್ಪಾಯಿ, ಸಪೋಟ, ಬೋರೆಹಣ್ಣು,<br>ನಿಂಬೆಹಣ್ಣು.<br>ಇತರೆ ಉತ್ಪನ್ನಗಳುಃ<br>ವೀಳ್ಯದೆಲೆ. |

ಸಹಿ
ಎಸ್. ಇಂದುಮತಿ
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಸಂಖ್ಯೆ: ಸಹಕಾರ/10/ಎಂಇಆರ್ 2001,

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿ ಕಟ್ಟಡಗಳು,
ಬೆಂಗಳೂರು, ದಿನಾಂಕ: 2.1.2002.

**ಅಧಿಸೂಚನೆ**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) 65ನೇ ಪ್ರಕರಣದ (3)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಇದೇ ಸಂಖ್ಯೆಯ ದಿನಾಂಕ 30.10.2001ರ ಅಧಿಸೂಚನೆಯಲ್ಲಿ ಅಧಿಸೂಚಿಸಿರುವ ಕಾಲಿಕ ಅವಧಿಯನ್ನು 1.1.2002 ರಿಂದ 31.10.2002 ರವರೆಗೆ ಈ ಮೂಲಕ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಸಹಿ/
ಎಸ್. ಇಂದುಮತಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಕರ್ನಾಟಕ ಸರ್ಕಾರ**

ಸಂಖ್ಯೆ: ಸಹಕಾರ/10/ಎಂಇಆರ್ 2001,

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿ ಕಟ್ಟಡಗಳು,
ಬೆಂಗಳೂರು, ದಿನಾಂಕ: 25.1.2002.

**ಅಧಿಸೂಚನೆ**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ ಸಂಖ್ಯೆ 27) 65ನೇ ಪ್ರಕರಣದ (3)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಇದೇ ಸಂಖ್ಯೆಯ ದಿನಾಂಕ 2.1.2002ರ ಅಧಿಸೂಚನೆಯಲ್ಲಿ ಅಧಿಸೂಚಿಸಿರುವ ಕಾಲಿಕ ಅವಧಿಯನ್ನು 1.2.2002 ರಿಂದ 31.3.2002 ರವರೆಗೆ ಈ ಮೂಲಕ ಮತ್ತಷ್ಟು ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಸಹಿ/
**ಎಸ್. ಇಂದುಮತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ಮಾರುಕಟ್ಟೆ ಪ್ರಾಂಗಣದಲ್ಲಿ ಸ್ವತ್ತಿನ ಹಂಚಿಕೆ ನಿಯಂತ್ರಣ) ನಿಯಮಗಳು, 2004**

**ಪ್ರಕರಣಗಳ ಅನುಕ್ರಮಣಿಕೆ**

**ನಿಯಮಗಳು:**

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂ. ಸಿಡಿ 58 ಎಂಆರ್‌ಇ 2002, ಬೆಂಗಳೂರು, ದಿನಾಂಕ 9ನೇ ಜುಲೈ, 2004**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) 146ನೆಯ ಪ್ರಕರಣದ (1)ನೇ ಉಪಪ್ರಕರಣದಿಂದ ಅಗತ್ಯಪಡಿಸಲಾದಂತೆ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು, 1968ನ್ನು 23ನೆಯ ಅಕ್ಟೋಬರ್, 2003ರ ಅಧಿಸೂಚನೆ ಸಂಖ್ಯೆ ಸಿಎಇ/58/ಎಂಆರ್ ಇ/2002ನ್ನು 30ನೆಯ ಅಕ್ಟೋಬರ್ 2003ರ ರಾಜ್ಯಪತ್ರದ ಭಾಗ– iv–ಎ ವಿಶೇಷ ಸಂಚಿಕೆಯಲ್ಲಿ ನಿಯಮಗಳ ಕರಡನ್ನು ಪ್ರಕಟಿಸುವ ಮೂಲಕ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ಬಾಧಕವಾಗಬಹುದಾದ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಲಾಗಿದ್ದುದರಿಂದ.

ಸದರಿ ರಾಜ್ಯಪತ್ರವನ್ನು 2003ರ ಅಕ್ಟೋಬರ್ 30ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲಾಗಿದ್ದುದರಿಂದ;

ಮತ್ತು ಮೇಲೆ ನಿರ್ದಿಷ್ಟಪಡಿಸಲಾದ ಸದರಿ ಅವಧಿಯೊಳಗಾಗಿ ಸ್ವೀಕರಿಸಿದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ;

ಆದ್ದರಿಂದ ಈಗ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) 146ನೆಯ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ಮಾರುಕಟ್ಟೆ ಪ್ರಾಂಗಣಗಳಲ್ಲಿ ಸ್ವತ್ತಿನ ಹಂಚಿಕೆ ನಿಯಂತ್ರಣ) ನಿಯಮಗಳು, 2004 ಎಂದು ಕರೆಯತಕ್ಕದ್ದು.

(2) ಇವು, ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(1) 'ಅಧಿನಿಯಮ' ಎಂದರೆ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 ಎಂದು ಅರ್ಥ.

(2) 'ಹಂಚಿಕೆ ಪಡೆದವನು' ಎಂದರೆ, ಈ ನಿಯಮಗಳ ಮೇರೆಗೆ ಯಾವುದೇ ನಿವೇಶನ, ಗೋದಾಮು, ಅಂಗಡಿ, ಅಂಗಡಿ ಸಹಿತ ಗೋದಾಮು, ತೂಕದ ಯಂತ್ರ (ವೇಬ್ರಿಡ್ಜ್), ಚಿಲ್ಲರೆ ಅಂಗಡಿಗಳು, ಕ್ಯಾಂಟೀನು, ಚಹಾದ ಅಂಗಡಿಗಳು ಅಥವಾ ಇತರ ಕಟ್ಟಡಗಳ ಹಂಚಿಕೆ ಪಡೆದವನು ಎಂದು ಅರ್ಥ.

(3) 'ಅನುಬಂಧ' ಎಂದರೆ, ಈ ನಿಯಮಗಳಿಗೆ ಲಗತ್ತಿಸಿದ ಅನುಬಂಧಗಳು.

(4) 'ಮೂಲೆ ನಿವೇಶನ' ಎಂದರೆ, ಕಡೆಯ ಪಕ್ಷ ಎರಡು ಬದಿಗೆ ಪರಸ್ಪರ ಲಂಬಕೋನದಲ್ಲಿರುವ, ರಸ್ತೆಗಳಿಂದ ಸುತ್ತುವರೆದಿರುವ ಮತ್ತು ಅದನ್ನು ಒಳಗೊಂಡಿರುವ ನಿವೇಶನ ಎಂದು ಅರ್ಥ.

(5) 'ಪ್ರಸಕ್ತ ಮೌಲ್ಯ' ಎಂದರೆ, ಮಾರುಕಟ್ಟೆ ಸಮಿತಿಯು ಈಗಾಗಲೇ ಹಂಚಿಕೆ ಮಾಡಿದ ನಿವೇಶನದ ಮೌಲ್ಯ ಎಂದು ಅರ್ಥ.

(6) 'ಇಲಾಖೆ' ಎಂದರೆ, ಕೃಷಿ ಮಾರುಕಟ್ಟೆ ಇಲಾಖೆ ಎಂದು ಅರ್ಥ.

(7) 'ನಮೂನೆ' ಎಂದರೆ, ಈ ನಿಯಮಗಳಿಗೆ ಲಗತ್ತಿಸಿದ ನಮೂನೆ.

(8) 'ಲೈಸೆನ್ಸು ಹೊಂದಿರುವ ಮಾರುಕಟ್ಟೆ ಕಾರ್ಯನಿರ್ವಾಹಕ' ಎಂದರೆ, ದಲಾಲನಾಗಿ, ವ್ಯಾಪಾರಿಯಾಗಿ, ದಲ್ಲಾಳಿಯಾಗಿ, ಆಮದು ಮಾಡಿಕೊಳ್ಳುವವನಾಗಿ, ಜಿನ್ನರ್‌ನಾಗಿ, ಪ್ರೆಸ್ಸರ್‌ನಾಗಿ, ಕ್ರಶರ್‌ನಾಗಿ, ದಾಸ್ತಾನುದಾರನಾಗಿ, ಉಗ್ರಾಣದಾರನಾಗಿ, ರಫ್ತುದಾರನಾಗಿ ಲೈಸೆನ್ಸ್ ಹೊಂದಿರುವ ವ್ಯಕ್ತಿ ಎಂದು ಅರ್ಥ.

(9) 'ಸೇವಾ ಸಂಸ್ಥೆಗಳು' ಇದು ಅಂಚೆ ಇಲಾಖೆಯನ್ನು, ತಂತಿ ಇಲಾಖೆಯನ್ನು, ಪೊಲೀಸು ಇಲಾಖೆಯನ್ನು, ಅಗ್ನಿಶಾಮಕ ಸೇವೆಯನ್ನು, ಬ್ಯಾಂಕನ್ನು ಮತ್ತು ಆಸ್ಪತ್ರೆಯನ್ನು ಅಥವಾ ಪಶುವೈದ್ಯಕೀಯ ಆಸ್ಪತ್ರೆಯನ್ನು ಅಥವಾ ಕಾಲಕಾಲಕ್ಕೆ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂತೆ ಇತರ ಸರ್ಕಾರಿ ಕಚೇರಿಗಳನ್ನು ಒಳಗೊಳ್ಳುತ್ತದೆ.

**3. ಗುತ್ತಿಗೆ ಸಹಿತ ಮಾರಾಟ ಆಧಾರದ ಮೇಲೆ ಹಂಚಿಕೆಗಾಗಿ ನಿವೇಶನ, ಇತ್ಯಾದಿಗಳ ನೀಡಿಕೆ.–** (1) ಮಾರುಕಟ್ಟೆ ಸಮಿತಿಯು, ಈ ನಿಯಮಗಳು ಮತ್ತು ರಾಜ್ಯ ಸರ್ಕಾರದ ಸಾಮಾನ್ಯ ಮತ್ತು ವಿಶೇಷ ಆದೇಶಗಳಿಗೊಳಪಟ್ಟು, ಮಾರುಕಟ್ಟೆ ಪ್ರಾಂಗಣದಲ್ಲಿ ಗುತ್ತಿಗೆ ಸಹಿತ ಮಾರಾಟ ಆಧಾರದ ಮೇಲೆ ನಿವೇಶನಗಳನ್ನು, ಅಂಗಡಿಗಳನ್ನು, ಗೋದಾಮುಗಳನ್ನು ಅಥವಾ ಅಂಗಡಿ ಸಹಿತ ಗೋದಾಮುಗಳನ್ನು ಹಂಚಿಕೆಗಾಗಿ ನೀಡಬಹುದು.

(2) ಅಂಥ ಹಂಚಿಕೆಗೆ ಸಂಬಂಧಪಟ್ಟಂತೆ ಸ್ಥಳವನ್ನು, ನಿವೇಶನಗಳ ಸಂಖ್ಯೆಯನ್ನು, ಗೋದಾಮುಗಳನ್ನು, ಅಂಗಡಿ ಸಹಿತ ಗೋದಾಮುಗಳು ಯಾವುವಾದರೂ ಇದ್ದರೆ ಅವುಗಳನ್ನು ಅರ್ಜಿ ಸಲ್ಲಿಸಲು ಇರುವ ಕೊನೆಯ ದಿನಾಂಕವನ್ನು ಮತ್ತು ಅಂಥ

ಇತರ ವಿವರಗಳನ್ನು ನಿರ್ದಿಷ್ಟಪಡಿಸಿ ಮಾರುಕಟ್ಟೆ ಸಮಿತಿಯ ಕಚೇರಿಯ ಸೂಚನಾ ಫಲಕದಲ್ಲಿ ನೋಟೀಸನ್ನು ಅಂಟಿಸುವ ಮೂಲಕ ಮತ್ತು ಮಾರುಕಟ್ಟೆ ಪ್ರದೇಶದಲ್ಲಿ ವ್ಯಾಪಕ ಪ್ರಸಾರವುಳ್ಳ ಎರಡಕ್ಕಿಂತ ಕಡಿಮೆ ಇಲ್ಲದ ಕನ್ನಡ ಸಮಾಚಾರ ಪತ್ರಿಕೆಗಳಲ್ಲಿ ಪ್ರಕಟಿಸುವ ಮೂಲಕ ಸೂಕ್ತ ಪ್ರಚಾರ ನೀಡತಕ್ಕದ್ದು.

(3) ಮಾರುಕಟ್ಟೆ ಸಮಿತಿಯು, ನಿವೇಶನಗಳನ್ನು, ಗೋದಾಮುಗಳನ್ನು, ಅಂಗಡಿಗಳನ್ನು ಅಥವಾ ಅಂಗಡಿ ಸಹಿತ ಗೋದಾಮುಗಳನ್ನು ಗುತ್ತಿಗೆ ಸಹಿತ ಮಾರಾಟ ಆಧಾರದ ಮೇಲೆ ಹಂಚಿಕೆ ಮಾಡುವ ಸಂಬಂಧದಲ್ಲಿ ಅರ್ಜಿಗಳನ್ನು ಕರೆದಾಗ, 6ನೇ ನಿಯಮದ ಮೇರೆಗೆ ನೋಂದಾಯಿಸಿದ, ಲೈಸೆನ್ಸು ಪಡೆದ ಯಾರೇ ಮಾರುಕಟ್ಟೆ ಕಾರ್ಯನಿರ್ವಾಹಕನು ನಿವೇಶನದ, ಗೋದಾಮಿನ, ಅಂಗಡಿಯ ಅಥವಾ ಸಂದರ್ಭಾನುಸಾರ ಅಂಗಡಿ ಸಹಿತ ಗೋದಾಮುಗಳ ಸಂಬಂಧದಲ್ಲಿ ಅದರ ಮೌಲ್ಯದ ಶೇಕಡಾ ಇಪ್ಪತ್ತೈದಕ್ಕಿಂತ ಕಡಿಮೆಯಲ್ಲದ ಆರಂಭಿಕ ಠೇವಣಿಯೊಂದಿಗೆ, ನಮೂನೆ–III ರಲ್ಲಿ ಮಾರುಕಟ್ಟೆ ಸಮಿತಿಗೆ ಅರ್ಜಿ ಸಲ್ಲಿಸತಕ್ಕದ್ದು.

(4) ಯಾರೇ ನೋಂದಾಯಿತ ಅರ್ಜಿದಾರನು ಮಾರುಕಟ್ಟೆ ಸಮಿತಿಯಿಂದ ಗುತ್ತಿಗೆ ಸಹಿತ ಮಾರಾಟ ಆಧಾರದ ಮೇಲೆ ನಿವೇಶನದ, ಗೋದಾಮಿನ, ಅಂಗಡಿಯ ಅಥವಾ ಅಂಗಡಿ ಸಹಿತ ಗೋದಾಮಿನ ಹಂಚಿಕೆಯನ್ನು ಪಡೆಯಲು ವಿಫಲವಾದಲ್ಲಿ, ಆ ಅರ್ಜಿದಾರನು ಆ ನೋಂದಣಿ ಪ್ರಮಾಣ ಪತ್ರವನ್ನು ಹಿಂದಿರುಗಿಸುವ ಮೂಲಕ ನೋಂದಣಿಯನ್ನು ಹಿಂದಕ್ಕೆ ಪಡೆದ ಹೊರತು, ಆ ನೋಂದಣಿಯು ನಂತರದ ಹಂಚಿಕೆಗಳಿಗೆ ಕೂಡ ಸಿಂಧುವಾಗಿರತಕ್ಕದ್ದು.

(5) ಮಾರುಕಟ್ಟೆ ಸಮಿತಿಯು, 4ನೇ, 5ನೇ, 7ನೇ ಮತ್ತು 8ನೇ ನಿಯಮಗಳ ಉಪಬಂಧಗಳನ್ನು ಗಮನದಲ್ಲಿಟ್ಟುಕೊಂಡು ಗುತ್ತಿಗೆ ಸಹಿತ ಮಾರಾಟದ ಆಧಾರದ ಮೇಲೆ ನಿವೇಶನದ, ಅಂಗಡಿಯ, ಅಂಗಡಿ ಸಹಿತ ಗೋದಾಮಿನ ಹಂಚಿಕೆ ಮಾಡಬಹುದು.

**4. ನಿವೇಶನ, ಇತ್ಯಾದಿಗಳ ಮೌಲ್ಯ ನಿರ್ಧರಣೆ.–** (1) ಮಾರುಕಟ್ಟೆ ಸಮಿತಿಯು, ಗುತ್ತಿಗೆ ಸಹಿತ ಮಾರಾಟ ಆಧಾರದ ಮೇಲೆ ಹಂಚಿಕೆ ಮಾಡಬೇಕಾದ ನಿವೇಶನದ, ಅಂಗಡಿಯ, ಗೋದಾಮಿನ ಅಥವಾ ಅಂಗಡಿ ಸಹಿತ ಗೋದಾಮಿನ ಮೌಲ್ಯನಿರ್ಧರಣಾ ಪ್ರಮಾಣಪತ್ರವನ್ನು ಸಂಬಂಧಪಟ್ಟ ಸಹಾಯಕ ಕಾರ್ಯನಿರ್ವಾಹಕ ಇಂಜನಿಯರನಿಂದ (ಮಾರುಕಟ್ಟೆ ಅಭಿವೃದ್ಧಿ ಯೋಜನೆ) ಪಡೆಯತಕ್ಕದ್ದು. ಅವರು, (2)ನೆಯ ಉಪನಿಯಮದ ಉಪಬಂಧಗಳನ್ನು ಗಮನದಲ್ಲಿಟ್ಟುಕೊಂಡು ಮೌಲ್ಯನಿರ್ಧರಣಾ ಪ್ರಮಾಣಪತ್ರವನ್ನು ನೀಡತಕ್ಕದ್ದು. ಮಾರುಕಟ್ಟೆ ಸಮಿತಿಯು ಯುಕ್ತ ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಿ, ಸಹಾಯಕ ಕಾರ್ಯನಿರ್ವಾಹಕ ಇಂಜನಿಯರನು ಹಾಗೆ ನಿಗದಿಪಡಿಸಿದ ಮೌಲ್ಯವನ್ನು ಹೆಚ್ಚಿಸಬಹುದು. ಸಹಾಯಕ ಕಾರ್ಯನಿರ್ವಾಹಕ ಇಂಜನಿಯರು ಅಥವಾ ಮಾರುಕಟ್ಟೆ ಸಮಿತಿಯು ಹಾಗೆ ನಿಗದಿಪಡಿಸಿದ ಮೌಲ್ಯವು ಕೃಷಿ ಮಾರುಕಟ್ಟೆಯ ನಿರ್ದೇಶಕರ ಅನುಮೋದನೆಗೊಳಪಟ್ಟಿರತಕ್ಕದ್ದು. ಅವರು ಕಾರಣಗಳನ್ನು ದಾಖಲಿಸಿದ ನಂತರ ಅಂಥ ಮಾರ್ಪಾಟುಗಳೊಂದಿಗೆ ಅನುಮೋದನೆ ನೀಡಬಹುದು.

(2) ಗುತ್ತಿಗೆ ಸಹಿತ ಮಾರಾಟದ ಆಧಾರದ ಮೇಲೆ ಹಂಚಿಕೆ ಮಾಡುವ ನಿವೇಶನದ, ಅಂಗಡಿಯ, ಗೋದಾಮಿನ ಅಥವಾ ಅಂಗಡಿ ಸಹಿತ ಗೋದಾಮಿನ ಮೌಲ್ಯವನ್ನು ನಿರ್ಧರಿಸುವಾಗ ಈ ಕೆಳಕಂಡ ಸಂಗತಿಗಳನ್ನು ಪರಿಗಣಿಸತಕ್ಕದ್ದು:–

(i) ಹೆಚ್ಚಿನ ಪರಿಹಾರವನ್ನು ಸಂದಾಯ ಮಾಡಿರುವುದನ್ನೂ ಒಳಗೊಂಡಂತೆ ಭೂ ಸ್ವಾಧೀನಕ್ಕಾಗಿ ಮಾಡಿದ ಖರ್ಚು ಮತ್ತು ಭೂಸ್ವಾಧೀನದ ದಿನಾಂಕದಿಂದ ವರ್ಷಕ್ಕೆ ಶೇಕಡಾ ಐದರ ಬಡ್ಡಿದರದಲ್ಲಿ ಸಂದಾಯ ಮಾಡಿದ ಬಡ್ಡಿಯ ಮೊಬಲಗು.

(ii) ರಸ್ತೆಗಳು, ಚರಂಡಿಗಳು, ಅಡಿಗಾಲುವೆಗಳು, ವಿದ್ಯುದ್ದೀಕರಣ, ನೀರು ಪೂರೈಕೆ, ಕಾಂಪೌಂಡು ಗೋಡೆ / ಬೇಲಿ ಹಾಕುವುದು, ಹರಾಜು ಕಟ್ಟೆ, ಬ್ಯಾಂಕು, ಅಂಚೆ ಕಚೇರಿ ಕಟ್ಟಡ, ಶ್ರಮಿಕ ಭವನ, ರೈತ ಭವನ, ಸಮುದಾಯ ಭವನ, ಕಚೇರಿ ಕಟ್ಟಡ, ಅತಿಥಿ ಗೃಹ, ಒಣಹಾಕುವುದಕ್ಕೆ ಕಟ್ಟೆ, ಸುಂಕದಕಟ್ಟೆ, ತೂಕ ಮಾಡುವ ಯಂತ್ರ (ವೇಬ್ರಿಜ್), ಪಶು ಚಿಕಿತ್ಸಾಲಯ, ಕ್ಯಾಂಟೀನು ಕಟ್ಟಡ ಇತ್ಯಾದಿಗಳಂಥ ಮೂಲ ಸೌಕರ್ಯಗಳನ್ನು ಮಾರುಕಟ್ಟೆ ಪ್ರಾಂಗಣದಲ್ಲಿ ಒದಗಿಸುವುದಕ್ಕಾಗಿ ಖರ್ಚು ಮಾಡಲಾದ ಮೊಬಲಗು ಮತ್ತು ಅಂಥ ಮೊತ್ತದ ಮೇಲೆ, ಖರ್ಚು ಮಾಡಿದ ವರ್ಷದಿಂದ ವಾರ್ಷಿಕ ಶೇಕಡಾ ಐದರ ದರದಲ್ಲಿ ಲೆಕ್ಕ ಹಾಕಿದ ಬಡ್ಡಿ.

(iii) ಅಂಗಡಿಯ, ಅಂಗಡಿ ಸಹಿತ ಗೋದಾಮಿನ ಅಥವಾ ಗೋದಾಮಿನ ಸಂಬಂಧದಲ್ಲಿ, ಅಂಗಡಿಯ, ಅಂಗಡಿ ಸಹಿತ ಗೋದಾಮಿನ ಅಥವಾ ಗೋದಾಮಿನ ನಿರ್ಮಾಣ ವೆಚ್ಚವನ್ನು ಕೂಡ ಈ ಮೇಲ್ಕಂಡ ಖಂಡಗಳಲ್ಲಿ ನಮೂದಿಸಿದ ಮೊಬಲಗಿನ ಜೊತೆಗೆ ಹೆಚ್ಚುವರಿಯಾಗಿ ಸೇರಿಸತಕ್ಕದ್ದು.

(iv) ಕಟ್ಟಡ ಮೌಲ್ಯದಲ್ಲಿನ ಇಳಿತವನ್ನು, ಲೋಕೋಪಯೋಗಿ ಇಲಾಖಾ ಸಂಹಿತೆಯಂತೆ ಲೆಕ್ಕ ಹಾಕತಕ್ಕದ್ದು.

**5. ನಿವೇಶನ ಮೌಲ್ಯವನ್ನು ಗೊತ್ತುಪಡಿಸಲು ಮಾನದಂಡಗಳು.–** (1) ನಿವೇಶನದ ಮೌಲ್ಯವನ್ನು ನಿರ್ಧರಿಸುವ ಉದ್ದೇಶಕ್ಕಾಗಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳನ್ನು ಹಿಂದಿನ ಹಣಕಾಸು ವರ್ಷದಲ್ಲಿ ಸಂಗ್ರಹಿಸಿದ ಮಾರುಕಟ್ಟೆ ಶುಲ್ಕವನ್ನು ಮತ್ತು ಅನುಬಂಧದಲ್ಲಿ ತೋರಿಸಲಾಗಿರುವಂತೆ 3ನೇ ನಿಯಮದ ಮೇರೆಗೆ ಹಂಚಿಕೆಗಾಗಿ ಕನಿಷ್ಠ ಮಾರ್ಗದರ್ಶಿ ಮೌಲ್ಯವನ್ನು ಆಧರಿಸಿ ವರ್ಗೀಕರಿಸಲಾಗಿದೆ.

(2) 4ನೇ ನಿಯಮದ ಮೇರೆಗೆ ಮೌಲ್ಯವನ್ನು ಅನುಮೋದಿಸುವಾಗ, ಕೃಷಿ ಮಾರುಕಟ್ಟೆ ನಿರ್ದೇಶಕನು ಈ ಕೆಳಕಂಡವುಗಳಲ್ಲಿ ಅತ್ಯಂತ ಹೆಚ್ಚಿನ ಮೌಲ್ಯವನ್ನು ಪರಿಗಣಿಸತಕ್ಕದ್ದು, ಎಂದರೆ.–

(i) ನಿವೇಶನದ ಪ್ರಸಕ್ತ ಮೌಲ್ಯ ;

(ii) ಅನುಬಂಧದಲ್ಲಿ ತೋರಿಸಲಾದಂತೆ ನಿವೇಶನದ ಕನಿಷ್ಠ ಮಾರ್ಗದರ್ಶಿ ಮೌಲ್ಯ ;

(iii) 4ನೇ ನಿಯಮದ ಮೇರೆಗೆ ನಿರ್ಧರಿಸಲಾದ ಮೌಲ್ಯ.

**6. ನೋಂದಣಿ.–** (1) ಪ್ರತಿಯೊಬ್ಬ ಲೈಸನ್ಸು ಪಡೆದ ಮಾರುಕಟ್ಟೆ ಕಾರ್ಯನಿರ್ವಾಹಕನು, ಗುತ್ತಿಗೆ ಸಹಿತ ಮಾರಾಟದ ಆಧಾರದ ಮೇಲೆ ಅಥವಾ ಸಂದರ್ಭಾನುಸಾರ ಅನುಮತಿ ಮತ್ತು ಲೈಸನ್ಸು ಆಧಾರದ ಮೇಲೆ, ನಿವೇಶನದ, ಅಂಗಡಿಯ, ಗೋದಾಮಿನ ಅಥವಾ ಅಂಗಡಿ ಸಹಿತ ಗೋದಾಮಿನ ಹಂಚಿಕೆಗಾಗಿ ಅರ್ಜಿ ಸಲ್ಲಿಸಲು ಇಚ್ಛಿಸಿದಲ್ಲಿ, ಅನುಬಂಧದಲ್ಲಿ ನಿರ್ದಿಷ್ಟಪಡಿಸಲಾದಂತೆ ಮರುಸಂದಾಯ ಮಾಡಲಾಗದ ನೋಂದಣಿ ಶುಲ್ಕದೊಂದಿಗೆ ನಮೂನೆ–I ರಲ್ಲಿ ಮಾರುಕಟ್ಟೆ ಸಮಿತಿಗೆ ನೋಂದಣಿಗಾಗಿ ಅರ್ಜಿ ಸಲ್ಲಿಸತಕ್ಕದ್ದು.

(2) ನೋಂದಣಿಗಾಗಿ ಅರ್ಜಿಯನ್ನು ಸ್ವೀಕರಿಸಿದ ನಂತರ, ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯು ಅದನ್ನು ಪರಿಶೋಧಿಸತಕ್ಕದ್ದು ಮತ್ತು ಅರ್ಜಿಯಲ್ಲಿರುವ ಸಂಗತಿಗಳು ಸರಿಯಾಗಿವೆಯೆಂದು ಕಂಡುಬಂದರೆ, ಅವನು ಅರ್ಜಿದಾರನ ಹೆಸರನ್ನು ನೋಂದಾಯಿಸಿಕೊಳ್ಳತಕ್ಕದ್ದು ಹಾಗೂ ನಮೂನೆ–II ರಲ್ಲಿ ಸ್ವೀಕೃತಿ ಪತ್ರ ನೀಡತಕ್ಕದ್ದು.

(3) ಈ ಉದ್ದೇಶಕ್ಕಾಗಿ ಮಾರುಕಟ್ಟೆ ಸಮಿತಿಯ ಕಚೇರಿಯಲ್ಲಿ ಪ್ರತ್ಯೇಕ ರಿಜಿಸ್ಟರನ್ನು ನಿರ್ವಹಿಸತಕ್ಕದ್ದು ಮತ್ತು ಅರ್ಜಿಯನ್ನು ಸ್ವೀಕರಿಸಿದ ದಿನಾಂಕಗಳನ್ನು ಆಧರಿಸಿ ಅರ್ಜಿಗಳನ್ನು ಕಾಲಾನುಕ್ರಮದಲ್ಲಿ ನಮೂದಿಸತಕ್ಕದ್ದು ಮತ್ತು ಯಾವ ಕಾರಣಗಳಿಗಾಗಿ ಅರ್ಜಿಯು ಸ್ವೀಕೃತವಾಗಿಲ್ಲವೋ ಅವುಗಳನ್ನು ಅರ್ಜಿದಾರನಿಗೆ ಲಿಖಿತದಲ್ಲಿ ತಿಳಿಸಿದ್ದ ಹೊರತು, ಅವುಗಳ ಕ್ರಮಸಂಖ್ಯೆಯೇ ನೋಂದಣಿ ಸಂಖ್ಯೆಯಾಗಿರತಕ್ಕದ್ದು.

**7. ಅರ್ಹತೆ.–** (1) ಲೈಸೆನ್ಸು ಹೊಂದಿರುವ ಮಾರುಕಟ್ಟೆ ಕಾರ್ಯನಿರ್ವಾಹಕನಾಗಿರದ ಮತ್ತು ಮಾರಾಟಗಾರನಿಗೆ ಅಥವಾ ಮಾರುಕಟ್ಟೆ ಸಮಿತಿಗೆ ಯಾವುದೇ ಬಾಕಿಗಳನ್ನು ಸಂದಾಯ ಮಾಡದೇ ವಿಫಲವಾಗಿರುವ ಮತ್ತು ಅಧಿಸೂಚಿತ ಕೃಷಿ ಉತ್ಪನ್ನದ ಮಾರುಕಟ್ಟೆ ವ್ಯವಹಾರದಲ್ಲಿ ಅಥವಾ ಕೃಷಿ, ತೋಟಗಾರಿಕೆಗೆ ಅಥವಾ ಪಶುಸಂಗೋಪನೆಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ತೊಡಗಿರದ ವ್ಯಕ್ತಿಗೆ ಅಥವಾ ಸಂಸ್ಥೆಗೆ ಅಥವಾ ಸಂಘಟನೆಗೆ ರಾಜ್ಯ ಅಥವಾ ಕೇಂದ್ರ ಉಗ್ರಾಣ ನಿಗಮಕ್ಕೆ, ಸೇವಾ ಸಂಸ್ಥೆಗಳಿಗೆ, ಮಾರುಕಟ್ಟೆ ಕಾರ್ಯನಿರ್ವಾಹಕರುಗಳ ನೋಂದಾಯಿತ ಸಂಘಗಳಿಗೆ ಅಥವಾ ಬ್ಯಾಂಕುಗಳಿಗೆ ಅಥವಾ ಎಸ್.ಟಿ.ಡಿ. ಬೂತುಗಳ ಸ್ಥಾಪನೆಗಾಗಿ ಮಾತ್ರವೇ ಅಥವಾ ಮಾರುಕಟ್ಟೆ ಬಳಕೆದಾರರ ಸಾಮಾನ್ಯ ಸೌಕರ್ಯಗಳ ನಿರ್ಮಾಣಕ್ಕಾಗಿ ಮಾತ್ರವೇ ಹೊರತು, ಮಾರುಕಟ್ಟೆ ಪ್ರಾಂಗಣದಲ್ಲಿ ಗುತ್ತಿಗೆ ಸಹಿತ ಮಾರಾಟದ ಆಧಾರದ ಮೇಲೆ ಅಥವಾ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ ಆಧಾರದ ಮೇಲೆ ನಿವೇಶನವನ್ನು, ಅಂಗಡಿಯನ್ನು, ಗೋದಾಮನ್ನು ಅಥವಾ ಅಂಗಡಿ ಸಹಿತ ಗೋದಾಮನ್ನು ಹಂಚಿಕೆ ಮಾಡತಕ್ಕದ್ದಲ್ಲ.

(2) ಲೈಸೆನ್ಸು ಹೊಂದಿರುವ ಮಾರುಕಟ್ಟೆ ಕಾರ್ಯನಿರ್ವಾಹಕನು ತನ್ನ ಹೆಸರಿನಲ್ಲಾಗಲಿ ಅಥವಾ ತಾನು ಪಾಲುದಾರನಾಗಿರುವ ಫರ್ಮಿನ ಹೆಸರಿನಲ್ಲಾಗಲಿ ಮಾರುಕಟ್ಟೆ ಪ್ರಾಂಗಣದಲ್ಲಿ ಈಗಾಗಲೇ ಒಂದು ನಿವೇಶನವನ್ನು, ಅಂಗಡಿಯನ್ನು, ಅಥವಾ ಅಂಗಡಿ ಸಹಿತ ಗೋದಾಮನ್ನು ಅಥವಾ ಇತರ ಕಟ್ಟಡವನ್ನು ಹೊಂದಿದ್ದರೆ ಅವನಿಗೆ ನಿವೇಶನವನ್ನು ಅಂಗಡಿಯನ್ನು ಅಥವಾ ಅಂಗಡಿ ಸಹಿತ ಗೋದಾಮನ್ನು ಅಥವಾ ಇತರ ಕಟ್ಟಡವನ್ನು ಈ ನಿಯಮಗಳ ಮೇರೆಗೆ ಹಂಚಿಕೆ ಮಾಡತಕ್ಕದ್ದಲ್ಲ.

**8. ಹಂಚಿಕೆಗಾಗಿ ಅರ್ಜಿದಾರರನ್ನು ಆಯ್ಕೆ ಮಾಡಲು ಸೂತ್ರಗಳು.–** (1) ಮಾರುಕಟ್ಟೆ ಸಮಿತಿಯು, 3ನೇ ಅಥವಾ 13ನೇ ನಿಯಮದ ಮೇರೆಗೆ ನಿವೇಶನದ, ಅಂಗಡಿಯ, ಗೋದಾಮಿನ ಅಥವಾ ಅಂಗಡಿ ಸಹಿತ ಗೋದಾಮಿನ ಹಂಚಿಕೆಯ ಸಂಬಂಧದಲ್ಲಿ, ಪ್ರತಿಯೊಬ್ಬ ಅರ್ಜಿದಾರನಿಗೆ ಸಂಬಂಧಿಸಿದಂತೆ ಆತನ ಅರ್ಹತೆಗಳನ್ನೇ ಪರಿಗಣಿಸತಕ್ಕದ್ದು ಮತ್ತು 3ನೇ ಅಥವಾ 13ನೇ ನಿಯಮದ ಮೇರೆಗೆ ಹಂಚಿಕೆಗೆ ಆಯ್ಕೆ ಮಾಡುವಾಗ ಈ ಕೆಳಗಿನ ಸೂತ್ರಗಳನ್ನು ಪರಿಗಣಿಸತಕ್ಕದ್ದು, ಎಂದರೆ,–

(i) ಅರ್ಜಿದಾರನ ಸ್ಥಾನಮಾನ, ಎಂದರೆ ವ್ಯಕ್ತಿಯೇ, ಅವಿಭಕ್ತ ಕುಟುಂಬವೇ ಅಥವಾ ಪಾಲುದಾರಿಕೆ ಫರ್ಮು;

(ii) ಲೈಸೆನ್ಸು ಪಡೆದ ಮಾರುಕಟ್ಟೆ ಕಾರ್ಯನಿರ್ವಾಹಕನು ಹಂಚಿಕೆಗಾಗಿ ಎಷ್ಟು ವರ್ಷಗಳಿಂದ ಕಾಯುತ್ತಿದ್ದಾನೆ ಮತ್ತು ಈ ಹಿಂದಿನ ಪ್ರಯತ್ನಗಳಲ್ಲಿ ಅರ್ಹತೆಯಿದ್ದಾಗಲೂ ಹಂಚಿಕೆ ಪಡೆಯಲು ಅಸಮರ್ಥನಾದುದು ;

(iii) ಕಳೆದ ಮೂರು ವರ್ಷಗಳ ಅವಧಿಯಲ್ಲಿ ಸಂದಾಯ ಮಾಡಿದ ಒಟ್ಟು ಮಾರುಕಟ್ಟೆ ಶುಲ್ಕ ಮತ್ತು ಒಂದು ವರ್ಷದಲ್ಲಿ ಸಂದಾಯ ಮಾಡಿದ ಸರಾಸರಿ ಮಾರುಕಟ್ಟೆ ಶುಲ್ಕ.

(2) ಹಂಚಿಕೆ ಮಾಡುವ ಸಮಯದಲ್ಲಿ, ಲೈಸೆನ್ಸು ಹೊಂದಿದ ಮಾರುಕಟ್ಟೆ ಕಾರ್ಯನಿರ್ವಾಹಕರಿಂದ ಸಾಕಷ್ಟು ಸಂಖ್ಯೆಯ ಅರ್ಜಿಗಳು ಬಾರದಿರುವಲ್ಲಿ, ಮಾರುಕಟ್ಟೆ ಸಮಿತಿಯು ಕೃಷಿ ಮಾರುಕಟ್ಟೆ ನಿರ್ದೇಶಕರ ಪೂರ್ವಾನುಮತಿ ಪಡೆದು ಈ ಮೇಲ್ಕಂಡ ಷರತ್ತುಗಳನ್ನು ಸಡಿಲಿಸಬಹುದು.

(3) ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯು, ಅರ್ಜಿದಾರರ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಿಂದ ಏಳು ದಿನಗಳ ಒಳಗಾಗಿ ಅಂಥ ಪಟ್ಟಿಯನ್ನು ಮಾರುಕಟ್ಟೆ ಸಮಿತಿಯ ಸೂಚನಾ ಫಲಕದ ಮೇಲೆ ಪ್ರಕಟಿಸುವಂತೆ ಮಾಡತಕ್ಕದ್ದು.

(4) ಅರ್ಜಿದಾರರ ಜೇಷ್ಠತಾ ಪಟ್ಟಿಯನ್ನು, ಅರ್ಜಿದಾರರ ಹೆಸರುಗಳು, ಹಂಚಿಕೆಗಾಗಿ ಅವರು ಮಾಡಿದ ಪ್ರಯತ್ನಗಳು, ಅವರು ಸಂದಾಯ ಮಾಡಿದ ಮೂರು ವರ್ಷಗಳ ಸರಾಸರಿ ಮಾರುಕಟ್ಟೆ ಶುಲ್ಕ ಒಳಗೊಂಡಂತೆ, ನಮೂನೆ ಸಂಖ್ಯೆ– ix ರಲ್ಲಿ ಸಿದ್ದಪಡಿಸತಕ್ಕದ್ದು ಮತ್ತು ಪಟ್ಟಿಯನ್ನು ಸಿದ್ಧಪಡಿಸುವಾಗ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸತಕ್ಕದ್ದು ಮತ್ತು ಅರ್ಜಿದಾರರು ಗಳಿಸಿದ ಅತ್ಯಧಿಕ ಅಂಕಗಳೇ ಜೇಷ್ಠತಾ ಕ್ರಮಕ್ಕೆ ಆಧಾರವಾಗಿರತಕ್ಕದ್ದು.

(i) ನಿರಂತರವಾಗಿ ಪೂರ್ಣಗೊಳಿಸಿದ ಲೈಸನ್ಸಿನ ಪ್ರತಿಯೊಂದು ವರ್ಷವನ್ನು ಎರಡು ಅಂಕಗಳಾಗಿ ಪರಿಗಣಿಸತಕ್ಕದ್ದು.

(ii) ಹಂಚಿಕೆಗಾಗಿ ಅರ್ಜಿದಾರನು ಮಾಡಿದ ಪ್ರತಿಯೊಂದು ಪ್ರಯತ್ನವನ್ನು ಎರಡು ಅಂಕಗಳಾಗಿ ಪರಿಗಣಿಸತಕ್ಕದ್ದು.

(iii) ಅರ್ಜಿದಾರನು ಸಂದಾಯಮಾಡಿದ ಸರಾಸರಿ ಮಾರುಕಟ್ಟೆ ಶುಲ್ಕದ ಒಂದು ಸಾವಿರ ರೂಪಾಯಿಗಳ ಪ್ರತಿಯೊಂದು ಘಟಕವನ್ನು ಒಂದು ಅಂಕವೆಂದು ಪರಿಗಣಿಸತಕ್ಕದ್ದು ಮತ್ತು ಒಂದು ಸಾವಿರ ರೂಪಾಯಿಗಳಿಗಿಂತ ಕಡಿಮೆಯಿರುವುದನ್ನು ಅಂಕಗಳ ಗಣನೆಯಲ್ಲಿ ಬಿಟ್ಟುಬಿಡತಕ್ಕದ್ದು.

**9. ಮೂಲೆ ನಿವೇಶನದ ಹಂಚಿಕೆ.–** (1) 3ನೆಯ ನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಆದರೆ 4ನೇ ಮತ್ತು 5ನೇ ನಿಯಮಗಳಿಗೆ ಮತ್ತು 7ನೇ ನಿಯಮದ (1)ನೇ ಉಪನಿಯಮಗಳಿಗೊಳಪಟ್ಟು ಮಾರುಕಟ್ಟೆ ಪ್ರಾಂಗಣದಲ್ಲಿನ ಮೂಲೆ ನಿವೇಶನವನ್ನು, ಲೈಸನ್ಸು ಹೊಂದಿರುವ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ ಗುತ್ತಿಗೆ ಸಹಿತ ಮಾರಾಟದ ಆಧಾರದ ಮೇಲೆ ಸಾರ್ವಜನಿಕ ಹರಾಜಿನಲ್ಲಿ ಹಂಚಿಕೆ ಮಾಡತಕ್ಕದ್ದು. ಅಂಥ ಹಂಚಿಕೆಗೆ 3ನೇ ನಿಯಮದ (1)ನೇ ಮತ್ತು (2)ನೇ ಉಪನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಕಾರ್ಯವಿಧಾನವನ್ನೇ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯಿಸತಕ್ಕದ್ದು.

(2) ಈ ನಿಯಮದ ಮೇರೆಗೆ ಅರ್ಜಿ ಸಲ್ಲಿಸಲು ಇಚ್ಛಿಸುವ ಯಾರೇ ವ್ಯಕ್ತಿಯು ನಿವೇಶನ ಮೌಲ್ಯದ ಶೇಕಡಾ ಇಪ್ಪತ್ತೈದಕ್ಕಿಂತ ಕಡಿಮೆಯಿಲ್ಲದ ಆರಂಭಿಕ ಠೇವಣಿಯೊಂದಿಗೆ ನಮೂನೆ–III ರಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

(3) ಅತಿ ಹೆಚ್ಚಿನ ಸವಾಲು ಕೂಗಿದವನು, ಅವನು ಕೂಗಿದ ಹರಾಜು ಮೊಬಲಗಿನ ಶೇಕಡಾ ಇಪ್ಪತ್ತೈದರಷ್ಟು ಮೊತ್ತವನ್ನು, ಅದರಲ್ಲಿ ಈಗಾಗಲೇ ಠೇವಣಿ ಮಾಡಿದ್ದ ಆರಂಭಿಕ ಠೇವಣಿಯನ್ನು ಕಳೆದು ಉಳಿದ ಮೊತ್ತವನ್ನು ಹರಾಜು ದಿನಾಂಕದಿಂದ ಒಂದು ವಾರದೊಳಗಾಗಿ ಕಟ್ಟತಕ್ಕದ್ದು, ಹಾಗೆ ಮಾಡಲು ವಿಫಲನಾದರೆ, ಅತಿ ಹೆಚ್ಚಿನ ಸವಾಲು ಕೂಗಿದವನು ಕಟ್ಟಿದ್ದ ಆರಂಭಿಕ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು ಹಾಗೂ ಎರಡನೆಯ ಅತಿ ಹೆಚ್ಚಿನ ಸವಾಲು ಕೂಗಿದವನಿಗೆ ಮೊಬಲಗಿನ ಸಂದಾಯಕ್ಕೆ ಅವಕಾಶ ನೀಡತಕ್ಕದ್ದು. ಎರಡನೆಯ ಅತಿ ಹೆಚ್ಚಿನ ಸವಾಲು ಕೂಗಿದವನೂ ಕೂಡ ಆ ಮೊಬಲಗನ್ನು ಸಂದಾಯ ಮಾಡಲು ವಿಫಲನಾದ ಸಂದರ್ಭದಲ್ಲಿ, ಮಾರುಕಟ್ಟೆ ಸಮಿತಿಯು ಮರುಹರಾಜು ನಡೆಸತಕ್ಕದ್ದು.

**10. ಗುತ್ತಿಗೆ ಸಹಿತ ಮಾರಾಟ ಆಧಾರದ ಮೇಲೆ ನಿವೇಶನ, ಅಂಗಡಿ, ಗೋದಾಮು ಅಥವಾ ಅಂಗಡಿ ಸಹಿತ ಗೋದಾಮು ಹಂಚಿಕೆ ಷರತ್ತುಗಳು.–** (1) ಮೂಲೆ ನಿವೇಶನವೂ ಸೇರಿದಂತೆ, ನಿವೇಶನವನ್ನು, ಗೋದಾಮನ್ನು, ಅಂಗಡಿಯನ್ನು ಅಥವಾ ಅಂಗಡಿ ಸಹಿತ ಗೋದಾಮನ್ನು ಮಾರುಕಟ್ಟೆ ಸಮಿತಿಯು ಗುತ್ತಿಗೆ ಸಹಿತ ಮಾರಾಟದ ಮೇಲೆ ಹಂಚಿಕೆ ಮಾಡುವಾಗ, ಆ ಹಂಚಿಕೆಯು ಕೃಷಿ ಮಾರುಕಟ್ಟೆ ನಿರ್ದೇಶಕರ ಅನುಮೋದನೆಗೊಳಪಟ್ಟಿರತಕ್ಕದ್ದು ಮತ್ತು ಈ ಕೆಳಕಂಡ ಷರತ್ತುಗಳಿಗೆ ಕೂಡ ಒಳಪಟ್ಟಿರತಕ್ಕದ್ದು, ಎಂದರೆ:–

(i) ಹಂಚಿಕೆ ಪಡೆದವನು, 3ನೇ ನಿಯಮದ (3)ನೆಯ ಉಪನಿಯಮದ ಮೇರೆಗೆ ಈಗಾಗಲೇ ಸಂದಾಯ ಮಾಡಿದ ಮೊಬಲಗನ್ನು ಕಳೆದು, ಹಂಚಿಕೆ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ 90 ದಿನಗಳ ಅವಧಿಯೊಳಗಾಗಿ ನಿವೇಶನದ, ಗೋದಾಮಿನ, ಅಂಗಡಿಯ ಅಥವಾ ಅಂಗಡಿ ಸಹಿತ ಗೋದಾಮಿನ ಮೌಲ್ಯದ ಬಾಕಿ ಮೊಬಲಗನ್ನು ಮಾರುಕಟ್ಟೆ ಸಮಿತಿಗೆ ಸಂದಾಯ ಮಾಡತಕ್ಕದ್ದು. 90 ದಿನಗಳ ಅವಧಿಯೊಳಗಾಗಿ ಸದರಿ ಮೌಲ್ಯವನ್ನು ಸಂದಾಯ ಮಾಡದಿರುವಲ್ಲಿ, 60 ದಿನಗಳನ್ನು ಮೀರದ ಅವಧಿಗಾಗಿ ಮತ್ತಷ್ಟು ಸಮಯ ವಿಸ್ತರಣೆಯನ್ನು ಮಾರುಕಟ್ಟೆ ಸಮಿತಿ ನೀಡಬಹುದು, ಮತ್ತು ಹಂಚಿಕೆ ಪಡೆದವನು, ಸದರಿ ಮೊಬಲಗಿನ ಮೇಲೆ ಆ ವಿಸ್ತರಿತ ಅವಧಿಗೆ ವರ್ಷಕ್ಕೆ ಶೇಕಡಾ ಹನ್ನೆರಡರ ದರದಲ್ಲಿ ಬಡ್ಡಿಯನ್ನು ಹೆಚ್ಚುವರಿಯಾಗಿ ನೀಡತಕ್ಕದ್ದು.

(ii) (i)ನೇ ಖಂಡದ ಮೇರೆಗೆ ಮೌಲ್ಯವನ್ನು ಸಂದಾಯ ಮಾಡಿದ ನಂತರ, ಮಾರುಕಟ್ಟೆ ಸಮಿತಿಯು, ನಿವೇಶನ ಸಂಬಂಧದಲ್ಲಿ ನಮೂನೆ –IV ರಲ್ಲಿ ಮತ್ತು ಅಂಗಡಿಯ ಅಥವಾ ಅಂಗಡಿ ಸಹಿತ ಗೋದಾಮಿನ ಅಥವಾ ಗೋದಾಮಿನ ಸಂಬಂಧದಲ್ಲಿ ನಮೂನೆ– V ರಲ್ಲಿ ಒಪ್ಪಂದ ಪತ್ರ ಬರೆದುಕೊಡುವಂತೆ ಮತ್ತು ನೋಂದಣಿ ಮಾಡಿಸಿಕೊಳ್ಳುವಂತೆ ನಿವೇಶನ ಪಡೆದವನಿಗೆ ಲಿಖಿತದಲ್ಲಿ ತಿಳಿಸತಕ್ಕದ್ದು. ಅಂಥ ಒಪ್ಪಂದ ಪತ್ರವನ್ನು ಬರೆದುಕೊಡುವಂತೆ ಹಂಚಿಕೆ ಪಡೆದವನಿಗೆ ತಿಳಿಸಿದ ನಂತರ 45 ದಿನಗಳೊಳಗಾಗಿ ಒಪ್ಪಂದ ಪತ್ರವನ್ನು ಬರೆದುಕೊಡದಿದ್ದರೆ ಹಂಚಿಕೆ ಪಡೆದವನು ಸಂದಾಯ ಮಾಡಿದ ನೋಂದಣಿ ಶುಲ್ಕವನ್ನು ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು ಮತ್ತು ಹಂಚಿಕೆಯು ರದ್ದಾಗತಕ್ಕದ್ದು ಹಾಗೂ 3ನೇ ನಿಯಮದ (3)ನೇ ಉಪನಿಯಮದ ಮೇರೆಗೆ ಹಂಚಿಕೆ ಪಡೆದವನು ಸಂದಾಯ ಮಾಡಿದ್ದ

ಮೊಬಲಗನ್ನು, ಮಾರುಕಟ್ಟೆ ಸಮಿತಿಯು ಮಾಡಿರಬಹುದಾದ ವೆಚ್ಚವನ್ನು ಮುರಿದುಕೊಂಡು, ಅವನಿಗೆ ಹಿಂದಿರುಗಿಸತಕ್ಕದ್ದು.

(iii) ನಿವೇಶನವನ್ನು, ಗೋದಾಮನ್ನು, ಅಂಗಡಿಯನ್ನು ಅಥವಾ ಅಂಗಡಿ ಸಹಿತ ಗೋದಾಮನ್ನು ಹಂಚಿಕೆದಾರನಿಗೆ ಹಸ್ತಾಂತರ ಮಾಡಿಕೊಡುವವರೆಗೆ, ಅಂಥ ಹಂಚಿಕೆಗಾಗಿ ಹಂಚಿಕೆದಾರನು ಸಂದಾಯ ಮಾಡಿದ ಮೊಬಲಗನ್ನು ಹಂಚಿಕೆಯ ನಿಬಂಧನೆಗಳ ಮತ್ತು ಷರತ್ತುಗಳ ಯುಕ್ತ ನೆರವೇರಿಕೆಗಾಗಿ ಮತ್ತು ಮಾರುಕಟ್ಟೆ ಸಮಿತಿಯ ಹಾಗೂ ಹಂಚಿಕೆ ಪಡೆದವನ ನಡುವೆ ಗುತ್ತಿಗೆ ಸಹಿತ ಮಾರಾಟ ಒಪ್ಪಂದವನ್ನು ಮಾಡಿಕೊಳ್ಳುವವರೆಗೆ ಭದ್ರತಾ ಠೇವಣಿಯಾಗಿ (ಅದರ ಮೇಲೆ ಯಾವುದೇ ಬಡ್ಡಿ ಇಲ್ಲದೆ) ಮಾರುಕಟ್ಟೆ ಸಮಿತಿಯು ಇಟ್ಟುಕೊಂಡಿರತಕ್ಕದ್ದು.

(iv) ನಿವೇಶನ ಹಂಚಿಕೆಯ ಸಂದರ್ಭದಲ್ಲಿ, ಹಂಚಿಕೆ ಪಡೆದವನು ಒಂದು ವರ್ಷದ ಅವಧಿಯೊಳಗಾಗಿ ಅಥವಾ ಮಾರುಕಟ್ಟೆ ಸಮಿತಿಯು ಅನುಮತಿ ನೀಡಬಹುದಾದ ಒಂದು ವರ್ಷ ಮೀರದ ಅಂಥ ವಿಸ್ತರಿಸಿದ ಅವಧಿಯೊಳಗಾಗಿ ಗೋದಾಮನ್ನು ಅಥವಾ ಅಂಗಡಿಯನ್ನು ಅಥವಾ ಅಂಗಡಿ ಸಹಿತ ಗೋದಾಮನ್ನು ಕಟ್ಟತಕ್ಕದ್ದು.

(v) ನಿವೇಶನ ಪಡೆದ ಪ್ರತಿಯೊಬ್ಬ ಹಂಚಿಕೆ ಪಡೆದವನು, ಮಾರುಕಟ್ಟೆ ಸಮಿತಿಯು ಅನುಮೋದಿಸಿದ ನಕ್ಷೆಗಳಿಗೆ ಮತ್ತು ವಿನ್ಯಾಸಗಳಿಗೆ ಅನುಸಾರವಾಗಿ ಗೋದಾಮನ್ನು ಅಥವಾ ಅಂಗಡಿಯನ್ನು ಅಥವಾ ಅಂಗಡಿ ಸಹಿತ ಗೋದಾಮನ್ನು ಆ ನಿವೇಶನದಲ್ಲಿ ಕಟ್ಟತಕ್ಕದ್ದು.

(vi) ಹಂಚಿಕೆ ಪಡೆದವನು ಮಾರುಕಟ್ಟೆ ಸಮಿತಿಯ ಪೂರ್ವಾನುಮತಿಗೆ ಹಾಗೂ ಅದು ವಿಧಿಸುವ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ಸಾಲ ಪಡೆಯುವುದಕ್ಕಾಗಿ ನಿವೇಶನವನ್ನು, ಗೋದಾಮನ್ನು ಅಥವಾ ಅಂಗಡಿಯನ್ನು ಅಥವಾ ಅಂಗಡಿ ಸಹಿತ ಗೋದಾಮನ್ನು ಭಾರತ ಸರ್ಕಾರಕ್ಕೆ, ಕರ್ನಾಟಕ ಸರ್ಕಾರಕ್ಕೆ ಅಥವಾ ಅದರ ಉದ್ಯಮಗಳಿಗೆ, ಭಾರತ ಜೀವವಿಮಾ ನಿಗಮಕ್ಕೆ, ನಿಗಮಿತ ನಿಕಾಯಗಳಿಗೆ ಅಥವಾ ಬ್ಯಾಂಕುಗಳಿಗೆ ಅವುಗಳ ಪರವಾಗಿ ಅಡಮಾನ ಮಾಡುವ ಮೂಲಕ ಹೊರತು, ಹಂಚಿಕೆಯಾದ ದಿನಾಂಕದಿಂದ ಹತ್ತು ವರ್ಷಗಳ ಅವಧಿಯೊಳಗಾಗಿ ಪರಭಾರೆ ಮಾಡತಕ್ಕದ್ದಲ್ಲ.

(vii) ಗುತ್ತಿಗೆ ಸಹಿತ ಮಾರಾಟ ಒಪ್ಪಂದ ಪತ್ರವನ್ನು ಬರೆದುಕೊಟ್ಟ ದಿನಾಂಕದಿಂದ ಹತ್ತು ವರ್ಷಗಳ ಅವಧಿಯು ಮುಕ್ತಾಯವಾದ ಮೇಲೆ ಮತ್ತು ಹಂಚಿಕೆಯು ರದ್ದಾಗದಿದ್ದರೆ ಅಥವಾ ಗುತ್ತಿಗೆಯು ಕೊನೆಗೊಳ್ಳದಿದ್ದರೆ ಮಾರುಕಟ್ಟೆ ಸಮಿತಿಯು, ಹಂಚಿಕೆ ಪಡೆದವನಿಗೆ ನೋಟೀಸು ನೀಡುವ ಮೂಲಕ, ಸದರಿ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗಾಗಿ ಸ್ವಂತ ವೆಚ್ಚದಲ್ಲಿ ಕ್ರಯಪತ್ರವನ್ನು ಬರೆಯಿಸಿಕೊಳ್ಳಲು ಕರೆ ನೀಡತಕ್ಕದ್ದು.

(viii) ಹಂಚಿಕೆಯಾದ ಸ್ವತ್ತನ್ನು ಸ್ವಾಧೀನಕ್ಕೆ ತೆಗೆದುಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ, ಹಂಚಿಕೆ ಪಡೆದವನು, ಆ ಸ್ವತ್ತಿನ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ತೆರಿಗೆಗಳನ್ನು, ಶುಲ್ಕಗಳನ್ನು ಮತ್ತು ಉಪಕರಗಳನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

(ix) ಪಾಲುದಾರಿಕೆ ಫರ್ಮಿನ ಹೆಸರಿಗೆ ಹಂಚಿಕೆ ಮಾಡಿದ್ದರೆ, ಆ ಫರ್ಮಿನ ರಚನೆಯಲ್ಲಿ ಯಾವುದೇ ಬದಲಾವಣೆಯಾದಲ್ಲಿ, ಅದನ್ನು ಮಾರುಕಟ್ಟೆ ಸಮಿತಿಯ ಗಮನಕ್ಕೆ ತರತಕ್ಕದ್ದು. ಮಾರುಕಟ್ಟೆ ಸಮಿತಿಯು, ತಾನು ಸೂಕ್ತವೆಂದು ಭಾವಿಸಿದಂಥ ವಿಚಾರಣೆ ನಡೆಸಿದ ನಂತರ, ಫರ್ಮಿನ ರಚನೆಯಲ್ಲಾದ ಬದಲಾವಣೆಯ ಪರಿಣಾಮದಿಂದಾಗಿ ಅಂಗಡಿಯನ್ನು ಅಥವಾ ಗೋದಾಮನ್ನು ಅಥವಾ ಅಂಗಡಿ ಸಹಿತ ಗೊದಾಮನ್ನು ಅಥವಾ ಅದರಲ್ಲಿನ ಯಾವುದೇ ಹಿತಾಸಕ್ತಿಯನ್ನು ಎಲ್ಲಾ ಪಾಲುದಾರರು ಅಥವಾ ಅವರಲ್ಲಿ ಯಾರಾದರೊಬ್ಬರು ವರ್ಗಾವಣೆ ಮಾಡಬೇಕೆಂದು ಅದು ನಿರ್ಧರಿಸಿದರೆ, 12ನೇ ನಿಯಮವನ್ನು ಪಾಲಿಸದೆ ಅಂಥ ವರ್ಗಾವಣೆಯನ್ನು ಮಾಡತಕ್ಕದ್ದಲ್ಲ.

**ವಿವರಣೆ.–** ಈ ಖಂಡದ ಮತ್ತು 16ನೆಯ ನಿಯಮದ (3)ನೆಯ ಉಪನಿಯಮದ ಉದ್ದೇಶಕ್ಕಾಗಿ, ಒಂದು ವೇಳೆ ಫರ್ಮಿನ ರಚನೆಯಲ್ಲಿ ಬದಲಾವಣೆಯಾದಲ್ಲಿ, ಒಬ್ಬರು ಅಥವಾ ಹೆಚ್ಚು ಜನ ಪಾಲುದಾರರು ಪಾಲುದಾರರಾಗಿರುವುದು ನಿಂತುಹೋದರೆ ಅಥವಾ ಒಬ್ಬರು ಅಥವಾ ಹೆಚ್ಚು ಜನ ಹೊಸ ಪಾಲುದಾರರು ಪ್ರವೇಶ ಪಡೆದರೆ, ಅಂಥ ಸಂದರ್ಭಗಳಲ್ಲಿ ಬದಲಾವಣೆಗೆ ಮೊದಲು ಫರ್ಮಿನ ಪಾಲುದಾರರಾಗಿದ್ದ ವ್ಯಕ್ತಿಗಳು, ಬದಲಾವಣೆಯ ನಂತರ ಪಾಲುದಾರನಾಗಿ ಅಥವಾ ಪಾಲುದಾರರಾಗಿ ಮುಂದುವರೆಯತಕ್ಕದ್ದಲ್ಲ.

**11. ಹಂಚಿಕೆ ಪಡೆದವನನ್ನು ಗುತ್ತಿಗೆದಾರನೆಂದು ಭಾವಿಸತಕ್ಕದ್ದು.–** ಗುತ್ತಿಗೆ ಸಹಿತ ಮಾರಾಟದ ಆಧಾರದ ಮೇಲೆ ಈ ನಿಯಮಗಳ ಮೇರೆಗೆ ಮೂಲೆ ನಿವೇಶನವೂ ಒಳಗೊಂಡಂತೆ, ನಿವೇಶನವನ್ನು, ಗೋದಾಮನ್ನು ಅಥವಾ ಅಂಗಡಿಯನ್ನು ಅಥವಾ ಅಂಗಡಿ ಸಹಿತ ಗೋದಾಮನ್ನು ಹಂಚಿಕೆ ಮಾಡಲಾಗಿರುವಲ್ಲಿ, ಗುತ್ತಿಗೆಯು ಕೊನೆಗೊಳ್ಳುವವರೆಗೆ ಅಥವಾ ಆ ನಿವೇಶನದ, ಅಂಗಡಿಯ, ಗೋದಾಮಿನ ಅಥವಾ ಅಂಗಡಿ ಸಹಿತ ಗೋದಾಮಿನ ಹಂಚಿಕೆ ಪಡೆದವನಿಗೆ ಹಸ್ತಾಂತರ ಮಾಡುವವರೆಗೆ, ಅಂಥ ಹಂಚಿಕೆ ಪಡೆದವನನ್ನು ಅಂಥ ನಿವೇಶನದ, ಅಂಗಡಿಯ, ಗೋದಾಮಿನ ಅಥವಾ ಅಂಗಡಿ ಸಹಿತ ಗೋದಾಮಿನ ಗುತ್ತಿಗೆದಾರನೆಂದೇ ಭಾವಿಸತಕ್ಕದ್ದು. ಆ ಗುತ್ತಿಗೆಯ ಅವಧಿಯಲ್ಲಿ, ಹಂಚಿಕೆ ಪಡೆದವನು ಪ್ರತಿವರ್ಷದ ಆರಂಭಕ್ಕೆ ಮುಂಚೆ ವರ್ಷಕ್ಕೆ ಹತ್ತು ರೂಪಾಯಿಗಳ ದರದಲ್ಲಿ ಮಾರುಕಟ್ಟೆ ಸಮಿತಿಗೆ ಬಾಡಿಗೆ ಸಂದಾಯ ಮಾಡತಕ್ಕದ್ದು.

**12. ವರ್ಗಾವಣೆಗೆ ನಿರ್ಬಂಧ.–** (1) ಗೋದಾಮಿನ ಅಥವಾ ಅಂಗಡಿಯ ಅಥವಾ ಅಂಗಡಿ ಸಹಿತ ಗೋದಾಮಿನ ಹಂಚಿಕೆ ಪಡೆದ ಯಾರೇ ಆಗಲಿ 10ನೇ ನಿಯಮದ ಮೇರೆಗೆ ಅವನಿಗೆ ಅದನ್ನು ಹಸ್ತಾಂತರ ಮಾಡಿದ ನಂತರ ಅಲ್ಲಿ ಅಥವಾ ಹಾಗೆ ಹಂಚಿಕೆ ಪಡೆದವನಿಂದ ವರ್ಗಾವಣೆ ಪಡೆದವನು ಅಥವಾ ಅಂಥ ಹಂಚಿಕೆ ಪಡೆದವನು, 10ನೆಯ ನಿಯಮದ ಮೇರೆಗೆ ಅವನಿಗೆ ಅದನ್ನು ಹಸ್ತಾಂತರ ಮಾಡಿದ ನಂತರ ಆ ನಿವೇಶನದಲ್ಲಿ ಕಟ್ಟಲಾಗಿರುವ ಗೋದಾಮಿನಲ್ಲಿ ಅಥವಾ ಅಂಗಡಿಯಲ್ಲಿ ಅಥವಾ ಅಂಗಡಿ ಸಹಿತ ಗೋದಾಮಿನಲ್ಲಿ ಯಾವುದೇ ಕಾರಣಕ್ಕೆ ಮಾರುಕಟ್ಟೆ ಕಾರ್ಯಚಟುವಟಿಕೆಗಳನ್ನು ನಡೆಸಲು ಅಸಮರ್ಥನಾದಾಗ, ಅವನು, 10ನೇ ನಿಯಮದ 1ನೇ ಉಪನಿಯಮದ (vi)ನೇ ಖಂಡದಲ್ಲಿ ನಿರ್ದಿಷ್ಟಪಡಿಸಿದ ಹತ್ತು ವರ್ಷಗಳ ಅವಧಿ ಮುಕ್ತಾಯವಾಗಿದ್ದಲ್ಲಿ, ಅನುಬಂಧದಲ್ಲಿ ನಿರ್ದಿಷ್ಟಪಡಿಸಿದ ವರ್ಗಾವಣೆ ಶುಲ್ಕವನ್ನು ಸಂದಾಯ ಮಾಡಿ ಮಾರುಕಟ್ಟೆ ಸಮಿತಿಗೆ ಅರ್ಜಿ ಸಲ್ಲಿಸತಕ್ಕದ್ದು ಮತ್ತು ಮಾರುಕಟ್ಟೆ ಸಮಿತಿಯು ಆ ಅರ್ಜಿದಾರನು ಮಾರುಕಟ್ಟೆ ಸಮಿತಿಗಾಗಲಿ, ಮಾರಾಟಗಾರರಿಗಾಗಲಿ ಮತ್ತು ಇತರೆ ಲೈಸನ್ಸು ಹೊಂದಿದ ಮಾರುಕಟ್ಟೆ ಕಾರ್ಯನಿರ್ವಾಹಕರಿಗಾಗಲಿ ಯಾವುದೇ ಬಾಕಿ ಕೊಡಬೇಕಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಂಡ ನಂತರ, ಕೃಷಿ ಮಾರುಕಟ್ಟೆ ನಿರ್ದೇಶಕರ ಪೂರ್ವಾನುಮೋದನೆ ಪಡೆದು, ಯಾರು ನಿವೇಶನವನ್ನು, ಗೋದಾಮನ್ನು ಅಥವಾ ಅಂಗಡಿಯನ್ನು ಅಥವಾ ಅಂಗಡಿ ಸಹಿತ ಗೋದಾಮನ್ನು ಹೊಂದಿಲ್ಲವೋ ಆ ಲೈಸನ್ಸು ಪಡೆದ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ ಅಂಥ ಗೋದಾಮಿನ, ಅಂಗಡಿಯ ಅಥವಾ ಅಂಗಡಿ ಸಹಿತ ಗೋದಾಮನ್ನು ಪೂರ್ಣವಾಗಿ ಅಥವಾ ಭಾಗಶಃ ವರ್ಗಾವಣೆ ಮಾಡಲು ಅನುಮತಿಸತಕ್ಕದ್ದು :

ಪರಂತು, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ಮಾರುಕಟ್ಟೆ ಪ್ರಾಂಗಣಗಳಲ್ಲಿ ಸ್ವತ್ತಿನ ಹಂಚಿಕೆ ನಿಯಂತ್ರಣ) ನಿಯಮಗಳು, 2004ರ ಪ್ರಾರಂಭಕ್ಕೆ ಮೊದಲು ಅಂಥ ವರ್ಗಾವಣೆಗಾಗಿ ಅನುಮತಿ ಕೋರಿ ಸಲ್ಲಿಸಿದ ಯಾವುದೇ ಅರ್ಜಿಯು ಇತ್ಯರ್ಥದಲ್ಲಿರುವಲ್ಲಿ, ಅಂಥ ಅರ್ಜಿಯನ್ನು ಈ ಉಪನಿಯಮದ ಮೇರೆಗೆ ಸಲ್ಲಿಸಿದ ಅರ್ಜಿಯೆಂದು ಭಾವಿಸತಕ್ಕದ್ದು ಮತ್ತು ಈ ಉಪನಿಯಮಕ್ಕನುಸಾರವಾಗಿ ಅದನ್ನು ವಿಲೇ ಮಾಡತಕ್ಕದ್ದು.

(2) ಲೈಸನ್ಸು ಹೊಂದಿದ ಯಾರೇ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ 13ನೇ ನಿಯಮದ ಮೇರೆಗೆ ಕೇಳಿದಾಗ ಬಿಟ್ಟುಕೊಡುವ ಲೈಸನ್ಸು ಆಧಾರದ ಮೇಲೆ ಅಂಗಡಿಯನ್ನು ಅಥವಾ ಗೋದಾಮನ್ನು, ಅಂಗಡಿ ಸಹಿತ ಗೋದಾಮನ್ನು ಅಥವಾ ಇತರ ಕಟ್ಟಡವನ್ನು ಹಂಚಿಕೆ ಮಾಡಲಾಗಿದ್ದು ಕನಿಷ್ಠ 55 ತಿಂಗಳ ಅವಧಿಗೆ ಅವನು ಅದರ ಅಧಿಭೋಗದಲ್ಲಿ ಮುಂದುವರಿದಿದ್ದರೆ ಮತ್ತು ಸದರಿ ಅನುಮತಿ ಮತ್ತು ಲೈಸೆನ್ಸ್ ಆಧಾರದ ಮೇಲಿರುವುದನ್ನು ಗುತ್ತಿಗೆ ಸಹಿತ ಮಾರಾಟದ ಆಧಾರದ ಮೇಲೆ ಎಂಬುದಾಗಿ ಪರಿವರ್ತಿಸಬೇಕೆಂದು ಕೋರಿದರೆ, ಕೃಷಿ ಮಾರುಕಟ್ಟೆ ನಿರ್ದೇಶಕರ ಪೂರ್ವಾನುಮೋದನೆಯೊಂದಿಗೆ ಅದನ್ನು ಪರಿಶೀಲಿಸಬಹುದು ಮತ್ತು ಆ ನಿವೇಶನದ, ಅಂಗಡಿಯ, ಗೋದಾಮಿನ ಅಥವಾ ಅಂಗಡಿ ಸಹಿತ ಗೋದಾಮಿನ ಮೌಲ್ಯವನ್ನು ಈ ಕೆಳಕಂಡ ಅಂಶಗಳನ್ನು ಪರಿಗಣನೆಗೆ ತೆಗೆದುಕೊಳ್ಳುವ ಮೂಲಕ ನಿರ್ಧರಿಸತಕ್ಕದ್ದು, ಎಂದರೆ,–

(i) ಕರ್ನಾಟಕ ಸ್ಟಾಂಪ್ ಅಧಿನಿಯಮ, 1957ರ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ ಮೇರೆಗೆ ನಿರ್ಧರಿಸಿದ ಮಾರ್ಗಸೂಚಿ ಮೌಲ್ಯದ ಶೇಕಡಾ 40 ರಷ್ಟು ನಿವೇಶನ ಮೌಲ್ಯ ಅಥವಾ 5ನೇ ನಿಯಮದ ಮೇರೆಗೆ ಕೃಷಿ ಮಾರುಕಟ್ಟೆ ನಿರ್ದೇಶಕರಿಂದ ಅನುಮೋದಿತವಾದ ನಿವೇಶನದ ಮೌಲ್ಯ, ಇವುಗಳಲ್ಲಿ ಯಾವುದು ಹೆಚ್ಚಿರುತ್ತದೋ ಅದು;

(ii) ಕಟ್ಟಡದ ಮೌಲ್ಯದಲ್ಲಿ ಇಳಿತವನ್ನು ಪರಿಗಣಿಸಿದ ನಂತರ ಇಲಾಖೆಯ ಇಂಜನಿಯರಿಂಗ್ ಘಟಕವು ನಿಗದಿಪಡಿಸುವ ಕಟ್ಟಡದ ಮೌಲ್ಯ;

(iii) ಆ ನಿವೇಶನದ ಅಥವಾ ಕಟ್ಟಡದ ಮೇಲೆ ಮಾರುಕಟ್ಟೆ ಸಮಿತಿಯು ಮಾಡಿದ ಯಾವುದೇ ಇತರ ವೆಚ್ಚ.

**13. ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ ಆಧಾರದ ಮೇಲೆ ಅಂಗಡಿಯ, ಅಂಗಡಿ ಸಹಿತ ಗೋದಾಮಿನ ಅಥವಾ ಗೋದಾಮಿನ ಹಂಚಿಕೆ.–** (1) 3ನೇ ನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ ಆಧಾರದ ಮೇಲೆ ಮಾರುಕಟ್ಟೆ ಪ್ರಾಂಗಣದಲ್ಲಿ ಅಂಗಡಿಯನ್ನು, ಅಂಗಡಿ ಸಹಿತ ಗೋದಾಮನ್ನು ಅಥವಾ ಗೋದಾಮನ್ನು ಮಾರುಕಟ್ಟೆ ಸಮಿತಿಯು ಹಂಚಿಕೆ ಮಾಡಬಹುದ.

(2) ಹಂಚಿಕೆ ಮಾಡಬೇಕಾಗಿರುವ ಅಂಗಡಿ, ಅಂಗಡಿ ಸಹಿತ ಗೋದಾಮು ಅಥವಾ ಗೋದಾಮುಗಳು ಯಾವುವಾದರೂ ಇದ್ದರೆ, ಅವು ಇರುವ ಸ್ಥಳದ ವಿವರ, ಅದರ ಸಂಖ್ಯೆ, ಅರ್ಜಿ ಸಲ್ಲಿಸುವುದಕ್ಕೆ ಇರುವ ಕೊನೆಯ ದಿನಾಂಕ ಮತ್ತು ಅಂಥ ಇತರ ವಿವರಗಳನ್ನು ನಿರ್ದಿಷ್ಟಪಡಿಸಿ ಮಾರುಕಟ್ಟೆ ಸಮಿತಿಯ ಕಚೇರಿಯ ಸೂಚನಾ ಫಲಕದಲ್ಲಿ ನೋಟೀಸನ್ನು ಅಂಟಿಸುವ ಮೂಲಕ ಹಾಗೂ ಮಾರುಕಟ್ಟೆ ಪ್ರದೇಶದಲ್ಲಿ ವ್ಯಾಪಕ ಪ್ರಸಾರವುಳ್ಳ ಎರಡಕ್ಕಿಂತ ಕಡಿಮೆಯಿಲ್ಲದ ಕನ್ನಡ ಸಮಾಚಾರ ಪತ್ರಿಕೆಗಳಲ್ಲಿ ಪ್ರಕಟಿಸುವ ಮೂಲಕ ಅಂಥ ಹಂಚಿಕೆಯ ಸಂಬಂಧದಲ್ಲಿ ಸೂಕ್ತ ಪ್ರಚಾರ ನೀಡತಕ್ಕದ್ದು.

(3) (1)ನೆಯ ಉಪನಿಯಮದ ಮೇರೆಗೆ ಮಾರುಕಟ್ಟೆ ಸಮಿತಿಯು ಹಂಚಿಕೆಗಾಗಿ ಅರ್ಜಿ ಕರೆದಾಗ, 6ನೆಯ ನಿಯಮದ ಮೇರೆಗೆ ನೋಂದಾಯಿಸಿಕೊಂಡಿರುವ ಲೈಸನ್ಸು ಹೊಂದಿದ ಯಾರೇ ಮಾರುಕಟ್ಟೆ ಕಾರ್ಯನಿರ್ವಾಹಕನು, ಕೇಳಿದಾಗ ಬಿಟ್ಟುಕೊಡುವ ಆಧಾರದ ಮೇಲೆ ಲೈಸನ್ಸು ಶುಲ್ಕದ ಎರಡು ತಿಂಗಳ ಮೊತ್ತಕ್ಕೆ ಸಮನಾದ ಅಥವಾ ಐದು ಸಾವಿರ ರೂಪಾಯಿಗಳ ಮುಂಗಡ ಹಣ ಇವುಗಳಲ್ಲಿ ಯಾವುದು ಹೆಚ್ಚೋ ಆ ಮೊತ್ತದ ಠೇವಣಿಯೊಂದಿಗೆ ನಮೂನೆ–III ರಲ್ಲಿ ಮಾರುಕಟ್ಟೆ ಸಮಿತಿಗೆ ಅರ್ಜಿ ಸಲ್ಲಿಸಬಹುದು.

(4) ಮಾರುಕಟ್ಟೆ ಸಮಿತಿಯಲ್ಲಿ ನೋಂದಾಯಿಸಿಕೊಂಡಿರುವ ಯಾರೇ ಅರ್ಜಿದಾರನು, ಈ ನಿಯಮದ ಮೇರೆಗೆ, ಅಂಗಡಿಯ, ಅಂಗಡಿ ಸಹಿತ ಗೋದಾಮಿನ ಅಥವಾ ಸಂದರ್ಭಾನುಸಾರ ಗೋದಾಮಿನ ಹಂಚಿಕೆಯನ್ನು ಪಡೆಯುವಲ್ಲಿ ವಿಫಲನಾದಲ್ಲಿ, ನೋಂದಣಿ ಪ್ರಮಾಣಪತ್ರವನ್ನು ಹಿಂದಿರುಗಿಸುವ ಮೂಲಕ ಅರ್ಜಿದಾರನು ನೋಂದಣಿಯನ್ನು ಹಿಂದಕ್ಕೆ ಪಡೆದ ಹೊರತು, ಅಂಥ ನೋಂದಣಿಯು, ನಂತರದ ಹಂಚಿಕೆಗಳಿಗೆ ಕೂಡ ಸಿಂಧುವಾಗಿರತಕ್ಕದ್ದು.

(5) ಕೃಷಿ ಮಾರುಕಟ್ಟೆ ನಿರ್ದೇಶಕನ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೊಳಪಟ್ಟು, ಮಾರುಕಟ್ಟೆ ಸಮಿತಿಯು, ಸಂದಾಯ ಮಾಡಬೇಕಾದ ಲೈಸನ್ಸು ಶುಲ್ಕಕ್ಕೆ ಸಂಬಂಧಪಟ್ಟಂತೆ ಇಲಾಖೆಯ ಸಹಾಯಕ ಕಾರ್ಯನಿರ್ವಾಹಕ ಎಂಜನಿಯರ್‌ನಿಂದ (ಮಾರುಕಟ್ಟೆ ಅಭಿವೃದ್ಧಿ ಯೋಜನೆ) ಪ್ರಮಾಣಪತ್ರ ಪಡೆದ ನಂತರ, ಈ ನಿಯಮದ ಮೇರೆಗೆ ಅಂಗಡಿಯ, ಅಂಗಡಿ ಸಹಿತ ಗೋದಾಮಿನ ಅಥವಾ ಗೋದಾಮಿನ ಹಂಚಿಕೆಗಾಗಿ ಕನಿಷ್ಠ ಲೈಸನ್ಸು ಶುಲ್ಕವನ್ನು ಗೊತ್ತುಪಡಿಸತಕ್ಕದ್ದು. ಸಹಾಯಕ ಕಾರ್ಯನಿರ್ವಾಹಕ ಇಂಜನಿಯರನು, ಕಟ್ಟಡದ ಮೂಲ ಖರ್ಚನ್ನು ಗಮನದಲ್ಲಿಟ್ಟುಕೊಂಡು ಲೈಸನ್ಸ್ ಶುಲ್ಕವನ್ನು ನಿಗದಿಪಡಿಸತಕ್ಕದ್ದು.

(6) ಮಾರುಕಟ್ಟೆ ಸಮಿತಿಯು, 7ನೇ ಮತ್ತು 8ನೇ ನಿಯಮಗಳ ಉಪಬಂಧಗಳನ್ನು ಗಮನದಲ್ಲಿಟ್ಟುಕೊಂಡು ಯಾರೇ ಅರ್ಜಿದಾರನಿಗೆ, ಕೇಳಿದಾಗ ಬಿಟ್ಟುಕೊಡುವ ಲೈಸನ್ಸು ಆಧಾರದ ಮೇಲೆ ಅಂಗಡಿ, ಅಂಗಡಿ ಸಹಿತ ಗೋದಾಮನ್ನು ಅಥವಾ ಗೋದಾಮನ್ನು ಹಂಚಿಕೆ ಮಾಡಬಹುದು.

(7) ಈ ನಿಯಮದ ಮೇರೆಗೆ ಆರಂಭಿಕ ಹಂಚಿಕೆಯು, 11 ತಿಂಗಳ ಅವಧಿಯದ್ದಾಗಿರತಕ್ಕದ್ದು, ಗರಿಷ್ಠ 55 ತಿಂಗಳಿಗೊಳಪಟ್ಟು ಮಾರುಕಟ್ಟೆ ಸಮಿತಿಯು ಅದನ್ನು ಪ್ರತಿ 11 ತಿಂಗಳಿಗೊಮ್ಮೆ ನವೀಕರಿಸಬಹುದು.

**14. ತೂಕಮಾಡುವ ಯಂತ್ರಗಳು (ವೇಬ್ರಿಜ್) ಇತ್ಯಾದಿಗಳ ಹಂಚಿಕೆ.–** (1) ಮಾರುಕಟ್ಟೆ ಸಮಿತಿಯು ತೂಕಮಾಡುವ ಯಂತ್ರಗಳನ್ನು, ಚಿಲ್ಲರೆ ಅಂಗಡಿಗಳನ್ನು, ಕ್ಯಾಂಟೀನನ್ನು ಮತ್ತು ಚಹಾದ ಅಂಗಡಿಗಳನ್ನು ಟೆಂಡರ್ ಸಹಿತ ಹರಾಜಿನ ಮುಖಾಂತರ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ ಆಧಾರದ ಮೇಲೆ ಹಂಚಿಕೆ ಮಾಡಬಹುದು.

(2) ಮಾರುಕಟ್ಟೆ ಸಮಿತಿಯು, ಈ ನಿಯಮಗಳ ಉಪಬಂಧಗಳಿಗೊಳಪಟ್ಟು, ಟೆಂಡರ್ ಸಹಿತ ಹರಾಜಿನ ಮೂಲಕ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ ಆಧಾರದ ಮೇಲೆ ಮಾರುಕಟ್ಟೆ ಪ್ರಾಂಗಣದಲ್ಲಿ ತೂಕಮಾಡುವ ಯಂತ್ರಗಳನ್ನು (ವೇಬ್ರಿಜ್), ಚಿಲ್ಲರೆ ಅಂಗಡಿಗಳನ್ನು, ಕ್ಯಾಂಟೀನುಗಳನ್ನು ಮತ್ತು ಚಹಾದ ಅಂಗಡಿಗಳನ್ನು ಹಂಚಿಕೆ ಮಾಡಬಹುದು.

(3) ಹಂಚಿಕೆ ಮಾಡಬೇಕಾಗಿರುವ ಅಂಗಡಿ, ಅಂಗಡಿ ಸಹಿತ ಗೋದಾಮು ಅಥವಾ ಗೋದಾಮುಗಳು ಯಾವುವಾದರೂ ಇದ್ದರೆ, ಅವು ಇರುವ ಸ್ಥಳದ ವಿವರ, ಅದರ ಸಂಖ್ಯೆ, ಅರ್ಜಿ ಸಲ್ಲಿಸುವುದಕ್ಕೆ ಇರುವ ಕೊನೆಯ ದಿನಾಂಕ ಮತ್ತು ಅಂಥ ಇತರ ವಿವರಗಳನ್ನು ನಿರ್ದಿಷ್ಟಪಡಿಸಿ ಮಾರುಕಟ್ಟೆ ಸಮಿತಿಯ ಕಚೇರಿಯ ಸೂಚನಾ ಫಲಕದಲ್ಲಿ ನೋಟೀಸನ್ನು ಅಂಟಿಸುವ ಮೂಲಕ ಹಾಗೂ ಮಾರುಕಟ್ಟೆ ಪ್ರದೇಶದಲ್ಲಿ ವ್ಯಾಪಕ ಪ್ರಸಾರವುಳ್ಳ ಎರಡಕ್ಕಿಂತ ಕಡಿಮೆಯಿಲ್ಲದ ಕನ್ನಡ ಸಮಾಚಾರ ಪತ್ರಿಕೆಗಳಲ್ಲಿ ಪ್ರಕಟಿಸುವ ಮೂಲಕ ಅಂಥ ಹಂಚಿಕೆಯ ಸಂಬಂಧದಲ್ಲಿ ಸೂಕ್ತ ಪ್ರಚಾರ ನೀಡತಕ್ಕದ್ದು.

(4) ಈ ನಿಯಮದ ಮೇರೆಗೆ ಹಂಚಿಕೆಗಾಗಿ ಅರ್ಜಿ ಸಲ್ಲಿಸಲು ಇಚ್ಛಿಸುವ ಯಾರೇ ವ್ಯಕ್ತಿಯು, ಕನಿಷ್ಠ ಎರಡು ತಿಂಗಳ ಲೈಸನ್ಸು ಶುಲ್ಕಕ್ಕೆ ಸಮನಾದ ಅಥವಾ ಐದು ಸಾವಿರ ರೂಪಾಯಿಗಳು ಇವುಗಳಲ್ಲಿ ಯಾವುದು ಹೆಚ್ಚೋ ಅಷ್ಟನ್ನು ಮುಂಗಡ ಹಣದ ಠೇವಣಿಯೊಂದಿಗೆ ನಮೂನೆ– VI ರಲ್ಲಿ ಮಾರುಕಟ್ಟೆ ಸಮಿತಿಗೆ ಅರ್ಜಿ ಸಲ್ಲಿಸತಕ್ಕದ್ದು.

(5) ಅತಿ ಹೆಚ್ಚಿನ ಸವಾಲು ಕೂಗಿದವನು, ಅವನು ಕೂಗಿದ ಹರಾಜು ಮೊಬಲಗಿನ ಶೇಕಡಾ ಇಪ್ಪತ್ತೈದರಷ್ಟು ಮೊತ್ತವನ್ನು, ಅದರಲ್ಲಿ ಈಗಾಗಲೇ ಠೇವಣಿ ಇಟ್ಟಿದ್ದ ಮುಂಗಡ ಹಣವನ್ನು ಅದರಲ್ಲಿ ಕಳೆದು ಉಳಿದ ಮೊತ್ತವನ್ನು ಹರಾಜು ದಿನಾಂಕದಿಂದ ಮೂರು ದಿನಗಳೊಳಗಾಗಿ ಕಟ್ಟತಕ್ಕದ್ದು. ಹಾಗೆ ಕಟ್ಟಲು ವಿಫಲನಾದರೆ, ಮುಂಗಡ ಹಣದ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು ಮತ್ತು ಎರಡನೆಯ ಅತಿ ಹೆಚ್ಚಿನ ಸವಾಲು ಕೂಗಿದವನಿಗೆ ಅಂಥ ಮೊತ್ತದ ಸಂದಾಯಕ್ಕೆ ಅವಕಾಶ ನೀಡಬೇಕು. ಎರಡನೆಯ ಅತಿ ಹೆಚ್ಚಿನ ಸವಾಲು ಕೂಗಿದವನೂ ಕೂಡ ಆ ಮೊತ್ತ ಸಂದಾಯ ಮಾಡಲು ವಿಫಲನಾದ ಸಂದರ್ಭದಲ್ಲಿ, ಮಾರುಕಟ್ಟೆ ಸಮಿತಿಯು ಮರುಹರಾಜು ನಡೆಸತಕ್ಕದ್ದು.

(6) ಆರಂಭದ ಹಂಚಿಕೆಯು 11 ತಿಂಗಳ ಅವಧಿಯದಾಗಿದ್ದು, ಗರಿಷ್ಠ 55 ತಿಂಗಳಿಗೆ ಒಳಪಟ್ಟು ಮಾರುಕಟ್ಟೆ ಸಮಿತಿಯು ಪ್ರತಿ 11 ತಿಂಗಳಿಗೊಮ್ಮೆ ನವೀಕರಿಸಬಹುದು.

**15. ಲೈಸನ್ಸು ಶುಲ್ಕವನ್ನು ನಿಗದಿಪಡಿಸುವುದು.–** ಕೃಷಿ ಮಾರುಕಟ್ಟೆ ನಿರ್ದೇಶಕರ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೊಳಪಟ್ಟು, ಲೈಸನ್ಸು ಶುಲ್ಕ ಸಂದಾಯ ಮಾಡುವ ಸಂಬಂಧದಲ್ಲಿ ಇಲಾಖೆಯ ಸಹಾಯಕ ಕಾರ್ಯನಿರ್ವಾಹಕ ಇಂಜನಿಯರ್ (ಮಾರುಕಟ್ಟೆ ಅಭಿವೃದ್ಧಿ ಯೋಜನೆ) ಅವರಿಂದ ಪ್ರಮಾಣಪತ್ರ ಪಡೆದ ನಂತರ ಮಾರುಕಟ್ಟೆ ಸಮಿತಿಯು ತನಗೆ ಸೇರಿದ ಯಾವುದೇ ವೇಬ್ರಿಜ್‌ಗಳಿಗೆ, ಚಿಲ್ಲರೆ ಅಂಗಡಿಗಳಿಗೆ, ಕ್ಯಾಂಟೀನಿಗೆ ಅಥವಾ ಚಹಾದ ಅಂಗಡಿಗೆ ಹಂಚಿಕೆಯ ಕನಿಷ್ಠ ಲೈಸನ್ಸು ಶುಲ್ಕವನ್ನು ನಿಗದಿಪಡಿಸತಕ್ಕದ್ದು.

**16. ಕೇಳಿದಾಗ ಬಿಟ್ಟುಕೊಡುವ ಲೈಸನ್ಸು ಆಧಾರದ ಮೇಲೆ ಮಾಡುವ ಹಂಚಿಕೆಗಾಗಿ ಇರುವ ಷರತ್ತುಗಳು.–** 13 ಮತ್ತು 14ನೇ ನಿಯಮಗಳ ಮೇರೆಗೆ, ಕೇಳಿದಾಗ ಬಿಟ್ಟುಕೊಡುವ ಲೈಸನ್ಸ್ ಆಧಾರದ ಮೇಲೆ ಅಂಗಡಿ, ಗೋದಾಮು, ಅಂಗಡಿ ಸಹಿತ

ಗೋದಾಮು, ವೇಬ್ರಿಜ್‌ಗಳು, ಚಿಲ್ಲರೆ ಅಂಗಡಿಗಳು, ಚಹಾದ ಅಂಗಡಿಯ ಮತ್ತು ಕ್ಯಾಂಟೀನಿನ ಹಂಚಿಕೆಯು ಈ ಕೆಳಕಂಡ ಷರತ್ತುಗಳಿಗೊಳಪಟ್ಟಿರತಕ್ಕದ್ದು, ಎಂದರೆ:–

(1) ಹಂಚಿಕೆ ಪಡೆದವನು, ಹಂಚಿಕೆ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಹದಿನೈದು ದಿನಗಳ ಅವಧಿಯೊಳಗಾಗಿ, ಸಂದಾಯ ಮಾಡಬೇಕಾದ ಹತ್ತು ತಿಂಗಳ ಲೈಸನ್ಸು ಶುಲ್ಕಕ್ಕೆ ಸಮನಾದ ಮೊಬಲಗನ್ನು ಈಗಾಗಲೇ ಠೇವಣಿ ಇಟ್ಟಿದ್ದ ಮುಂಗಡ ಹಣವನ್ನು ಅದರಲ್ಲಿ ಕಳೆದು ಮಾರುಕಟ್ಟೆ ಸಮಿತಿಯಲ್ಲಿ ಠೇವಣಿ ಇಡತಕ್ಕದ್ದು.

(2) ಹಂಚಿಕೆ ಪಡೆದವನು, 13ನೇ ಅಥವಾ 14ನೇ ನಿಯಮದ ಮತ್ತು (1)ನೆಯ ಖಂಡದ ಮೇರೆಗೆ ಅಗತ್ಯಪಡಿಸಿದಂತೆ ಸಂದಾಯವನ್ನು ಮಾಡಿದ ನಂತರ, ಮಾರುಕಟ್ಟೆ ಸಮಿತಿಯು, ಸಮುಚಿತವಾದ ನಮೂನೆ–VII ರಲ್ಲಿ ಅಥವಾ ನಮೂನೆ -VIII ರಲ್ಲಿ ಒಪ್ಪಂದ ಪತ್ರ ಬರೆದುಕೊಡುವಂತೆ ತಿಳಿಸತಕ್ಕದ್ದು.

(3) ಪಾಲುದಾರಿಕೆ ಫರ್ಮಿನ ಹೆಸರಿಗೆ ಹಂಚಿಕೆ ಮಾಡಲಾಗಿರುವಲ್ಲಿ, ಆ ಫರ್ಮಿನ ರಚನೆಯಲ್ಲಿ ಯಾವುದೇ ಬದಲಾವಣೆಯಾದಲ್ಲಿ, ಅದನ್ನು ಮಾರುಕಟ್ಟೆ ಸಮಿತಿಯ ಗಮನಕ್ಕೆ ತರತಕ್ಕದ್ದು. ಮಾರುಕಟ್ಟೆ ಸಮಿತಿಯು ತಾನು ಸೂಕ್ತವೆಂದು ಭಾವಿಸಿದಂಥ ವಿಚಾರಣೆ ನಡೆಸಿದ ನಂತರ, ಫರ್ಮಿನ ರಚನೆಯಲ್ಲಾದ ಬದಲಾವಣೆಯು ಲೈಸನ್ಸನ್ನು ವಹಿಸಿಕೊಟ್ಟಂತಾಗುತ್ತದೆ ಎಂದು ನಿರ್ಧರಿಸಿದರೆ ಅಂಥ ಲೈಸೆನ್ಸು ರದ್ದಾಗತಕ್ಕದ್ದು.

(4) ಲೈಸನ್ಸು ಶುಲ್ಕವನ್ನು, 33 ತಿಂಗಳಿಗೊಮ್ಮೆ, ಲೈಸನ್ಸು ಶುಲ್ಕದ ಶೇಕಡಾ ಐದರ ದರದಲ್ಲಿ ಹೆಚ್ಚಿಸತಕ್ಕದ್ದು.

(5) ಮಾರುಕಟ್ಟೆ ಸಮಿತಿಯು ಮಾಡಿದ ಎಲ್ಲ ಆರಂಭಿಕ ಹಂಚಿಕೆಗಳು, ಕೃಷಿ ಮಾರುಕಟ್ಟೆ ನಿರ್ದೇಶಕನ ಅಥವಾ ಅವನು ಅಧಿಕೃತಗೊಳಿಸಿದ ಇತರ ಅಂಥ ಅಧಿಕಾರಿಯ ಅನುಮೋದನೆ ಗೊಳಪಟ್ಟಿರತಕ್ಕದ್ದು.

(6) ಈ ನಿಯಮಗಳ ಮೇರೆಗೆ, ಕೇಳಿದಾಗ ಬಿಟ್ಟುಕೊಡುವ ಲೈಸನ್ಸನ್ನು,–

(i) ಲೈಸನ್ಸು ಪಡೆದವನು, ಮಾರುಕಟ್ಟೆ ಸಮಿತಿಗೆ ಸಂದಾಯ ಮಾಡಬೇಕಾಗಿದ್ದ ಬಾಕಿಗಳನ್ನು ಸಂದಾಯ ಮಾಡಲು ವಿಫಲನಾದಲ್ಲಿ ; ಅಥವಾ

(ii) ಲೈಸನ್ಸು ಪಡೆದವನು, ಒಪ್ಪಂದದ ನಿಬಂಧನೆ ಮತ್ತು ಷರತ್ತುಗಳನ್ನು ಪಾಲಿಸಲು ತಪ್ಪಿದಲ್ಲಿ

– ನವೀಕರಿಸತಕ್ಕದ್ದಲ್ಲ.

**17. ನಿವೇಶನ, ಇತ್ಯಾದಿಗಳನ್ನು ಮೀಸಲಿಡುವುದು.–** ಮಾರುಕಟ್ಟೆ ಸಮಿತಿಯು ಹಂಚಬೇಕಾಗಿರುವ ನಿವೇಶನಗಳ, ಅಂಗಡಿಗಳ, ಅಂಗಡಿ ಸಹಿತ ಗೋದಾಮು ಅಥವಾ ಗೋದಾಮುಗಳ ಪೈಕಿ, ಕಾಲಕಾಲಕ್ಕೆ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದ ಸಂಖ್ಯೆಯಷ್ಟನ್ನು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಹಂಚಲು ಪ್ರತಿಯೊಂದು ಪ್ರವರ್ಗಗಳಿಗಾಗಿ ಮೀಸಲಿಡತಕ್ಕದ್ದು.

**18. ಅರ್ಜಿದಾರನ ಮರಣ.–** (1) ಹಂಚಿಕೆಗೆ ಮೊದಲು ಅರ್ಜಿದಾರನು ಮೃತನಾದರೆ, ಅವನ ಕಾನೂನುಬದ್ಧ ವಾರಸುದಾರರು, ಅವರ ಆಯ್ಕೆಯ ಮೇರೆಗೆ ಠೇವಣಿಯನ್ನು ವಾಪಸ್ಸು ಪಡೆಯಲು ಅಥವಾ ಅವರು ಅಗತ್ಯ ಮಾನದಂಡಗಳನ್ನು ಪೂರೈಸಿದ್ದರೆ ಈ ನಿಯಮಗಳ ಮೇರೆಗೆ ಹಂಚಿಕೆ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು.

(2) ಹಂಚಿಕೆಯಾದ ನಂತರ ಅರ್ಜಿದಾರನು ಮೃತನಾದಲ್ಲಿ, ಅವನ ಕಾನೂನುಬದ್ಧ ವಾರಸುದಾರರು ಅವರ ಆಯ್ಕೆಯ ಮೇರೆಗೆ ಹಂಚಿಕೆಗಾಗಿ ಸಂದಾಯ ಮಾಡಿದ್ದ ಮೊಬಲಗನ್ನು ವಾಪಸು ಪಡೆಯಲು ಅಥವಾ ಅವರು ಅಗತ್ಯ ಮಾನದಂಡಗಳನ್ನು ಪೂರೈಸಿದ್ದರೆ ಈ ನಿಯಮಗಳಿಗನುಸಾರವಾಗಿ ಒಪ್ಪಂದ ಮಾಡಿಕೊಳ್ಳಲು ಹಕ್ಕುಳ್ಳವರಾಗಿರತಕ್ಕದ್ದು.

(3) ಕಾನೂನುಬದ್ಧ ವಾರಸುದಾರರು ಮೊಬಲಗನ್ನು ವಾಪಸ್ಸು ಪಡೆಯುವುದನ್ನು ಆಯ್ಕೆ ಮಾಡಿಕೊಂಡರೆ, ಮಾರುಕಟ್ಟೆ ಸಮಿತಿಯು, ಅದಕ್ಕೆ ಯಾವುದೇ ಬಡ್ಡಿಯಿಲ್ಲದೆ ಮರುಪಾವತಿ ಮಾಡತಕ್ಕದ್ದು ಹಾಗೂ ಈ ನಿಯಮಗಳಿಗೊಳಪಟ್ಟು ಅದು ಮರುಹಂಚಿಕೆ ಮಾಡಬಹುದು.

**19. ಸ್ವಯಿಚ್ಛೆಯಿಂದ ಹಿಂದಿರುಗಿಸುವುದು.–** ಹಂಚಿಕೆಯಾದ ನಂತರದ ಯಾವುದೇ ಕಾಲದಲ್ಲಿ ಹಂಚಿಕೆ ಪಡೆದವನು ಹಂಚಿಕೆಯಾದ ಸ್ವತ್ತನ್ನು ಮಾರುಕಟ್ಟೆ ಸಮಿತಿಗೆ ಹಿಂದಿರುಗಿಸಬಹುದು. ಹಾಗೆ ಹಿಂದಿರುಗಿಸಿದ ನಂತರ, ಮಾರುಕಟ್ಟೆ ಸಮಿತಿಯು ಸದರಿ ಹಂಚಿಕೆಯ ಸಂಬಂಧದಲ್ಲಿ ಸಂದಾಯ ಮಾಡಿದ್ದ ಮೊಬಲಗನ್ನು ಯಾವುದೇ ಬಡ್ಡಿಯಿಲ್ಲದೆ ಮರುಪಾವತಿ ಮಾಡತಕ್ಕದ್ದು.

**20. ದಂಡರೂಪದ ಶುಲ್ಕ, ಇತ್ಯಾದಿ.–** (1) ಗುತ್ತಿಗೆ ಸಹಿತ ಮಾರಾಟ ಆಧಾರದ ಮೇಲೆ ನಿವೇಶನದ, ಅಂಗಡಿಯ, ಗೋದಾಮಿನ ಅಥವಾ ಅಂಗಡಿ ಸಹಿತ ಗೋದಾಮಿನ ಹಂಚಿಕೆ ಪಡೆದವನು, ಈ ನಿಯಮಗಳ ಯಾವುದೇ ನಿಯಮವನ್ನು ಅಥವಾ ಒಪ್ಪಂದದ ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ, ಮಾರುಕಟ್ಟೆ ಸಮಿತಿಯು ಹಂಚಿಕೆಯನ್ನು ರದ್ದುಮಾಡಬಹುದು ಮತ್ತು ಗುತ್ತಿಗೆ ಅವಧಿಯು ಮುಕ್ತಾಯಗೊಳ್ಳುವ ಮೊದಲೇ ಈ ನಿಯಮಗಳಿಗನುಸಾರವಾಗಿ ಅಥವಾ ಒಪ್ಪಂದದ ನಿಬಂಧನೆಗಳಿಗನುಸಾರವಾಗಿ ಗುತ್ತಿಗೆಯನ್ನು ಕೊನೆಗೊಳಿಸತಕ್ಕದ್ದು ಮತ್ತು ಠೇವಣಿ ಹಣವನ್ನು ಮತ್ತು ಸ್ವತ್ತನ್ನು ಮತ್ತು ಆ ನಿವೇಶನದಲ್ಲಿ ಕಟ್ಟಲಾಗಿದ್ದ ಕಟ್ಟಡವನ್ನು ಯಾವುದೇ ಪರಿಹಾರ ನೀಡದೆ ಮುಟ್ಟುಗೋಲು ಹಾಕಿಕೊಳ್ಳಬಹುದು:

ಪರಂತು, ಅದರಿಂದ ಬಾಧಿತನಾಗುವ ಸಂಭವವಿರುವ ವ್ಯಕ್ತಿಗೆ ತನ್ನ ಅಹವಾಲು ಹೇಳಿಕೊಳ್ಳಲು ಅವಕಾಶ ಕೊಟ್ಟ ಹೊರತು, ಯಾವುದೇ ತೀರ್ಮಾನವನ್ನು ಅಥವಾ ಆದೇಶವನ್ನು ಮಾಡತಕ್ಕದ್ದಲ್ಲ.

ಮತ್ತೂ ಪರಂತು, (1)ನೆಯ ಉಪನಿಯಮದ ಮೇರೆಗೆ ಮುಟ್ಟುಗೋಲು ಹಾಕಿಕೊಳ್ಳುವ ಯಾವುದೇ ಆದೇಶವನ್ನು ಜಾರಿಗೊಳಿಸುವ ಮೊದಲು, ಸಂದಾಯ ಮಾಡಿರುವ ಹಣವನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬ ಬಗ್ಗೆ ಕಾರಣ ತೋರಿಸುವಂತೆ ಹಂಚಿಕೆ ಪಡೆದವನಿಗೆ ಒಂದು ಅವಕಾಶ ನೀಡತಕ್ಕದ್ದು.

(2) 13ನೇ ಮತ್ತು 14ನೇ ನಿಯಮಗಳ ಮೇರೆಗೆ ಹಂಚಿಕೆ ಪಡೆದವನು, ಕೇಳಿದಾಗ ಬಿಟ್ಟುಕೊಡುವ ಲೈಸನ್ಸಿನ ಶುಲ್ಕವನ್ನು ಯಾವುದೇ ತಿಂಗಳಿಗಾಗಿ ತರುವಾಯದ ತಿಂಗಳ ಹತ್ತನೇ ದಿನಕ್ಕೆ ಮುಂಚೆ ಸಂದಾಯ ಮಾಡಲು ವಿಫಲನಾದಲ್ಲಿ, ಆ ತಿಂಗಳಿಗೆ ಸಂದಾಯ ಮಾಡಬೇಕಾದ ಲೈಸನ್ಸು ಶುಲ್ಕದ ಶೇಕಡಾ ಹತ್ತರ ದರದಲ್ಲಿ ದಂಡರೂಪದ ಶುಲ್ಕವನ್ನು ವಿಧಿಸತಕ್ಕದ್ದು ಮತ್ತು ಹಂಚಿಕೆ ಪಡೆದವನಿಂದ ವಸೂಲು ಮಾಡತಕ್ಕದ್ದು.

**21. ಸಂಗತಿಗಳನ್ನು ತಪ್ಪಾಗಿ ನಿರೂಪಿಸುವುದು ಅಥವಾ ಮುಚ್ಚಿಡುವುದು.–** 3ನೇ, 9ನೇ, 13ನೇ ಅಥವಾ 14ನೇ ನಿಯಮಗಳ ಮೇರೆಗೆ ಹಂಚಿಕೆ ಕೋರುವ ಅರ್ಜಿದಾರನು, ಸುಳ್ಳು ಮಾಹಿತಿಯನ್ನು ಒದಗಿಸಿದರೆ ಅಥವಾ ಯಾವುದೇ ಮಹತ್ವದ ಸಂಗತಿಯನ್ನು ಮುಚ್ಚಿಟ್ಟರೆ ಆ ಹಂಚಿಕೆಗಾಗಿನ ಅರ್ಜಿಯನ್ನು ತಿರಸ್ಕರಿಸತಕ್ಕದ್ದು ಮತ್ತು ಯಾವುದೇ ಹಂಚಿಕೆ ಮಾಡಿದ್ದರೆ ಕ್ಷಿಪ್ರ ರೀತಿಯಲ್ಲಿ ರದ್ದುಪಡಿಸತಕ್ಕದ್ದು, ಮತ್ತು ನಿವೇಶನವನ್ನು, ಅಂಗಡಿಯನ್ನು, ಅಂಗಡಿ ಸಹಿತ ಗೋದಾಮನ್ನು ಅಥವಾ ಗೋದಾಮನ್ನು, ವೇಬ್ರಿಜ್‌ಗಳನ್ನು, ಚಹಾದ ಅಂಗಡಿಗಳನ್ನು, ಚಿಲ್ಲರೆ ಅಂಗಡಿಯನ್ನು ಅಥವಾ ಇತರ ಕಟ್ಟಡವನ್ನು ಮಾರುಕಟ್ಟೆ ಸಮಿತಿಯು ತನ್ನ ವಶಕ್ಕೆ ತೆಗೆದುಕೊಳ್ಳತಕ್ಕದ್ದು. ಈ ಸಂದರ್ಭಗಳ ಮೇರೆಗಿನ ತಿರಸ್ಕರಣೆ ಅಥವಾ ರದ್ದಿಯಾತಿಯು ಅರ್ಜಿದಾರನನ್ನು ಭವಿಷ್ಯದಲ್ಲಿಯೂ ಕೂಡ ಹಂಚಿಕೆಗಾಗಿ ಅನರ್ಹನನ್ನಾಗಿಸತಕ್ಕದ್ದು. ಅಂಥ ಅರ್ಜಿದಾರನು ಸಂದಾಯ ಮಾಡಿದ ಎಲ್ಲ ಮೊಬಲಗುಗಳನ್ನು ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು. ಅರ್ಜಿದಾರನು ಅಪರಾಧಿಕ ಪ್ರಾಸಿಕ್ಯೂಷನ್‌ಗೆ ಸಹ ಗುರಿಯಾಗತಕ್ಕದ್ದು.

ಪರಂತು, ಅದರಿಂದ ಬಾಧಿತನಾಗುವ ಸಂಭವವಿರುವ ವ್ಯಕ್ತಿಗೆ ತನ್ನ ಅಹವಾಲು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ಹೊರತು ಯಾವುದೇ ತೀರ್ಮಾನವನ್ನು ಅಥವಾ ಆದೇಶವನ್ನು ಮಾಡತಕ್ಕದ್ದಲ್ಲ.

**22. ದುರ್ಬಳಕೆ, ಸೇರ್ಪಡೆಗಳ ಮತ್ತು ಮಾರ್ಪಾಟುಗಳ ಮೇಲೆ ನಿರ್ಬಂಧಗಳು.–** ಮಾರುಕಟ್ಟೆ ಪ್ರಾಂಗಣದಲ್ಲಿ ಲೈಸನ್ಸು ಹೊಂದಿದ ಮಾರುಕಟ್ಟೆ ಕಾರ್ಯನಿರ್ವಾಹಕನಾಗಲಿ ಅಥವಾ ಮಾರುಕಟ್ಟೆ ಸಮಿತಿಯಾಗಲಿ ನಿರ್ಮಿಸಿದ ಕಟ್ಟಡಗಳನ್ನು ಅಧಿಸೂಚಿತ ಕೃಷಿ ಉತ್ಪನ್ನಗಳ ಕ್ರಯವಿಕ್ರಯಕ್ಕಾಗಿ ಹೊರತು ಬೇರೆ ಯಾವುದೇ ಉದ್ದೇಶಕ್ಕೆ ಬಳಸತಕ್ಕದ್ದಲ್ಲ. ಹಂಚಿಕೆ ಪಡೆದವನು, ಹಂಚಿಕೆಯಾದ ಯಾವುದೇ ನಿವೇಶನವನ್ನು ಅಥವಾ ಯಾವುದೇ ಕಟ್ಟಡವನ್ನು ಪುನಃ ವಿಭಜಿಸಲು ಅಥವಾ ಮಾರುಕಟ್ಟೆ ಸಮಿತಿಯ ಲಿಖಿತ ಪೂರ್ವಾನುಮತಿ ಪಡೆಯದೆ ಹಂಚಿಕೆಯಾದ ಯಾವುದೇ ಇತರ ಕಟ್ಟಡ ಘಟಕದೊಂದಿಗೆ ಅಥವಾ ನಿವೇಶನದೊಂದಿಗೆ ಸಂಯೋಜಿಸಲು ಅಥವಾ ಯಾವುದೇ ಹೆಚ್ಚುವರಿ ರಚನೆ ಅಥವಾ ಮಾರ್ಪಾಟುಗಳನ್ನು ಮಾಡಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

**23. ಪುನರೀಕ್ಷಣೆ.–** (1) ಸರ್ಕಾರವು, ಈ ನಿಯಮಗಳ ಮೇರೆಗೆ ಮಾರುಕಟ್ಟೆ ಸಮಿತಿಯ ಯಾವುದೇ ತೀರ್ಮಾನದ, ಆದೇಶದ ಅಥವಾ ನಡವಳಿಯ ದಾಖಲೆಯನ್ನು, ಅಂಥ ತೀರ್ಮಾನದ, ಆದೇಶದ ಅಥವಾ ನಡವಳಿಗಳ ಕಾನೂನು ಸಮ್ಮತತೆಯ ಅಥವಾ ಔಚಿತ್ಯತೆಯ ಬಗೆಗೆ ತಾನು ಮನದಟ್ಟು ಮಾಡಿಕೊಳ್ಳಲು ತಾನಾಗಿಯೇ ಅಥವಾ ಅನ್ಯಥಾ ಅವುಗಳ ದಾಖಲೆಗಳನ್ನು ತರಿಸಿಕೊಳ್ಳಬಹುದು.

(2) ಯಾವುದೇ ಸಂದರ್ಭದಲ್ಲಿ, ಹಾಗೆ ತರಿಸಿಕೊಂಡ ಯಾವುದೇ ತೀರ್ಮಾನವನ್ನು, ಆದೇಶವನ್ನು ಅಥವಾ ನಡವಳಿಯನ್ನು ಮಾರ್ಪಾಟು ಮಾಡಬೇಕೆಂದು ಅಥವಾ ರದ್ದುಮಾಡಬೇಕೆಂದು ಅಥವಾ ವಿಪರ್ಯಯಗೊಳಿಸಬೇಕೆಂದು ಸರ್ಕಾರಕ್ಕೆ ಕಂಡುಬಂದರೆ, ಅದು ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಮಾಡಬಹುದು:

ಪರಂತು, ಅದರಿಂದ ಬಾಧಿತನಾಗುವ ಸಂಭವವಿರುವ ವ್ಯಕ್ತಿಗೆ ತನ್ನ ಅಹವಾಲು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ಹೊರತು, ಯಾವುದೇ ಅಂಥ ತೀರ್ಮಾನವನ್ನು ಅಥವಾ ಆದೇಶವನ್ನು ಮಾರ್ಪಾಟು ಮಾಡತಕ್ಕದ್ದಲ್ಲ, ರದ್ದು ಮಾಡತಕ್ಕದ್ದಲ್ಲ ಅಥವಾ ವಿಪರ್ಯಯಗೊಳಿಸತಕ್ಕದ್ದಲ್ಲ.

**24. ಸಹಕಾರಿ ಸಂಘಗಳು, ಇತ್ಯಾದಿಗಳಿಗೆ ನಿವೇಶನಗಳ ಹಂಚಿಕೆ.–** ಈ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ಮಾರುಕಟ್ಟೆ ಸಮಿತಿಯು, ಅಧಿಸೂಚಿತ ಮಾರುಕಟ್ಟೆ ಉತ್ಪನ್ನಗಳ ಸಂಬಂಧದಲ್ಲಿ ವ್ಯವಹರಿಸುವ ಮತ್ತು ಮಾರುಕಟ್ಟೆ ಪ್ರದೇಶದಲ್ಲಿ ಲೈಸನ್ಸು ಕೂಡ ಹೊಂದಿರುವ ಸಹಕಾರ ಸಂಘಕ್ಕೆ ಅಥವಾ ಉಗ್ರಾಣ ನಿಗಮಕ್ಕೆ ಅಥವಾ ಯಾವುದೇ ಸೇವಾ ಸಂಸ್ಥೆಗೆ ಸಮಿತಿಯು ನಿರ್ದಿಷ್ಟಪಡಿಸಬಹುದಾದಂಥ ಬಾಡಿಗೆ ಅಥವಾ ಶುಲ್ಕದ ಆಧಾರದ ಮೇಲೆ ಮತ್ತು ಅಂಥ ಷರತ್ತುಗಳಿಗೊಳಪಟ್ಟು, ಗುತ್ತಿಗೆ ಸಹಿತ ಮಾರಾಟದ ಆಧಾರದ ಮೇಲೆ ಅಥವಾ ಕೇಳಿದಾಗ ಬಿಟ್ಟುಕೊಡುವ ಲೈಸನ್ಸು ಆಧಾರದ ಮೇಲೆ ನಿವೇಶನಗಳನ್ನು, ಅಂಗಡಿಗಳನ್ನು, ಗೋದಾಮನ್ನು, ಅಂಗಡಿ ಸಹಿತ ಗೋದಾಮನ್ನು ಅಥವಾ ಚಿಲ್ಲರೆ ಅಂಗಡಿಯನ್ನು ಹಂಚಿಕೆ ಮಾಡಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಬಿ.ಎನ್. ಜಾಪಾಲಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**ಅಧಿಸೂಚನೆ ಸಂಖ್ಯೆ ಸಿಡಿ 58 ಎಂಆರ್‌ಇ 2002, ದಿನಾಂಕ 23,10.2003.**

**ಅನುಬಂಧ**

**(ನಿಯಮ–5 ನೋಡಿ)**

| ಪ್ರವರ್ಗ | ವಸೂಲಾದ ಮಾರುಕಟ್ಟೆ ಶುಲ್ಕ (ಲಕ್ಷ ರೂ.ಗಳಲ್ಲಿ | ಕನಿಷ್ಠ ಮಾರ್ಗದರ್ಶಿ ಮೌಲ್ಯ (ರೂ.ಗಳಲ್ಲಿ) ಮುಖ್ಯ ಮಾರು ಕಟ್ಟೆ ಪ್ರಾಂಗಣ | ಉಪ ಮಾರು ಕಟ್ಟೆ ಪ್ರಾಂಗಣ | ನೋಂದಣಿ ಶುಲ್ಕ (ರೂ.ಗಳಲ್ಲಿ) | ವರ್ಗಾವಣೆ ಶುಲ್ಕ |
|---|---|---|---|---|---|
| (1) | 10ಕ್ಕಿಂತ ಕಡಿಮೆ | 20 | 10 | 100 | 5000 |
| (2) | 10ಕ್ಕಿಂತ ಹೆಚ್ಚು ಆದರೆ 25ಕ್ಕಿಂತ ಕಡಿಮೆ | 30 | 15 | 250 | 10000 |
| (3) | 25ಕ್ಕಿಂತ ಹೆಚ್ಚು ಆದರೆ 50ಕ್ಕಿಂತ ಕಡಿಮೆ | 40 | 20 | 500 | 15000 |
| (4) | 50ಕ್ಕಿಂತಹೆಚ್ಚು ಆದರೆ 100ಕ್ಕಿಂತ ಕಡಿಮೆ | 50 | 25 | 1000 | 20000 |
| (5) | 100ಕ್ಕಿಂತ ಹೆಚ್ಚು 250ಕ್ಕಿಂತ ಕಡಿಮೆ | 60 | 30 | 1500 | 25000 |
| (6) | 250ಕ್ಕಿಂತ ಹೆಚ್ಚು 500ಕ್ಕಿಂತ ಕಡಿಮೆ | 70 | 35 | 2000 | 30000 |
| (7) | 500ಕ್ಕಿಂತ ಹೆಚ್ಚು | 80 | 40 | 2500 | 35000 |

**ನಮೂನೆ ಸಂಖ್ಯೆ –I**

(6(i)ನೇ ನಿಯಮ ನೋಡಿ)

ಫರ್ಮು, ಇತ್ಯಾದಿಯನ್ನು ಪ್ರತಿನಿಧಿಸುವ ವ್ಯಕ್ತಿಯ ಭಾವಚಿತ್ರವನ್ನು ಇಲ್ಲಿ ಅಂಟಿಸಿ

ಕಾರ್ಯದರ್ಶಿ,
ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ
--------------------.

**ನೋಂದಣಿಗಾಗಿ ಅರ್ಜಿ**

| | | |
|---|---|---|
| (1) ಅರ್ಜಿದಾರನ ಹೆಸರು, ಫರ್ಮು ಅಥವಾ ಕಂಪನಿಯ ಸಂದರ್ಭದಲ್ಲಿ, ವಿವರಗಳು | | |
| (2) (ಎ) ಲೈಸನ್ಸಿನ ವಿವರಗಳು | ☐ | ಕಮೀಷನ್ ಏಜೆಂಟ್ |
| | ☐ | ವ್ಯಾಪಾರಿ |
| (ಬಿ) ಲೈಸನ್ಸಿನ ಸಂಕೇತ ಸಂಖ್ಯೆ | ☐ | ಸಂಸ್ಕರಣೆದಾರ |
| | ☐ | ಇತರರು |
| (3) ಫರ್ಮು, ಇತ್ಯಾದಿಗಳ ಸಂದರ್ಭದಲ್ಲಿ ರುಜುಹಾಕಲು ಅಧಿಕೃತಗೊಂಡ ವ್ಯಕ್ತಿಯ ಹೆಸರು, (ದಪ್ಪ ಅಕ್ಷರಗಳಲ್ಲಿ) ವಾಸಸ್ಥಳದ ವಿಳಾಸ ಮತ್ತು ದೂರವಾಣಿ ಸಂಖ್ಯೆ | | |
| (4) ಫರ್ಮಿನ ಮತ್ತು ವಾಸಸ್ಥಳದ ದೂರವಾಣಿ ಸಂಖ್ಯೆ ಸಮೇತ ವಿಳಾಸ | | |
| (5) ನೋಂದಣಿ ಶುಲ್ಕದ ವಿವರಗಳು | | |
| (ಎ) ಮೊಬಲಗು | | |
| (ಬಿ) ಡಿಡಿ/ಚೆಕ್/ಪಿಓ ಸಂಖ್ಯೆ | | |
| (ಸಿ) ದಿನಾಂಕ | | |
| (ಡಿ) ಬ್ಯಾಂಕಿನ ಹೆಸರು | | |

**ಸೂಚನೆ:** ಫರ್ಮು ಅಥವಾ ಕಂಪನಿ, ಇತ್ಯಾದಿಯನ್ನು ಪ್ರತಿನಿಧಿಸುವ ವ್ಯಕ್ತಿಯ ಭಾವಚಿತ್ರದ ಒಂದು ಪ್ರತಿಯನ್ನು ಲಗತ್ತಿಸಿ.

ಸ್ಥಳ: ರುಜು ಮಾಡಲು ಅಧಿಕೃತಗೊಂಡ ವ್ಯಕ್ತಿಯ ಸಹಿ

ದಿನಾಂಕ: (ಲೈಸನ್ಸು ಹೊಂದಿದ ಮಾರುಕಟ್ಟೆ ಕಾರ್ಯನಿರ್ವಾಹಕ)

---

**ಕಚೇರಿ ಬಳಕೆಗೆ ಮಾತ್ರ**

ಗುತ್ತಿಗೆ ಸಹಿತ ಮಾರಾಟ ಆಧಾರದ ಮೇಲೆ ನಿವೇಶನದ/ ಕಟ್ಟಡದ/ ಗೋದಾಮಿನ ಹಂಚಿಕೆಗೆ ನೋಂದಣಿಗಾಗಿ ಅರ್ಜಿಯನ್ನು ದಿನಾಂಕ ---------- ರಂದು --------- ರೂಪಾಯಿಗಳ ಡಿಡಿ/ ಚೆಕ್/ ಪಿಓದೊಂದಿಗೆ ಸ್ವೀಕರಿಸಲಾಗಿದೆ.

ನೋಂದಣಿ ಸಂಖ್ಯೆ [ ] ಕಾರ್ಯದರ್ಶಿ.

ನಮೂನೆ – II

(ನಿಯಮ 6(2)ನ್ನು ನೋಡಿ)

**ಸ್ವೀಕೃತಿ**

---------------------------------- ರವರಿಂದ ಅರ್ಜಿ ಸ್ವೀಕರಿಸಲಾಗಿದೆ.

ನೋಂದಣಿಯ ರಿಜಿಸ್ಟರಿನಲ್ಲಿ ನಿಮ್ಮ ಹೆಸರನ್ನು -------------------- ಸಂಖ್ಯೆಯಲ್ಲಿ ನೋಂದಾಯಿಸಲಾಗಿದೆ.

ಸ್ಥಳ:

ದಿನಾಂಕ: ಕಾರ್ಯದರ್ಶಿ.

**ನಮೂನೆ –III**

(ನಿಯಮ 3(3), 9 ಮತ್ತು 13ನೇ ನಿಯಮವನ್ನು ನೋಡಿ)

**ಹಂಚಿಕೆಗಾಗಿ ಅರ್ಜಿ**

**ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ**

--------------

| | | |
|---|---|---|
| (1) | ಅರ್ಜಿದಾರನ ಹೆಸರು | |
| (1–ಎ) | ಫರ್ಮ್ ಇತ್ಯಾದಿ ಸಂದರ್ಭದಲ್ಲಿ, ಫರ್ಮ್‌ನ್ನು ಪ್ರತಿನಿಧಿಸುವ ವ್ಯಕ್ತಿಯ ಹೆಸರು | |
| (2) | ಪೂರ್ಣ ವಿಳಾಸ, ದೂರವಾಣಿ / ಟೆಲೆಕ್ಸ್ / ಫ್ಯಾಕ್ಸ್ ಸಂಖ್ಯೆಗಳ ಸಹಿತ ಫರ್ಮ್/ ಕಂಪನಿಯ ಹೆಸರು | |
| (3) | ಅದು ಪಾಲುದಾರಿಕೆ ಫರ್ಮ್ ಆಗಿದ್ದರೆ ಪಾಲುದಾರಿಕೆ ಪತ್ರದ ಪ್ರತಿಯನ್ನು ಲಗತ್ತಿಸಿ | |
| (4) | ಅರ್ಜಿದಾರನು ಈ ಕೃಷಿ ಉತ್ಪನ್ನ ಮಾರುಟ್ಟೆ ಸಮಿತಿಯ ಲೈಸನ್ಸ್ ಹೊಂದಿರುವ ಮಾರುಕಟ್ಟೆ ಕಾರ್ಯನಿರ್ವಾಹಕನಾಗಿದ್ದರೆ ಲೈಸೆನ್ಸ್‌ನ ಪ್ರವರ್ಗವನ್ನು ಮತ್ತು ವಿವರಗಳನ್ನು ತಿಳಿಸಿರಿ ಮತ್ತು ಲೈಸೆನ್ಸಿನ ಪ್ರತಿಯನ್ನು ಲಗತ್ತಿಸಿರಿ | |
| (5) | ಅರ್ಜಿದಾರನು ವ್ಯಾಪಾರಿ/ ಕಮೀಷನ್ ಏಜೆಂಟ್‌ನಾಗಿರುವ ಸಂದರ್ಭದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನಗಳ ವಹಿವಾಟು, ಕಳೆದ 3 ವರ್ಷಗಳ ಅವಧಿಯಲ್ಲಿ ಕಟ್ಟಿದ ಮಾರುಕಟ್ಟೆ ಶುಲ್ಕದ ವಿವರ ಒದಗಿಸಿ. | |
| (6) | ಯಾವ ಆವರಣಗಳಿಗೆ ಲೈಸೆನ್ಸ್‌ನ್ನು ಮಂಜೂರು ಮಾಡಲಾಗಿತ್ತೋ ಆ ಆವರಣಗಳ ವಿಳಾಸ | |
| (7) | ಕ.ಮಾ.ತೆ. / ಕೇಂ.ಮಾ.ತೆ. ಸಂಖ್ಯೆ | |
| (8) | ಅರ್ಜಿದಾರನು ವಾಣಿಜ್ಯ ತೆರಿಗೆ ಅಧಿನಿಯಮದ ಅಡಿಯಲ್ಲಿ ತೆರಿಗೆದಾರನಾಗಿದ್ದಾನೆಯೇ (ವಿವರ ಒದಗಿಸಿ) | |
| (9) | ಅರ್ಜಿದಾರನು ಆದಾಯ ತೆರಿಗೆ ಅಧಿನಿಯಮದ ಅಡಿಯಲ್ಲಿ ತೆರಿಗೆದಾರ ನಾಗಿದ್ದಾನೆಯೇ (ಖಾಯಂ ಖಾತೆ ಸಂಖ್ಯೆ ಮೊದಲಾದವುಗಳ ವಿವರ ಒದಗಿಸಿ) | |
| (10) | ಅರ್ಜಿದಾರನಿಗೆ ನಿವೇಶನ / ಅಂಗಡಿ/ ಗೋದಾಮು/ ಅಂಗಡಿ ಸಹಿತ ಗೋದಾಮು ಹಂಚಿಕೆ ಮಾಡಿರದಿದ್ದರೆ ಆ ಬಗ್ಗೆ ಆತ ಅಫಿಡಾವಿಟ್ ಒದಗಿಸಿರುವನೆ? | |
| (11) | ಅರ್ಜಿದಾರನ ಪಾಲುದಾರರೂ ಸಹ ಈ ಅಧಿಸೂಚನೆಗನುಸಾರವಾಗಿ ನಿವೇಶನ ಹಂಚಿಕೆ ಮಾಡುವಂತೆ ಕೋರಿ ಅರ್ಜಿ ಸಲ್ಲಿಸಿರುವರೆ, ಹಾಗಿದ್ದರೆ ವಿವರ ಒದಗಿಸಿ | |
| (12) | ನಿವೇಶನಕ್ಕಾಗಿ/ ಅಂಗಡಿ ಸಹಿತ ಗೋದಾಮುಗಳಿಗಾಗಿ / ಗೋದಾಮುಗಳಿಗಾಗಿ ಅರ್ಜಿಗಳನ್ನು ಸಲ್ಲಿಸಲಾಗಿದೆಯೇ ಮತ್ತು ಅವುಗಳ ಸಂಖ್ಯೆ | |
| (13) | ನೋಂದಣಿ ಸಂಖ್ಯೆ | |
| (14) | ಅರ್ಜಿ ಸಂಖ್ಯೆ | |
| (15) | ಹಿಂದೆ ಅರ್ಜಿಗಳನ್ನೇನಾದರೂ ಸಲ್ಲಿಸಿದ್ದರೆ ಅವುಗಳ ವಿವರಗಳು | |
| (16) | ಅರ್ಜಿಯೊಂದಿಗೆ ಮಾಡಿರುವ ಠೇವಣಿಗಳ ವಿವರಗಳು | |
| (17) | ಯಾವುದೇ ಇತರ ಮಾಹಿತಿ | |

**ಅಫಿಡಾವಿಟ್**

ಶ್ರೀ ---------------- ಎಂಬ ನಾನು ಅರ್ಜಿಯಲ್ಲಿ ಒದಗಿಸಿರುವ ವಿವರಗಳು ನನಗೆ ತಿಳಿದಿರುವಷ್ಟರ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ಸತ್ಯವಾದವುಗಳೆಂದು ಈ ಮೂಲಕ ಘೋಷಿಸುತ್ತೇನೆ. ಮೇಲೆ ಒದಗಿಸಿದ ಯಾವುದೇ ಮಾಹಿತಿ ತಪ್ಪೆಂದು ಕಂಡುಬಂದರೆ ನನ್ನ ಅರ್ಜಿಯನ್ನು ತಿರಸ್ಕರಿಸುವುದಕ್ಕೆ ನಾನು ಒಪ್ಪಿಕೊಂಡಿದ್ದೇನೆ.

ಸ್ಥಳ ಅರ್ಜಿದಾರನ ಸಹಿ
ದಿನಾಂಕ ಹೆಸರು
ಮೊಹರು

**ನಮೂನೆ ಸಂಖ್ಯೆ– IV**

(ನಿಯಮ 10 (ii)ನ್ನು ನೋಡಿ)

ಗುತ್ತಿಗೆ ಸಹಿತ ಮಾರಾಟ ಒಪ್ಪಂದ

ಈ ಒಪ್ಪಂದವನ್ನು, ಒಂದು ಪಕ್ಷವಾಗಿರುವ ------------ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಪ್ರದೇಶದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನ ವ್ಯವಹಾರ ನಡೆಸುತ್ತಿರುವ ----------- ರವರ ಮಗನಾದ ------------ ರಲ್ಲಿ ವಾಸವಾಗಿರುವ, ---------- ವಯಸ್ಸಿನ, -------- ಲೈಸೆನ್ಸ್‌ದಾರನಾದ ಶ್ರೀ ------------- ರವರು (ಇಲ್ಲಿ ಇನ್ನು ಮುಂದೆ ಹಂಚಿಕೆದಾರ ಎಂದು ಕರೆಯಲಾಗಿದ್ದು, ಈ ಪದವು ಅದರ ಸಂದರ್ಭಕ್ಕೆ ಅಥವಾ ಅರ್ಥಕ್ಕೆ ವಿರುದ್ಧವಾದುದು ಏನಾದರೂ ಇದ್ದ ಹೊರತು ಆತನ ಆ ಪದದಲ್ಲಿರುವ ಉತ್ತರಾಧಿಕಾರಿಗಳನ್ನು ಮತ್ತು ಆತನ ಹಸ್ತಾಂತರಿತರನ್ನು ಒಳಗೊಳ್ಳತಕ್ಕದ್ದು) ಮತ್ತು ಇನ್ನೊಂದು ಪಕ್ಷವಾಗಿರುವ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ ಮೇರೆಗೆ ರಚಿಸಿರುವ ನಿಯಮಗಳೊಂದಿಗೆ ಓದಿಕೊಂಡ ಸದರಿ ಅಧಿನಿಯಮದ ಮೇರೆಗೆ ರಚಿಸಿದ ಮತ್ತು ಸ್ಥಾಪಿಸಿದ ಒಂದು ಸಂಸ್ಥೆಯಾಗಿರುವ ---------- ರಲ್ಲಿ ತನ್ನ ಕಚೇರಿ ಹೊಂದಿರುವ ------------- ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು (ಇನ್ನು ಮುಂದೆ ಸಮಿತಿ ಎಂದು ಕರೆಯಲಾಗಿದ್ದು ಈ ಪದವು ಅದರ ಸಂದರ್ಭಕ್ಕೆ ಅಥವಾ ಅರ್ಥಕ್ಕೆ ವಿರುದ್ಧವಾದುದು ಏನಾದರೂ ಇದ್ದ ಹೊರತು ಅಧಿಕಾರದಲ್ಲಿರುವ ಅದರ ಉತ್ತರಾಧಿಕಾರಿಗಳು ಮತ್ತು ಹಸ್ತಾಂತರಿತರನ್ನು ಒಳಗೊಳ್ಳತಕ್ಕದ್ದು) ಪ್ರತಿನಿಧಿಸುವ ಅದರ ಕಾರ್ಯದರ್ಶಿಯಾಗಿರುವ, --------- ರವರ ಮಗನಾದ -------- ವಯಸ್ಸಿನ ------ ನಿವಾಸಿಯಾದ ಶ್ರೀ ---------- ಇವರನ್ನು ಮತ್ತು ಅದರ ಅಧ್ಯಕ್ಷರಾಗಿರುವ --------- ರವರ ಮಗನಾದ -------- ವಯಸ್ಸಿನ ---------- ನಿವಾಸಿಯಾದ ಶ್ರೀ --------------- ನಡುವೆ ----------- ರಂದು (ಪದಗಳಲ್ಲಿ) ಮಾಡಿಕೊಳ್ಳಲಾಗಿರುತ್ತದೆ.

ಸಮಿತಿಯು ಈ ಒಪ್ಪಂದದ ಅನುಸೂಚಿಯಲ್ಲಿ ವರ್ಣಿಸಿರುವ ನಿವೇಶನದ ಮಾಲೀಕ ಆಗಿರುವುದರಿಂದ ಮತ್ತು ಹಂಚಿಕೆದಾರನು, ಅಧಿಸೂಚಿತ ಕೃಷಿ ಉತ್ಪನ್ನದ ----------- ಆಗಿ ವ್ಯವಹಾರ ನಡೆಸುತ್ತಿರುವುದರಿಂದ ಮತ್ತು ಲೈಸೆನ್ಸ್ ಪಡೆದ ವ್ಯಾಪಾರಿ/ ಕಮೀಷನ್ ಏಜೆಂಟ್/ ಆಮದುದಾರ/ ರಫ್ತುದಾರ ಇತ್ಯಾದಿಯಾಗಿ ತನ್ನ ವ್ಯಾಪಾರ ನಡೆಸಲು ಮಾರುಕಟ್ಟೆ ಪ್ರಾಂಗಣದಲ್ಲಿ ನಿವೇಶನ ಮಂಜೂರು ಮಾಡುವಂತೆ ಸಮಿತಿಯನ್ನು ಕೋರಿರುವುದರಿಂದ,–

1) ಹಂಚಿಕೆದಾರನು ಲೈಸೆನ್ಸ್ ಪಡೆದ ಮಾರುಕಟ್ಟೆ ಕಾರ್ಯನಿರ್ವಾಹಕನಾಗಿರತಕ್ಕದ್ದು ಮತ್ತು ಅಧಿಸೂಚಿತ ಸರಕುಗಳ ಬಗ್ಗೆ ವ್ಯವಹರಿಸುವುದಕ್ಕಾಗಿ ಆತ ಮಾರುಕಟ್ಟೆ ಸಮಿತಿಯು ಮಂಜೂರು ಮಾಡಿರುವ ಸದರಿ ಲೈಸೆನ್ಸನ್ನು ಕಕೃಉಮಾ(ನಿ) ಅಧಿನಿಯಮ, 1966ರ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳು, 1968ರ ಉಪಬಂಧಗಳ ಮತ್ತು ಮಾರುಕಟ್ಟೆ ಸಮಿತಿಯ ಉಪವಿಧಿಗಳ ಮೇರೆಗೆ ಅಗತ್ಯಪಡಿಸಲಾದಂತೆ ಕಾಲಕಾಲಕ್ಕೆ ನವೀಕರಿಸತಕ್ಕದ್ದು.

2) ಹಂಚಿಕೆದಾರನಿಗೆ ಹಂಚಿಕೆ ಮಾಡಿದ ನಿವೇಶನವು ಯಾವುದೇ ಅಥವಾ ಎಲ್ಲಾ ಸನ್ನಿವೇಶಗಳಲ್ಲೂ ವಿಭಾಗ ಮಾಡಲಾಗದ್ದು (ವಿಭಜಿಸಲಾಗದ್ದು) ಆಗಿರತಕ್ಕದ್ದು ಮತ್ತು ಹಾಗೆ ಅದು ಯಾವಾಗಲೂ ಅಖಂಡವಾಗಿರತಕ್ಕದ್ದು. ಹಂಚಿಕೆದಾರನು ಮಾರುಕಟ್ಟೆ ಸಮಿತಿಯು ಅನುಮೋದಿಸಿದ ವಿನ್ಯಾಸಗಳಿಗನುಸಾರವಾಗಿ ಇಲ್ಲಿ ಇನ್ನುಮುಂದೆ ಗೊತ್ತುಪಡಿಸಿರುವ ಕಾಲಕ್ಕಿಂತ ಮುಂಚೆ ನಿವೇಶನದಲ್ಲಿ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು/ ಗೋದಾಮನ್ನು ನಿರ್ಮಿಸುವ ಕಾರ್ಯವನ್ನು ಆರಂಭಿಸತಕ್ಕದ್ದು ಮತ್ತು ಪೂರ್ಣಗೊಳಿಸತಕ್ಕದ್ದು.

3) ಹಂಚಿಕೆದಾರನು ನಿವೇಶನದಲ್ಲಿ ಕಟ್ಟಡವನ್ನು ನಿರ್ಮಿಸುವುದಕ್ಕಾಗಿ ಮಂಜೂರಾದ ನಕ್ಷೆಯನ್ನು ಮತ್ತು ಲೈಸೆನ್ಸ್‌ನ್ನು ಪಡೆಯುವುದಕ್ಕಾಗಿ -------- ಕೃ.ಉ.ಮಾ.ಸ.ಗೆ ಈ ಒಪ್ಪಂದವಾದ ದಿನಾಂಕದಿಂದ 1 ತಿಂಗಳೊಳಗೆ ಸಾಧ್ಯವಾದಷ್ಟು ಬೇಗನೆ ಅರ್ಜಿ ಸಲ್ಲಿಸತಕ್ಕದ್ದು, ಮತ್ತು ಒಪ್ಪಂದದ ದಿನಾಂಕದಿಂದ 1 ವರ್ಷದೊಳಗೆ ಅಥವಾ ಸಮಿತಿಯು ವಿಸ್ತರಿಸಿದ ಕಾಲಾವಧಿಯೊಳಗೆ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸತಕ್ಕದ್ದು.

4) ಮೇಲಿನ ಸಂಖ್ಯೆ 1 ರಿಂದ 3ರವರೆಗಿನ ಯಾವುದೇ ಖಂಡವನ್ನು ಸಂಪೂರ್ಣವಾಗಿ ಅಥವಾ ಭಾಗಶಃ ಪಾಲಿಸದಿದ್ದರೆ ಹಂಚಿಕೆದಾರನಿಗೆ ಹಂಚಿಕೆ ಮಾಡಿರುವ ನಿವೇಶನವು ತನ್ನಷ್ಟಕ್ಕೇನೇ ರದ್ದಾಗುತ್ತದೆ ಮತ್ತು ಆನಂತರ ಅಪೂರ್ಣಗೊಂಡ ಕಟ್ಟಡದೊಂದಿಗೆ ನಿವೇಶನದ ಸ್ವಾಧೀನತೆಯು, ಈ ಸಂಬಂಧದಲ್ಲಿ ಯಾವುದೇ ಔಪಚಾರಿಕತೆಗಳಿಲ್ಲದೆ ಅಥವಾ ತಪ್ಪಿತಸ್ಥ

ಹಂಚಿಕೆದಾರನ ಒಪ್ಪಿಗೆಯಿಲ್ಲದೆ ಮಾರುಕಟ್ಟೆ ಸಮಿತಿಯ ವಶಕ್ಕೆ ಹೋಗುತ್ತದೆ. ಹಂಚಿಕೆದಾರನು ನಿವೇಶನದ ಬೆಲೆಯ ಬಾಬ್ತು ಮಾರುಕಟ್ಟೆ ಸಮಿತಿಗೆ ಈಗಾಗಲೇ ಸಂದಾಯ ಮಾಡಿರುವ ಮೊತ್ತವು ಸಹ ಮಾರುಕಟ್ಟೆ ಸಮಿತಿಗೆ ಮುಟ್ಟುಗೋಲಾಗುತ್ತದೆ.

5) ಅಂಥ ರದ್ದಿಯಾತಿಯು ಘಟಿಸಿದ ಮೇಲೆ, ಮಾರುಕಟ್ಟೆ ಸಮಿತಿಯು, ಅಪೂರ್ಣ ಕಟ್ಟಡದೊಂದಿಗೆ ನಿವೇಶನವನ್ನು ತನ್ನ ಸ್ವಂತ ಉಪಯೋಗಕ್ಕೆ ಇಟ್ಟುಕೊಳ್ಳುವುದಕ್ಕೆ ಅಥವಾ ಯಾರೇ ಇತರ ಲೈಸೆನ್ಸ್ ಪಡೆದ ಮಾರುಕಟ್ಟೆ ಕಾರ್ಯನಿರ್ವಾಹಕರಿಗೆ ಅದನ್ನು ಹಂಚಿಕೆ ಮಾಡುವುದಕ್ಕೆ ಅಥವಾ ಮಾರುಕಟ್ಟೆ ಸಮಿತಿಯು ಸೂಕ್ತವೆಂದು ಭಾವಿಸುವಂಥ ಯಾವುದೇ ಪ್ರತಿಫಲಕ್ಕಾಗಿ ಅದರ ಸಂಪೂರ್ಣ ವಿವೇಚನಾನುಸಾರ ಅದನ್ನು ಯಾವುದೇ ಇತರ ರೀತಿಯಲ್ಲಿ ವಿಲೆ ಮಾಡುವುದಕ್ಕೆ ಸ್ವಾತಂತ್ರ್ಯ ಹೊಂದಿರತಕ್ಕದ್ದು. ಮೇಲೆ ಹೇಳಿದ ಕಾರಣಗಳಿಗಾಗಿ, ಸಂದರ್ಭಾನುಸಾರ ಮಾರುಕಟ್ಟೆ ಸಮಿತಿಯಾಗಲೀ ಅಥವಾ ಮಾರುಕಟ್ಟೆ ಸಮಿತಿಯು ಯಾವ ವ್ಯಕ್ತಿಯ ಉಪಯೋಗಕ್ಕಾಗಿ ನಿವೇಶನವನ್ನು ಹಂಚಿಕೆ ಮಾಡಿದೆಯೋ ಆ ಇತರ ವ್ಯಕ್ತಿಯಾಗಲೀ ಮರುಪ್ರವೇಶ ಮಾಡಿದರೆ ಅದನ್ನು ಸಂಬಂಧಪಟ್ಟ ವ್ಯಕ್ತಿಗಳು ಮಾಡಿದ ಅತಿಕ್ರಮಣ ಪ್ರವೇಶವೆಂದು ಅರ್ಥೈಸತಕ್ಕದ್ದಲ್ಲ.

6) ಅಲ್ಲದೆ, ಯಾವುದೇ ನಿವೇಶನದ ಹಂಚಿಕೆ ಅಥವಾ ಅಪೂರ್ಣ ಕಟ್ಟಡ ಯಾವುದಾದರೂ ಇದ್ದರೆ ಅದರ ಸಹಿತ ನಿವೇಶನದ ಹಂಚಿಕೆಯು ಹಾಗೆ ರದ್ದಾದಾಗ, ಮಾರುಕಟ್ಟೆ ಸಮಿತಿಯು ತನ್ನ ವಿವೇಚನಾನುಸಾರ, ಮೇಲಣ 4ನೇ ಖಂಡದ ಮೇರೆಗೆ ಮುಟ್ಟುಗೋಲಾದ ನಿವೇಶನದ ಬೆಲೆಯನ್ನು ಮತ್ತು ಅದಕ್ಕೆ ಸಂಬಂಧಿಸಿದಂತೆ ಮಾಡಿರುವ ಎಲ್ಲಾ ವೆಚ್ಚಗಳನ್ನು ಕಳೆದ ತರುವಾಯ ಬಂದ, ಹಿಂದಿನ ಖಂಡದಲ್ಲಿ ಹೇಳಿರುವಂತೆ ಮಾರುಕಟ್ಟೆ ಸಮಿತಿಯು ಸಂಗ್ರಹಿಸಿದ ನಿವ್ವಳ ಉತ್ಪತ್ತಿಗಳ 3/4ಕ್ಕಿಂತ ಹೆಚ್ಚಾಗದಷ್ಟು ಮೊತ್ತವನ್ನು ತಪ್ಪಿತಸ್ಥ ಹಂಚಿಕೆದಾರನಿಗೆ ಮರುಪಾವತಿಸತಕ್ಕದ್ದು.

7) ಹಂಚಿಕೆದಾರನು ಮಾರುಕಟ್ಟೆ ಸಮಿತಿಯ ಲೈಸೆನ್ಸ್ ಪಡೆದ ಮಾರುಕಟ್ಟೆ ಕಾರ್ಯನಿರ್ವಾಹಕನಾಗುವಲ್ಲಿ ವಿಫಲನಾದಾಗ 4ನೇ ಖಂಡದಲ್ಲಿ ನಮೂದಿಸಿರುವಂತೆ ನಿವೇಶನ, ಇತ್ಯಾದಿಗಳು ರದ್ದಾದಾಗ, ಆತನಿಗೆ ಹಾಗೆ ನಿವೇಶನ ಇತ್ಯಾದಿಯು ರದ್ದಾದ ವಿಷಯವನ್ನು ತಿಳಿಸಿದ ದಿನಾಂಕದಿಂದ ಒಂದು ವರ್ಷದೊಳಗೆ ಆತ ಮಾರುಕಟ್ಟೆ ಸಮಿತಿಯ ಲೈಸೆನ್ಸ್‌ದಾರನಾದರೆ, ಮಾರುಕಟ್ಟೆ ಸಮಿತಿಗೆ ವಾಪಸು ವಶಕ್ಕೆ ಬಂದಿದ್ದಂಥ ಆ ನಿವೇಶನದ ಸ್ವಾಧೀನತೆಯನ್ನು ಅದರಲ್ಲಿ ಮಾಡಿರುವ ನಿರ್ಮಾಣದ ಸಹಿತ ಮಾರುಕಟ್ಟೆ ಸಮಿತಿಯು ತನ್ನ ವಿವೇಚಾನುಸಾರ ಅವನಿಗೆ ಹಿಂದಿರುಗಿಸಬಹುದಾಗಿದೆ.

8) ಮಾರುಕಟ್ಟೆ ಸಮಿತಿಯು, ಹಂಚಿಕೆದಾರನಿಗೆ ಯಾವುದೇ ಕಟ್ಟಡವನ್ನು ನಿರ್ಮಿಸಲು ಅಥವಾ ಅದರ ವಿಸ್ತರಣೆಗಾಗಿ ಮಾತ್ರ ಅಗತ್ಯವಿರುವ ಸಾಲಗಳನ್ನು ಪಡೆಯುವುದಕ್ಕಾಗಿ ಬ್ಯಾಂಕಿಗೆ ಅಥವಾ ಯಾವುದೇ ಹಣಕಾಸು ಸಂಸ್ಥೆಗೆ ಆ ನಿವೇಶನವನ್ನು ಅಥವಾ ಅದರಲ್ಲಿ ಯಾವುದೇ ಕಟ್ಟಡವನ್ನು ನಿರ್ಮಿಸಿದ್ದರೆ ಅದರ ಸಹಿತ ಪರಭಾರೆ ಮಾಡುವುದಕ್ಕೆ ಸಿಂಧುವಾದ ಕಾರಣಗಳಿದ್ದರೆ ಮಾತ್ರ ಅನುಮತಿ ನೀಡಬಹುದು, ಆದರೆ ಇತರ ಯಾವುದೇ ಉದ್ದೇಶಗಳಿಗಾಗಿ ಅಲ್ಲ.

9) ನಿವೇಶನವನ್ನು ಅಥವಾ ಅದರಲ್ಲಿ ಯಾವುದೇ ಕಟ್ಟಡವಿದ್ದರೆ ಆ ಕಟ್ಟಡ ಸಹಿತ ಆ ನಿವೇಶನವನ್ನು ಈ ಒಪ್ಪಂದವನ್ನು ಬರೆದುಕೊಟ್ಟ ದಿನಾಂಕದಿಂದ 10 (ಹತ್ತು) ವರ್ಷದೊಳಗೆ ವರ್ಗಾವಣೆ ಅಥವಾ ಮಾರಾಟ ಮಾಡತಕ್ಕದ್ದಲ್ಲ.

10) ಹಂಚಿಕೆದಾರನಿಗೆ ನಿವೇಶನವು ಹಂಚಿಕೆಯಾದ ತರುವಾಯ ಅದನ್ನು ಆತ ವರ್ಗಾವಣೆ ಮಾಡಲು ಬಯಸಿದರೆ, ಅದರಲ್ಲಿ ನಿರ್ಮಿಸಿರುವ ಕಟ್ಟಡ ಸಹಿತ, ನಿವೇಶನವನ್ನು, ಲೈಸೆನ್ಸು ಪಡೆದ ಯಾರೇ ಇತರ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ ವರ್ಗಾವಣೆ ಅಥವಾ ಮಾರಾಟ ಮಾಡುವುದಕ್ಕಾಗಿ ಅನುಮತಿ ನೀಡುವಂತೆ ಕೋರಿರುವ ತನ್ನ ಅರ್ಜಿಯೊಂದಿಗೆ ಕ.ಕೃ.ಉ.ಮಾ. (ನಿ) (ಮಾರುಕಟ್ಟೆ ಪ್ರಾಂಗಣಗಳಲ್ಲಿ ಆಸ್ತಿ ಹಂಚಿಕೆ ನಿಯಂತ್ರಣ) ನಿಯಮಗಳು, 2004ರಲ್ಲಿ ನಿರ್ದಿಷ್ಟಪಡಿಸಿರುವ ಶುಲ್ಕವನ್ನು ಮಾರುಕಟ್ಟೆ ಸಮಿತಿಗೆ ಸಂದಾಯ ಮಾಡತಕ್ಕದ್ದು ಮತ್ತು ಮಾರುಕಟ್ಟೆ ಸಮಿತಿಯು, ಮಾರುಕಟ್ಟೆ ಸಮಿತಿಯ ಬ್ಯಾಂಕಿನ ಮತ್ತು ಇತರ ಸಂಸ್ಥೆಗಳ ಸಾಲಗಳನ್ನು ಮತ್ತು ಇತರ ಬಾಕಿಗಳನ್ನು ಸಂದಾಯ ಮಾಡಿದ ತರುವಾಯ, ಅದರಲ್ಲಿ ನಿರ್ಮಿಸಿರುವ ಕಟ್ಟಡ ಸಹಿತ ನಿವೇಶನವನ್ನು ಆ ಹಂಚಿಕೆದಾರನು ಮಾರುಕಟ್ಟೆ ಸಮಿತಿಯ ಲೈಸನ್ಸು ಹೊಂದಿರುವ ಇನ್ನೊಬ್ಬ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ ವರ್ಗಾವಣೆ ಅಥವಾ ಮಾರಾಟ ಮಾಡುವುದಕ್ಕೆ ಇರುವ ಸಿಂಧುವಾದ ಕಾರಣಗಳಿಗಾಗಿ ಮತ್ತು ವಿಶೇಷ ಸಂದರ್ಭಗಳಲ್ಲಿ, ತನ್ನ ವಿವೇಚನಾನುಸಾರ ಅನುಮತಿ ನೀಡಬಹುದು.

11) ಹಂಚಿಕೆದಾರನು, ನಿವೇಶನವನ್ನು ಮತ್ತು / ಅಥವಾ ಅದರಲ್ಲಿ ನಿರ್ಮಿಸಿರುವ ಕಟ್ಟಡವನ್ನು ಮಾರುಕಟ್ಟೆ ಸಮಿತಿಯು ಕಾಲಕಾಲಕ್ಕೆ ನಿಗದಿಪಡಿಸಿದ ಅಧಿಸೂಚಿತ ಸರಕುಗಳನ್ನು ಅಥವಾ ನಿರ್ದಿಷ್ಟಪಡಿಸಿದ ಸರಕಿನ ಸಗಟು ವ್ಯವಹಾರವನ್ನು ಹೊರತುಪಡಿಸಿ ಇನ್ನಿತರ ಉದ್ದೇಶಕ್ಕಾಗಿ ಬಳಸಿಕೊಳ್ಳತಕ್ಕದ್ದಲ್ಲ.

12) ಹಂಚಿಕೆದಾರನು, ನಿವೇಶನವನ್ನು ಮತ್ತು / ಅಥವಾ ಅದರಲ್ಲಿ ನಿರ್ಮಿಸಿರುವ ಕಟ್ಟಡವನ್ನು ಹೊಂದಿರುವುದಕ್ಕೆ, ಮಂಜೂರು ಮಾಡುವುದಕ್ಕೆ, ಉಪಯೋಗಿಸುವುದಕ್ಕೆ ಮತ್ತು/ ಅಥವಾ ಸುಸ್ಥಿತಿಯಲ್ಲಿಟ್ಟುಕೊಳ್ಳುವುದಕ್ಕೆ ಸಂಬಂಧಪಟ್ಟಂತೆ ಸಾರ್ವಜನಿಕ ಹಿತದೃಷ್ಟಿಯಿಂದ ಮತ್ತು ಮಾರುಕಟ್ಟೆ ಪ್ರಾಂಗಣದಲ್ಲಿ ಶಿಸ್ತನ್ನು ಮತ್ತು ನೈರ್ಮಲ್ಯ ಸುಸ್ಥಿತಿಗಳನ್ನು ಕಾಪಾಡಿಕೊಂಡು ಬರುವ ದೃಷ್ಟಿಯಿಂದ ಸಹ ಮಾರುಕಟ್ಟೆ ಸಮಿತಿಯು ಕಾಲಕಾಲಕ್ಕೆ ವಿಧಿಸಬಹುದಾದ ಎಲ್ಲಾ ಷರತ್ತುಗಳನ್ನು ಮತ್ತು ಸ್ಥಾಯೀ ಆದೇಶಗಳನ್ನು ಯಾವುದೇ ವಾದಕ್ಕೆ ಆಸ್ಪದಕೊಡದೆ ಸೂಕ್ತವಾಗಿ ಪಾಲಿಸತಕ್ಕದ್ದು ಮತ್ತು ಅವುಗಳಿಗೆ ಬದ್ಧವಾಗಿರತಕ್ಕದ್ದು.

13) ಹಂಚಿಕೆದಾರನು, ಇಲ್ಲಿ ಹೇಳಿರುವ ಯಾವುವೇ ಷರತ್ತುಗಳನ್ನು ಮತ್ತು ಸ್ಥಾಯೀ ಆದೇಶ, ಇತ್ಯಾದಿಗಳನ್ನು ಪಾಲಿಸಲು ಅಥವಾ ಅವುಗಳಿಗೆ ಬದ್ಧವಾಗಿರಲು ತಪ್ಪಿದರೆ ಅವನ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳುವುದಕ್ಕೆ ಮಾರುಕಟ್ಟೆ ಸಮಿತಿಯು ಪೂರ್ಣ ಸ್ವಾತಂತ್ರ್ಯವನ್ನು, ಹಕ್ಕನ್ನು ಮತ್ತು ಅಧಿಕಾರವನ್ನು ಹೊಂದಿರುತ್ತದೆ ಎಂಬುದನ್ನು ಈ ಮೂಲಕ ಒಪ್ಪಿಕೊಳ್ಳತಕ್ಕದ್ದು.

14) ಹಂಚಿಕೆದಾರನು, ಫರ್ಮು ಆಗಿರುವ ಸಂದರ್ಭದಲ್ಲಿ, ಫರ್ಮಿನ ಪಾಲುದಾರರು ಫರ್ಮು ಬದ್ಧವಾಗಿರುವಂತೆ ಮಾಡಲು ಮಾರುಕಟ್ಟೆ ಸಮಿತಿಯ ಹೆಸರಿನಲ್ಲಿ ಸದರಿ ಫರ್ಮಿನ ಪರವಾಗಿ ಈ ಒಪ್ಪಂದವನ್ನು ಬರೆದುಕೊಡುವುದಕ್ಕೆ ಮತ್ತು ಅದಕ್ಕೆ ಸಹಿ ಹಾಕುವುದಕ್ಕೆ ಅಧಿಕಾರವನ್ನು ಮುಂಚಿತವಾಗಿಯೇ ಅದನ್ನು ಬರೆದುಕೊಡುವವವರಿಗೆ ನೀಡತಕ್ಕದ್ದು.

15) ಅನುಸೂಚಿತ ಆಸ್ತಿಯಲ್ಲಿ ಹಂಚಿಕೆದಾರನು ಮಾಡುವ ವ್ಯಾಪಾರವು ಅಥವಾ ವ್ಯವಹಾರವು ಅಧಿಸೂಚಿತ ಕೃಷಿ ಸರಕುಗಳಿಗೆ ಮಾತ್ರವೇ ಸೀಮಿತವಾಗಿರತಕ್ಕದ್ದು ಮತ್ತು ನಿರ್ಬಂಧಿತವಾಗಿರತಕ್ಕದ್ದು. ಹಂಚಿಕೆದಾರನು ಒಪ್ಪಂದದ ಈ ಅಂಶವನ್ನು ಉಲ್ಲಂಘಿಸಿದ ಸಂದರ್ಭದಲ್ಲಿ, ಸಮಿತಿಯು, ಆತನಿಗೆ ನೋಟೀಸು ನೀಡುವ ಮತ್ತು ಆತ ಅಧಿಸೂಚಿತ ಕೃಷಿ ಸರಕುಗಳನ್ನು ಮಾತ್ರವೇ ವ್ಯಾಪಾರ ಮಾಡುವಂತೆ ನಿರ್ದೇಶಿಸುವ ಹಕ್ಕನ್ನು ಹೊಂದಿರತಕ್ಕದ್ದು ಮತ್ತು ಆತ ಹಾಗೆ ಮಾಡುವುದಕ್ಕೆ ತಪ್ಪಿದರೆ, ಸಮಿತಿಯು, ಕಟ್ಟಡವನ್ನು ಮತ್ತು ನಿವೇಶನವನ್ನು ಸ್ವಾಧೀನಪಡಿಸಿಕೊಂಡು ಅವುಗಳನ್ನು ಯಾರೇ ಇತರ ಲೈಸೆನ್ಸ್ ಹೊಂದಿರುವ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ ಹಂಚಿಕೆ ಮಾಡುವ ಹಕ್ಕನ್ನು ಚಲಾಯಿಸಲು ಹಕ್ಕುಳ್ಳದ್ದಾಗಿರತಕ್ಕದ್ದು ಮತ್ತು ಅಂಥ ಸಂದರ್ಭದಲ್ಲಿ ಹಂಚಿಕೆದಾರನು ನಿವೇಶನಕ್ಕೆ ಸಂದಾಯ ಮಾಡಿರುವ ಮೊತ್ತವನ್ನು ಮಾತ್ರ ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದೇ ಹೊರತು ಯಾವುದೇ ಇತರ ಪರಿಹಾರಕ್ಕೆ ಅಲ್ಲ.

16) ಹಂಚಿಕೆದಾರನು, ಸಮಿತಿಯ ಲಿಖಿತ ಅನುಮತಿ ಪಡೆದುಕೊಳ್ಳದೆ, ಆವರಣದ ಹೊರಗೆ ಅಥವಾ ಒಳಗೆ ಯಾವುದೇ ಮಾರ್ಪಾಟುಗಳನ್ನು ಅಥವಾ ಸೇರ್ಪಡೆಗಳನ್ನು ಮಾಡತಕ್ಕದ್ದಲ್ಲ.

17) ಈ ಒಪ್ಪಂದದಲ್ಲಿ ಹೇಳಿರುವ ಹತ್ತು ವರ್ಷಗಳ ಅವಧಿ ಮುಕ್ತಾಯಗೊಂಡ ತರುವಾಯ ಗುತ್ತಿಗೆದಾರನು ಈ ಒಪ್ಪಂದದಲ್ಲಿ ಹೇಳಿರುವ ಎಲ್ಲಾ ಷರತ್ತುಗಳನ್ನು ನೆರವೇರಿಸಿದರೆ ಮತ್ತು ಅವುಗಳಲ್ಲಿ ಯಾವೊಂದನ್ನೂ ಉಲ್ಲಂಘಿಸಿರದಿದ್ದರೆ, ಸದರಿ ಹತ್ತು ವರ್ಷಗಳ ಅವಧಿಯು ಮುಕ್ತಾಯಗೊಂಡಾಗ ಸಮಿತಿಯು, ಗುತ್ತಿಗೆದಾರನಿಗೆ ನಿವೇಶನವನ್ನು ಮಾರಾಟ ಮಾಡತಕ್ಕದ್ದು ಮತ್ತು ಅಂಥ ಮಾರಾಟದ ಬಗೆಗಿನ ಸ್ಟಾಂಪ್ ಶುಲ್ಕ, ನೋಂದಣಿ ವೆಚ್ಚ ಮೊದಲಾದಂಥ ಸಂಬಂಧಿಸಿದ ಎಲ್ಲಾ ವೆಚ್ಚಗಳನ್ನು ಗುತ್ತಿಗೆದಾರನೇ ಭರಿಸತಕ್ಕದ್ದು.

18) ಕಟ್ಟಡಕ್ಕೆ ಉಂಟಾಗಿರುವ ಎಲ್ಲಾ ರೀತಿಯ ಹಾನಿಗಳಿಗೆ ಹಂಚಿಕೆದಾರನೇ ಹೊಣೆಗಾರನಾಗಿರುತ್ತಾನೆ, ಇದಕ್ಕೆ ಸಂಬಂಧಿಸಿದ ಮೊತ್ತವನ್ನು ಸಮಿತಿಯು ಆತನಿಂದ ಮೂಲಧನ ಹೂಡಿಕೆಯ ಭಾಗವೆಂಬಂತೆ ವಸೂಲು ಮಾಡುತ್ತದೆ. ಸಮಿತಿಯು, ದುರಸ್ತಿಗಳ ಎಲ್ಲಾ ವೆಚ್ಚಗಳನ್ನು ಮೂಲಧನ ಹೂಡಿಕೆಯ ಭಾಗವೆಂಬಂತೆ ವಸೂಲು ಮಾಡುವ ಹಕ್ಕನ್ನು ಹೊಂದಿರುತ್ತದೆ.

19) ಸಮಿತಿಯ ಅಧ್ಯಕ್ಷನು ಅಥವಾ ಕಾರ್ಯದರ್ಶಿಯು ಅಥವಾ ಯಾರೇ ಅಧಿಕೃತ ವ್ಯಕ್ತಿಯು, ಕಟ್ಟಡದ ಸ್ಥಿತಿ ಮತ್ತು ಬಳಕೆಯನ್ನು ಕುರಿತು ಶೋಧನೆ, ತಪಾಸಣೆ ಮಾಡುವುದಕ್ಕಾಗಿ ಆವರಣವನ್ನು ಪ್ರವೇಶಿಸುವ ಹಕ್ಕನ್ನು ಹೊಂದಿರುತ್ತಾನೆ. ಈ ಒಪ್ಪಂದದ ಮೇರೆಗೆ ಅಥವಾ ಅದರ ಪರಿಣಾಮವಾಗಿ ಯಾವುದೇ ವಿವಾದ ಅಥವಾ ಕ್ಲೇಮು ಉಂಟಾದ ಸಂದರ್ಭದಲ್ಲಿ, ಅಂಥ ವಿವಾದ ಅಥವಾ ಕ್ಲೇಮನ್ನು ಅಂಥ ದಿನದಂದು ಹಾಗೆಂದು ಕಾರ್ಯನಿರ್ವಹಿಸುತ್ತಿರುವ ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ನಿರ್ದೇಶಕರು 'ಏಕಮಾತ್ರ ಮಧ್ಯಸ್ಥಿಕೆದಾರ' ನಾಗಿ ತೀರ್ಮಾನಿಸತಕ್ಕದ್ದು ಮತ್ತು ಅಂಥ ವಿವಾದ ಕುರಿತು ಭಾರತದ ಮಧ್ಯಸ್ಥಿಕೆ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಕಾರ್ಯನಿರ್ವಹಿಸುತ್ತಿರುವ ಏಕಮಾತ್ರ ಮಧ್ಯಸ್ಥಿಕೆದಾರನು ನೀಡುವ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ಪಕ್ಷಕಾರರು ಬದ್ಧರಾಗಿರತಕ್ಕದ್ದು ಎಂದು ಪಕ್ಷಕಾರರ ನಡುವೆ ಒಪ್ಪಿಕೊಳ್ಳಲಾಗಿದೆ.

**ಅನುಸೂಚಿ**

---------- ಅಡಿ / ಮೀಟರುಗಳಷ್ಟು ಅಳತೆಯನ್ನುಳ್ಳ ಈ ನಿವೇಶನವು -------- ತಹಶಿಲ್‌ನ ------- ಮಾರುಕಟ್ಟೆ ಪ್ರಾಂಗಣದಲ್ಲಿರುತ್ತದೆ. ಇದರ ಚಕ್ಕುಬಂದಿಗಳು ಈ ಕೆಳಕಂಡಂತಿವೆ:

ಉತ್ತರಕ್ಕೆ ----------
ಪೂರ್ವಕ್ಕೆ ----------
ದಕ್ಷಿಣಕ್ಕೆ -----------
ಪಶ್ಚಿಮಕ್ಕೆ ----------

ಹಂಚಿಕೆದಾರ

ಸಾಕ್ಷಿದಾರರು
(1)
(2)

ಈ ಕೆಳಗಿನವರ ಸಮ್ಮುಖದಲ್ಲಿ ಸದರಿ ಹಂಚಿಕೆದಾರನು ಸಹಿ ಮಾಡಿ ವಶಕ್ಕೆ ಕೊಟ್ಟಿರುತ್ತಾನೆ.

ಕಾರ್ಯದರ್ಶಿ
--------- ಕೃ.ಉ.ಮಾ.ಸ.

ಅಧ್ಯಕ್ಷರು
--------- ಕೃ.ಉ.ಮಾ.ಸ.

**ನಮೂನೆ ಸಂಖ್ಯೆ – V**

**ಗುತ್ತಿಗೆ ಸಹಿತ ಮಾರಾಟ ಒಪ್ಪಂದ**

(ನಿಯಮ– 10 ನೋಡಿ)

ಈ ಗುತ್ತಿಗೆ ಒಪ್ಪಂದವನ್ನು ಒಂದು ಪಕ್ಷವಾಗಿರುವ -------------- ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯಾಗಿರುವ, --------- ರವರ ಮಗನಾದ ಶ್ರೀ ------ ರವರು ಮತ್ತು ಅಧ್ಯಕ್ಷ (ಅಥವಾ ಆಡಳಿತಗಾರ)ರಾಗಿರುವ, ----- ರವರ ಮಗನಾದ --------- ರವರಿಂದ ಪ್ರತಿನಿಧಿಸಲ್ಪಟ್ಟಿರುವ ---------- ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ (ಇನ್ನುಮುಂದೆ 'ಗುತ್ತಿಗೆ ಕೊಡುವವನು' ಎಂದು ಕರೆಯಲಾಗುವ ಈ ಪದಾವಳಿಯು ಸಂದರ್ಭವು ಹಾಗೆ ಅಗತ್ಯಪಡಿಸಿದಾಗಲೆಲ್ಲಾ ಅದರ ಉತ್ತರಾಧಿಕಾರಿಗಳನ್ನು, ಹಸ್ತಾಂತರಿತರನ್ನು ಒಳಗೊಳ್ಳತಕ್ಕದ್ದು) ಮತ್ತು ಇನ್ನೊಂದು ಪಕ್ಷವಾಗಿರುವ, ------ ರವರ ಮಗನಾದ, ------ ರಲ್ಲಿ ವಾಸಿಸುತ್ತಿರುವ ಸುಮಾರು ----- ವರ್ಷದ ಶ್ರೀ -----ರವರನ್ನು ತನ್ನ ಮಾಲೀಕನೆಂದು ಅಥವಾ ವ್ಯವಸ್ಥಾಪಕ ಪಾಲುದಾರನೆಂದು ಪ್ರತಿನಿಧಿಸಿದ (ಇನ್ನು ಮುಂದೆ 'ಗುತ್ತಿಗೆದಾರ' ಎಂದು ಕರೆಯಲಾಗುವ) ಮೆಸರ್ಸ್------- ಎಂಬ ಹೆಸರಿನ ಮಾಲೀಕತ್ವದ/ ನೋಂದಾಯಿತ ಪಾಲುದಾರಿಕೆ ಫರ್ಮಿನ ನಡುವೆ ಈ ಮುಂದಿನಂತೆ ------- ದಿನದಂದು ಕರಾರು ಮಾಡಿಕೊಳ್ಳಲಾಗಿದೆ.

1. ಗುತ್ತಿಗೆ ಕೊಡುವವನು ಮಾರುಕಟ್ಟೆ ಪ್ರಾಂಗಣದಲ್ಲಿರುವ ಮತ್ತು ಈ ಮುಂದಿನ ಅನುಸೂಚಿಯಲ್ಲಿ ಸವಿವರವಾಗಿ ಹೇಳಿರುವ ---------- ಸಂಖ್ಯೆಯನ್ನು ಹೊಂದಿರುವ ಅಂಗಡಿಯ/ ಅಂಗಡಿ ಸಹಿತ ಗೋದಾಮಿನ / ಗೋದಾಮಿನ ಒಡೆಯನಾಗಿರುತ್ತಾನೆ.
2. ಮಾರುಕಟ್ಟೆ ಕಾರ್ಯನಿರ್ವಾಹಕನಾಗಿರುವ ಮತ್ತು ಗುತ್ತಿಗೆ ಕೊಡುವವನು ನೀಡಿರುವ ಲೈಸೆನ್ಸನ್ನು ಹೊಂದಿರುವ ಗುತ್ತಿಗೆದಾರನು ಅಧಿಸೂಚಿತ ಕೃಷಿ ಉತ್ಪನ್ನದ ಮಾರಾಟದ ವ್ಯವಹಾರ ಮಾಡುವುದಕ್ಕಾಗಿ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು/ ಗೋದಾಮನ್ನು ಹಂಚಿಕೆ ಮಾಡುವಂತೆ ಕೋರಿ ಅರ್ಜಿ ಸಲ್ಲಿಸಿರುವುದರಿಂದ.
3. ಗುತ್ತಿಗೆದಾರನು, ----------- ರೂಪಾಯಿಗಳಿಗಾಗಿ ----------- ದಿನಾಂಕದ -----ಸಂಖ್ಯೆಯ ಚೆಕ್/ ಪೋ.ಆ./ ಡಿ.ಡಿ. ಮೂಲಕ ಶೇ. 25 ರಷ್ಟು ಗುತ್ತಿಗೆ ಮೊಬಲಗನ್ನು ಸಂದಾಯ ಮಾಡಿರುವುದರಿಂದ;
4. ಗುತ್ತಿಗೆ ಕೊಡುವವನು ---------- ರಂದು ನಡೆದ ಮಾರುಕಟ್ಟೆ ಸಮಿತಿಯ ಸಭೆಯಲ್ಲಿ ಹಂಚಿಕೆದಾರನಿಗೆ ಅನುಸೂಚಿತ ಸ್ವತ್ತನ್ನು ಹಂಚಿಕೆ ಮಾಡಲು ಗೊತ್ತುವಳಿ ಸಂಖ್ಯೆ ------- ರಲ್ಲಿ ನಿರ್ಣಯಿಸಿರುವುದರಿಂದ.
5. ಕೃಷಿ ಉತ್ಪನ್ನ ಮಾರುಕಟ್ಟೆ ನಿರ್ದೇಶಕರು ------- ದಿನಾಂಕದ ಅವರ ಆದೇಶ ಸಂಖ್ಯೆ -----ಮೂಲಕ ಅಂಗಡಿಯ/ ಅಂಗಡಿ ಸಹಿತ ಗೋದಾಮನ್ನು/ ಗೋದಾಮಿನ ಹಂಚಿಕೆಯನ್ನು ಅನುಮೋದಿಸಿರುವುದರಿಂದ.
6. ಗುತ್ತಿಗೆ ಕೊಡುವವನು, ಈ ಮುಂದೆ ಹೇಳಿರುವ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಅನುಸೂಚಿತ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು/ ಗೋದಾಮನ್ನು ಹಂಚಿಕೆ ಮಾಡಲು ಒಪ್ಪಿಕೊಂಡಿರುವುದರಿಂದ.

**ಈಗ ಈ ಪತ್ರ ಈ ಕೆಳಗಿನವುಗಳಿಗೆ ಸಾಕ್ಷಿಯಾಗಿರುತ್ತದೆ, ಎಂದರೆ:–**

1. ಗುತ್ತಿಗೆ ಕೊಡುವವನು ತನ್ನ ವೆಚ್ಚದಲ್ಲಿ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು/ ಗೋದಾಮನ್ನು ನಿರ್ಮಿಸಿದ್ದಾನೆ ಮತ್ತು ಅದನ್ನು 10(ಹತ್ತು) ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಲು ಒಪ್ಪಿಕೊಂಡಿರುತ್ತಾನೆ.
2. ಗುತ್ತಿಗೆ ಕೊಡುವವನು ------ ರೂಪಾಯಿಗಳಷ್ಟು (ಮಾಡಿದೆಯೆಂದು ಅಂದಾಜಿಸಲಾದ ವೆಚ್ಚ) ಗುತ್ತಿಗೆ ಮೊತ್ತವನ್ನು ನಿಗದಿಪಡಿಸಿರುತ್ತಾನೆ.
3. ಗುತ್ತಿಗೆದಾರನು ಹಂಚಿಕೆ ಪತ್ರವನ್ನು ಸ್ವೀಕರಿಸಿದ ದಿನಾಂಕದಿಂದ 90 (ತೊಂಬತ್ತು) ದಿನಗಳೊಳಗೆ ಅಂಗಡಿಯ/ ಅಂಗಡಿ ಸಹಿತ ಗೋದಾಮಿನ/ ಗೋದಾಮಿನ ಪ್ರಾರಂಭಿಕ ಠೇವಣಿ [(ಎ.ಇ.ಇ.) (ಎಂ.ಡಿ.ಪಿ) ನಿಗದಿಪಡಿಸಿದ] ಮೊತ್ತವನ್ನು ಕಳೆದ ನಂತರ ಉಳಿದ ಮೊತ್ತವನ್ನು ಮಾರುಕಟ್ಟೆ ಸಮಿತಿಗೆ ಸಂದಾಯ ಮಾಡತಕ್ಕದ್ದು ಮತ್ತು ರಸೀದಿ ಪಡೆಯತಕ್ಕದ್ದು. ಈ ಅವಧಿಯನ್ನು ಶೇಕಡಾ 12 ರಷ್ಟು ಬಡ್ಡಿ ಸಂದಾಯ ಮಾಡುವುದಕ್ಕೆ ಒಳಪಟ್ಟು ಅರವತ್ತು ದಿನಗಳವರೆಗೆ ವಿಸ್ತರಿಸಬಹುದು.
4. ಗುತ್ತಿಗೆದಾರನು ಒಂದು ಅವಿಭಕ್ತ ಕುಟುಂಬವಾಗಿದ್ದರೆ, ಅವಿಭಕ್ತ ಕುಟುಂಬದ ಯಾರೇ ಸದಸ್ಯನು ಮತ್ತು ಪಾಲುದಾರಿಕೆ ಫರ್ಮಿನ ಸಂದರ್ಭದಲ್ಲಿ ಫರ್ಮ್‌ನ ಯಾರೇ ಪಾಲುದಾರನು ಮಾರುಕಟ್ಟೆ ಪ್ರಾಂಗಣದಲ್ಲಿ ಒಂದಕ್ಕಿಂತ ಹೆಚ್ಚು ಅಂಗಡಿಯ/ ಅಂಗಡಿ ಸಹಿತ ಗೋದಾಮಿನ/ ಗೋದಾಮಿನ ಹಂಚಿಕೆ ಪಡೆಯುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ ಮತ್ತು ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು/ ಗೋದಾಮನ್ನು ಆತ/ ಅವರು ಈಗಾಗಲೇ ಹಂಚಿಕೆ ಪಡೆದಿರುವರೆಂದು ಕಂಡುಬಂದ ಸಂದರ್ಭದಲ್ಲಿ, ಗುತ್ತಿಗೆ ಕೊಟ್ಟವನು, ಗುತ್ತಿಗೆಯನ್ನು ರದ್ದುಪಡಿಸುವುದಕ್ಕೆ ಮತ್ತು ಅಲ್ಲಿಯವರೆಗೆ ಗುತ್ತಿಗೆದಾರನು ಅಂಗಡಿಯ/ ಅಂಗಡಿ ಸಹಿತ ಗೋದಾಮಿನ/ ಗೋದಾಮಿನ ಯಾವುದೇ ಗುತ್ತಿಗೆ ಹಣವನ್ನು ಠೇವಣಿ ಇಟ್ಟಿದ್ದರೆ ಆ ಗುತ್ತಿಗೆ ಹಣದ ಸಹಿತ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು/ ಗೋದಾಮನ್ನು ಮುಟ್ಟುಗೋಲು ಹಾಕಿಕೊಳ್ಳಲು ಸ್ವಾತಂತ್ರ್ಯ ಹೊಂದಿರುತ್ತಾನೆ.

5. ಗುತ್ತಿಗೆಯ ಅವಧಿಯಲ್ಲಿ ಗುತ್ತಿಗೆದಾರನು, ಅಧಿಸೂಚಿತ ಕೃಷಿ ಉತ್ಪನ್ನದಲ್ಲಿ ಮಾತ್ರವೇ ವ್ಯಾಪಾರ ಮಾಡತಕ್ಕದ್ದು ಮತ್ತು ಗುತ್ತಿಗೆ ಕೊಡುವವನು ನೀಡಿರುವ ಲೈಸೆನ್ಸಿನ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಪಾಲಿಸತಕ್ಕದ್ದು. ಅಲ್ಲದೆ, ಗುತ್ತಿಗೆದಾರನು, ಕ.ಕೃ.ಉ.ಮಾ (ನಿ) ಅಧಿನಿಯಮ, 1966ರ ಉಪಬಂಧಗಳನ್ನು ಮತ್ತು ಅದರ ಮೇರೆಗೆ ರಚಿಸಿರುವ ನಿಯಮಗಳನ್ನು ಮತ್ತು ಉಪವಿಧಿಗಳನ್ನು ಪಾಲಿಸಲು ಬದ್ಧನಾಗಿರತಕ್ಕದ್ದು. ಈ ಷರತ್ತುಗಳ ಪೈಕಿ ಯಾವುದೇ ಒಂದನ್ನು ಉಲ್ಲಂಘಿಸಿದರೂ ಗುತ್ತಿಗೆ ಕೊಡುವವನು ಗುತ್ತಿಗೆ ಒಪ್ಪಂದವನ್ನು ರದ್ದುಪಡಿಸುವುದಕ್ಕೆ ಮತ್ತು ಗುತ್ತಿಗೆದಾರನಿಗೆ ನೋಟೀಸು ನೀಡಿದ ತರುವಾಯ ಅಂಗಡಿಯ/ ಅಂಗಡಿ ಸಹಿತ ಗೋದಾಮಿನ/ ಗೋದಾಮಿನ ಹಂಚಿಕೆಯನ್ನು ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದು.

6. ಗುತ್ತಿಗೆಯ ಅವಧಿಯಲ್ಲಿ ಗುತ್ತಿಗೆದಾರನು ತನಗೆ ಹಂಚಿಕೆಯಾದ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮು/ ಗೋದಾಮನ್ನು ಯಾರೇ ಇತರ ವ್ಯಕ್ತಿಗೆ ಯಾವುದೇ ರೀತಿಯಲ್ಲಿ ಪರಭಾರೆ ಮಾಡತಕ್ಕದ್ದಲ್ಲ.

7. ಗುತ್ತಿಗೆಯ ಅವಧಿಯಲ್ಲಿ ಗುತ್ತಿಗೆದಾರನು, ತನಗೆ ಹಂಚಿಕೆಯಾಗಿರುವ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು/ ಗೋದಾಮನ್ನು ವಿಭಾಗ ಮಾಡತಕ್ಕದ್ದಲ್ಲ ಅಥವಾ ಯಾರೇ ಇತರ ವ್ಯಕ್ತಿಗೆ ಪರಭಾರೆ ಮಾಡತಕ್ಕದ್ದಲ್ಲ.

8. ಗುತ್ತಿಗೆದಾರನು, ತನಗೆ ಹಂಚಿಕೆಯಾಗಿರುವ ಅಂಗಡಿಯ/ ಅಂಗಡಿ ಸಹಿತ ಗೋದಾಮಿನ/ ಗೋದಾಮಿನ ಕಟ್ಟಡಕ್ಕೆ ಹಾನಿ, ಮಾರ್ಪಾಟು ಅಥವಾ ಬದಲಾವಣೆ ಮಾಡತಕ್ಕದ್ದಲ್ಲ. ಯಾವುದೇ ಹಾನಿ ಮಾಡಿದರೆ ಗುತ್ತಿಗೆದಾರನು ಆ ಆವರಣವನ್ನು ಸುಸ್ಥಿತಿಯಲ್ಲಿಡುವುದಕ್ಕೆ ಅಗತ್ಯವಿರುವ ದುರಸ್ತಿಗಳನ್ನು ಮಾಡಲು ಬದ್ಧನಾಗಿರತಕ್ಕದ್ದು.

9. ಗುತ್ತಿಗೆದಾರನು ಪಾಲುದಾರಿಕೆ ಫರ್ಮ್ ಆಗಿದ್ದರೆ, ಪಾಲುದಾರಿಕೆ ಫರ್ಮಿನ ರಚನೆಯಲ್ಲಿ ಯಾವುದೇ ಬದಲಾವಣೆಯಾದರೆ ಅದನ್ನು ಮಾರುಕಟ್ಟೆ ಸಮಿತಿಯ ಗಮನಕ್ಕೆ ತರತಕ್ಕದ್ದು. ಪಾಲುದಾರಿಕೆ ಫರ್ಮಿನ ರಚನೆಯಲ್ಲಿನ ಅಂಥ ಬದಲಾವಣೆಯು ಅಂಗಡಿಯ, ಗೋದಾಮಿನ, ಅಂಗಡಿ ಸಹಿತ ಗೋದಾಮಿನ ಅಥವಾ ಅದರಲ್ಲಿನ ಹಿತಾಸಕ್ತಿಯ ವರ್ಗಾವಣೆಯಲ್ಲಿ ಪರಿಣಮಿಸಿದರೆ 12ನೇ ನಿಯಮದ ಉಪಬಂಧಗಳನ್ನು ಪಾಲಿಸಲು ಗುತ್ತಿಗೆದಾರನು ಒಪ್ಪುತ್ತಾನೆ.

10. ಗುತ್ತಿಗೆಯ ಅವಧಿಯಲ್ಲಿ ಗುತ್ತಿಗೆದಾರನು, ಅವನಿಗೆ ಹಂಚಿಕೆಯಾದ ಅಂಗಡಿಗೆ/ ಅಂಗಡಿ ಸಹಿತ ಗೋದಾಮಿಗೆ/ ಗೋದಾಮಿಗೆ ಸಂಬಂಧಪಟ್ಟ ವಿದ್ಯುಚ್ಛಕ್ತಿ ಶುಲ್ಕಗಳನ್ನು, ನೀರಿನ ಶುಲ್ಕಗಳನ್ನು ಮತ್ತು ಎಲ್ಲಾ ಇತರ ಶುಲ್ಕಗಳನ್ನು ಪಾವತಿಸತಕ್ಕದ್ದು.

11. ಗುತ್ತಿಗೆಯ ಅವಧಿಯಲ್ಲಿ, ಗುತ್ತಿಗೆದಾರನು, ಲೈಸೆನ್ಸ್ ಹೊಂದಿದ್ದ ಮಾರುಕಟ್ಟೆ ಕಾರ್ಯ ನಿರ್ವಾಹಕನಾಗಿರುವುದು ನಿಂತುಹೋದರೆ, ಗುತ್ತಿಗೆ ಕೊಡುವವನು ಮುಟ್ಟುಗೋಲು ಹಾಕಿಕೊಳ್ಳುವ ದಿನಾಂಕದವರೆಗೆ, ಗುತ್ತಿಗೆದಾರನು ಠೇವಣಿಯಾಗಿಟ್ಟಿರುವ ಗುತ್ತಿಗೆ ಮೊತ್ತದ ಸಹಿತ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು/ ಗೋದಾಮನ್ನು ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದು.

12. ಆವರಣಗಳನ್ನು, 1966ರ ಕ.ಕೃ.ಉ.ಮಾ (ನಿ) ಅಧಿನಿಯಮದಲ್ಲಿ, ನಿಯಮಗಳಲ್ಲಿ ಮತ್ತು ಉಪವಿಧಿಗಳಲ್ಲಿ ತಿಳಿಸಿರುವ ಉದ್ದೇಶಗಳ ಹೊರತು ಇತರ ಉದ್ದೇಶಗಳಿಗೆ ಬಳಸಿಕೊಳ್ಳತಕ್ಕದ್ದಲ್ಲ ಮತ್ತು ಅಧಿಸೂಚಿತ ಕೃಷಿ ಉತ್ಪನ್ನದ ಕ್ರಯವಿಕ್ರಯದ ಉದ್ದೇಶಕ್ಕಾಗಿ ಮಾತ್ರವೇ ಬಳಸಿಕೊಳ್ಳತಕ್ಕದ್ದು.

13. ಗುತ್ತಿಗೆದಾರನು, ಆಸ್ತಿಯ ಮೇಲೆ ಯಾವುದೇ ರೀತಿಯಲ್ಲೂ ಋಣಭಾರ ಹೊರಿಸತಕ್ಕದ್ದಲ್ಲ. ಹಾಗೆ ಮಾಡಿದ್ದೇ ಆದರೆ ಗುತ್ತಿಗೆ ನೀಡಿದವನು ಅದಕ್ಕೆ ಬದ್ಧನಾಗಿರತಕ್ಕದ್ದಲ್ಲ.

14. ಗುತ್ತಿಗೆದಾರನು, ಲೈಸೆನ್ಸ್ ಹೊಂದಿದ ಮಾರುಕಟ್ಟೆ ಕಾರ್ಯನಿರ್ವಾಹಕನಾಗಿರುವುದನ್ನು ಮುಂದುವರೆಸದೇ ಇರಲು ಇಚ್ಛಿಸಿದರೆ ಆತ, ಒಂದು ತಿಂಗಳು ಮುಂಚಿತವಾಗಿ ನೋಟೀಸು ನೀಡುವ ಮೂಲಕ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು/ ಗೋದಾಮನ್ನು ಮಾರುಕಟ್ಟೆ ಸಮಿತಿಗೆ ಹಿಂದಿರುಗಿಸತಕ್ಕದ್ದು ಮತ್ತು ಅದರ ಖಾಲಿ ಸ್ವಾಧೀನತೆಯನ್ನು ಒಪ್ಪಿಸತಕ್ಕದ್ದು ಮತ್ತು ಆ ನಂತರ ಗುತ್ತಿಗೆ ನೀಡಿದವನು ಸದರಿ ಆವರಣವನ್ನು ಇನ್ನೊಬ್ಬ ಮಾರುಕಟ್ಟೆ ಕಾರ್ಯನಿರ್ವಾಹಕನಿಗೆ ಮರುಹಂಚಿಕೆ ಮಾಡುವ ಅಧಿಕಾರ ಹೊಂದಿರತಕ್ಕದ್ದು.

15. ಈ ಒಪ್ಪಂದದಲ್ಲಿ ಹೇಳಿರುವ ಹತ್ತು ವರ್ಷಗಳ ಅವಧಿ ಮುಕ್ತಾಯಗೊಂಡ ತರುವಾಯ ಗುತ್ತಿಗೆದಾರನು ಈ ಒಪ್ಪಂದದಲ್ಲಿ ಹೇಳಿರುವ ಎಲ್ಲಾ ಷರತ್ತುಗಳನ್ನು ನೆರವೇರಿಸಿದರೆ ಮತ್ತು ಅವುಗಳಲ್ಲಿ ಯಾವುದನ್ನೂ ಉಲ್ಲಂಘಿಸಿಲ್ಲದಿದ್ದರೆ, ಸದರಿ ಹತ್ತು ವರ್ಷಗಳ ಅವಧಿಯ ಅಂತ್ಯದಲ್ಲಿ ಸಮಿತಿಯು ಗುತ್ತಿಗೆದಾರನಿಗೆ ನಿವೇಶನವನ್ನು ಮಾರಾಟ ಮಾಡತಕ್ಕದ್ದು ಮತ್ತು ಅಂಥ ಮಾರಾಟದ ಬಗೆಗಿನ ಸ್ಟಾಂಪ್ ಶುಲ್ಕ, ನೋಂದಣಿ ಶುಲ್ಕ ಮುಂತಾದಂಥ ಸಂಬಂಧಿಸಿದ ಎಲ್ಲಾ ವೆಚ್ಚಗಳನ್ನು ಗುತ್ತಿಗೆದಾರನೇ ಭರಿಸತಕ್ಕದ್ದು.

16. ಈ ಅಧಿನಿಯಮದ ಉದ್ದೇಶ ಈಡೇರುವಂತೆ ನೋಡಿಕೊಳ್ಳುವ ದೃಷ್ಟಿಯಿಂದ ಅಂಗಡಿಯ/ ಅಂಗಡಿ ಸಹಿತ ಗೋದಾಮಿನ/ ಗೋದಾಮಿನ ಸಂಬಂಧದಲ್ಲಿ ಗುತ್ತಿಗೆ ನೀಡುವವನು ಗುತ್ತಿಗೆದಾರನಿಗೆ ಕ್ರಯಪತ್ರ ಮಾಡಿಕೊಡುವ ಸಮಯದಲ್ಲಿ ವಿಧಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳನ್ನು ಪಾಲಿಸಲು ಈ ಮೂಲಕ ಗುತ್ತಿಗೆದಾರನು ಬದ್ಧನಾಗಿರುತ್ತಾನೆ.

17. ಗುತ್ತಿಗೆದಾರನು, ಮೇಲೆ ಹೇಳಿರುವ ನಿಬಂಧನೆಗಳಲ್ಲಿ ಮತ್ತು ಷರತ್ತುಗಳಲ್ಲಿ ಯಾವುದೇ ಒಂದನ್ನು ಉಲ್ಲಂಘಿಸಿದರೆ, ಗುತ್ತಿಗೆ ಕೊಡುವವನು ಅಂಗಡಿಯ/ ಅಂಗಡಿ ಸಹಿತ ಗೋದಾಮಿನ/ ಗೋದಾಮಿನ ಹಂಚಿಕೆಯನ್ನು ಮುಟ್ಟುಗೋಲು

ಹಾಕಿಕೊಳ್ಳಲು ಮತ್ತು ಮುಟ್ಟುಗೋಲು ಹಾಕಿಕೊಳ್ಳುವ ದಿನಾಂಕದವರೆಗೆ ಗುತ್ತಿಗೆದಾರನು ಠೇವಣಿ ಇಟ್ಟ ಅಂಗಡಿಯ/ ಅಂಗಡಿ ಸಹಿತ ಗೋದಾಮಿನ/ ಗೋದಾಮಿನ ಬೆಲೆಯನ್ನು ಮುಟ್ಟುಗೋಲು ಹಾಕಿಕೊಳ್ಳಲು ಸ್ವಾತಂತ್ರ್ಯ ಹೊಂದಿರುತ್ತಾನೆ.

18. ಆಸ್ತಿಯಲ್ಲಿನ ಯಾವುದೇ ರಚನಾ ದೋಷಕ್ಕೆ ಅಥವಾ ಇನ್ನಾವುದೇ ದೋಷಕ್ಕೆ ಗುತ್ತಿಗೆ ಕೊಡುವವನು ಹೊಣೆಗಾರನಾಗಿರತಕ್ಕದ್ದಲ್ಲ ಮತ್ತು ಗುತ್ತಿಗೆದಾರನು ಯಾವುದೇ ವಿಧವಾದ ದೋಷಗಳಿಗೆ ಗುತ್ತಿಗೆ ಕೊಡುವವನಿಂದ ಪರಿಹಾರಕ್ಕಾಗಿ ಯಾವುದೇ ಕ್ಲೇಮನ್ನು ಮಾಡತಕ್ಕದ್ದಲ್ಲ.

19. ದೊಂಬಿಗಳ, ಕನ್ನಗಳ್ಳತನದ ಅಥವಾ ಪ್ರಜಾಕ್ಷೋಭೆಯ ಸಂಬಂಧದಲ್ಲಿ ಸದರಿ ಸ್ವತ್ತಿನ ಮೇಲೆ ವಿಮೆ ಮಾಡಿಸಲು ಗುತ್ತಿಗೆದಾರನು ಒಪ್ಪಿರುತ್ತಾನೆ.

20. ಗುತ್ತಿಗೆ ಕೊಡುವವನು ಅಥವಾ ಅದು ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು ಸ್ವತ್ತನ್ನು ತಪಾಸಣೆ ಮಾಡುವ ಸಲುವಾಗಿ ಯಾವುದೇ ಸಮಯದಲ್ಲಾದರೂ ಸದರಿ ಸ್ವತ್ತಿನೊಳಗೆ ಪ್ರವೇಶಿಸುವ ಹಕ್ಕು ಹೊಂದಿರತಕ್ಕದ್ದು.

21. ಮೇಲೆ ಹೇಳಿರುವ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಅರ್ಥೈಸುವುದಕ್ಕೆ ಸಂಬಂಧಿಸಿದಂತೆ ಯಾವುದೇ ವಿವಾದ ಉಂಟಾದರೆ ಕೃಷಿ ಮಾರುಕಟ್ಟೆ ನಿರ್ದೇಶಕರ ನಿರ್ಣಯವೇ ಅಂತಿಮ ವಾಗಿರತಕ್ಕದ್ದು ಮತ್ತು ಅದಕ್ಕೆ ಉಭಯಪಕ್ಷಕಾರರೂ ಬದ್ಧರಾಗಿರತಕ್ಕದ್ದು.

**ಅನುಸೂಚಿ**

(ಸ್ವತ್ತಿನ ವಿವರ)

ಉತ್ತರ -------- ದಕ್ಷಿಣ --------- ಪೂರ್ವ ----------- ಪಶ್ಚಿಮ

ಇದನ್ನು ದೃಢೀಕರಿಸಿದ ಸಾಕ್ಷಿದಾರರ ಸಮ್ಮುಖದಲ್ಲಿ ಸಾಕ್ಷಿಯಾಗಿ ಗುತ್ತಿಗೆ ಕೊಡುವವನು ಮತ್ತು ಗುತ್ತಿಗೆದಾರನು ಈ ಗುತ್ತಿಗೆ ಪತ್ರಕ್ಕೆ ಸಹಿ ಮಾಡಿರುತ್ತಾರೆ.

ಸಾಕ್ಷಿದಾರರು:

1. ಗುತ್ತಿಗೆ ಕೊಡುವವನು

2. ಗುತ್ತಿಗೆದಾರ

**ನಮೂನೆ –VI**

(ನಿಯಮ 14ನ್ನು ನೋಡಿ)

**ತೂಕ ಮಾಡುವ ಯಂತ್ರ (ವೇಬ್ರಿಜ್) ಮುಂತಾದವುಗಳನ್ನು ಹಂಚಿಕೆ ಮಾಡುವುದಕ್ಕಾಗಿ ಅರ್ಜಿ**

**ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ**

| | | |
|---|---|---|
| (1) | ಅರ್ಜಿದಾರನ ಹೆಸರು | |
| (2) | ಚಿಲ್ಲರೆ ಅಂಗಡಿ, ತೂಕಮಾಡುವ ಯಂತ್ರ (ವೇಬ್ರಿಜ್), ಕ್ಯಾಂಟೀನು, ಚಹಾದ ಅಂಗಡಿಗಳು ಇವುಗಳಲ್ಲಿ ಯಾವುದಕ್ಕೆ ಅರ್ಜಿ ಸಲ್ಲಿಸಲಾಗಿದೆ | |
| (3) | ಪೂರ್ಣ ವಿಳಾಸ, ದೂರವಾಣಿ / ಟೆಲೆಕ್ಸ್ / ಫ್ಯಾಕ್ಸ್ ಸಂಖ್ಯೆ | |
| (4) | ಅರ್ಜಿ ಸಂಖ್ಯೆ | |
| (5) | ಅರ್ಜಿದಾರನು, ಆದಾಯ ತೆರಿಗೆ ಅಧಿನಿಯಮದ ಅಡಿಯಲ್ಲಿ ತೆರಿಗೆದಾರನೇ (ಖಾಯಂ ಖಾತೆ ಸಂಖ್ಯೆ, ಮುಂತಾದ ವಿವರಗಳನ್ನು ಒದಗಿಸಿ) | |
| (6) | ಈ ಮೊದಲು ಯಾವುದಾದರೂ ಅರ್ಜಿ ಸಲ್ಲಿಸಿದ್ದರೆ ಅದರ ವಿವರಗಳು | |
| (7) | ಅರ್ಜಿ ಜೊತೆಯಲ್ಲಿ ಮಾಡಿರುವ ಠೇವಣಿಗಳ ವಿವರಗಳು | |
| (8) | ಲೈಸೆನ್ಸಿನ ವಿವರಗಳು, ಯಾವುದಾದರೂ ಇದ್ದರೆ | |
| (9) | ಅರ್ಜಿದಾರನು, ಈ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಲೈಸೆನ್ಸ್ ಹೊಂದಿರುವ ಮಾರುಕಟ್ಟೆ ಕಾರ್ಯನಿರ್ವಾಹಕನೆ? ಹಾಗಿದ್ದರೆ ಲೈಸೆನ್ಸ್‌ನ ಪ್ರವರ್ಗವನ್ನು ತಿಳಿಸಿ ಮತ್ತು ಲೈಸೆನ್ಸ್‌ನ ಒಂದು ಪ್ರತಿ ಲಗತ್ತಿಸಿ. | |
| (10) | ಯಾವುದೇ ಇತರ ಮಾಹಿತಿ | |

**ಅಫಿಡಾವಿಟ್**

ಶ್ರೀ ----------- ಎಂಬ ನಾನು, ಅರ್ಜಿಯಲ್ಲಿ ಒದಗಿಸಿರುವ ವಿವರಗಳು ನನಗೆ ತಿಳಿದಿರುವಷ್ಟರ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ಸತ್ಯವಾದವುಗಳೆಂದು ಈ ಮೂಲಕ ಘೋಷಿಸುತ್ತೇನೆ. ಈ ಮೇಲೆ ಒದಗಿಸಿರುವ ಯಾವುದೇ ಮಾಹಿತಿ ತಪ್ಪೆಂದು ಕಂಡುಬಂದರೆ ನನ್ನ ಅರ್ಜಿಯನ್ನು ತಿರಸ್ಕರಿಸುವುದಕ್ಕೆ ನಾನು ಒಪ್ಪಿಕೊಂಡಿದ್ದೇನೆ.

ಅರ್ಜಿದಾರನ ಸಹಿ

ಹೆಸರು

ಮೊಹರು

ಸ್ಥಳ:

ದಿನಾಂಕ:

**ನಮೂನೆ –VII**

(ನಿಯಮ 16 (2)ನ್ನು ನೋಡಿ)

**ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ – ಒಪ್ಪಂದ**

(ಅಂಗಡಿಗಾಗಿ, ಗೋದಾಮಿಗಾಗಿ, ಅಂಗಡಿ ಸಹಿತ ಗೋದಾಮಿಗಾಗಿ)

ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ ಈ ಒಪ್ಪಂದವನ್ನು, ಒಂದು ಪಕ್ಷ ---------- ರಲ್ಲಿ ಕಾರ್ಯದರ್ಶಿಯಾಗಿರುವ ಶ್ರೀ ------------ ರವರು ಮತ್ತು ----------- ರಲ್ಲಿ ವಾಸಿಸುತ್ತಿರುವ ಶ್ರೀ ---------- ರವರ ಮಗನಾದ ಸುಮಾರು ---------- ವರ್ಷ ವಯಸ್ಸಿನ ಅಧ್ಯಕ್ಷರಾಗಿರುವ (ಅಥವಾ ಆಡಳಿತಗಾರ) ಶ್ರೀ ---------- ರವರು ಪ್ರತಿನಿಧಿಸಿದ --------- ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ (ಇಲ್ಲಿ ಇನ್ನುಮುಂದೆ ಲೈಸೆನ್ಸು ಕೊಡುವವನು ಎಂದು ಕರೆಯಲಾಗಿದ್ದು, ಈ ಪದಾವಳಿಯು ಸಂದರ್ಭವು ಹಾಗೆ ಅಗತ್ಯಪಡಿಸಿರುವಲ್ಲೆಲ್ಲಾ ಅದರ ಉತ್ತರಾಧಿಕಾರಿಗಳನ್ನು, ಹಸ್ತಾಂತರಿತರನ್ನು ಒಳಗೊಳ್ಳುತ್ತದೆ) ಮತ್ತು --------- ರಲ್ಲಿ ವಾಸಿಸುತ್ತಿರುವ ಶ್ರೀ ---------- ರವರ ಮಗನಾದ ಸುಮಾರು ---------- ವರ್ಷ ವಯಸ್ಸಿನ ಶ್ರೀ --------- ರವರು ಅದರ ಮಾಲೀಕ/ ವ್ಯವಸ್ಥಾಪಕ ಪಾಲುದಾರನಾಗಿದ್ದು, ಅವರ ಮೂಲಕ ಪ್ರತಿನಿಧಿಸಿದ ---------- ಹೆಸರಿನ ನೋಂದಾಯಿತ ಪಾಲುದಾರಿಕೆ ಫರ್ಮು (ಇದರಲ್ಲಿ ಇನ್ನುಮುಂದೆ ಲೈಸೆನ್ಸುದಾರ ಎಂದು ಕರೆಯಲಾಗಿದೆ) ಇವರ ನಡುವೆ ಮಾಡಿಕೊಳ್ಳಲಾಗಿದ್ದು, ಅದನ್ನು ಈ ಕೆಳಕಂಡಂತೆ ಸಾಕ್ಷ್ಯೀಕರಿಸಲಾಗಿದೆ:

ಮಾರುಕಟ್ಟೆ ಕಾರ್ಯನಿರ್ವಾಹಕನಾಗಿರುವ ಮತ್ತು ಲೈಸೆನ್ಸ್ ಕೊಡುವವನಿಂದ ಲೈಸೆನ್ಸ್ ಪಡೆದಿರುವ ಲೈಸೆನ್ಸ್‌ದಾರನು ಅಧಿಸೂಚಿತ ಕೃಷಿ ಉತ್ಪನ್ನಗಳಲ್ಲಿ ವ್ಯವಹಾರ ಮಾಡುವುದಕ್ಕಾಗಿ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು / ಗೋದಾಮನ್ನು ಹಂಚಿಕೆ ಮಾಡುವಂತೆ ಅರ್ಜಿ ಸಲ್ಲಿಸಿರುವುದರಿಂದ;

ಲೈಸೆನ್ಸ್ ಕೊಡುವವನು, ಅಧಿಸೂಚಿತ ಕೃಷಿ ಉತ್ಪನ್ನದ ವ್ಯಾಪಾರ ವ್ಯವಹಾರ ಮಾಡುತ್ತಿರುವ ಕಾರ್ಯನಿರ್ವಾಹಕರಿಗೆ ಸೌಲಭ್ಯಗಳನ್ನು ಕಲ್ಪಿಸುವ ಉದ್ದೇಶದಿಂದ -------- ಇಲ್ಲಿ ಮಾರುಕಟ್ಟೆ ಪ್ರಾಂಗಣವನ್ನು ಸ್ಥಾಪಿಸಿರುವುದರಿಂದ.

ಲೈಸೆನ್ಸು ಕೊಡುವವನು, ಮಾರುಕಟ್ಟೆ ಪ್ರಾಂಗಣದಲ್ಲಿರುವ, --------- ಸಂಖ್ಯೆಯನ್ನು ಹೊಂದಿರುವ ಹಾಗೂ ಈ ಮುಂದೆ ಹೇಳಿರುವ ಅನುಸೂಚಿಯಲ್ಲಿ ಹೆಚ್ಚು ಸಂಪೂರ್ಣವಾಗಿ ವರ್ಣಿಸಿರುವ ಅಂಗಡಿಯ/ ಅಂಗಡಿ ಸಹಿತ ಗೋದಾಮಿನ/ ಗೋದಾಮಿನ ಮಾಲೀಕನಾಗಿರುವುದರಿಂದ,

ಲೈಸೆನ್ಸ್‌ದಾರನು, ಅಧಿಸೂಚಿತ ಕೃಷಿ ಉತ್ಪನ್ನ --------- (ಸರಕು/ ಸರಕುಗಳು) ವ್ಯಾಪಾರ ಮಾಡುತ್ತಿರುವುದರಿಂದ ಮತ್ತು ಅಧಿಸೂಚಿತ ಕೃಷಿ ಉತ್ಪನ್ನದ ವ್ಯಾಪಾರ ಮಾಡುವುದಕ್ಕಾಗಿ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಆಧಾರದ ಮೇಲೆ ಗೋದಾಮನ್ನು/ ಅಂಗಡಿ ಸಹಿತ ಗೋದಾಮನ್ನು ಹಂಚಿಕೆ ಮಾಡುವಂತೆ ಅರ್ಜಿ ಸಲ್ಲಿಸಿರುವುದರಿಂದ ಮತ್ತು ಲೈಸೆನ್ಸ್ ಕೊಡುವವನು ಅನುಸೂಚಿತ ಸ್ವತ್ತನ್ನು ಹಂಚಿಕೆ ಮಾಡಲು ಒಪ್ಪಿಕೊಂಡಿರುವುದರಿಂದ;

ಲೈಸೆನ್ಸ್ ಕೊಡುವವನು, 200 ----ರ -------- ರಂದು ನಡೆದ ತನ್ನ ಸಭೆಯ ಗೊತ್ತುವಳಿ ಸಂಖ್ಯೆ --- ರಲ್ಲಿ ಹಂಚಿಕೆದಾರನಿಗೆ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಆಧಾರದ ಮೇಲೆ ಅನುಸೂಚಿತ ಸ್ವತ್ತನ್ನು ಹಂಚಿಕೆ ಮಾಡಲು ಒಪ್ಪಿಕೊಂಡಿರುವುದರಿಂದ;

ಕೃಷಿ ಮಾರುಕಟ್ಟೆ ನಿರ್ದೇಶಕರು/ -------- ಜಿಲ್ಲೆಯ ಸಹಾಯಕ ನಿರ್ದೇಶಕರು/ ಉಪನಿರ್ದೇಶಕರು 200--ರ ದಿನಾಂಕ ------ ಆದೇಶ ಸಂಖ್ಯೆ ------- ಮೂಲಕ ತಮ್ಮ ಅನುಮತಿ ನೀಡಿರುವುದರಿಂದ;

ಉಭಯ ಪಕ್ಷಕಾರರು ಈ ಕೆಳಗೆ ಹೇಳಿರುವ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಪಾಲಿಸುವುದಕ್ಕೆ ಲಿಖಿತ ರೂಪದಲ್ಲಿ ಒಪ್ಪಂದ ಮಾಡಿಕೊಳ್ಳಲು ಇಚ್ಛಿಸಿರುವುದರಿಂದ.

**ನಿಬಂಧನೆಗಳು ಮತ್ತು ಷರತ್ತುಗಳು:**

1) ಲೈಸೆನ್ಸ್ ಕೊಡುವವನು, ಲೈಸೆನ್ಸ್‌ದಾರನಿಗೆ ನೀಡಿರುವ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸು 11 ತಿಂಗಳ ಅವಧಿಯದು ಮಾತ್ರವಾದುದಾಗಿದ್ದು ಇದನ್ನು ಗರಿಷ್ಠ 55 ತಿಂಗಳ ಅವಧಿಗೆ ಒಳಪಟ್ಟು ಈ ಒಪ್ಪಂದದ ದಿನಾಂಕದಿಂದ ಪ್ರತಿ 11 (ಹನ್ನೊಂದು) ತಿಂಗಳಿಗೊಮ್ಮೆ ನವೀಕರಿಸುವಂಥದ್ದಾಗಿರತಕ್ಕದ್ದು.

2) ಈ ಲೈಸೆನ್ಸ್‌ನ ಅವಧಿ ಮುಕ್ತಾಯವಾದ ನಂತರ ಲೈಸೆನ್ಸ್‌ದಾರನು ಸದರಿ ಆವರಣವನ್ನು ಯಾವುದೇ ಹೆಚ್ಚಿನ ಅವಧಿಗಾಗಿ (ಒಂದು ಬಾರಿಗೆ 11 ತಿಂಗಳಿಗಿಂತ ಹೆಚ್ಚಿಲ್ಲದಂತೆ) ಬಳಸಲು ಲೈಸೆನ್ಸಿನ ನವೀಕರಣಕ್ಕಾಗಿ ಆತನಿಗೆ ಮೊದಲ ಆದ್ಯತೆ ನೀಡತಕ್ಕದ್ದು. ಆದರೆ ಸದರಿ ಆವರಣಗಳನ್ನು ಅಧಿಭೋಗಕ್ಕೆ ತೆಗೆದುಕೊಳ್ಳುವುದಕ್ಕೂ ಮುಂಚೆ, ಆ ಬಗ್ಗೆ ಗೊತ್ತುಪಡಿಸಿದ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಮತ್ತು ನಿಯಮಗಳನ್ನು ಪಾಲಿಸಿರಬೇಕು.

3) ಲೈಸೆನ್ಸ್‌ದಾರನು 11 ತಿಂಗಳ ಮತ್ತೊಂದು ಅವಧಿಗೆ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್‌ನ್ನು ನವೀಕರಿಸಿಕೊಳ್ಳುವ ಇಚ್ಛೆ ಹೊಂದಿದ್ದರೆ, ಆ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಮುಕ್ತಾಯ ವಾಗುವುದಕ್ಕೆ 2 (ಎರಡು) ತಿಂಗಳಿಗಿಂತ ಕಡಿಮೆಯಿಲ್ಲದಷ್ಟು ಮುಂಚಿತವಾಗಿ ತನ್ನ ಅರ್ಜಿಯನ್ನು ಲೈಸೆನ್ಸ್ ಕೊಡುವವನಿಗೆ ಸಲ್ಲಿಸತಕ್ಕದ್ದು.

4) ಲೈಸೆನ್ಸ್‌ದಾರನು, ಅನುಸೂಚಿತ ಆವರಣಕ್ಕೆ ಸಂಬಂಧಪಟ್ಟಂತೆ ಲೈಸೆನ್ ಕೊಡುವವನಿಗೆ ಭದ್ರತಾ ಠೇವಣಿಯಾಗಿ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ 10 (ಹತ್ತು) ತಿಂಗಳ ಶುಲ್ಕಕ್ಕೆ ಸಮನಾದಷ್ಟು ಮೊತ್ತವನ್ನು ಠೇವಣಿಯಾಗಿಡತಕ್ಕದ್ದು. ಸದರಿ ಭದ್ರತಾ ಠೇವಣಿಗೆ ಯಾವುದೇ ಬಡ್ಡಿ ಇರುವುದಿಲ್ಲ.

5) ಲೈಸೆನ್ಸ್‌ದಾರನು, ಖಚಿತವಾದ ಒಂದು ತಿಂಗಳ ಲಿಖಿತ ನೋಟೀಸನ್ನು ನೀಡುವ ಮೂಲಕ, ಆತನು ಅನುಸೂಚಿತ ಆವರಣವನ್ನು ತೆರವು ಮಾಡುವ ಮತ್ತು ಸ್ವಾಧೀನತೆಯನ್ನು ಒಪ್ಪಿಸಿಕೊಡುವ ಇಚ್ಛೆಯನ್ನು ವ್ಯಕ್ತಪಡಿಸಿದರೆ, ಸದರಿ ಭದ್ರತಾ ಮೊತ್ತವನ್ನು ಮರುಪಾವತಿ ಮಾಡುವಂತೆ ಕೋರಲು ಹಕ್ಕುಳ್ಳವನಾಗಿರತಕ್ಕದ್ದು.

6) ಲೈಸೆನ್ಸ್‌ದಾರನು ಹಿಂದಿನ ತಿಂಗಳ ಲೈಸೆನ್ಸ್ ಶುಲ್ಕವನ್ನು ಅದರ ನಂತರದ ತಿಂಗಳ 10ನೇ (ಹತ್ತನೇ) ದಿನಾಂಕದೊಳಗೆ ಪಾವತಿ ಮಾಡತಕ್ಕದ್ದು. ಹಾಗೆ ಪಾವತಿ ಮಾಡಲು ತಪ್ಪಿದರೆ ಲೈಸೆನ್ಸ್ ಕೊಟ್ಟವನು ಪ್ರತಿ ತಿಂಗಳಿಗೆ ಶೇಕಡಾ 10 ರಷ್ಟು ದಂಡ ಶುಲ್ಕ ವಿಧಿಸುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದು.

7) ಲೈಸೆನ್ಸ್‌ದಾರನು, ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಶುಲ್ಕ ಸಲ್ಲಿಸುವುದರಲ್ಲಿ ಸತತ ಮೂರು ತಿಂಗಳು ವಿಫಲನಾದರೆ, ಲೈಸೆನ್ಸ್ ಕೊಡುವವನು ಬಾಕಿ ಮೊತ್ತವನ್ನು ವಸೂಲು ಮಾಡುವ ತನ್ನ ಹಕ್ಕನ್ನು ಕಾಯ್ದಿರಿಸಿಕೊಳ್ಳುವುದರ ಜೊತೆಗೆ ಭದ್ರತಾ ಠೇವಣಿಯಲ್ಲಿ ಹೊಂದಾಣಿಕೆ ಮಾಡಿಕೊಳ್ಳುವ ಮತ್ತು ಅನುಸೂಚಿತ ಸ್ವತ್ತನ್ನು ಮರು ಸ್ವಾಧೀನಪಡಿಸಿಕೊಳ್ಳುವ ಹಕ್ಕನ್ನು ಹೊಂದಿರತಕ್ಕದ್ದು.

8) ಲೈಸೆನ್ಸ್‌ದಾರನು ಯಾವ ಉದ್ದೇಶಕ್ಕಾಗಿ ಆವರಣವನ್ನು ಹಂಚಿಕೆ ಮಾಡಲಾಗಿದೆಯೋ ಆ ಯಾವುದೇ ಉದ್ದೇಶದ ಹೊರತಾಗಿ ಇತರ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ. ಹಂಚಿಕೆ ಮಾಡಿರುವ ಆವರಣವನ್ನು, ಅದನ್ನು ಹಂಚಿಕೆ ಮಾಡಿರುವ ಉದ್ದೇಶಕ್ಕೆ ಬಳಸಿಕೊಳ್ಳುತ್ತಿಲ್ಲವೆಂದು ಕಾರ್ಯದರ್ಶಿಗೆ ಮನದಟ್ಟಾದರೆ, ಲೈಸೆನ್ಸ್ ಕೊಡುವವನು ಲೈಸೆನ್ಸ್‌ದಾರನಿಗೆ, ಒಂದು ತಿಂಗಳ ನೋಟೀಸು ನೀಡುವ ಮೂಲಕ ಲೈಸೆನ್ಸ್‌ನ್ನು ರದ್ದುಪಡಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾನೆ.

9) ಲೈಸೆನ್ಸ್ ಶುಲ್ಕವನ್ನು ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಶುಲ್ಕದ ಶೇಕಡಾ 5ರ ದರದಲ್ಲಿ ಹೆಚ್ಚಿಸುವ ಮೂಲಕ ಪ್ರತಿ 33 ತಿಂಗಳಿಗೊಮ್ಮೆ ಪರಿಷ್ಕರಿಸಲಾಗುವುದು. ಇದಕ್ಕೆ ಲೈಸೆನ್ಸ್‌ದಾರನು ಬದ್ಧನಾಗಿರತಕ್ಕದ್ದು.

10) ಲೈಸೆನ್ಸ್ ಕೊಡುವವನು, ಲೈಸೆನ್ಸನ್ನು ರದ್ದುಪಡಿಸಿ ಅನುಸೂಚಿತ ಆವರಣವನ್ನು ಮರುಸ್ವಾಧೀನ ಪಡಿಸಿಕೊಳ್ಳಬೇಕೆಂದು ಇಚ್ಛಿಸಿದಲ್ಲಿ, ಲೈಸೆನ್ಸ್ ಕೊಡುವವನು ಲೈಸೆನ್ಸ್‌ದಾರನಿಗೆ ಹೊರಹಾಕುವ ನೋಟೀಸನ್ನು ಜಾರಿಮಾಡಿದ ಮೇಲೆ ಲೈಸೆನ್ಸುದಾರನು ಈ ನೋಟೀಸನ್ನು ಜಾರಿಮಾಡಿದ ದಿನಾಂಕದಿಂದ 15 (ಹದಿನೈದು) ದಿನಗಳೊಳಗೆ ಅನುಸೂಚಿತ ಆವರಣದ ಖಾಲಿ ಸ್ವಾಧೀನವನ್ನು ಲೈಸೆನ್ಸ್ ನೀಡುವವನಿಗೆ ವಹಿಸಿಕೊಡತಕ್ಕದ್ದು. ಲೈಸೆನ್ಸ್‌ದಾರನು ಹಾಗೆ ಮಾಡಲು ವಿಫಲನಾದರೆ, ಲೈಸೆನ್ಸ್ ಕೊಡುವವನು ಸಮುಚಿತ ಕಾನೂನಿನ ಉಪಬಂಧಗಳ ಮೇರೆಗೆ ಲೈಸೆನ್ಸ್‌ದಾರನನ್ನು ಹೊರಹಾಕಲು ಸೂಕ್ತ ಕಾನೂನು ವ್ಯವಹರಣೆಗಳನ್ನು ಜರುಗಿಸುವ ಹಕ್ಕನ್ನು ಕಾಯ್ದಿರಿಸಿ ಕೊಂಡಿರುವುದರ ಜೊತೆಗೆ, ಸದರಿ ಭದ್ರತಾ ಠೇವಣಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ಆತನು ಹಕ್ಕುಳ್ಳವನಾಗಿರತಕ್ಕದ್ದು.

11) ಲೈಸೆನ್ಸ್‌ದಾರನು, ಲೈಸೆನ್ಸ್ ಕೊಡುವವನ ಲಿಖಿತ ಒಪ್ಪಿಗೆ ಇಲ್ಲದೆ ಅನುಸೂಚಿತ ಆವರಣದ ಇಡೀ ಅಥವಾ ಯಾವುದೇ ಒಂದು ಭಾಗವನ್ನು ವಹಿಸಿಕೊಡುವುದಾಗಲೀ ಅಥವಾ ಯಾರೇ ಮೂರನೇ ಪಕ್ಷಕಾರನಿಗೆ/ ಪಕ್ಷಕಾರರಿಗೆ ಅನುಸೂಚಿತ ಆವರಣದಲ್ಲಿ ಅಧಿಭೋಗ ಹೊಂದುವುದಕ್ಕೆ ಅಥವಾ ಯಾವುದೇ ತೆರನಾದ ವ್ಯಾಪಾರ ವ್ಯವಹಾರ ಮಾಡುವುದಕ್ಕೆ ಅನುಮತಿ ನೀಡತಕ್ಕದ್ದಲ್ಲ ;

ಲೈಸೆನ್ಸ್‌ದಾರನು, ಪಾಲುದಾರಿಕೆ ಫರ್ಮ್ ಆಗಿರುವ ಸಂದರ್ಭದಲ್ಲಿ, ಪಾಲುದಾರಿಕೆ ಫರ್ಮಿನ ರಚನೆಯಲ್ಲಿ ಯಾವುದೇ ಬದಲಾವಣೆಯಾದರೆ, ಅದನ್ನು ಮಾರುಕಟ್ಟೆ ಸಮಿತಿಯ ಗಮನಕ್ಕೆ ತರತಕ್ಕದ್ದು. ಲೈಸೆನ್ಸ್‌ದಾರನು, ಬದಲಾವಣೆಯಾಗುವುದಕ್ಕೆ ಮೊದಲು ಇದ್ದ ಫರ್ಮ್‌ನ ಪಾಲುದಾರರಾಗಿದ್ದ ವ್ಯಕ್ತಿಗಳೇ ಬದಲಾವಣೆಯಾದ ನಂತರವೂ ಅವರೇ ಮುಂದುವರೆಯದ ಹೊರತು, ಪುನರ್‌ರಚಿತ ಪಾಲುದಾರಿಕೆಯ ಪಾಲುದಾರರಿಗೆ ಆವರಣವನ್ನು ವಹಿಸಿಕೊಡುವುದಕ್ಕೆ ಒಪ್ಪತಕ್ಕದ್ದಲ್ಲ.

12) ಲೈಸೆನ್ಸ್‌ದಾರನು, ಲೈಸೆನ್ಸ್ ಕೊಡುವವನ ಲಿಖಿತ ಒಪ್ಪಿಗೆಯಿಲ್ಲದೆ ಅನುಸೂಚಿತ ಆವರಣದ ಕಟ್ಟಡದ ಒಳಭಾಗ ಅಥವಾ ಹೊರಭಾಗದಲ್ಲಿ ಖಾಯಂ ಅಥವಾ ತಾತ್ಕಾಲಿಕವಾದಂಥ ಯಾವುದೇ ಬದಲಾವಣೆಗಳನ್ನು ಮಾಡತಕ್ಕದ್ದಲ್ಲ.

13) ಲೈಸೆನ್ಸ್‌ದಾರನು ತಾನು ಬಳಸಿದ ವಿದ್ಯುಚ್ಛಕ್ತಿ ಮತ್ತು ನೀರಿಗೆ ಸಂಬಂಧಿಸಿದಂತೆ, ಈ ಸಂಬಂಧ ಲೈಸೆನ್ಸ್ ಕೊಡುವವನು ಕಾಲಕಾಲಕ್ಕೆ ಹೊರಡಿಸುವ ನಿರ್ದೇಶನಗಳಿಗನುಸಾರವಾಗಿ ವಿದ್ಯುಚ್ಛಕ್ತಿ ಮತ್ತು ನೀರಿನ ವೆಚ್ಚಗಳನ್ನು ಸಂಬಂಧಪಟ್ಟ ಪ್ರಾಧಿಕಾರಕ್ಕೆ ಸಂದಾಯ ಮಾಡತಕ್ಕದ್ದು.

14) ಲೈಸೆನ್ಸ್‌ದಾರನು, ಅನುಸೂಚಿತ ಆವರಣವನ್ನು, ಯಾವುದೇ ಕಾನೂನುಬಾಹಿರ ಉದ್ದೇಶಗಳಾಗಿ ಎಂದರೆ, ಜೂಜು, ಮದ್ಯ/ ಸ್ಫೋಟಕಗಳು/ ಪಟಾಕಿಗಳು/ ಯಾವುದೇ ಇತರ ಸ್ಫೋಟಕಗಳು/ ದಹನ ಸರಕುಗಳನ್ನು/ ಸಾಮಗ್ರಿಗಳನ್ನು ಮಾರಾಟಮಾಡುವ/ ದಾಸ್ತಾನು ಮಾಡುವ ಯಾವುದೇ ವ್ಯಾಪಾರವನ್ನು ಮಾಡತಕ್ಕದ್ದಲ್ಲ ಅಥವಾ ಅದಕ್ಕಾಗಿ ಅವುಗಳನ್ನು ಬಳಸತಕ್ಕದ್ದಲ್ಲ ಅಥವಾ ಲೈಸೆನ್ಸ್ ಕೊಡುವವನ ಸ್ವತ್ತಿಗೆ ಅಥವಾ ನೆರೆಹೊರೆಯ ಅಧಿಭೋಗದಾರರ ಪ್ರಾಣ ಮತ್ತು ಆಸ್ತಿಗೆ ಅಪಾಯವುಂಟುಮಾಡಬಹುದಾದ ಯಾವುದನ್ನೂ ಮಾಡತಕ್ಕದ್ದಲ್ಲ.

15) ಲೈಸೆನ್ಸ್‌ದಾರನು, ಅನುಸೂಚಿತ ಆವರಣವನ್ನು ಯಾವುದೇ ನಷ್ಟಕ್ಕೆ ಭದ್ರತೆಯಾಗಿ ನೀಡಲು ಅಥವಾ ಯಾವುದೇ ಹೊಣೆಗಾರಿಕೆಯನ್ನು ಅಥವಾ ಋಣಭಾರವನ್ನು ಯಾವುದೇ ರೀತಿಯಲ್ಲಿ ಸೃಜಿಸಲು ಹಕ್ಕು ಪಡೆಯತಕ್ಕದ್ದಲ್ಲ.

16) ಲೈಸೆನ್ಸ್‌ದಾರನು, ಈ ಲೈಸೆನ್ಸಿನ ಯಾವುದೇ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಉಲ್ಲಂಘಿಸಿದರೆ, ಲೈಸೆನ್ಸ್ ಕೊಡುವವನು ಆತನ ಲೈಸೆನ್ಸನ್ನು ರದ್ದುಪಡಿಸುವ ಒಂದು ತಿಂಗಳ ನೋಟೀಸು ನೀಡಿದಾಗ ಆ ಒಂದು ತಿಂಗಳೊಳಗೆ ಆವರಣವನ್ನು ಖಾಲಿ ಮಾಡುವುದಕ್ಕೆ ಲೈಸೆನ್ಸುದಾರನು ಬದ್ಧನಾಗಿರತಕ್ಕದ್ದು. ಅಥವಾ ಇಲ್ಲಿ ನಿರ್ದಿಷ್ಟಪಡಿಸಿದ, ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಶುಲ್ಕಗಳನ್ನು ಸಂದಾಯ ಮಾಡುವುದಕ್ಕೆ ಸಂಬಂಧಿಸಿದಂತೆ ಲೈಸೆನ್ಸ್‌ದಾರನು ಮೂರು ತಿಂಗಳುಗಳವರೆಗೆ ಸುಸ್ತಿದಾರನಾಗಿದ್ದರೆ, ಲೈಸೆನ್ಸ್‌ದಾರನ ಕಾನೂನುಬದ್ಧ ಉತ್ತರಾಧಿಕಾರಿಗಳು, ನಿರ್ವಾಹಕರು ಮಾರುಕಟ್ಟೆ ಸಮಿತಿಗೆ ಲೈಸೆನ್ಸ್ ಶುಲ್ಕದ ಬಾಕಿಯನ್ನು ಪಾವತಿ ಮಾಡುವುದಕ್ಕೆ ಹೊಣೆಯಾಗಿರತಕ್ಕದ್ದು.

17) ಸದರಿ ಆವರಣದ ಸಮಗ್ರ ಮೇಲ್ವಿಚಾರಣೆಯು ಮಾರುಕಟ್ಟೆ ಸಮಿತಿಯಲ್ಲಿ ನಿಹಿತವಾಗಿರತಕ್ಕದ್ದು. ಅದರ ಅಧಿಕಾರಿಗಳು/ ಸಿಬ್ಬಂದಿಯು, ಎಲ್ಲ ಸಮಂಜಸ ವೇಳೆಗಳಲ್ಲಿ ಸದರಿ ಆವರಣದ ದುರಸ್ತಿ ಸ್ಥಿತಿಗತಿಯ ಬಗ್ಗೆ ತಪಾಸಣೆ ಮಾಡುವುದಕ್ಕೆ ಹಕ್ಕುಳ್ಳವರಾಗಿರತಕ್ಕದ್ದು; ಲೈಸೆನ್ಸ್‌ದಾರನು, ಆವರಣವನ್ನು ಸುಸ್ಥಿತಿಯಲ್ಲಿ ಮತ್ತು ಆರೋಗ್ಯಕರ ಸ್ಥಿತಿಯಲ್ಲಿ ಇಟ್ಟುಕೊಳ್ಳಲು ಮತ್ತು ಲೈಸೆನ್ಸ್ ಅವಧಿ ಮುಕ್ತಾಯಗೊಂಡ ತರುವಾಯ ಅಥವಾ ಲೈಸೆನ್ಸ್ ಕೊಡುವವನು ಸದರಿ ಆವರಣವನ್ನು ಖಾಲಿ ಮಾಡುವಂತೆ ಕೇಳಿದಾಗ ಅವನಿಗೆ ಅಂಗಡಿಯನ್ನು ಸುಸ್ಥಿತಿಯಲ್ಲಿ ವಹಿಸಿಕೊಡುವುದಕ್ಕೆ ಬದ್ಧನಾಗಿರತಕ್ಕದ್ದು.

18) ಲೈಸೆನ್ಸ್‌ದಾರನೂ ಸಹ ಲೈಸೆನ್ಸ್ ಕೊಡುವವನಿಗೆ ಒಂದು ತಿಂಗಳ ನೋಟೀಸು ನೀಡುವ ಮೂಲಕ ಲೈಸೆನ್ಸನ್ನು ರದ್ದುಗೊಳಿಸಬಹುದು. ಲೈಸೆನ್ಸಿನ ಅವಧಿ ಮುಗಿದ ತರುವಾಯ ತನ್ನಷ್ಟಕ್ಕೇನೇ ಲೈಸೆನ್ಸ್ ರದ್ದಾಗಿದೆಯೆಂದು ಭಾವಿಸತಕ್ಕದ್ದು.

**ಅನುಸೂಚಿ**

ಅಂಗಡಿ ಸಂಖ್ಯೆ ಅಳತೆ:

ಚಕ್ಕುಬಂದಿ

ಪೂರ್ವಕ್ಕೆ :
ಪಶ್ಚಿಮಕ್ಕೆ :
ಉತ್ತರಕ್ಕೆ :
ದಕ್ಷಿಣಕ್ಕೆ

ಇದಕ್ಕೆ ಸಾಕ್ಷಿಯಾಗಿ ಲೈಸೆನ್ಸ್ ಕೊಡುವವನು ಮತ್ತು ಲೈಸೆನ್ಸ್‌ದಾರ ಇಬ್ಬರೂ --------- ರಲ್ಲಿ 200----ರ -------- ದಿನದಂದು ಈ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಒಪ್ಪಂದಕ್ಕೆ ಸಹಿ ಮಾಡಿರುತ್ತಾರೆ.

ಸಾಕ್ಷಿಗಳು ಲೈಸೆನ್ಸ್‌ದಾರ

(1)

(2) ಲೈಸೆನ್ಸ್ ಕೊಡುವವನು

## ನಮೂನೆ –VIII

(ನಿಯಮ 16 (2)ನ್ನು ನೋಡಿ)

**ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ ಒಪ್ಪಂದ**

(ಚಿಲ್ಲರೆ ಅಂಗಡಿ, ಕ್ಯಾಂಟೀನು, ತೂಕಮಾಡುವ ಯಂತ್ರ (ವೇಬ್ರಿಜ್), ಚಹಾದ ಅಂಗಡಿಗಳಿಗಾಗಿ)

ಈ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ ಒಪ್ಪಂದವನ್ನು, ಒಂದು ಪಕ್ಷವಾಗಿರುವ ---------- ರಲ್ಲಿ ವಾಸಿಸುತ್ತಿರುವ ಶ್ರೀ ----------- ರವರ ಮಗನಾದ, ಸುಮಾರು ------ ವರ್ಷ ವಯಸ್ಸಿನ, ಕಾರ್ಯದರ್ಶಿಯಾಗಿರುವ ಶ್ರೀ ------------ ರವರು ಮತ್ತು ----------- ರಲ್ಲಿ ವಾಸಿಸುತ್ತಿರುವ ಶ್ರೀ ---------- ರವರ ಮಗನಾದ ಸುಮಾರು ---------- ವರ್ಷ ವಯಸ್ಸಿನ ಅಧ್ಯಕ್ಷರಾಗಿರುವ (ಅಥವಾ ಆಡಳಿತಗಾರ) ಶ್ರೀ ---------- ರವರು ಪ್ರತಿನಿಧಿಸಿದ ---------- ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ (ಇಲ್ಲಿ ಇನ್ನುಮುಂದೆ ಲೈಸೆನ್ಸು ಕೊಡುವವನು ಎಂದು ಕರೆಯಲಾಗಿದ್ದು, ಈ ಪದಾವಳಿಯು ಸಂದರ್ಭವು ಹಾಗೆ ಅಗತ್ಯಪಡಿಸಿರುವಲ್ಲೆಲ್ಲಾ ಅದರ ಉತ್ತರಾಧಿಕಾರಿಗಳನ್ನು, ಹಸ್ತಾಂತರಿತರನ್ನು ಒಳಗೊಳ್ಳುತ್ತದೆ) ಮತ್ತು --------- ರಲ್ಲಿ ವಾಸಿಸುತ್ತಿರುವ ಶ್ರೀ ---------- ರವರ ಮಗನಾದ ಸುಮಾರು ---------- ವರ್ಷ ವಯಸ್ಸಿನ ಶ್ರೀ --------- ರವರು (ಇದರಲ್ಲಿ ಇನ್ನುಮುಂದೆ ಲೈಸೆನ್ಸುದಾರ ಎಂದು ಕರೆಯಲಾಗಿದೆ) ಇವರ ನಡುವೆ ಮಾಡಿಕೊಳ್ಳಲಾಗಿದ್ದು, ಅದನ್ನು ಈ ಕೆಳಕಂಡಂತೆ ಸಾಕ್ಷ್ಯೀಕರಿಸಲಾಗಿದೆ:

ಮಾರುಕಟ್ಟೆ ಕಾರ್ಯನಿರ್ವಾಹಕನಾಗಿರುವ ಮತ್ತು ಲೈಸೆನ್ಸ್ ಕೊಡುವವನಿಂದ ಲೈಸೆನ್ಸ್ ಪಡೆದಿರುವ ಲೈಸೆನ್ಸ್‌ದಾರನು ಅಧಿಸೂಚಿತ ಕೃಷಿ ಉತ್ಪನ್ನಗಳಲ್ಲಿ ವ್ಯವಹಾರ ಮಾಡುವುದಕ್ಕಾಗಿ ಅಂಗಡಿಯನ್ನು/ ಅಂಗಡಿ ಸಹಿತ ಗೋದಾಮನ್ನು/ ಗೋದಾಮನ್ನು ಹಂಚಿಕೆ ಮಾಡುವಂತೆ ಅರ್ಜಿ ಸಲ್ಲಿಸಿರುವುದರಿಂದ;

ಲೈಸೆನ್ಸ್ ಕೊಡುವವನು, ಅಧಿಸೂಚಿತ ಕೃಷಿ ಉತ್ಪನ್ನದ ವ್ಯಾಪಾರ ವ್ಯವಹಾರ ಮಾಡುತ್ತಿರುವ ಮಾರುಕಟ್ಟೆ ಕಾರ್ಯನಿರ್ವಾಹಕರಿಗೆ ಸೌಲಭ್ಯಗಳನ್ನು ಕಲ್ಪಿಸುವ ಉದ್ದೇಶದಿಂದ -------- ಇಲ್ಲಿ ಮಾರುಕಟ್ಟೆ ಪ್ರಾಂಗಣವನ್ನು ಸ್ಥಾಪಿಸಿರುವುದರಿಂದ.

ಲೈಸೆನ್ಸ್‌ದಾರನು ಅಧಿಸೂಚಿತ ಕೃಷಿ ಉತ್ಪನ್ನದ ವ್ಯಾಪಾರ ಮಾಡುವುದಕ್ಕಾಗಿ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ ಆಧಾರದ ಮೇಲೆ ಚಿಲ್ಲರೆ ಅಂಗಡಿಯನ್ನು, ಕ್ಯಾಂಟೀನನ್ನು, ತೂಕಮಾಡುವ ಯಂತ್ರವನ್ನು (ವೇಬ್ರಿಜ್), ಚಹಾದ ಅಂಗಡಿಯನ್ನು

ಹಂಚಿಕೆ ಮಾಡುವಂತೆ ಅರ್ಜಿ ಸಲ್ಲಿಸಿರುವುದರಿಂದ ಮತ್ತು ಲೈಸೆನ್ಸ್ ಕೊಡುವವನು ಅನುಸೂಚಿತ ಸ್ವತ್ತನ್ನು ಹಂಚಿಕೆ ಮಾಡಲು ಒಪ್ಪಿರುವುದರಿಂದ;

ಲೈಸೆನ್ಸ್ ಕೊಡುವವನು 20––– ರ –––– ರಂದು ನಡೆದ ತನ್ನ ಸಭೆಯ ಗೊತ್ತುವಳಿ ಸಂಖ್ಯೆ –––ರಲ್ಲಿ ಹಂಚಿಕೆದಾರನಿಗೆ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ ಆಧಾರದ ಮೇಲೆ ಅನುಸೂಚಿತ ಸ್ವತ್ತನ್ನು ಹಂಚಿಕೆ ಮಾಡಲು ಒಪ್ಪಿಕೊಂಡಿರುವುದರಿಂದ;

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ನಿರ್ದೇಶಕರು –––––– ಜಿಲ್ಲೆಯ ಸಹಾಯಕ ನಿರ್ದೇಶಕರು/ ಉಪ ನಿರ್ದೇಶಕರು ದಿನಾಂಕ ––––200––––––ರ ಆದೇಶ ಸಂಖ್ಯೆ –––––– ಮೂಲಕ ತಮ್ಮ ಅನುಮತಿ ನೀಡಿರುವುದರಿಂದ;

ಉಭಯ ಪಕ್ಷಕಾರರೂ ಈ ಮುಂದೆ ಹೇಳಿರುವ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಪಾಲಿಸುವುದಕ್ಕೆ ಲಿಖಿತ ರೂಪದಲ್ಲಿ ಒಪ್ಪಂದ ಮಾಡಿಕೊಳ್ಳಲು ಇಚ್ಛಿಸಿರುವುದರಿಂದ:

**ನಿಬಂಧನೆಗಳು ಮತ್ತು ಷರತ್ತುಗಳು :**

1) ಲೈಸೆನ್ಸ್ ಕೊಡುವವನು, ಲೈಸೆನ್ಸ್‌ದಾರನಿಗೆ ನೀಡಿರುವ ಈ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸು 11 ತಿಂಗಳ ಅವಧಿಯದು ಮಾತ್ರವಾದುದಾಗಿದ್ದು ಇದನ್ನು ಗರಿಷ್ಠ 55 ತಿಂಗಳ ಅವಧಿಗೆ ಒಳಪಟ್ಟು ಈ ಒಪ್ಪಂದದ ದಿನಾಂಕದಿಂದ ಪ್ರತಿ 11 (ಹನ್ನೊಂದು) ತಿಂಗಳಿಗೊಮ್ಮೆ ನವೀಕರಿಸುವಂಥದ್ದಾಗಿರತಕ್ಕದ್ದು.

2) ಈ ಲೈಸೆನ್ಸ್‌ನ ಅವಧಿ ಮುಕ್ತಾಯವಾದ ನಂತರ ಲೈಸೆನ್ಸ್‌ದಾರನು ಸದರಿ ಆವರಣವನ್ನು ಯಾವುದೇ ಹೆಚ್ಚಿನ ಅವಧಿಗಾಗಿ (ಒಂದು ಬಾರಿಗೆ 11 ತಿಂಗಳಿಗಿಂತ ಹೆಚ್ಚಿಲ್ಲದಂತೆ) ಬಳಸಲು ಲೈಸೆನ್ಸಿನ ನವೀಕರಣಕ್ಕಾಗಿ ಆತನಿಗೆ ಮೊದಲ ಆದ್ಯತೆ ನೀಡತಕ್ಕದ್ದು, ಆದರೆ ಸದರಿ ಆವರಣಗಳನ್ನು ಅಧಿಭೋಗಕ್ಕೆ ತೆಗೆದುಕೊಳ್ಳುವುದಕ್ಕೂ ಮುಂಚೆ ಆ ಬಗ್ಗೆ ಗೊತ್ತುಪಡಿಸಿದ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಮತ್ತು ನಿಯಮಗಳನ್ನು ಪಾಲಿಸಿರಬೇಕು.

3) ಲೈಸೆನ್ಸ್‌ದಾರನು 11 ತಿಂಗಳ ಮತ್ತೊಂದು ಅವಧಿಗೆ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್‌ನ್ನು ನವೀಕರಿಸಿಕೊಳ್ಳುವ ಇಚ್ಛೆ ಹೊಂದಿದ್ದರೆ, ಆ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಮುಕ್ತಾಯ ವಾಗುವುದಕ್ಕೆ 2 (ಎರಡು) ತಿಂಗಳಿಗಿಂತ ಕಡಿಮೆಯಿಲ್ಲದಷ್ಟು ಮುಂಚಿತವಾಗಿ ತನ್ನ ಅರ್ಜಿಯನ್ನು ಲೈಸೆನ್ಸ್ ಕೊಡುವವನಿಗೆ ಸಲ್ಲಿಸತಕ್ಕದ್ದು.

4) ಲೈಸೆನ್ಸ್‌ದಾರನು, ಅನುಸೂಚಿತ ಆವರಣಕ್ಕೆ ಸಂಬಂಧಪಟ್ಟಂತೆ ಲೈಸೆನ್ಸ್ ಕೊಡುವವನಿಗೆ ಭದ್ರತಾ ಠೇವಣಿಯಾಗಿ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸಿನ 10 (ಹತ್ತು) ತಿಂಗಳ ಶುಲ್ಕಕ್ಕೆ ಸಮನಾದಷ್ಟು ಮೊತ್ತವನ್ನು ಠೇವಣಿಯಾಗಿಡತಕ್ಕದ್ದು. ಸದರಿ ಭದ್ರತಾ ಠೇವಣಿಗೆ ಯಾವುದೇ ಬಡ್ಡಿ ಇರುವುದಿಲ್ಲ.

5) ಲೈಸೆನ್ಸ್‌ದಾರನು, ಖಚಿತವಾದ ಒಂದು ತಿಂಗಳ ಲಿಖಿತ ನೋಟೀಸನ್ನು ನೀಡುವ ಮೂಲಕ, ಆತನು ಅನುಸೂಚಿತ ಆವರಣವನ್ನು ತೆರವು ಮಾಡುವ ಮತ್ತು ಸ್ವಾಧೀನತೆಯನ್ನು ಒಪ್ಪಿಸಿಕೊಡುವ ಇಚ್ಛೆಯನ್ನು ವ್ಯಕ್ತಪಡಿಸಿದರೆ, ಸದರಿ ಭದ್ರತಾ ಮೊತ್ತವನ್ನು ಮರುಪಾವತಿ ಮಾಡುವಂತೆ ಕೋರಲು ಹಕ್ಕುಳ್ಳವನಾಗಿರತಕ್ಕದ್ದು.

6) ಲೈಸೆನ್ಸ್‌ದಾರನು ಹಿಂದಿನ ತಿಂಗಳ ಲೈಸೆನ್ಸ್ ಶುಲ್ಕವನ್ನು ಅದರ ನಂತರದ ತಿಂಗಳ 10ನೇ(ಹತ್ತನೇ) ದಿನಾಂಕದೊಳಗೆ ಪಾವತಿ ಮಾಡತಕ್ಕದ್ದು. ಹಾಗೆ ಪಾವತಿ ಮಾಡಲು ತಪ್ಪಿದರೆ, ಲೈಸೆನ್ಸ್ ಕೊಟ್ಟವನು ಪ್ರತಿ ತಿಂಗಳಿಗೆ ಶೇಕಡಾ 10ರಷ್ಟು ದಂಡ ಶುಲ್ಕ ವಿಧಿಸುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದು.

7) ಲೈಸೆನ್ಸ್‌ದಾರನು, ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಶುಲ್ಕ ಸಲ್ಲಿಸುವುದರಲ್ಲಿ ಸತತ ಮೂರು ತಿಂಗಳು ವಿಫಲನಾದರೆ, ಲೈಸೆನ್ಸ್ ಕೊಡುವವನು ಬಾಕಿ ಮೊತ್ತವನ್ನು ವಸೂಲು ಮಾಡುವ ತನ್ನ ಹಕ್ಕನ್ನು ಕಾಯ್ದಿರಿಸಿಕೊಳ್ಳುವುದರ ಜೊತೆಗೆ ಭದ್ರತಾ ಠೇವಣಿಯಲ್ಲಿ ಹೊಂದಾಣಿಕೆ ಮಾಡಿಕೊಳ್ಳುವ ಮತ್ತು ಅನುಸೂಚಿತ ಸ್ವತ್ತನ್ನು ಮರು ಸ್ವಾಧೀನಪಡಿಸಿಕೊಳ್ಳುವ ಹಕ್ಕನ್ನು ಹೊಂದಿರತಕ್ಕದ್ದು.

8) ಲೈಸೆನ್ಸ್‌ದಾರನು ಯಾವ ಉದ್ದೇಶಕ್ಕಾಗಿ ಆವರಣವನ್ನು ಹಂಚಿಕೆ ಮಾಡಲಾಗಿದೆಯೋ ಆ ಯಾವುದೇ ಉದ್ದೇಶದ ಹೊರತಾಗಿ ಇತರ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ. ಹಂಚಿಕೆ ಮಾಡಿರುವ ಆವರಣವನ್ನು, ಅದನ್ನು ಹಂಚಿಕೆ ಮಾಡಿರುವ ಉದ್ದೇಶಕ್ಕೆ ಬಳಸಿಕೊಳ್ಳುತ್ತಿಲ್ಲವೆಂದು ಕಾರ್ಯದರ್ಶಿಗೆ ಮನದಟ್ಟಾದರೆ, ಲೈಸೆನ್ಸ್ ಕೊಡುವವನು ಲೈಸೆನ್ಸ್‌ದಾರನಿಗೆ, ಒಂದು ತಿಂಗಳ ನೋಟೀಸು ನೀಡುವ ಮೂಲಕ ಲೈಸೆನ್ಸ್‌ನ್ನು ರದ್ದುಪಡಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾನೆ.

9) ಲೈಸೆನ್ಸ್ ಶುಲ್ಕವನ್ನು ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಶುಲ್ಕದ ಶೇಕಡಾ 5ರ ದರದಲ್ಲಿ ಹೆಚ್ಚಿಸುವ ಮೂಲಕ ಪ್ರತಿ 33 ತಿಂಗಳಿಗೊಮ್ಮೆ ಪರಿಷ್ಕರಿಸಲಾಗುವುದು. ಇದಕ್ಕೆ ಲೈಸೆನ್ಸ್‌ದಾರನು ಬದ್ಧನಾಗಿರತಕ್ಕದ್ದು.

10) ಲೈಸೆನ್ಸ್ ಕೊಡುವವನು, ಲೈಸೆನ್ಸನ್ನು ರದ್ದುಪಡಿಸಿ ಅನುಸೂಚಿತ ಆವರಣವನ್ನು ಮರುಸ್ವಾಧೀನ ಪಡಿಸಿಕೊಳ್ಳಬೇಕೆಂದು ಇಚ್ಛಿಸಿದಲ್ಲಿ, ಲೈಸೆನ್ಸ್ ಕೊಡುವವನು ಲೈಸೆನ್ಸ್‌ದಾರನಿಗೆ ಹೊರಹಾಕುವ ನೋಟೀಸನ್ನು ಜಾರಿಮಾಡಿದ ಮೇಲೆ ಲೈಸೆನ್ಸುದಾರನು ಈ ನೋಟೀಸನ್ನು ಜಾರಿಮಾಡಿದ ದಿನಾಂಕದಿಂದ 15 (ಹದಿನೈದು) ದಿನಗಳೊಳಗೆ ಅನುಸೂಚಿತ ಆವರಣದ ಖಾಲಿ ಸ್ವಾಧೀನವನ್ನು ಲೈಸೆನ್ಸ್ ನೀಡುವವನಿಗೆ ವಹಿಸಿಕೊಡತಕ್ಕದ್ದು. ಲೈಸೆನ್ಸ್‌ದಾರನು ಹಾಗೆ ಮಾಡಲು ವಿಫಲನಾದರೆ, ಲೈಸೆನ್ಸ್ ಕೊಡುವವನು ಸಮುಚಿತ ಕಾನೂನಿನ ಉಪಬಂಧಗಳ ಮೇರೆಗೆ ಲೈಸೆನ್ಸ್‌ದಾರನನ್ನು ಹೊರಹಾಕಲು ಸೂಕ್ತ ಕಾನೂನು ವ್ಯವಹರಣೆಗಳನ್ನು ಜರುಗಿಸುವ ಹಕ್ಕನ್ನು ಕಾಯ್ದಿರಿಸಿ ಕೊಂಡಿರುವುದರ ಜೊತೆಗೆ, ಸದರಿ ಭದ್ರತಾ ಠೇವಣಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ಆತನು ಹಕ್ಕುಳ್ಳವನಾಗಿರತಕ್ಕದ್ದು.

11) ಲೈಸೆನ್ಸ್‌ದಾರನು, ಲೈಸೆನ್ಸ್ ಕೊಡುವವನ ಲಿಖಿತ ಒಪ್ಪಿಗೆ ಇಲ್ಲದೆ ಅನುಸೂಚಿತ ಆವರಣದ ಇಡೀ ಅಥವಾ ಯಾವುದೇ ಒಂದು ಭಾಗವನ್ನು ವಹಿಸಿಕೊಡುವುದಾಗಲೀ ಅಥವಾ ಯಾರೇ ಮೂರನೇ ಪಕ್ಷಕಾರನಿಗೆ/ ಪಕ್ಷಕಾರರಿಗೆ ಅನುಸೂಚಿತ ಆವರಣದಲ್ಲಿ ಅಧಿಭೋಗ ಹೊಂದುವುದಕ್ಕೆ ಅಥವಾ ಯಾವುದೇ ತೆರನಾದ ವ್ಯಾಪಾರ ವ್ಯವಹಾರ ಮಾಡುವುದಕ್ಕೆ ಅನುಮತಿ ನೀಡತಕ್ಕದ್ದಲ್ಲ ;

ಲೈಸೆನ್ಸ್‌ದಾರನು, ಪಾಲುದಾರಿಕೆ ಫರ್ಮ್ ಆಗಿರುವ ಸಂದರ್ಭದಲ್ಲಿ, ಪಾಲುದಾರಿಕೆ ಫರ್ಮಿನ ರಚನೆಯಲ್ಲಿ ಯಾವುದೇ ಬದಲಾವಣೆಯಾದರೆ ಅದನ್ನು ಮಾರುಕಟ್ಟೆ ಸಮಿತಿಯ ಗಮನಕ್ಕೆ ತರತಕ್ಕದ್ದು. ಲೈಸೆನ್ಸ್‌ದಾರನು, ಬದಲಾವಣೆಯಾಗುವುದಕ್ಕೆ ಮೊದಲು ಇದ್ದ ಫರ್ಮ್‌ನ ಪಾಲುದಾರರಾಗಿದ್ದ ವ್ಯಕ್ತಿಗಳೇ ಬದಲಾವಣೆಯಾದ ನಂತರವೂ ಅವರೇ ಮುಂದುವರೆದ ಹೊರತು, ಪುನರ್ರಚಿತ ಪಾಲುದಾರಿಕೆಯ ಪಾಲುದಾರರಿಗೆ ಆವರಣವನ್ನು ವಹಿಸಿಕೊಡುವುದಕ್ಕೆ ಒಪ್ಪತಕ್ಕದ್ದಲ್ಲ.

12) ಲೈಸೆನ್ಸ್‌ದಾರನು, ಲೈಸೆನ್ಸ್ ಕೊಡುವವನ ಲಿಖಿತ ಒಪ್ಪಿಗೆಯಿಲ್ಲದೆ ಅನುಸೂಚಿತ ಆವರಣದ ಕಟ್ಟಡದ ಒಳಭಾಗ ಅಥವಾ ಹೊರಭಾಗದಲ್ಲಿ ಖಾಯಂ ಅಥವಾ ತಾತ್ಕಾಲಿಕವಾದಂಥ ಯಾವುದೇ ಬದಲಾವಣೆಗಳನ್ನು ಮಾಡತಕ್ಕದ್ದಲ್ಲ.

13) ಲೈಸೆನ್ಸ್‌ದಾರನು ತಾನು ಬಳಸಿದ ವಿದ್ಯುಚ್ಛಕ್ತಿ ಮತ್ತು ನೀರಿಗೆ ಸಂಬಂಧಿಸಿದಂತೆ, ಈ ಸಂಬಂಧ ಲೈಸೆನ್ ಕೊಡುವವನು ಕಾಲಕಾಲಕ್ಕೆ ಹೊರಡಿಸುವ ನಿರ್ದೇಶನಗಳಿಗನುಸಾರವಾಗಿ ವಿದ್ಯುಚ್ಛಕ್ತಿ ಮತ್ತು ನೀರಿನ ವೆಚ್ಚಗಳನ್ನು ಸಂಬಂಧಪಟ್ಟ ಪ್ರಾಧಿಕಾರಕ್ಕೆ ಸಂದಾಯ ಮಾಡತಕ್ಕದ್ದು.

14) ಲೈಸೆನ್ಸ್‌ದಾರನು, ಅನುಸೂಚಿತ ಆವರಣವನ್ನು, ಯಾವುದೇ ಕಾನೂನುಬಾಹಿರ ಉದ್ದೇಶಗಳಿಗಾಗಿ ಎಂದರೆ ಜೂಜು, ಮದ್ಯ/ ಸ್ಫೋಟಕಗಳು / ಪಟಾಕಿಗಳು / ಯಾವುದೇ ಇತರ ಸ್ಫೋಟಕಗಳು/ ದಹನ ಸರಕುಗಳನ್ನು/ ಸಾಮಗ್ರಿಗಳನ್ನು ಮಾರಾಟಮಾಡುವ/ ದಾಸ್ತಾನು ಮಾಡುವ ಯಾವುದೇ ವ್ಯಾಪಾರ ಮಾಡತಕ್ಕದ್ದಲ್ಲ ಅಥವಾ ಅದಕ್ಕಾಗಿ ಅವುಗಳನ್ನು ಬಳಸತಕ್ಕದ್ದಲ್ಲ ಅಥವಾ ಲೈಸೆನ್ಸ್ ಕೊಡುವವನ ಸ್ವತ್ತಿಗೆ ಅಥವಾ ನೆರೆಹೊರೆಯ ಅಧಿಭೋಗದಾರರ ಪ್ರಾಣ ಮತ್ತು ಆಸ್ತಿಗೆ ಅಪಾಯವುಂಟು ಮಾಡಬಹುದಾದ ಯಾವುದನ್ನೂ ಮಾಡತಕ್ಕದ್ದಲ್ಲ.

15) ಲೈಸೆನ್ಸ್‌ದಾರನು, ಅನುಸೂಚಿತ ಆವರಣವನ್ನು ಯಾವುದೇ ನಷ್ಟಕ್ಕೆ ಭದ್ರತೆಯಾಗಿ ನೀಡಲು ಅಥವಾ ಯಾವುದೇ ಹೊಣೆಗಾರಿಕೆಯನ್ನು ಅಥವಾ ಋಣಭಾರವನ್ನು ಯಾವುದೇ ರೀತಿಯಲ್ಲಿ ಸೃಜಿಸಲು ಹಕ್ಕು ಪಡೆಯತಕ್ಕದ್ದಲ್ಲ.

16) ಲೈಸೆನ್ಸ್‌ದಾರನು, ಈ ಲೈಸೆನ್ಸ್‌ನ ಯಾವುದೇ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಉಲ್ಲಂಘಿಸಿದರೆ ಲೈಸೆನ್ಸ್ ಕೊಡುವವನು ಆತನ ಲೈಸೆನ್ಸನ್ನು ರದ್ದುಪಡಿಸುವ ಒಂದು ತಿಂಗಳ ನೋಟೀಸು ನೀಡಿದಾಗ ಆ ಒಂದು ತಿಂಗಳೊಳಗೆ ಆವರಣವನ್ನು ಖಾಲಿ ಮಾಡುವುದಕ್ಕೆ ಲೈಸೆನ್ಸುದಾರನು ಬದ್ಧನಾಗಿರತಕ್ಕದ್ದು ಅಥವಾ ಇಲ್ಲಿ ನಿರ್ದಿಷ್ಟಪಡಿಸಿದ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಶುಲ್ಕಗಳನ್ನು ಸಂದಾಯ ಮಾಡುವುದಕ್ಕೆ ಸಂಬಂಧಿಸಿದಂತೆ ಲೈಸೆನ್ಸ್‌ದಾರನು ಮೂರು ತಿಂಗಳುಗಳವರೆಗೆ ಸುಸ್ತಿದಾರನಾಗಿದ್ದರೆ, ಲೈಸೆನ್ಸ್‌ದಾರನ ಕಾನೂನುಬದ್ಧ ಉತ್ತರಾಧಿಕಾರಿಗಳು, ನಿರ್ವಾಹಕರು ಮಾರುಕಟ್ಟೆ ಸಮಿತಿಗೆ ಲೈಸೆನ್ಸ್ ಶುಲ್ಕದ ಬಾಕಿಯನ್ನು ಪಾವತಿ ಮಾಡುವುದಕ್ಕೆ ಹೊಣೆಯಾಗಿರತಕ್ಕದ್ದು.

17) ಸದರಿ ಆವರಣದ ಸಮಗ್ರ ಮೇಲ್ವಿಚಾರಣೆಯು ಮಾರುಕಟ್ಟೆ ಸಮಿತಿಯಲ್ಲಿ ನಿಹಿತವಾಗಿರತಕ್ಕದ್ದು. ಅದರ ಅಧಿಕಾರಿಗಳು/ ಸಿಬ್ಬಂದಿಯು, ಎಲ್ಲ ಸಮಂಜಸ ವೇಳೆಗಳಲ್ಲಿ ಸದರಿ ಆವರಣದ ದುರಸ್ತಿ ಸ್ಥಿತಿಗತಿಯ ಬಗ್ಗೆ ತಪಾಸಣೆ ಮಾಡುವುದಕ್ಕೆ ಹಕ್ಕುಳ್ಳವರಾಗಿರತಕ್ಕದ್ದು; ಲೈಸೆನ್ಸ್‌ದಾರನು, ಆವರಣವನ್ನು ಸುಸ್ಥಿತಿಯಲ್ಲಿ ಮತ್ತು ಆರೋಗ್ಯಕರ ಸ್ಥಿತಿಯಲ್ಲಿ ಇಟ್ಟುಕೊಳ್ಳಲು ಮತ್ತು ಲೈಸೆನ್ಸ್ ಅವಧಿ ಮುಕ್ತಾಯಗೊಂಡ ತರುವಾಯ ಅಥವಾ ಲೈಸೆನ್ಸ್ ಕೊಡುವವನು ಸದರಿ ಆವರಣವನ್ನು ಖಾಲಿ ಮಾಡುವಂತೆ ಕೇಳಿದಾಗ ಅವನಿಗೆ ಅಂಗಡಿಯನ್ನು ಸುಸ್ಥಿತಿಯಲ್ಲಿ ವಹಿಸಿಕೊಡುವುದಕ್ಕೆ ಬದ್ಧನಾಗಿರತಕ್ಕದ್ದು.

18) ಲೈಸೆನ್ಸ್‌ದಾರನೂ ಸಹ ಲೈಸೆನ್ಸ್ ಕೊಡುವವನಿಗೆ ಒಂದು ತಿಂಗಳ ನೋಟೀಸು ನೀಡುವ ಮೂಲಕ ಲೈಸೆನ್ಸನ್ನು ರದ್ದುಗೊಳಿಸಬಹುದು. ಲೈಸೆನ್ಸಿನ ಅವಧಿ ಮುಗಿದ ತರುವಾಯ ತನ್ನಷ್ಟಕ್ಕೇನೇ ಲೈಸೆನ್ಸ್ ರದ್ದಾಗಿದೆಯೆಂದು ಭಾವಿಸತಕ್ಕದ್ದು.

**ಅನುಸೂಚಿ**

ಅಂಗಡಿ ಸಂಖ್ಯೆ ಅಳತೆ

ಚಕ್ಕುಬಂದಿ

ಪೂರ್ವಕ್ಕೆ :

ಪಶ್ಚಿಮಕ್ಕೆ :

ಉತ್ತರಕ್ಕೆ :

ದಕ್ಷಿಣಕ್ಕೆ

ಇದಕ್ಕೆ ಸಾಕ್ಷಿಯಾಗಿ ಲೈಸೆನ್ಸ್ ಕೊಡುವವನು ಮತ್ತು ಲೈಸೆನ್ಸ್‌ದಾರ ಇಬ್ಬರೂ --------- ರಲ್ಲಿ 200 -----ರ --------- ದಿನದಂದು ಈ ಕೇಳಿದಾಗ ಬಿಟ್ಟುಕೊಡುವ ಲೈಸೆನ್ಸ್ ಒಪ್ಪಂದಕ್ಕೆ ಸಹಿ ಮಾಡಿರುತ್ತಾರೆ.

ಸಾಕ್ಷಿಗಳು ಲೈಸೆನ್ಸ್‌ದಾರ

(1)

(2) ಲೈಸೆನ್ಸ್‌ಕೊಡುವನು

